# ಅರಿಕೆ



ಈ ಕಾದಂಬರಿ ' ಕನಸಿನ ಮನೆ 'ಯ ಮುಂದಿನ ಭಾಗ. ಆದರೆ ಇದನ್ನು ಸ್ವತಂತ್ರವಾಗಿಯೂ ಓದಬಹುದು. ಹೀಗೆ ಓದುವವರಿಗೆ, ಯಾವುದೋ ಒಂದು ಪರಿಸ್ಥಿತಿಯಲ್ಲಿ ಗಂಡನಿಂದ ಬೇರೆಯಾಗಿ ತನ್ನ ಮಟ್ಟಿಗೆ ಜೀವನವನ್ನು ನಡೆಸಬೇಕೆಂದಿದ್ದ ಮೋಹಿನಿ ತನಗೆ ಸಿಕ್ಕ ಸ್ವಾತಂತ್ರ್ಯವನ್ನು ಯಾವ ರೀತಿಯಾಗಿ ಬಳಸಿದಳೆಂಬುದರ ನಿರೂಪಣೆ ಸಿಕ್ಕುತ್ತದೆ. ಮೊದಲನೆಯ ಭಾಗವನ್ನು ಓದಿದವರಿಗೆ ಆಕೆ ಗಂಡನ ಮನೆಯಿಂದ ಹೊರಬಿದ್ದ ಪರಿಸ್ಥಿತಿ ಯಾವುದು, ಆ ಬಿಡುಗಡೆಯ ಹಿನ್ನೆಲೆ ಎಂಥದು, ಅಲ್ಲದೆ ಅಲ್ಲಿಯಂತೆ ಇಲ್ಲಿಯೂ ಕೆಲಮಟ್ಟಿಗೆ ಮುಖ್ಯಪಾತ್ರಗಳಾಗಿಯೇ ಉಳಿದ ಆನಂದ–ವಸಂತರೊಡನೆ ಇದ್ದ ಆಕೆಯ ಸಂಬಂಧಗಳು ಹೇಗಿದ್ದುವು ಎಂಬ ವಿಷಯಗಳು ಹೆಚ್ಚಾಗಿ ಸ್ಪಷ್ಟವಾಗುತ್ತವೆ. ಎರಡನ್ನೂ ಕೂಡಿಯೆ ಓದಲಿ, ಇದೊಂದನ್ನೇ ಓದಲಿ, ತನ್ನ ಜೀವನದಲ್ಲಿಯ ಒಂದು ಘಟ್ಟವನ್ನು ಆಕೆ ' ಕನಸಿನ ಮನೆ 'ಯ ಕೊನೆಯಲ್ಲಿ ತಲುಪಿದಂತೆ ಈ ಭಾಗದ ಕೊನೆಯಲ್ಲಿಯೂ ಬೇರೊಂದು ಘಟ್ಟವನ್ನು ತಲುಪುತ್ತಾಳೆ. ತನ್ನ ಕನಸಿನ ಮನೆಗಾಗಿ ಹಾತೊರೆದು ಅದು ಸಿದ್ಧಿಸದಾದಾಗಿನ ಪರಿಸ್ಥಿತಿಯಲ್ಲಿ ಮನೆಯಿಂದ ಹೊರಬೀಳಬೇಕಾಗುವುದು ಕನಸಿನ ಮನೆಯಲ್ಲಿಯ ಮುಖ್ಯಾಂಶ. ಹೊರಬಿದ್ದನಂತರ ಹತ್ತಾರು ಸನ್ನಿವೇಶಗಳಿಗೆ ತಲೆಕೊಡಬೇಕಾಗಿ ಬಂದು ತನ್ನ ಮನೆಯನ್ನು ತನಗೆ ತಿಳಿದ ರೀತಿಯಲ್ಲಿ ಕಟ್ಟಿದ ಚಿತ್ರ ಪ್ರಕೃತ ಕಾದಂಬರಿಯಲ್ಲಿಯ ಮುಖ್ಯ ವಿಷಯ. ಎರಡೂ ಕಾದಂಬರಿಗಳು ಒಂದೊಂದು ಬಗೆಯ ಬಿಡುಗಡೆಯ ಪ್ರಸ್ತಾಪದಿಂದ ಕೊನೆಗೊಳ್ಳುತ್ತವೆ.

ಹೊಸದಾಗಿ ಕಟ್ಟಿದ ಈ ಮನೆಯಲ್ಲಿ ಆಕೆ ಇನ್ನೂ ಬಹುಕಾಲ ವಾಸವಾಗಿಲ್ಲ. ಅದರ ನಿಜವಾದ ಸ್ವರೂಪವನ್ನು ಆಕೆ ಇನ್ನೂ ಪೂರ್ತಿಯಾಗಿ ತಿಳಿದಿಲ್ಲ. ಹೊಸ ಆವರಣಕ್ಕೆ ಹೊಂದಿಕೊಂಡಿದ್ದಾಳೆ. ಈ ಮನೆಯ ವಿಶಾಲ ಭವ್ಯತೆ, ಇದರ ಚೆಲುವು ಮೆರುಗು ಆಕರ್ಷಣೆಗಳಿಗೆ ಮನಸೋತು ಇದೇ ನಿಜವಾಗಿಯೂ ಯೋಗ್ಯವಾದ ಮನೆ ಎಂಬ ಭಾವನೆಯ ಭ್ರಮೆಯಲ್ಲಿದ್ದಹಾಗಿದ್ದಾಳೆ. ಅದೂ ಸಹಜವೇ. ಆದರೆ ಸ್ವತಂತ್ರವಾಗಿ ಕಟ್ಟಿದ ಈ ಮನೆಯಲ್ಲಿಯ ಸ್ವಾತಂತ್ರ್ಯ

ವನ್ನೂ ಯಾವುದೋ ಒಂದು ಕೊರತೆ ಬಾಧಿಸುತ್ತಿದೆ, ಅದೂ ಪೂರ್ಣವಾಗಿರದೆ
ಕೆಲವೊಂದು ಬಂಧನಗಳಿಗೆ ಒಳಪಟ್ಟಿದ್ದಾಗಿರಬೇಕಾಗಿದೆ ಎಂಬ ಅರಿವು ಆಕೆಗೆ
ಖೇದವಾಗಿಯಾದರೂ ಅನಿವಾರ್ಯವಾಗಿ ಆಕೆಯ ಒಳಮನಸ್ಸಿನ ಶಾಂತಿಯನ್ನು
ಕೆಡಿಸುತ್ತಿದ್ದ ಹಾಗಿದೆ ಆಕೆಯ ಬುದ್ಧಿ ಹಟದಿಂದ ಸಮಾಧಾನವನ್ನೇನೊ ಹೇಳು
ತ್ತಿದೆ. ಆದರೆ ಭಾವನೆಯ ಯಾವುದೊ ಒಂದು ಒಳದನಿ ಆಕೆಯನ್ನು ಕೆಣಕು
ತ್ತಿದ್ದ ಹಾಗೆಯೂ ಇದೆ ತನ್ನ 'ಪ್ರಗತಿ'ಯ ಮಾರ್ಗದಲ್ಲಿ ಮೋಹಿನಿ ಈ
ಹಂತಕ್ಕೆ ಬಂದಾಗ ಈ ಕಾದಂಬರಿ ಮುಗಿಯುತ್ತದೆ ಕಾದಂಬರಿ ಮುಗಿದರೂ
ಕತೆ ಮುಗಿಯಲಿಲ್ಲ 'ಕಟ್ಟಿದ ಮನೆ'ಯಲ್ಲಿ ಈಗ ಆಕೆ ಬಹುಮಟ್ಟಿಗೆ ಸುಖ
ವಾಗಿಯೇ ಇದ್ದಾಳೆ ಸ್ವತಂತ್ರವಾಗಿದ್ದಾಳೆ ಆದರೆ ಈ ಸುಖಸ್ವಾತಂತ್ರ್ಯಗಳ
ಮಡಿಲಲ್ಲಿಯೆ ಬೇರೆಯಾದ ಶಕ್ತಿಗಳು ಬೆಳೆದು ನಿಂತು ತಮ್ಮ ಪ್ರಭಾವವನ್ನು
ಬೀರುವುದರಲ್ಲಿವೆ ಸದ್ಯಕ್ಕೆ ಆಕರ್ಷಣೀಯವಾಗಿ ತೋರಿದ ಈ ಸುಖಸ್ವಾತಂತ್ರ್ಯ
ಗಳು ನಿಜವಾದುವೆ? ಅಥವಾ ಮೊದಲ ನೋಟಕ್ಕೆ ಗೋಚರಿಸದ ಬೇರೆಯಾ
ಮುಖಗಳು ಇವೆರಡಕ್ಕೂ ಇವೆಯೆ? ಎಂಬ ಪ್ರಶ್ನೆಗಳನ್ನು ಆಕೆ ಇಂದಿಲ್ಲ ನಾ
ಎದುರಿಸಬೇಕಾಗುತ್ತದೆ ಇಲ್ಲಿ ಆಕೆ ಕಟ್ಟಿದ ಮನೆಯ ಮೂಲಕವೆ ಇಂಥ ಪ್ರಶ್ನೆ
ಗಳು ಆಕೆಯೆದುರು ನಿಲ್ಲುತ್ತವೆ ಇಂಥ ಪ್ರಶ್ನೆಗಳನ್ನು ಎದುರಿಸಬೇಕಾದಾಗಿನ
ಸನ್ನಿವೇಶಗಳನ್ನು ಇದರ ಮುಂದಿನ ಮತ್ತು ಕೊನೆಯ ಭಾಗವಾದ 'ಬಾಡಿದ
ಹೂ'ವಿನಲ್ಲಿ ಚಿತ್ರಿಸಿದ್ದೇನೆ. ಅಲ್ಲಿಗೆ ಮೋಹಿನಿಯ ಕತೆ ಮುಗಿಯುತ್ತದೆ ಅದು
ಮುಗಿದಾಗಲೆ ಆಕೆಯ ಮನೋವೃತ್ತಿಯನ್ನು—ಬಹುಮಟ್ಟಿಗೆ ಆ ಮನೋ
ವೃತ್ತಿ ಸಮಾನ ಅಧಿಕಾರ ಅವಕಾಶಗಳನ್ನು ಬೇಡುವ ಆಧುನಿಕ ವಿದ್ಯಾವತಿ
ಯರ ಮನೋವೃತ್ತಿಯ ಪ್ರತೀಕವಾಗಿದ್ದರಿಂದ—ಅದರ ವ್ಯಾಪ್ತಿ, ವಿಸ್ತಾರ,
ಸ್ವರೂಪಗಳನ್ನು ಕುರಿತು ಯೋಚಿಸಬಹುದು, ಚರ್ಚಿಸಬಹುದು.

'ಕನಸಿನ ಮನೆ'ಯನ್ನು ಕುರಿತು ಸಂತೋಷ ವ್ಯಕ್ತಮಾಡಿ ಅಲ್ಲಿಯ
ಕತೆಯನ್ನು ನಾನು ಮುಂದುವರಿಸಲೇಬೇಕೆಂದು ನೂರಾರು ಓದುಗರು ಕಾಗದ
ಬರೆದಿದ್ದಾರೆ ಈ ಒಲುಮೆಯ ಒತ್ತಾಯಕ್ಕಾಗಿಯಲ್ಲದೆ ಮೋಹಿನಿಯ ಕತೆಗೆ
ಏನಾದರೊಂದು ಅರ್ಥವಿದ್ದರೆ ಆ ಅರ್ಥವನ್ನು ಆಕೆಯ ಕತೆಯನ್ನು ಪೂರ್ತಿ
ಯಾಗಿ ಹೇಳಿದಾಗಲೆ ಸೂಚಿಸುವುದು ಸಾಧ್ಯವೆಂದೆನಿಸಿದ್ದರಿಂದ ಈ ಕಾದಂಬರಿ
ಯನ್ನು, ಇದರ ಮುಂದಿನ ಭಾಗವನ್ನು ನಾನು ಬರೆದದ್ದು ಇದನ್ನು ಬಹು

ತ್ತಿದ್ದಾಗ ಕೆಲವು ವಿಷಯಗಳಲ್ಲಿ—ವಿಶೇಷವಾಗಿ ಕೆಲವೊಂದು ಸನ್ನಿವೇಶಗಳನ್ನು ಹೊಂದಿಸಿಕೊಳ್ಳುವುದರಲ್ಲಿ ಶ್ರೀಮತಿ ನಿರ್ಮಲಾ ಇನಾಂದಾರರು ತಮ್ಮ ಸೂಕ್ತ ಸೂಚನೆಗಳಿಂದ ಸಹಕರಿಸಿದ್ದಾರೆ. ಮೊದಲು ಅಸ್ವಾಸ್ಥ್ಯದ ಮೂಲಕ, ಆಮೇಲೆ ಹಲವು ಅನಾನುಕೂಲಗಳ ಮೂಲಕ ಈ ಕಾದಂಬರಿಯ ಬರವಣಿಗೆ ಬಹುವಾಗಿ ವಿಲಂಬಿಸಿತು. ಅದೆಲ್ಲವನ್ನು ಉದಾರ ತಾಳ್ಮೆಯಿಂದ ಸಹಿಸಿ, ಮುದ್ದಾಗಿ ಅಚ್ಚು ಹಾಕಿಸಿ, ಉಷಾ ಸಾಹಿತ್ಯ ಮಾಲೆಯಲ್ಲಿ ಪ್ರಕಟಿಸಿದ್ದಕ್ಕಾಗಿ ಶ್ರೀ ಹಬ್ಬು ಅವರಿಗೆ ನನ್ನ ಅನಂತ ವಂದನೆಗಳು.

ಧಾರವಾಡ
೨೯—೧೨—೫೨

**ಎಂ.-ವಿ. ಸೀ. ಇನಾಂದಾರ್**

# ನಮ್ಮ ಮಾತು

ಶ್ರೀ ಇನಾಂದಾರರ '**ಕಟ್ಟಿದ ಮನೆ**' ಕಾದಂಬರಿಯೊಡನೆ ನಮ್ಮ ಮಾಲೆಯ ಏಳನೆಯ ವರುಷ ಮುಗಿಯುತ್ತದೆ.

**ಈ** ಕಾದಂಬರಿಯನ್ನು ನಮ್ಮ ಮಾಲೆಯಲ್ಲಿ ಪ್ರಕಟಿಸಲು ಅನುವು ಕೊಟ್ಟದ್ದಕ್ಕಾಗಿ ಶ್ರೀ ಇನಾಂದಾರರಿಗೆ ನಮ್ಮ ವಂದನೆಗಳು.

ನಮ್ಮ ಮಾಲೆಯ ಎಂಟನೆಯ ವರುಷದ ಮೊದಲನೆಯ ಕಾದಂಬರಿ ಶ್ರೀ ತ. ರಾ. ಸು. ಅವರು ಬರೆದ '**ಮಸಣದ ಹೂವು**'.

ನಮ್ಮ ಮಾಲೆಯ ಪ್ರಾರಂಭದಿಂದ ಬರಹಗಾರರು, ಗ್ರಾಹಕರು ತುಂಬಾ ಸಹಾಯ ಮಾಡುತ್ತಿದ್ದಾರೆ. ಅವರಿಗೆ ನಮ್ಮ ವಂದನೆಗಳು. ಮುಂದಾದರೂ ಅವರ ಸಹಾಯ ಇದೇ ರೀತಿ ಇರಲೆಂದು ಆಶಿಸುತ್ತೇವೆ.

**ಜೈ ಹಿಂದ್**

ಇತಿ

**ಪ್ರಕಾಶಕರು**

# ಕಟ್ಟಿದ ಮನೆ

## ೧

ಕಳೆದ ನಾಲ್ಕಾರು ದಿನಗಳಲ್ಲಿ ವಸಂತ ತನಗೆ ತಿಳಿಯದಲೆ ಎಷ್ಟೋ ಬಾರಿ ಮೋಹಿನಿಯನ್ನು ಕುರಿತು ಯೋಚಿಸಿದ್ದ. ಯಾವ ವಿಶೇಷ ಸಂದರ್ಭವೂ ಇಲ್ಲದೆ ಆಕೆಯ ಮೂರ್ತಿ ತನ್ನ ಮನಸ್ಸಿನೆದುರು ಅದೇಕೆ ಸುಳಿಯಬೇಕು ಎಂಬುದು ಆತನಿಗೇ ತಿಳಿಯಲಾಗದ ವಿಷಯವಾಗಿತ್ತು. ಹಾಗೆ ನೋಡಿದರೆ ಆನಂದನ ಮನೆಯನ್ನು ಬಿಟ್ಟುಹೋದನಂತರ ಆಕೆ ಪುಣೆಯಿಂದ ಬರೆದ ಸುದೀರ್ಘವಾದ ಪತ್ರಕ್ಕೆ ತಾನು ಯಾವ ಉತ್ತರವನ್ನೂ ಬರೆದಿರಲಿಲ್ಲ. ಅದರನಂತರವೂ ಸುಮಾರು ಹದಿನೈದು–ಇಪ್ಪತ್ತು ದಿನಗಳನಂತರದಲ್ಲಿ ಮತ್ತೊಂದು ಕಾಗದ ಬಂದಿತ್ತು. ಅದಕ್ಕೂ ತಾನು ಉತ್ತರ ಬರೆದಿರಲಿಲ್ಲ. ಏನೆಂದು ಬರೆಯುವುದು ? ಬರೆದಾದರೂ ಏನು ? ತಾನು ಮಾಡಿದ ಎಲ್ಲ ಪ್ರಯತ್ನಗಳೂ ನೀರಿನಲ್ಲಿ ಹೋಮ ಮಾಡಿದಂತಾಗಿದ್ದುವಲ್ಲದೆ ತಮ್ಮಿಬ್ಬರ ನಡುವೆ ಬೇರೆಯೆ ಆದ ಒಂದು ಸಮಸ್ಯಾತ್ಮಕವಾದ ಸಂಬಂಧ ಬೆಳೆದು ನಿಲ್ಲುವಂತಾಗಿತ್ತು ; ನಿಂತಿತ್ತು. ಅದನ್ನೆಲ್ಲ ನೆನೆದಾಗ ಒಂದೆಡೆ ವಸಂತನ ಮನಸ್ಸು ಎಲ್ಲೆಲ್ಲಿಯೊ ಅಲೆದಾಡಿ ಮಾತಿಗೆ ಮೀರಿದ ಯಾವುದೋ ಒಂದು ಸಂತಸವನ್ನು ಅನುಭವಿಸುತ್ತಿದ್ದಿತಾದರೆ ಇನ್ನೊಂದೆಡೆ, ಅದೆಲ್ಲ ಎಂದಿನದೊ ಮಾತು, ಸರಿಯಾದುದೂ ಅಲ್ಲ, ಅದನ್ನು ಕುರಿತು ಮತ್ತೆ ಚಿಂತಿಸಿ ಬೆಳೆಯಗೊಡುವುದು ಯೋಗ್ಯವಲ್ಲ ಎಂದೂ ಅಂದು ಕೊಂಡು ಸುಮ್ಮನಾಗಿದ್ದ. ಇದೆಲ್ಲ ನಡೆದು ಆಗಲೆ ನಾಲ್ಕೈದು ತಿಂಗಳಾಗುತ್ತ ಬಂದಿದ್ದಿತು. ಕಳೆದ ಮೂರು ತಿಂಗಳಲ್ಲಿಯಂತೂ ಆಫೀಸಿನಲ್ಲಿಯ ಕೆಲಸದ ಮೂಲಕವೊ, ಅಥವಾ ಮತ್ತಾವ ಕಾರಣಕ್ಕಾಗಿಯೊ ಒಂದು ಸಲವೂ ಮೋಹಿನಿ ಮನಸ್ಸಿನೆದುರು ಬಂದಿರಲಿಲ್ಲ. ಬರುವ ಕಾರಣವೂ ಇರಲಿಲ್ಲ. ಆದರೆ ಇತ್ತೀಚಿನ ನಾಲ್ಕಾರು ದಿನಗಳಲ್ಲಿ ಮಾತ್ರ ಅದೇಕೆ ಹಾಗೆ ಹಠಾತ್ತಾಗಿ ಮನಸ್ಸಿನೆದುರು ಸುಳಿಯಬೇಕು, ಅದೇಕೆ ತಾನು ಆಕೆಯನ್ನು ಕುರಿತು ಯೋಚಿಸುವಂತಾಗ ಬೇಕು, ಎಂಬುದು ವಸಂತನಿಗೆ ಬಗೆಹರಿಯದ ವಿಷಯವಾಗಿದ್ದಿತು.

ಮಾನಸಿಕಪ್ರಪಂಚದಲ್ಲಿಯಾಗಲಿ, ಬಾಹ್ಯಪ್ರಪಂಚದಲ್ಲಿಯಾಗಲಿ ' ಹಠಾತ್ತಾಗಿ ' ಎಂಬ ಮಾತೇ ಸಲ್ಲದೆಂದು ಕಾಣುತ್ತದೆ ಅದೊಂದು ಬುದ್ಧಿಯ ಹಂಚಿಕೆ. ಪೂರ್ವಾಪರ ಸಂಬಂಧ ನಮಗೆ ಸ್ಪಷ್ಟವಾಗಿ ಗೋಚರಿಸದಿದ್ದಾಗ ನಾವು ಹಾಗೆ ಹೇಳಿ ಪಾರಾಗುತ್ತೇವೆ. ಯಾಕೆಂದರೆ ಈ ತೆರದ ಯೋಚನೆ ಬಂದಾಗ ವಸಂತ ತನ್ನ ಒಳಮನಸ್ಸನ್ನು ಹೊಕ್ಕು ನೋಡಿದ್ದರೆ ಕೆಲಮಟ್ಟಿಗಾದರೂ ತನ್ನ ಮನಸ್ಸಿನ ಪರದೆಯ ಮೇಲೆ ಆದ ಮೋಹಿನಿಯ ಪುನರವತಾರಕ್ಕೆ ಕಾರಣವನ್ನು ಹೇಳಬಹುದಿತ್ತು. ಕಳೆದ ವಾರ ಒಂದು ಬೆಳಗು ಮುಂಜಾನೆ ಯಾವುದೋ ಒಂದು ಅಸ್ಪಷ್ಟವಾದ ಕನಸಿನಲ್ಲಿ ಮೊದಲು ಬಾರಿ ಕಾಣಿಸಿಕೊಂಡವಳು ಕನಸು ಕಳೆದ ಮೇಲೂ ಮನಸ್ಸಿನೆದುರು ನಿಂತಿದ್ದಳೇಕೆ ? ಹದಿನೈದು ದಿನಗಳ ಹಿಂದೆ ರಾಯಚೂರಿನಲ್ಲಿಯ ತನ್ನ ಅಕ್ಕನ ಪರಿಚಯಸ್ಥರ ಸಂಬಂಧಿಕರು ಮುಂಬಯಿಯಲ್ಲಿ ವಾಸವಾಗಿದ್ದುದು, ಅವರ ಮುಖಾಂತರ ಯಾವುದೋ ಒಂದು ಕನ್ಯೆಯನ್ನು ತಾನು ' ನೋಡಲು ' ಹೋದದ್ದು—ಹೋಗಿ ' ನೋಡಿದಾಗ ' ಆ ಕನ್ಯೆಗೂ ಮೋಹಿನಿಗೂ ಬೆರಗುಗೊಳಿಸುವಂಥ ಸಾಮ್ಯ ತಕ್ಷಣ ಕಣ್ಣಿಗೆ ಹೊಳೆದದ್ದು—ಆ ಕ್ಷಣವೇ ಮೋಹಿನಿಯೊಡನೆ ಬೆಳೆದಿದ್ದ—ಆದರೆ ಅನಿವಾರ್ಯವಾಗಿ ಕಡಿದು ಹೋಗಿದ್ದ—ಹಳೆಯ ಭಾವನಾತ್ಮಕವಾದ ಒಂದು ಬಗೆಯ ಒಲವು ಹೃದಯವನ್ನು ಕಲಕಿದ್ದು—ಇದನ್ನೆಲ್ಲ ವಸಂತ ಬಹುಮಟ್ಟಿಗೆ ಮರೆತಿದ್ದನೆಂದೇ ಇಂದು ಮೋಹಿನಿಯ ಯೋಚನೆ ಆತನಿಗೆ ದಿಗಿಲುಗೊಳಿಸಿತ್ತು. ಆದರೆ ದಿಗಿಲುಗೊಳಿಸಬೇಕಿರಲಿಲ್ಲ ಆ ಕನ್ಯೆಯ ಬಗ್ಗೆ ತನ್ನ ಕೊನೆಯಾದ ' ನಿರ್ಣಯ 'ವನ್ನು ಇನ್ನೂ ಹೇಳಿರಲಿಲ್ಲ, ಹೇಳಬೇಕಾಗಿದ್ದಿತು ಅದನ್ನು ಕುರಿತು ಯೋಚಿಸಿದಾಗಲೆಲ್ಲ ಮೋಹಿನಿಯ ರೂಪ ವಿದ್ಯುಲ್ಲತೆಯಂತೆ ಅಂತರಂಗವನ್ನು ಬೆಳಗುತ್ತಿದ್ದಿತು ಆ ಬೆಳಕಿಗೆ ಮನಸ್ಸು ಸೋತಾಗ ಅಂದುಕೊಳ್ಳುತ್ತಿದ್ದ ' ಆಕೆಯಿಂದ ಬಂದ ಎರಡು ಕಾಗದಗಳಿಗೂ ಉತ್ತರ ಒರೆಯಲಿಲ್ಲ ಏನೆಂದುಕೊಂಡಳೊ ? ಈಗ ನನ್ನ ಬಗೆಯಲ್ಲಿ ಆಕೆಯ ಅಭಿಪ್ರಾಯ ಬದಲಾಗಿರಬಹುದೆ ? ಯಾರಿಗೆ ಗೊತ್ತು—ಆದರೂ ಆಯಿತು ಅದರಿಂದ ನನಗೇನಾಗಬೇಕು ? ನನ್ನ ಸಹಾಯ ಸಹಾನುಭೂತಿ ಎಲ್ಲಿಗೂ ನಿಲುಕಲಿಲ್ಲ ಅಲ್ಲದೆ ಕೊನೆಯಲ್ಲಿ ನಡೆದದ್ದೇನು ? ಈಗ ನಮ್ಮಿಬ್ಬರ ಸಂಬಂಧ ಒಂದು ದೃಷ್ಟಿಯಿಂದ ಕಡಿದುಹೋಗಿದೆ ಅದೇ ಸರಿ ಆದರೆ ಆಕೆ ಅಕಸ್ಮಾತ್ತಾಗಿ ಎಲ್ಲಿಯಾದರೂ ಬೀದಿಯಲ್ಲಿ ಇದಿರು ಬಂದರೆ ? '

ಈ ಕೊನೆಯ ಯೋಚನೆ ಮೂಡಿದ ಹಾಗೆ ಇತ್ತೀಚೆಗಂತೂ ಅದೇಕೋ ವಸಂತನಿಗೆ ಮನದಟ್ಟಾಗಿ ಹೋಗಿತ್ತು, ಆಕೆಯನ್ನು ತಾನು ಕೆಲವೇ ದಿನಗಳಲ್ಲಿ ಸಂಧಿಸಬಹುದು ಎಂದು. ಹೀಗಾಗಿ ಬೀದಿಯಲ್ಲಿ ಹೋಗುತ್ತಿರುವಾಗ ವಸಂತ ಆಕೆಗಾಗಿ ಮುನ್ನೋಡುತ್ತಿರುವಂತೆಯೆ ಇತ್ತು. ಆಸೆಯಿಂದಲ್ಲ, ಕಾಣಬೇಕೆಂಬ ಇಚ್ಛೆಯಿಂದಲೂ ಅಲ್ಲ, ಆದರೆ ಆಕೆ ತನಗೆ ಕಂಡೇ ಕಾಣಿಸಿಕೊಳ್ಳುವಳೆಂಬ ಒಳಮನಸ್ಸಿನ ವಿಚಿತ್ರವಾದ ಒಂದು ಭರವಸೆಯ ಮೂಲಕ. ಕೊನೆಗೆ ನಡೆದದ್ದಾದರೂ ಹಾಗೆಯೇ.

ಜುಲೈ ತಿಂಗಳ ಮೊದಲ ವಾರ. ಮುಂಬಯಿಲ್ಲಿಯ ಮಳೆ ತನ್ನ ವಾಡಿಕೆಯಂತೆ ಅನಿಯಮಿತವಾಗಿ ಬೀಳುತ್ತಲೇ ಇದ್ದಿತು. ಒಂದು ಕ್ಷಣಾ ಪ್ರಳಯ ಕಾಲವೇ ಬಂದಂತೆ ಸುರಿಯುತ್ತಿತ್ತಾದರೆ ಹತ್ತು ನಿಮಿಷಗಳಲ್ಲಿ ಮುಗಿಲು ಬಯಲಾಗಿ ಬಿಸಿಲು ಹೊಳೆಯುತ್ತಿದ್ದಿತು. ಈ ಮಳೆಯ ಮೂಲಕ ವಸಂತ ಎರಡು ವಾರಗಳಿಂದ ದಾದರಿಗೆ ಬಂದಿರಲಿಲ್ಲ. ಆದರೆ ಇಂದು ಶನಿವಾರ. ಹದಿನೈದು ದಿನಗಳಿಂದಲೂ ಕಾಣದ ಗೆಳೆಯರೊಡನೆ ನಕ್ಕು ಸುಖವಾಗಿದ್ದು ಬರೋಣ ಎಂದು ಹಟದಿಂದ ಹೊರಟಿದ್ದ. ಸ್ವಾತಂತ್ರ್ಯದ ಮುಂಬರವಿನಲ್ಲಿ ಆಫೀಸಿನಲ್ಲಿ ಕೆಲಸ ವಿಪರೀತವಾಗಿ ಬೆಳೆದಿತ್ತು. ಆದ್ದರಿಂದಲೆ ಅಂದು ಶನಿವಾರವಾದರೂ ಕೆಲಸವನ್ನು ಪೂರೈಸಿಕೊಂಡು ದಾದರಿಗೆ ಬರುವಷ್ಟಕ್ಕೆ ಸಂಜೆಯ ಆರು ಗಂಟೆ ಸಮೀಪಿಸಿತ್ತು. ನಿಧಾನವಾಗಿ ಹೆಜ್ಜೆ ಹಾಕುತ್ತಲೇ ಇದ್ದ. ಮನಸ್ಸು ತನಗೆ ತಿಳಿಯದಲೆಂಬಂತೆ ಮೋಹಿನಿಯನ್ನು ಕುರಿತು ಮೆಲಕು ಹಾಕುತ್ತಲೇ ಇತ್ತು. ತಾವಿಬ್ಬರೂ ಕೊನೆಯಾಗಿ ಭೆಟ್ಟಿಯಾದದ್ದು ಶಿವಾಜಿ ಪಾರ್ಕಿನ ಹತ್ತಿರದ ಹೋಟಲಿನಲ್ಲಿ! ಅಲ್ಲಿಂದ ಆ ಇಳಿಬಿಸಿಲಿನಲ್ಲಿ ಸಮುದ್ರದ ದಂಡೆಯಲ್ಲಿ ಕುಳಿತು ಮಾತನಾಡಿದ್ದು! ಅದೇ ಅಲ್ಲವೆ ಭಾಸ್ಕರನ ಕಾರಸ್ಥಾನದ ಮೂಲಕ ಮರುದಿನ ನಡೆದ ರುದ್ರನಾಟಕಕ್ಕೆ ನಾಂದಿ? ಅಂದು ರಾತ್ರಿ ಆ ಹೋಟಲಿನಲ್ಲಿ ತಾನು ಸಿಕ್ಕಬಿದ್ದಿದ್ದ ಸನ್ನಿವೇಶ ಕಣ್ಣೆದುರು ನಿಂತಿತು. ಛೆ! ಏನೇನು ನಡೆಯಿತು! ವಿಚಿತ್ರ! ಮೋಹಿನಿ ಈಗ ಹೇಗಿರಬಹುದು? ನಡೆದುದೆಲ್ಲದರ ಪರಿಣಾಮವಾಗಿ ಬಡಕಲಾಗಿ, ಬಳಲಿದವಳಾಗಿರಬಹುದೆ? ಅಂದು ಮಧ್ಯಾಹ್ನ ತನ್ನೊಡನೆ ಸರಸವಾಗಿ, ಸ್ವಚ್ಛಂದವಾಗಿ ಕುಳಿತು ಮಾತನಾಡುತ್ತಿರುವಾಗಿನ ಮುಖ ನೆನಪು ಮರೆಯಿಸಿತು. ಎಂದಿಗೂ ನಿಡಿದಾಗಿ ಮನ ಸೆಳೆಯುವಂತೆ ತೂಗಾಡುವ ಆ ಹೆಣೆದ ಜಡೆ, ಕಿವಿಯ ಹತ್ತಿರದಲ್ಲಿ

ನೋಡಿದವರ ಎದೆಗೆ ಬರೆಯಿಡುವಂತೆ ಕುಣಿಯುವ ಆ ಕುರುಳು, ಸೆಳೆದು ಸೋಲಿಸುವ ಆ ಕಣ್ಣುಗಳಲ್ಲಿಯ ಚಾಂಚಲ್ಯ! ಈಗಲೂ ಆಕೆ ಹಾಗೆಯೆ ಇರಬಹುದೆ? ಅಥವಾ ಆ ಮುಖದಲ್ಲಿಯ ಗೆಲುವು, ಹಟ, ಎಲ್ಲವೂ ಬಾಡಿರಬಹುದೆ?

ಬಾಡಿರಲಾರದು. ಸರಿ. ಇದೆಲ್ಲ ಯಾಕೆ ಯೋಚನೆ? ಎಂದಿನದೊ ಕತೆ ಆಕೆ ಹೇಗಿದ್ದರೇನು? ತಾನು ನೋಡಿದ ಕನ್ಯೆಯೂ ಆಕೆಯಂತೆಯೆ ಇರಲಿಲ್ಲವೆ? ಕೆಲಮಟ್ಟಿಗಾದರೂ? ಆಕೆಯನ್ನು ತಾನು ಒಪ್ಪುವುದಾದರೆ—ಒಪ್ಪಿದರೆ—ಕೊನೆಯ ವರೆಗೂ ಆಕೆ ಮೋಹಿನಿಯ ನೆನಪನ್ನು ತಂದುಕೊಡುವಳಲ್ಲವೆ? ಅಲ್ಲದೆ ಆಕೆಯೂ ಮೋಹಿನಿಯಂತೆಯೆ ಹಟಮಾರಿಯಾಗಿದ್ದರೆ? ಛೆ! ಇದೆಲ್ಲಿಯ ವಿಚಾರ! ಮುಖದಲ್ಲಿ, ನಿಲುವಿನಲ್ಲಿ, ನೋಟದಲ್ಲಿ ಸಾಮ್ಯವಿದ್ದರೆ ಗುಣದಲ್ಲಿಯೂ ಸಾಮ್ಯವಿರಬೇಕೆ? ವಸಂತನ ಮನಸ್ಸು ಎಲ್ಲೆಲ್ಲಿಯೊ ಅಲೆದಾಡಿತು

ವೈದ್ಯ ರೋಡ್‌ದ ಮೂಲೆಯನ್ನು ದಾಟಿ ಆತ ಹತ್ತಿಪ್ಪತ್ತು ಹೆಜ್ಜೆ ಹೋಗಿರಬೇಕು. ಸಮೀಪದ ಒಂದು ಚಿಕ್ಕ ಅಂಗಡಿಯ ಎದುರು ಇಬ್ಬರು ಹೆಂಗಸರು ನಿಂತಹಾಗಿತ್ತು. ಅಂಗಡಿಯವನ ಕೂಡ ಮಾತನಾಡುತ್ತಿದ್ದುದರಿಂದ ಅವರ ಮುಖ ವಸಂತನಿಗೆ ಕಾಣುತ್ತಿರಲಿಲ್ಲ ಅವರೆ ಅರೆಕ್ಷಣದಲ್ಲಿ ಎಡಗಡೆ ಯುವಳು ಹೂಮಾಲೆಯೊಂದನ್ನು ಮುಡಿಯಲು ಕೈಗಳನ್ನೆತ್ತಿದಾಗ—ಆಕೆ ನಿಂತ ತರಹ, ಆ ನಿಲುವು, ಆ ಕೈಗಳ ವೈಯಾರ, ಇಳಿಯಾಗಿ ಬಿದ್ದ ಆ ಹೆಳಲು—ಅದೇಕೊ ಆಕೆ ನಿಸ್ಸಂದೇಹವಾಗಿ ಮೋಹಿನಿಯೇ ಇರಬೇಕೆಂದುಕೊಂಡ ವಸಂತ ಆ ಆಕೃತಿ ಅಷ್ಟು ಪರಿಚಿತವಾಗಿತ್ತು ವಸಂತನ ಹೆಜ್ಜೆ ತಡೆಯಿತು ಇದ್ದರೆ? ಏನೆಂದು ಕಾಣುವುದು? ಏನು ಮಾತನಾಡುವುದು? ಸಪ್ಪನೆ ಅಲ್ಲಿಂದ ಜಾರಿ ಹೋಗುವುದೆ ಸರಿಯಾದದ್ದು ಎಂದು ನಿಂತ ಹೆಜ್ಜೆಯನ್ನು ಮುಂದಿಡಬೇಕೆಂದ, ಆ ಆಕೃತಿ ಮುಖ ತಿರುವಿತು ವಸಂತನಿಗೆ ಮೈ ಝಲ್ಲೆಂದಿತು ಆಕೆ ನಿಜವಾಗಿಯೂ ಮೋಹಿನಿ! ಮುಂದಿಡಬೇಕೆಂದ ಹೆಜ್ಜೆ ಮತ್ತೆ ತಡೆಯಿತು ಅಲ್ಲಿಂದ ಜಾರಬೇಕೆಂಬ ಮಾತು ಎಲ್ಲಿಯೋ ಉಳಿಯಿತು ಮನಸ್ಸಿನಲ್ಲಿ ಆಶ್ಚರ್ಯ, ಒಂದು ಬಗೆಯ ಅಸ್ಪಷ್ಟವಾದ ಹೆದರಿಕೆ, ಒಂದು ವಸ್ತು ಬೇಕೆಂದೂ ಆದಾಗ, ಬೇಡವೆಂದೂ ಆದಾಗ ಮನಸ್ಸು ಅನುಭವಿಸಬಹುದಾದ ಅನಿಶ್ಚಿತತೆ ವಸಂತನನ್ನು ಆವರಿಸಿತು ತಡೆದ ಹೆಜ್ಜೆಯಂತೆ ಮನಸ್ಸೂ ತಡೆಯಿತು ಯೋಚನೆ

ಕುಂಠಿತವಾಯಿತು

ಮೋಹಿನಿಗಾದರೂ ಅಷ್ಟೇ. ಹೀಗೆ ಅಕಸ್ಮಾತ್ತಾಗಿ ವಸಂತನನ್ನು ಸಂಧಿಸ ಬಹುದೆಂದು ಆಕೆ ಅಂದುಕೊಂಡಿರಲಿಲ್ಲವೆಂಬುದು ಆಕೆಯ ಮುಖದ ಮೇಲೆಯೆ ಸ್ಪಷ್ಟವಾಗಿದ್ದಿತು. ಅಕಸ್ಮಾತ್ತಾಗಿ ಸಿಕ್ಕಿದ್ದಕ್ಕೆ ಆಶ್ಚರ್ಯ, ಸಿಕ್ಕನೆಂಬುದಕ್ಕೆ ಸಮಾಧಾನ, ಅಲ್ಲದೆ ಹೀಗೆ ಸಿಕ್ಕವರು ಇನ್ನಾರೂ ಬೇರೆ ಬೇಕಾದವರಾಗಿರದೆ ವಸಂತನೇ ಆಗಿದ್ದನೆಂಬುದಕ್ಕೆ ಒಂದು ಬಗೆಯ ಗೆಲುವು—ಇವೆಲ್ಲವೂ ಮೂಕ ಭಾವವಾಗಿ ಅರೆ ತೆರೆದ ಆ ಬಾಯಲ್ಲಿ, ತುಟಿಯ ಅಂಚಿನಲ್ಲಿ ಮಿನುಗಿದ ಆ ಒಂದು ಕಿರುನಗೆಯಲ್ಲಿ ಸ್ಪಷ್ಟವಾಗಿದ್ದವು. ಹೂವಿನವನಿಗೆ ಕೊಡಬೇಕಾದ ಹಣವನ್ನು ಕೊಟ್ಟು ಆಗಲೆ ಮೋಹಿನಿ ವಸಂತನೆಡೆಗೆ ಬಂದುಬಿಟ್ಟಳು.

"ಎಲ! ಇದೇನು? ನೀವು ಇಲ್ಲಿ ಹೇಗೆ?"

ಎಂದು ಏನನ್ನೋ ವಸಂತ ತಡವರಿಸಿದ. ತಾನು ಆಡಿದ್ದೇನು ಎಂಬುದು ಜ್ಞಾಪಕವಿರುವ ಮನಃಸ್ಥಿತಿಯಲ್ಲಿಯೇ ವಸಂತನಿರಲಿಲ್ಲ. ಆದರೆ ಮೋಹಿನಿಗೆ ಮಾತ್ರ ಆತ ಸನ್ನಿವೇಶಕ್ಕೆ ಸಹಜವಾದ ಗೊಂದಲದಲ್ಲಿ ಸಿಲುಕಿರುವನೆಂಬುದು ತಿಳಿದಿತ್ತಲ್ಲದೆ ಆತ ತನ್ನನ್ನು 'ನೀವು' ಎಂದು ಸಂಬೋಧಿಸಿದ್ದೂ ಲಕ್ಷ್ಯಕ್ಕೆ ಬಾರದೆ ಹೋಗಲಿಲ್ಲ. ಆದರೆ ಎಷ್ಟಾದರೂ ಆಕೆ ಮೋಹಿನಿಯಲ್ಲವೆ! ಯಾವುದನ್ನೂ ತಿಳಿಯಗೊಡದೆ ಕಿರುನಗೆಯೊಂದನ್ನು ಬೀರಿ ಕೇಳಿದಳು :

"ಅಂದರೆ? ನಾನು ಮುಂಬಯಿಗೇ ಬರಬಾರದೆ?"

"ಹಾಗಲ್ಲ, ಅಂದರೆ ಇದೇನು ಹೀಗೆ ಅಕಸ್ಮಾತ್ತಾಗಿ—"

"ಹುಂ. ಅಕಸ್ಮಾತ್ತಾಗಿಯೇ—ಮತ್ತಿನ್ನೇನು ಮಾಡುವುದು?"

"ಅಂದರೆ?"

"ಅಂದರೆ—"

ಎಂದು ಮತ್ತೆ ಅದೇ ನಗೆಯನ್ನು ಬೀರಿದಳು. ಆ ನಗೆ ವಸಂತನಿಗೆ ಚಿರಪರಿಚಿತವಿದ್ದಿತಾದ್ದರಿಂದ ಆಕೆ ಮಾತನ್ನು ಮುಂದುವರಿಸಬೇಕಾಗಿರಲಿಲ್ಲ. ಆದರೂ ಬೇಕೆಂತಲೆ ಹೇಳಿದಳು .

"ಭೆಟ್ಟಿಯಾಗಬಾರದೆನ್ನುವವರು ಅಕಸ್ಮಾತ್ತಾಗಿಯೇ ಭೆಟ್ಟಿಯಾಗ ಬೇಕು!"

"ಆಗಬಾರದೆನ್ನುವವರೆಂದರೆ—?"

"ಕಾಗದಕ್ಕೂ ಉತ್ತರ ಬರೆಯುದವರು ಭೆಟ್ಟಿಯಾಗಬಾರದು ಅನ್ನುವವರೇ. ಅಲ್ಲವೆ ?—"

"ಸರಿ ಆದರೆ—"

"ಏನು ಆದರೆ ?"

"ಸರಿಯಾದ ಕಾರಣಗಳೂ ಇರಬಹುದಲ್ಲ ?"

"ಭೆಟ್ಟಿಯಾಗಬಾರದು ಎನ್ನುವುದಕ್ಕೆಯೆ ?"

"ಭೆಟ್ಟಿಯಂತೂ ಆಯಿತಲ್ಲ ಕಾಗದಕ್ಕೆ ಉತ್ತರ—"

"ಅದಲ್ಲ ಹೋಗಲಿ ಈಗ ಯಾಕೆ ? ನೀವು ಈಗ ಎಲ್ಲಿಗೆ ಹೊರಟದ್ದು ?"

"ಅದೂ ಹೋಗಲಿ. ನೀವು ಈಗ ಎಲ್ಲಿಂದ ಬಂದದ್ದು ?" ಎಂದು ವಸಂತ ನಕ್ಕ

"ಉಪಚಾರವೇನೋ ಬಹಳವಾಗಿದೆ ಅಂ ?—" ಎಂದ. ಮತ್ತೆ ಅದೇ ಕಿರುನಗೆ. ಎಂದಿಗೂ ವಸಂತನನ್ನು ಮೈಮರೆಯಿಸಿದ ಕಿರುನಗೆ ಅದು ಮೋಹಿನಿಯ ಆ ತುಟಿಗಳ ಅಂಚಿನಲ್ಲಿ ಯಾವ ಇಂದ್ರಜಾಲವಿದ್ದಿತೊ!

ಅಷ್ಟರಲ್ಲಿ ಕಾಲುಗಳು ತಾವಾಗಿಯೆ ದಾರಿಯನ್ನು ಕಂಡುಕೊಂಡಿದ್ದವು ಮಾತನ್ನು ಹೇಗೆ ಮೊದಲುಮಾಡಬೇಕೆಂಬ ಸಮಸ್ಯೆ ತಾನಾಗಿಯೇ ಬಗೆಹರಿದಿತ್ತು. ಸಂಕೋಚ ನಿಧಾನವಾಗಿ ಕಳಚುತ್ತಿದ್ದಿತು ಹಜ್ಜಗೆ ಸರಿಯಾಗಿ ಹೆಜ್ಜೆ ಹಾಕುತ್ತಿದ್ದ ಮೋಹಿನಿಯನ್ನು ವಸಂತ ಆಪಾದಮಸ್ತಕವೂ ಒಮ್ಮೆ ನೋಡಿದ ಯಾವ ವ್ಯತ್ಯಾಸವೂ ಕಂಡುಬರಲಿಲ್ಲ. ಅಂದು ಮಧ್ಯಾಹ್ನ ಅದೇ ದಾದರಿನಲ್ಲಿ ಬೀಳ್ಕೊಟ್ಟ ಮೋಹಿನಿಯೇ ಆಗಿದ್ದಳು. ಅವಳೇ ಆಗಿದ್ದರೂ—ಅದೇ ಉತ್ಥಾನವಾದ ಮೋಹಕತೆ ಮೈದುಂಬಿ ನಿಂತಿದ್ದರೂ–ಆಕೆ ಮೊದಲಿನಂತೆ ಕಾಣಲಿಲ್ಲ ವಸಂತನಿಗೆ ಯಾವುದೋ ಒಂದು ಬೇರೆಯಾದ ಆತ್ಮವಿಶ್ವಾಸ ಆಕೆಯ ಮೊಗದಲ್ಲಿ ಮನೆಮಾಡಿಕೊಂಡಂತಿತ್ತು. ಆ ಆತ್ಮವಿಶ್ವಾಸದ ಮೂಲಕವೇ ಆವರೆಗೆ ನಡೆದ ಘಟನೆಗಳಾವವೂ ಆಕೆಯನ್ನು ಕದಡಿಸಿರಲಿಲ್ಲವೆಂದು ಕಾಣುತ್ತಿತ್ತು ಆದರೂ ಯಾರು ಬಲ್ಲರು ? ಎಂದುಕೊಂಡ ಕಳೆದ ನಾಲ್ಕೈದು ತಿಂಗಳಲ್ಲಿ ಏನೇನು ನಡೆದಿದೆಯೋ, ಆಕೆ ಏನೇನನ್ನು ಯೋಚಿಸಿ, ಯಾವ ಯಾವ ಏರ್ಪಾಡುಗಳನ್ನು ಮಾಡಿಕೊಂಡಿದ್ದಾಳೆಯೋ—ತಿಳಿಯೋಣವೆಂದು ಕುತೂಹಲ ಒಂದು ಕಡೆ. ಆದರೆ ಕೇಳುವುದು ಹೇಗೆ ? ಕಾಗದಗಳಿಗೆ

—ಅದೂ ಅಂಥ ಮಹತ್ವದ ಕಾಗದಗಳಿಗೆ—ಒಂದು ಮಾತಿನ ಉತ್ತರವನ್ನೂ ಹೇಳದಿದ್ದ ತನಗೆ ಕೇಳಲು ಯಾವ ಅಧಿಕಾರ ಎಂಬ ಯೋಚನೆ ಇನ್ನೊಂದು ಕಡೆ ಹೀಗಾಗಿ ಸುಮ್ಮನಾಗಿಯೆ ಮುಂದೆ ನಡೆದ ಆದರೆ ಮೋಹಿನಿಗೆ ಈ ಯೋಚನೆಗಳಿರಲಿಲ್ಲ. ನಾಲ್ಕು ದಿನ ಮೊದಲು ಮುಂಬಯಿಗೆ ಬಂದಾಗಿನಿಂದ—ಹಾಗೆ ನೋಡಿದರೆ ಈಗ ಆಕೆಗೆ ಸಿಕ್ಕ ಕೆಲಸಕ್ಕಾಗಿ ಪ್ರಯತ್ನ ಪ್ರಾರಂಭವಾದಂದಿನಿಂದ—ವಸಂತನನ್ನು ಕಾಣತಕ್ಕದ್ದೆಂದು ಆಕೆ ನಿಶ್ಚಯಿಸಿಕೊಂಡಿದ್ದಳಲ್ಲದೆ, ಆತನಿಂದ ಯಾವ ಉತ್ತರವೂ ಬರದೆ ಇದ್ದುದರಿಂದ ನಿರುತ್ಸಾಹಿತಳಾಗಿರಲಿಲ್ಲ ಈ ನಾಲ್ಕು ದಿನವೆಲ್ಲವೂ ತನ್ನ ಇರುವ ನಿತ್ಯ ವ್ಯವಸ್ಥೆಗಳನ್ನು ಮಾಡಿಕೊಳ್ಳುವುದರಲ್ಲಿ, ತನ್ನ ಕೆಲಸದ ಇತಿಮಿತಿ, ಹೊಣೆಗಾರಿಕೆಗಳನ್ನು ತಿಳಿದುಕೊಳ್ಳುವುದರಲ್ಲಿ ಕಳೆದಿದ್ದವು ಆದ್ದರಿಂದ ಹೀಗೆ ಆಕಸ್ಮಾತ್ತಾಗಿ ಯಾದರೂ ಸಹಜವಾಗಿ ವಸಂತ ಸಿಕ್ಕಿದ್ದರಿಂದ ಆಕೆಗೆ ಸಂತೋಷ–ಸಮಾಧಾನಗಳೇ ಆಗಿದ್ದುವಲ್ಲದೆ ಆತನ ಬಗೆಯಲ್ಲಿ ವಿರಸವನ್ನು ಹುಟ್ಟಿಸುವ ಯಾವ ಭಾವನೆಯೂ ಆಕೆಯ ಹತ್ತಿರ ಸುಳಿದಿರಲಿಲ್ಲ ಅಂತೆಯೆ ಆಕೆಯ ಮಾತಿನಲ್ಲಿ ಯಾವ ಸಂಕೋಚವೂ ಕಾಣುತ್ತಿರಲಿಲ್ಲ

ಇಷ್ಟರಲ್ಲಿ ಅವರಿಬ್ಬರೂ ಪಾರ್ಕಿನ ಹತ್ತಿರದ ಹೋಟಲಿನೆದುರು ಬಂದಿದ್ದರು ಆ ಸ್ಥಳದ ಪೂರ್ವಾಪರ ಸಂಬಂಧಗಳ ಜ್ಞಾಪಕ ಆಕೆಗೆ ಇರದಿರಲಿಲ್ಲವೆಂಬುದು ಆಕೆಯ ನಗುಮಾತಿನಿಂದಲೇ ತಿಳಿಯುವಂತಿತ್ತು. ಆಕೆ ಕೇಳಿದಳು .

" ಇಲ್ಲಿಯೇ ಕುಳಿತುಕೊಳ್ಳೋಣವೆ ? "

" ಇಲ್ಲಿಯೆ ? "

" ಹೌದು ಯಾಕೆ ? ನಿಮಗೆ ಹೆದರಿಕೆಯೇನು ? "

" ಅಲ್ಲ. ಅಂದರೆ—"

" ಅದೆಲ್ಲ ನನಗೆ ಗೊತ್ತು. ಅದಕ್ಕೇ ಕೇಳಿದೆ, ಹೆದರಿಕೆಯೇನು ಎಂದು ! "

ವಸಂತನಿಗೆ ಕೂಡಲೆ ಉತ್ತರ ಹೇಳಲಾಗಲಿಲ್ಲ ಕೊನೆಗೆಂದ

" ಹೆದರಿಕೆ ಅಲ್ಲ. ಆದರೂ ಅದೇಕೋ ಮನಸ್ಸು ನೋಯುತ್ತದೆ—"

" ಅದಕ್ಕೆ ಯಾವ ಕಾರಣವೂ ಇಲ್ಲ. ನೀವು ಸುಮ್ಮನೆ—"

ಮೋಹಿನಿಯೂ ಸುಮ್ಮನಾದಳು. ಹಿಂದಿನ ಕಹಿಯಾದ ನೆನಹು ಆಕೆಯ ಮನಸ್ಸಿನೆದುರು ನಿಂತಿರಬೇಕು. ಅರೆನಿಮಿಷ ತಡೆದು ಹೇಳಿದಳು :

" ಸರಿ. ಅದೆಲ್ಲ ಎಂದಿನದೋ ಮಾತು ಅದನ್ನೆಲ್ಲ ಕಟ್ಟಿಕೊಂಡು ಗೋಳಾಡುವುದಾದರೆ—" ಎಂದು ತಾನಾಗಿಯೇ ಹೋಟಲಿನ ಪಾವಟಿಗೆ ಯನ್ನೇರಿದಳು. ವಸಂತನೂ ಬೆನ್ನ ಹಿಂದೆಯೆ ನಡೆದ ಒಂದು ಕ್ಷಣ ವಸಂತನಿಗೆ ಮೋಹಿನಿಯನ್ನು ಕುರಿತು ಅಪಾರವಾದ ಅನುಕಂಪವೆನಿಸಿತು. ಪಾಪ, ಎಂದುಕೊಂಡ ಆದರೆ ಆಕೆ ಫ್ಯಾಮಿಲಿ ರೂಮಿನಲ್ಲಿ ಸೇರಿ, ತನ್ನ ಕೈಚೀಲವನ್ನು ಎದುರಿನ ಮೇಜಿನ ಮೇಲಿಟ್ಟು, ಬದಿಯ ಕುರ್ಚಿಯಲ್ಲಿ ಕುಳಿತುಕೊಳ್ಳಲು ವಸಂತನಿಗೆ ಕಣ್ಣಾನನ್ನೆಯಿಂದ ತಿಳಿಸಿದಾಗ ಆ ಮರುಕ ಮಾಯವಾಯಿತು ' ನನಗೆ ಬೇಕಾದುದು ಮರುಕವಲ್ಲ ಅಷ್ಟು ಅಯೋಗ್ಯಳಲ್ಲ ನಾನು ನನಗೆ ಬೇಕಾದದ್ದು ಸಹಾನುಭೂತಿ ' ಎಂದು ಹೇಳುವಂತಿತ್ತು ಆಕೆಯ ದೃಷ್ಟಿ.

ಮೋಹಿನಿಯೇ ವೇಟರ್‌ನನ್ನು ಕರೆದು ಚಹ ತರಹೇಳಿದಳು ಆ ಒಂದು ಮಾತಿನಿಂದಲ್ಲದೆ " ಏನಾದರೂ ತಿನ್ನಲಿಕ್ಕೆ ಹೇಳಲಾ ? " ಎಂಬ ಪ್ರಶ್ನೆಯಿಂದ ತನ್ನ ' ವರ್ತಮಾನ 'ದ ವಿಷಯದಲ್ಲಿ ಆಕೆ ತಳೆದಿದ್ದ ಆತ್ಮವಿಶ್ವಾಸ ವ್ಯಕ್ತವಾಗು ತ್ತಿದ್ದಿತು ತಾವಿಬ್ಬರೂ ಮೊದಲು ಬಾರಿ ಚರ್ಚಗೇಟ್ ಬೀದಿಯಲ್ಲಿಯ ಹೋಟಲಿನಲ್ಲಿ ಕುಳಿತಾಗ್ಗೆ ನಾಯಕತ್ವವನ್ನು ವಹಿಸಿದವ ತಾನು, ಈಗ ಅದೇ ಪಾತ್ರವನ್ನು ಮೋಹಿನಿ ವಹಿಸುತ್ತಿದ್ದಳೆಂಬುದನ್ನು ವಸಂತ ನೆನೆಯದೆ ಇರುವುದು ಸಾಧ್ಯವಿರಲಿಲ್ಲ. ವೇಟರ್ ಕಣ್ಮರೆಯಾದ ಮೇಲೆ ಮೋಹಿನಿ ಒಂದಿಷ್ಟು ವಸಂತನೆಡೆಗೆ ಸರಿದು ಕೇಳಿದಳು .

" ಹುಂ. ಮತ್ತೇನು ಸಮಾಚಾರ ? "

" ನಾನೇನು ಹೇಳಲಿ ? ಎಲ್ಲವನ್ನೂ ಹೇಳಬೇಕಾದದ್ದು ನೀವು—"

" ನೀವು ಅಲ್ಲ—ನೀನು ! ಇಷ್ಟರಲ್ಲಿ ಮರೆತುಹೋಯಿತು ಅಲ್ಲವೆ ? "

" ಮರೆತೇನು ಹೋಗುತ್ತದೆ ? ಆದರೂ ಅದೇಕೊ—"

" ಸಂಕೋಚ. ಹೌದೆ ? "

" ಸಂಕೋಚವಲ್ಲ ಏನೊ—"

ಆ ಒಂದು ಮಾತಿನಲ್ಲಿ ವಸಂತನ ಸಮಸ್ಯೆ ಅಡಕವಾಗಿತ್ತು. ಇನ್ನು ಮುಂದೆ ತಾನು ಮೋಹಿನಿಯೊಡನೆ ಯಾವ ರೀತಿಯಾಗಿ ನಡೆದುಕೊಳ್ಳತಕ್ಕದ್ದು —ಹಿಂದೆ ಬೆಳೆದು ನಿಂತು, ಅನಿರೀಕ್ಷಿತವಾಗಿ ಕಡಿದುಹೋದ, ಅಥವಾ ನಿಂತು ಹೋದ ಭಾವನಾತ್ಮಕವಾದ ಸೆಳೆತಕ್ಕೆ ಯಾವ ಉತ್ತರವನ್ನು ಹೇಳತಕ್ಕದ್ದು—

ಎಂಬ ಪ್ರಶ್ನೆಗೆ ಉತ್ತರವನ್ನು ತನ್ನ ಮಟ್ಟಿಗಾದರೂ ನಿರ್ಧರಿಸಿಕೊಳ್ಳದೆ ಮೋಹಿನಿಯ ಮಾತಿಗೆ ಸಮರ್ಪಕವಾಗಿ ಉತ್ತರ ಹೇಳುವುದು ಸಾಧ್ಯವಿರಲಿಲ್ಲ. ಆದರೆ ಆ ಕ್ಷಣಕ್ಕೆ ಆ ನಿರ್ಧಾರವನ್ನು ಕೊನೆಯಾಗಿ ಮಾಡಿಕೊಳ್ಳುವುದು ಸಾಧ್ಯವಿರಲಿಲ್ಲ ಅದಕ್ಕೆಂದೇ ಏನಾದರೊಂದು ಹೇಳಿ ಮಾತು ಹಾರಿಸೋಣವೆಂದು ವಸಂತ ಹೇಳಿದ

" ನೀವೇನೆಂದುಕೊಳ್ಳಬಹುದೊ ಯಾರಿಗೆ ಗೊತ್ತು ? ನುಮ್ಮನೆ—"

" ಸರಿ ಅಷ್ಟು ವಿಶ್ವಾಸವಿರದಿದ್ದರೆ ಮಾತೇ ಮುಗಿದು ಹೋಯಿತಲ್ಲ ! "

" ವಿಶ್ವಾಸದ ಮಾತಲ್ಲ ಈಗ ಆದದ್ದು ಬೇಕಾದಷ್ಟಾಗಿದೆ ಮತ್ತೆ—"

" ಏನಾಗಿದೆ ಈಗ ? "

" ಏನೂ ಆಗಲಿಲ್ಲವೆ ? "

" ಅದರಲ್ಲಿ ಹೊಸದೇನೂ ಇಲ್ಲ ಎಂದಿಗೋ ಆಗಬೇಕಾದದ್ದು ಆ ದಿನ ಆಯಿತು, ಅಷ್ಟೆ "

" ಆದರೆ ನನ್ನಿಂದ ಆಗಬಾರದಾಗಿತ್ತು ನಾನೊಬ್ಬ ನಡುವೆ ಸಿಕ್ಕುಬಿದ್ದೆ "

" ನೀವು ಹಾಗೇಕೆ ತಿಳಿದುಕೊಳ್ಳಬೇಕು ? ನೀವಿಲ್ಲದಿದ್ದರೂ ಅಷ್ಟು ನಡೆಯುತ್ತಲೇ ಇತ್ತು ನೀವಿದ್ದುದರಿಂದ ಮುಂದೆ ಎಂದಿಗೋ ನಡೆಯಬೇಕಾದದ್ದು ಅಂದಿಗೇ ನಡೆಯಿತು, ಅಷ್ಟೆ."

" ನಡೆದದ್ದಂತೂ ನಡೆದುಹೋಯಿತು. ಆದರೆ ಆ ದಿನ ರಾತ್ರಿ ಅವರಿಬ್ಬರೂ ಬಂದು ವಿಪರೀತ ತೊಂದರೆ ಮಾಡಿದರು "

" ಅಷ್ಟಾಗುವುದೆಂದು ನನಗೆ ಗೊತ್ತೇ ಇದ್ದಿತು. ನಾನು ಕಾಗದದಲ್ಲಿ ಬರೆದಿರಲಿಲ್ಲವೆ ? "

" ಹೌದು. ನಾನೂ ಸ್ಪಷ್ಟವಾಗಿಯೇ ಮಾತನಾಡಿದೆ. ಭಾಸ್ಕರನ ಮುಖದ ಮೇಲಿಂದ ಪೂರ್ತಿಯಾಗಿ ಬೆವರು ತೆಗೆಯಿಸಿದೆ. ಆನಂದ ಮಾತ್ರ ತುಂಬಾ ಪಶ್ಚಾತ್ತಾಪ ಪಟ್ಟರು."

" ಪಶ್ಚಾತ್ತಾಪ ! "

ಮೋಹಿನಿಯ ಬಾಯಿಂದ ಆ ಒಂದು ಶಬ್ದ ಸ್ಪಷ್ಟವಾಗಿಯೂ ಹೊರಬೀಳಲಿಲ್ಲ ಬರೀ ಉಸಿರೇ ಹಾಗೆ ರೂಪುಗೊಂಡು ವಸಂತನ ಕಿವಿಯನ್ನು ತಲಪಿತು. ಆ ಒಂದು ಅಸ್ಪಷ್ಟವಾದ ಮಾತಿನಲ್ಲಿ ಆ ಇಡೀ ಸನ್ನಿವೇಶದಿಂದ

ಆಕೆಗಾದ ಸಂತಾಪ, ಅದರಿಂದಾಗಿ ಹುರಿಗೊಂಡ ಆಕೆಯ ಮನಸ್ಸು, ಒಂದು ವೇಳೆ ಆನಂದನಿಗೆ ಪಶ್ಚಾತ್ತಾಪ ನಿಜವಾಗಿ ಆಗಿದ್ದರೂ ಅದರ ನಿರರ್ಥಕತೆ, ನಡೆದುದೆಲ್ಲವನ್ನು ನಡೆಯಗೊಟ್ಟು, ಅಥವಾ ತಾನಾಗಿಯೇ ನಡಸಿ ಆಮೇಲೆ ಪಶ್ಚಾತ್ತಾಪಗೊಂಡರೆ ಅದರಿಂದೇನಾಗಬೇಕು ಎಂಬ ಪರಿತಾಪ—ಎಲ್ಲವೂ ವ್ಯಕ್ತವಾಗುವಂತಿದ್ದವು. ಹೀಗೆಂದೇ ಆಕೆಯ ಕಣ್ಣುಗಳಲ್ಲಿಯ ಗೆಲುವು ಆ ಕ್ಷಣದ ಮಟ್ಟಿಗಾದರೂ ಮಾಯವಾಗಿತ್ತು ಅರೆನಿಮಿಷ ನಿಧಾನಿಸಿ ಕೊನೆಗೆ ಕೇಳಿದಳು .

" ಆಮೇಲೆ ಮತ್ತೆ ಸಿಕ್ಕಿದ್ದನೆ ? "

" ಯಾರು ? "

" ಆನಂದ—"

ಆ ಏಕವಚನದಲ್ಲಿಯ ಕುತ್ಸಿತ ವಸಂತನ ಮನಸ್ಸನ್ನು ಮುಟ್ಟದಿರಲಿಲ್ಲ

" ಒಂದೆರಡು ಸಾರೆ ಅಲ್ಲಿ ಇಲ್ಲಿ ಸಿಕ್ಕಿದ್ದರು ಆದರೆ ಯಾವ ಮಾತನ್ನೂ ಆಡುವಂತಿರಲಿಲ್ಲ ಅವರಾಗಿಯೇ ಆಡಲಿಲ್ಲವೆಂದಮೇಲೆ ನಾನಾದರೂ ಯಾತಕ್ಕೆ ಎಂದು ಸುಮ್ಮನಾಗಿಬಿಟ್ಟೆ ಈಗ ಒಂದು ತಿಂಗಳಂತೂ ಎಲ್ಲಿಯೂ ನೋಡಿಲ್ಲ "

" ಹಾಗಿದ್ದರೆ ಆ ಕಾಗದ—"

" ಮತ್ತೊಮ್ಮೆ ನನ್ನ ಹತ್ತಿರ ಬಂದು ಮಾತನ್ನೆತ್ತಿದ್ದರೆ ಓದಲು ಕೊಡೋಣ ಎಂದಿದ್ದೆ—"

" ಹೀಗಿದ್ದರೂ ಪಶ್ಚಾತ್ತಾಪ ಎಂದು ಹೇಳಿದಿರಲ್ಲ ! "

" ಹಾಗೆ ನಾನು ಹೇಳಿದ್ದು ಅಂದು ರಾತ್ರಿಯ ಮಾತು. ಮತ್ತೊಮ್ಮೆ ಬಂದು ಮಾತನಾಡುತ್ತೇನೆ ಎಂದೂ ಅಂದಿದ್ದರು. ಆದರೆ ಅದೇಕೋ ಬರಲಿಲ್ಲ."

" ಅದೇನು ಬರುತ್ತಾನೆ ? ಬಂದು ಮಾತನಾಡಲಿಕ್ಕೆ ಒಂದು ಮುಖವಾದರೂ ಬೇಕಲ್ಲ ! "

" ಅದೆಲ್ಲ ಈಗ ಯಾಕೆ ? ಮೊದಲು ಹೇಳು—ಬಂದದ್ದು ಯಾವಾಗ, ಏನು ಕತೆ ? "

" ಬಂದು ನಾಲ್ಕು ದಿನ ಆಯಿತು. ಇನ್ನುಮೇಲೆ ಇಲ್ಲಿಯೇ ಇರುವುದು ! "

" ಇಲ್ಲಿಯೇ ಇರುವುದು ಅಂದರೆ ? "

" ಇಲ್ಲಿಯೇ ಇರುವುದು ಅಂದರೆ ಮುಂಬಯಿಯಲ್ಲಿಯೇ ಇರುವುದು ! "

" ಅಷ್ಟೂ ಗೊತ್ತಾಗುವುದಿಲ್ಲವೆ ನನಗೆ ? ಆದರೆ ಅದರ ಅರ್ಥ ಏನು ? "

" ಇಲ್ಲಿಯೆ ಕೆಲಸ ಹಿಡಿದಿದ್ದೇನೆ."

" ಏನು ಕೆಲಸ ? "

" ಇಲ್ಲಿಯೆ ದಾದರ್ ಹೆಣ್ಣುಮಕ್ಕಳ ಹೈಸ್ಕೂಲಿನಲ್ಲಿ ! "

" ಇರುವುದು ? "

" ಬೋರಿವಲಿಯಲ್ಲಿ ! " ಎಂದು ಗೊಳ್ಳೆಂದು ನಕ್ಕಳು.

" ಸರಿ ಸಂತೋಷ ! "

ಎಂದು ವಸಂತ ಸುಳ್ಳು ಸಮಾಧಾನವನ್ನು ಸೂಸಿ ಸುಮ್ಮನಾದ.

" ಯಾಕೆ ? ಸುಮ್ಮನಾದಿರಿ ? "

" ಮತ್ತಿನ್ನೇನು ಮಾಡುವುದು ? ಕೇಳಿದ್ದಕ್ಕೊಂದು ಸುಳ್ಳು ಹೇಳಿದರೆ ? "

" ನಾನು ಕೆಲಸ ಹಿಡಿದದ್ದು ಸುಳ್ಳೆ ಹಾಗಾದರೆ ? "

" ಕೆಲಸ ಹಿಡಿದಿರಬಹುದು ಆದರೆ ಇರುವುದು ಬೋರಿವಲಿ ಎಂದರೆ—"

" ಸುಮ್ಮನೆ ಹೇಳಿದೆ ! "

" ಸುಮ್ಮನೆ ಯಾಕೆ ? ಅಸಾಧ್ಯವೇನೂ ಅಲ್ಲವಲ್ಲ ! " ಎಂದು ವಸಂತ ನಗು ಸೂಸಿದ

" ಅಸಾಧ್ಯವಲ್ಲ ಎನಿಸುತ್ತದೆಯೆ ನಿಮಗೆ ಇನ್ನೂ ? "

" ಹೌದು."

" ಹುಚ್ಚು ನಿಮಗೆ. ಹಾಗಿದ್ದರೆ ನನ್ನನ್ನು ನೀವು ಅರ್ಥಮಾಡಿಕೊಂಡಿಲ್ಲ ವೆಂದೇ ಹೇಳಬೇಕಾಗುತ್ತದೆ ಇನ್ನುಮೇಲೆ ಆ ಮಾತು ಎಂದಿಗೂ ಅಸಾಧ್ಯ."

" ನನ್ನ ಮಟ್ಟಿಗೆ ನಾನು ಇನ್ನೂ ಆಸೆಯನ್ನು ಪೂರ್ತಿಯಾಗಿ ಬಿಟ್ಟಿಲ್ಲ."

ಅದು ನಿಜವಾಗಿಯೂ ವಸಂತನ ಪ್ರಾಮಾಣಿಕ ಅಭಿಪ್ರಾಯವಾಗಿತ್ತು. ಆದರೆ ಆ ವಿಷಯದಲ್ಲಿ ಮೋಹಿನಿಯ ಮನಸ್ಸು ಎಷ್ಟರಮಟ್ಟಿಗೆ ಕಹಿಯಾಗಿತ್ತೆಂಬುದರ ಕಲ್ಪನೆ ಆತನಿಗಿದ್ದಿದ್ದರೆ ಆ ಮಾತನ್ನು ಆತ ಹೇಳುತ್ತಿರಲಿಲ್ಲ.

" ಸರಿ, ಹಾಗಿದ್ದರೆ ನನಗೂ ನಿಮಗೂ ಕೂಡ ಒಂದು ದಿನ—"

ಮೋಹಿನಿಗೆ ಮಾತು ಮುಗಿಸುವ ಮನಸ್ಸಾಗಲಿಲ್ಲ.

" ಏನು ? ಜಗಳವಾಗುತ್ತದೆಯೆ ? "

" ಯಾಕೆ ಇದೆಲ್ಲ ? ಇದೀಗ ಭೆಟ್ಟಿಯಾಗಿ ಮುಂದಿನ ಜಗಳದ ಕಾರ್ಯ

ಕ್ರಮವನ್ನು ಈಗಲೆ ಗೊತ್ತುಮಾಡಬೇಕಾಗಿದೆಯೆ ನಿಮಗೆ ?"

"ನೋಡಿದೆಯಾ ? ಜಗಳದ ಮಾತನ್ನು ಮೊದಲಿಗೆ ಯಾರು ಎತ್ತಿದವರು ?"

" ಯಾರೇ ಇರಲಿ, ಈಗ ಇರುವುದು ಹಾಗಾದರೆ ಬೋರಿವಲಿಯಲ್ಲಿಯೆ ?" ಎಂದು ವಸಂತ ಮತ್ತೆ ಮಾತನ್ನು ನಗೆಯಲ್ಲಿ ತೇಲಿಸಿಕೊಂಡು ಹೋದ.

" ಬೋರಿವಲಿ ಅಲ್ಲ, ಮಹಾರಾಯರೆ ದಾದರ್ !"

" ದಾದರ್‌ನಲ್ಲಿ—ಎಲ್ಲಿ ?"

" ಇಲ್ಲಿಯೇ ಪಾರ್ಕಿನ ಹತ್ತಿರ. ನಮ್ಮ ತಾಯಿಯ ಪರಿಚಯದವರೊಬ್ಬರ ಮನೆಯಲ್ಲಿ ಒಂದು ಕೋಣೆಯ ವ್ಯವಸ್ಥೆ ಮಾಡಿಕೊಂಡಿದ್ದೇನೆ."

" ದೂರವಾಗಿದೆಯೆ ಇಲ್ಲಿಂದ ?"

" ಇಲ್ಲವಲ್ಲ! ಬಂಗ್ಲೊ ನಂಬರ್ ೩೪ ಬರುತ್ತೀರಾ ಈಗ ?"

" ಈಗ ಬೇಡ ಇನ್ನಾವಾಗಲಾದರೂ ಬರುವೆ !"

" ನಿಜವಾಗಿಯೂ ? ನೋಡಿ ಮತ್ತೆ—"

" ಯಾಕೆ ? ನಾನು ಬರುವುದಿಲ್ಲ ಎನಿಸುತ್ತದೆಯೆ ?"

" ಯಾರಿಗೆ ಗೊತ್ತು !"

" ಯಾಕೆ ಈ ಅನುಮಾನ ? ನಾನು ಕಾಗದಗಳಿಗೆ ಉತ್ತರ ಬರೆಯಲಿಲ್ಲ ಎಂದೆ ?"

" ಹೌದು—"

" ಏನೆಂದು ಬರೆಯಬೇಕಾಗಿತ್ತು, ನಾನು ? ಅದೇ ನನಗೆ ಬಗೆಹರಿಯಲಿಲ್ಲ. ಅಲ್ಲದೆ ಎಲ್ಲ ವಿಷಯ ವಿಪರೀತವಾಗಿಯೇ ಕೊನೆಗಂಡು ಹೋಗಿತ್ತು. ನಾನು ಬಯಸಿದ್ದೊಂದು, ಕೊನೆಗೆ ನಡೆದದ್ದು ಇನ್ನೊಂದು ಎಲ್ಲದಕ್ಕೂ ನಾನೇ ಕಾರಣವಾದಂತಾಯಿತಲ್ಲ ಎಂದು ಬಹಳ ದಿವಸ ನನ್ನ ಮನಸ್ಸಿಗೆ ನೋವಾಯಿತು—"

ಮೋಹಿನಿ ಸುಮ್ಮನಾದಳು. ವಸಂತನೇ ಮುಂದುವರಿದ :

"ನಿಜವಾಗಿಯೂ ಒಂದೆರಡು ಸಲವಂತೂ ವಿಪರೀತ ಕೆಡಕೆನಿಸಿ ಸುದೀರ್ಘವಾಗಿ ಬರೆದು ನಿನ್ನ ಕ್ಷಮೆ ಕೇಳೋಣವೆನ್ನಿಸಿತು. ಅಷ್ಟಕ್ಕಾಗಿ ಪುಣೆಯ ವರೆಗೂ ಬಂದುಹೋಗಬೇಕೆಂದಿದ್ದೆ—"

ವಸಂತನ ಮಾತು, ಆ ಮಾತಿನ ಬಗೆ—ಮೋಹಿನಿಯ ಹೃದಯವನ್ನು

ತಟ್ಟಿದ್ದವು. ಎಷ್ಟಾದರೂ ಏನಾದರೂ ವಸಂತ ವಸಂತನಾಗಿಯೆ ಉಳಿದಿದ್ದಾನೆ ಎಂಬ ಸಮಾಧಾನವೂ ಆಯಿತು ತನ್ನ ಮುಂದಿನ ಬಗೆಯಲ್ಲಿ ವಿಶ್ವಾಸವೂ ಬಲಿಯುವಂತಾಯಿತು. ಆದರೆ ನೊಂದುಕೊಂಡ ಆತನಿಗೆ ಏನೆಂದು ಸಮಾಧಾನವನ್ನು ಹೇಳುವುದು ? ಹೇಳುವುದಾದರೂ ಹೇಗೆ ? ಅರೆನಿಮಿಷ ಸುಮ್ಮನಿದ್ದು ಹೇಳಿದಳು

" ಸುಮ್ಮನೆ ನೀವು ಮನಸ್ತಾಪ ಮಾಡಿಕೊಳ್ಳುತ್ತೀರಿ. ಅದನ್ನೆಲ್ಲ ನೆನೆಯುತ್ತ ಕುಳಿತರೆ ಯಾವುದೂ ಆಗುವುದಿಲ್ಲ ಅಂತೆಯೆ—"

" ಅಂತೆಯೇ ಏನು ? "

" ಹಾಗೆಂದೇ ನಾನು ಯಾವುದನ್ನೂ ಮನಸ್ಸಿಗೆ ತಂದುಕೊಳ್ಳದೆ ಇಲ್ಲಿಗೆ ಬಂದಿದ್ದೇನೆ ಮೊದಮೊದಲು ದಿಕ್ಕುಗಾಣದಂತೆಯೆ ಇದ್ದೆ ಇಲ್ಲಿಂದ ಹೋದ ನಂತರವಂತೂ ಒಂದು ತಿಂಗಳು—ಓಹ್ ! ಅದನ್ನೆಲ್ಲ ನೆನೆದರೆ—"

ವಸಂತ ಸುಮ್ಮನಾಗಿಯೆ ಇದ್ದ ಮಧ್ಯದಲ್ಲಿ ವೇಟರ್ ಬಂದು ನೋಡಿಕೊಂಡು ಹೋದ ಆತ ಬಂದುಹೋದುದಕ್ಕಾಗಿ ವಸಂತ ಮತ್ತೆ ಎರಡು ಕಪ್ಪು ಚಹ ತರಹೇಳಿದ ಮೋಹಿನಿ ಮುಂದುವರಿದು ಹೇಳಿದಳು .

" ನಾನು ಮಾಡಿದ್ದು ತಪ್ಪು ಎಂದು ನನಗೆ ಎಂದಿಗೂ ತೋರಿಲ್ಲ—ಈವರೆಗಾದರೂ ನನಗೆ ತಿಳಿದ ಮಟ್ಟಿಗೆ ಸರಿಯಾಗಿಯೇ ನಡೆದುಕೊಂಡಿದ್ದೇನೆ. ಇನ್ನುಮುಂದಾದರೂ ಅಷ್ಟೆ ಸುದೈವದಿಂದ ಈ ಕೆಲಸವೊಂದು ಸಿಕ್ಕು ನನ್ನ ಸಮಸ್ಯೆ ಬಗೆಹರಿದಂತಾಗಿದೆ—"

ಕೆಲಸ ಸಿಕ್ಕರೆ—ಸ್ವತಂತ್ರವಾಗಿ ಇರುವಂತಾದರೆ—ಬದುಕಿನ ಸಮಸ್ಯೆ ಬಗೆಹರಿದಂತಾಗಲಿಲ್ಲವೆಂಬ ಸತ್ಯವನ್ನು ಆಕೆಗೆ ಹೇಳುವುದು ಹೇಗೆ ? ಹೇಳಿ ಆಕೆಯನ್ನು ಯಾಕೆ ಅಸಮಾಧಾನಗೊಳಿಸಬೇಕೆಂದು ವಸಂತ ಸುಮ್ಮನಾದ. ಮೋಹಿನಿಯೆಂದಳು

" ನಿಮ್ಮನ್ನು ನಾನು ಎಷ್ಟು ಬಾರಿ ನೆನೆದಿದ್ದೇನೆಂಬುದನ್ನು ಹೇಳುವುದೇ ಸಾಧ್ಯವಿಲ್ಲ ಇನ್ನಾವ ಸಂದರ್ಭದಲ್ಲಿಯೂ ಅಲ್ಲ ಇಲ್ಲಿಂದ ಹೋದನಂತರ ನನಗೆ ಅಲ್ಲಿಯಾದರೂ ಯಾರಿಂದಲೂ ಸಹಾನುಭೂತಿಯ ಮಾತು ಕೂಡ ಇರಲಿಲ್ಲ. ನನ್ನ ತಾಯಿಗೆ ದುಃಖ, ಅಜ್ಜನಿಗೆ ಸಿಡುಕು ಅಲ್ಲದೆ ಸುತ್ತಲಿನವರಿಗೆ ನನ್ನ ಕತೆಯೆಂದರೆ ಹರಟೆಗೆ—ಪಿಸುಮಾತಿಗೆ—ವಿಷಯ. ಇಂಥ ವಾತಾವರಣ

ದಲ್ಲಿ ಬದುಕನ್ನು ನಡೆಯಿಸಬೇಕಾದರೆ ಏನು ಗತಿ ಎಂದು ಎಷ್ಟೋ ಬಾರಿ ನಡುಗಿದ್ದೇನೆ. ನಿಮ್ಮಿಂದ ಕಾಗದ ಬರದಿದ್ದರೂ ನಿಮ್ಮಲ್ಲಿಯ ನನ್ನ ವಿಶ್ವಾಸ ಎಂದೂ ಅಳಿಯಲಿಲ್ಲ. ನನಗೆ ಎಲ್ಲಿಯಾದರೂ ಸಹಾನುಭೂತಿ ಸಿಕ್ಕಬೇಕಾದರೆ ಅದು ನಿಮ್ಮಿಂದಲೇ ಎಂದುಕೊಳ್ಳುತ್ತಿದ್ದೆ."

ಮೋಹಿನಿಗೆ ಮುಂದೆ ಮಾತು ಬಾರದಾಯಿತು. ಕಣ್ಣು ತೇವಗೊಂಡವು. ವಸಂತನೆಂದ

" ಏನು ಸಹಾನುಭೂತಿಯೊ ಏನೊ. ಇದನ್ನೆಲ್ಲ ಯೋಚಿಸಿದಾಗ ನನಗಂತೂ ಯಾವುದೂ ತಿಳಿಯದಾಗುತ್ತದೆ."

" ತಿಳಿಯಲಾಗದ್ದೇನಿದೆ? ನನ್ನ ಮಟ್ಟಿಗೆ ಇಂದಿಗೆ ನನ್ನ ಬದುಕಿನ ಪ್ರಶ್ನೆ ನನ್ನ ಆತ್ಮವಿಶ್ವಾಸದ, ನನ್ನ ಧೈರ್ಯದ ಪ್ರಶ್ನೆಯಾಗಿದೆ ಆ ಧೈರ್ಯ, ಆ ಆತ್ಮ ವಿಶ್ವಾಸವಿದೆ ಎಂದೇ ಇಲ್ಲಿಯ ವರೆಗೆ ಬಂದಿದ್ದೇನೆ—ಮನೆಯವರ ಮಾತನ್ನು ಕೂಡ ಮೀರಿ."

" ನಿನ್ನ ತಾಯಿ ಬೇಡ ಅಂದರೆ ? "

" ಆಯಿತು, ಆಕೆಯ ಮಾತು ಕೇಳಿದರೆ—"

" ಯಾಕೆ ? "

" ಯಾಕೇನು ? ಅವರು ಹೇಳುವ ಮಾತು ಒಂದೇ. ಏನಾದದ್ದು ಆಗಿ ಹೋಯಿತು ಎಲ್ಲವನ್ನೂ ಮರೆತು ಮತ್ತೆ ಹೊಂದಿಸಿಕೊಂಡು ಹೋಗ ಬೇಕಂತೆ—ಆದರೆ ಇದುವರೆಗೆ ನಡೆದುದನ್ನೆಲ್ಲ ಮರೆಯುವುದು ಸಾಧ್ಯವೆ ಎಂದಿಗಾದರೂ ? "

" ಸಾಧ್ಯವಾಗಲಿಕ್ಕಿಲ್ಲವೆ ? "

" ಎಂಥ ಮಾತಿದು ? ಮುಖಕ್ಕೆ ಏಟು ಕೊಟ್ಟು ಮನೆಯಿಂದ ಹೊರ ದೂಡಿದವರೆದುರು ಮತ್ತೆ ಮೂಗು ತಿಕ್ಕಲೆ ? ಅಂಥದೇನು ಬಂದದ್ದು ನನಗೆ ? ನನ್ನ ಮಟ್ಟಿಗೆ ನಾನಾಗಿಯೆ ಇರುವುದು ಅಸಾಧ್ಯವಾದರೆ ಒಂದೇ ಏಟಿಗೆ ಸತ್ತು ಹೋಗುತ್ತೇನೆ ನನ್ನ ಬದುಕು, ನನ್ನ ಸಾವು—ಎರಡೂ ನನ್ನ ಕೈಯಲ್ಲಿವೆ ಆದರೆ ನಾನಿಲ್ಲಿಗೆ ಬಂದದ್ದು ಬದುಕಬೇಕು ಎಂಬ ಹಟದಿಂದ—"

" ಅದು ಸರಿ ಆದರೆ ಮನೆಯವರಿಂದಲೂ ದೂರವಾಗಬೇಕಾದರೆ—"

" ದೂರ, ಸಮೀಪ! ಒಂದು ದೃಷ್ಟಿಯಿಂದ ಯಾರಿಗೆ ಯಾರೂ

ಸಮೀಪಸವಲ್ಲ ! ”

“ ಹಾಗಲ್ಲ, ಮೋಹಿನಿ. ಹಟ ಸಾಧಿಸಬಹುದು. ಹಟದಿಂದ ಏನು ಬೇಕಾದುದನ್ನೂ ಮಾಡಬಹುದು. ಆದರೆ ಪ್ರೀತಿಯನ್ನು ಕಳೆದುಕೊಂಡರೆ ಮತ್ತೆ ಅದನ್ನು ಗಳಿಸುವುದು ಸಾಧ್ಯವಿಲ್ಲ ”

“ ಕಳೆದ ಪ್ರೀತಿ ಕಳೆದೇ ಹೋಯಿತು ಅಳಿಯಬಹುದಾದರೆ ಅದೆಂಥ ಪ್ರೀತಿ ? ”

“ ನಿಜ. ಆದರೆ ಆ ಮಾತು ಎರಡೂ ಕಡೆಯಲ್ಲಿ ಅನ್ವಯಿಸುತ್ತದೆ.”

“ ನಾನು ಇಲ್ಲ ಅನ್ನುತ್ತೇನೆಯೆ ? ಆದರೆ ಇದುವರೆಗೆ ಬದುಕು ನನ್ನ ಮೇಲೆ ಸೇಡು ತೀರಿಸಿಕೊಳ್ಳುತ್ತಿದ್ದ ಹಾಗಿದೆ ಅಂಥ ಯಾವುದನ್ನು ನಾನು ಮಾಡಿದೆನೊ, ನನಗಂತೂ ತಿಳಿಯುವುದಿಲ್ಲ ಇಂದು ನನಗೆ ತಿಳಿಯುವುದು ಒಂದೇ ಬದುಕು ನನ್ನ ಮೇಲೆ ತೋರಿಸಿದ ಸೇಡಿಗಾಗಿ ಬದುಕಿನ ಮೇಲೆಯೆ ನಾನು ಸೇಡು ತೀರಿಸಿಕೊಳ್ಳುವ ಹಟದಿಂದ ಇದ್ದೇನೆ ಅದಿಲ್ಲದಿದ್ದರೆ—”

ಮೋಹಿನಿ ಸುಮ್ಮನಾದಳು. ಆಕೆಯ ಹೃದಯದಲ್ಲಿಯ ಉದ್ವೇಗ ಕೆಂಪೊಡೆದ ಆಕೆಯ ಕಪೋಲಗಳ ಮೇಲೆ, ಅದುರುವ ಆ ತುಟಿಗಳ ಮೇಲೆ ಕಂಪಿಸುತ್ತಿತ್ತು. ಅದೇ ವಿಷಯವನ್ನು ಮುಂದುವರಿಸಿ ಆಕೆಯನ್ನು ಹೆಚ್ಚಿಗೆ ಉದ್ವೇಗಗೊಳಿಸಬಾರದೆಂದು ವಸಂತನೂ ಸುಮ್ಮನಾದ ಹುಬ್ಬುಗಳ ನಡುವೆ ಎಡ ಹಸ್ತೆರಳನ್ನಿರಿಸಿ ಮೋಹಿನಿ ಕಣ್ಣು ಮುಚ್ಚಿದಳು ಒಂದೆರಡು ನಿಮಿಷ ಇಬ್ಬರೂ ಹಾಗೇ ಕುಳಿತಿರಬೇಕು ಕೊನೆಗೆ ವಿಷಯ ಬದಲಾಯಿಸಲೆಂದೊ, ಬಂದು ಕುಳಿತು ಬಹಳ ಹೊತ್ತಾಯಿತೆಂದೊ ವಸಂತ ಕೇಳಿದ

“ ಈಗ ನೀನೆಲ್ಲಿಗೆ ಹೋಗಬೇಕು ? ”

“ ಎಲ್ಲಿಯೂ ಇಲ್ಲ ! ”

“ ಪೇಟೆಯ ಕಡೆಗೆ ಹೋಗಬೇಕಾಗಿದ್ದಿತೆ ? ”

“ ಹುಂ—ಏನೊ ಒಂದೆರಡು ಸಾಮಾನು ತೆಗೆದುಕೊಳ್ಳುವುದಿತ್ತು. ಆದರೆ ನಾಳೆ ಹೋದರೂ ಆಗುತ್ತದೆ ಯಾವ ಅವಸರವೂ ಇಲ್ಲ ನೀವು ? ”

“ ಗೆಳೆಯರ ಕಡೆಗೆ ಹೋಗಬೇಕೆಂದಿದ್ದೆ. ಆದರೇನು, ತಡವಾಗಿಬಿಟ್ಟಿತು. ಇನ್ನು ಮನೆಯ ಕಡೆಗೇ ಹೊರಟುಬಿಡುತ್ತೇನೆ—ನೀನೂ ಆ ಕಡೆಗೆ ಬರುವ ಹಾಗಿದ್ದರೆ—”

" ಅಂದರೆ—ನಿಮ್ಮ ಮನೆಗೆ ? " ಎಂದು ಮೋಹಿನಿ ನಗೆ ಬೀರಿದಳು.

" ಆ ಕಡೆಗೆ ಎಂದರೆ ಸ್ಟೇಶನ್ ಕಡೆಗೆ—ಪೇಟೆಯ ಕಡೆಗೆ ! "

" ಮನೆಗೇ ಬಂದರೆ ? "

" ನನ್ನ ಮನೆ ಬೋರಿವಲಿಯಲ್ಲಿದೆ ! "

" ಆನಂದನ ಮನೆಯ ಹತ್ತಿರವೂ ಇದೆ. ಅದೂ ನನಗೆ ಗೊತ್ತು ! "

" ಆದರೂ ಬರುತ್ತೀಯಾ ? "

" ಯಾಕೆ ? ನನಗೆ ಹೆದರಿಕೆಯೆ ? ಇಂದಿಲ್ಲ ನಾಳೆ ಬಂದೇ ಬರುತ್ತೇನೆ ನೋಡುವಿರಂತೆ "

" ಬಂದಾಗ ಬರುವಿಯಂತೆ. ಈಗಲಂತೂ ಈ ಜಾಗ ಬಿಡು. ಹೊರಗೆ ಜನ ಕಾಯುತ್ತಿದ್ದಾರು."

" ಹೊರಡೋಣವೆ ಹಾಗಾದರೆ ? "

" ಯಾಕೆ ? ಇನ್ನೂ ಹೊರಡುವ ಮನಸ್ಸಿದ್ದ ಹಾಗೆ ಕಾಣುವುದಿಲ್ಲ ! "

" ಹೊರಡಲಂತೂ ಬೇಕಲ್ಲ, ಈಗಲ್ಲದಿದ್ದರೂ ಇನ್ನು ಹತ್ತು ನಿಮಿಷಕ್ಕೆ. ಆಯಿತು, ನಡೆಯಿರಿ. ಪೇಟೆಯ ವರೆಗೆ ಬರುತ್ತೇನೆ."

ಹೀಗೆಂದು ಹೊರಡಲನುವಾದರು. ಹೊರಬೀಳುವಾಗ ವಸಂತನೆಂದ :

" ಆ ಸಲ ಇಲ್ಲಿಂದ ಹೊರಬಿದ್ದು ಸಮುದ್ರದ ಕಡೆಗಲ್ಲವೆ ನಾವು ಹೋದದ್ದು ? "

" ಹೌದು. ಆ ಸಲ ಪಶ್ಚಿಮಕ್ಕಾದರೆ ಈ ಸಲ ಪೂರ್ವಕ್ಕೆ ! "

" ಅಂದರೆ ? "

" ಅಂದರೆ ಸಮುದ್ರದ ಕಡೆಗಲ್ಲದೆ ನಿಲ್ದಾಣದ ಕಡೆಗೆ ಎಂದರ್ಥ ! "

" ಇಷ್ಟೇ ತಾನೆ ಅರ್ಥ ? "

" ಮತ್ತಿನ್ನೇನಿರಬೇಕು ? "

ದೊಡ್ಡ ಬೀದಿಯನ್ನು ದಾಟಬಂದಮೇಲೆ ವಸಂತ ಕೇಳಿದ

" ಹಿಂದೆ ನೋಡಿದೆಯಾ—ಯಾರಿದ್ದಾರೆ ? "

" ಯಾರಿದ್ದಾರೆ ? "

" ಭಾಸ್ಕರನ ಏಜಂಟ್ ! " ಎಂದು ಗಟ್ಟಿಯಾಗಿ ನಕ್ಕ

" ಹೌದೆ ? ಎಚ್ಚರ ಹಾಗಾದರೆ. ಹೆದರಿಕೊಂಡು ಮೂರ್ಛೆ ಹೋದೀರಿ !'

" ನಾನೇ ? "

" ಹಾಗಾದರೆ ನಾನೇ ? "

ಎಂದು ಕತ್ತು ಕೊಂಕಿಸಿ ಕೇಳಿದಾಗ ವಸಂತನಿಗೆ ಮೋಹಿನಿಯ ಮೋಹ ಕತೆ ಕಡಿಮೆಯಾಗಿರದೆ ಇನ್ನೂ ಒಂದು ಪಾಲು ಬೆಳೆದಿದೆ ಎಂದುಕೊಳ್ಳುವಂತಾಯಿತು ದಾರಿಯುದ್ದಕ್ಕೂ ಆ ಮಾತು ಈ ಮಾತು ನಡೆದೇ ಇತ್ತು ಹೆಚ್ಚು ಕಡಿಮೆ ಪುಣೆಯಲ್ಲಿ, ಕಳೆದ ನಾಲ್ಕು ತಿಂಗಳು ದಿನಗಳನ್ನು ನೂಕಿದ ಬಗೆಯನ್ನೆಲ್ಲ ಮೋಹಿನಿ ವಿವರಿಸಿದಳು. ರಾನಡೆ ರೋಡ್‌ದಲ್ಲಿಯೆ ಹೋಟೆಲೊಂದರಲ್ಲಿ ವಸಂತ ಊಟ ಮಾಡಿಕೊಂಡು ಹೋಗಬೇಕಾಗಿದ್ದಿತಾದ್ದರಿಂದ ಮೋಹಿನಿಯನ್ನು ಅಲ್ಲಿಯೇ ಮೂಲೆಯ ಮೇಲೆ ಬೀಳ್ಕೊಡಬಹುದೆಂದು ಹೇಳಿದ

" ನಾನು ಇಲ್ಲಿ ಊಟ ಮಾಡಿಕೊಂಡು ಬರಬೇಕು—"

" ಇಷ್ಟೇನು ಅವಸರ ? ಇನ್ನೂ ಎಂಟು ಗಂಟೆ ಕೂಡ ಆಗಿಲ್ಲ "

" ಹೌದು, ಸರಿ ಆದರೆ ಊಟ ಮುಗಿಸಿಕೊಂಡು ಬೋರಿವಲಿಯ ಲೋಕಲ್ ಹಿಡಿಯಬೇಕೆಂದರೆ—"

" ಬೋರಿವಲಿ ಲೋಕಲ್ ಬೇಕಾದಷ್ಟಿವೆ. ನನಗೆ ಗೊತ್ತಿಲ್ಲವೆ ? ಅಲ್ಲದೆ ಅಲ್ಲಿ ಇಂಥ ಅವಸರದಲ್ಲಿ ಹೋಗಿ ಮಾಡುವುದಾದರೂ ಏನು ? "

" ಮಾಡುವುದೇನಿಲ್ಲದಿದ್ದರೂ ಮನೆಗಂತೂ ಹೋಗಬೇಕಲ್ಲ ! "

" ಹೋಗುವಿರಂತೆ ಮೊದಲು ನನ್ನ ಸಾಮಾನುಗಳನ್ನು ಕೊಳ್ಳುವ. ಆಮೇಲೆ ಮುಂದಿನ ವಿಚಾರ—"

ವಸಂತನಿಗೆ ಆಗಲೆ ದಣಿವೆನಿಸತೊಡಗಿತ್ತು. ಆದರೆ ಮೋಹಿನಿಯ ಮನಸ್ಸನ್ನು ಮುರಿಯುವ ಮನಸ್ಸಾಗಲಿಲ್ಲವಾದ್ದರಿಂದ ಆಕೆಯೊಡನೆ ಹತ್ತಿರದಲ್ಲಿಯೆ ಇದ್ದ ' ಸೌಭಾಗ್ಯ ವಸ್ತು ಭಾಂಡಾರ 'ವೊಂದನ್ನು ನೇರಿದ ಮಣಿ ಮಂಗಳ ಸೂತ್ರದಿಂದ ಮೊದಲಾಗಿ ಕಾಡಿಗೆ, ಕೃತಕ ಕೂದಲು, ಬಳೆ, ಬಾಚಣಿಗೆ, ಬಣ್ಣ, ಬೆಂಡೋಲೆಗಳ ವರೆಗೆ ಬೇಕಾದ ಸಾಮಾನು ಸಿಕ್ಕಬಲ್ಲ ಆ ಸೌಭಾಗ್ಯ ಸಂಗ್ರಹಾಲಯವನ್ನು ನೋಡಿ ವಸಂತನಿಗೆ ಒಂದು ಕ್ಷಣ ವಿಚಿತ್ರವೆನಿಸಿತು ! ಸಹಜವಾಗಿ ಸುಂದರವಾಗಿರದಿದ್ದವರು ಇಲ್ಲಿಯ ಸಾಧನಗಳನ್ನು ಸಂಗ್ರಹಿಸಿ ಸುಂದರಿಯರಾಗಿ ಕಾಣಬೇಕೆಂಬ ಸಂಕಟ— ಇಲ್ಲಿಯ ಸಾಮಾನುಗಳಷ್ಟೇ ಕೃತಕವಲ್ಲವೆ ಎಂದುಕೊಂಡು ತನ್ನಷ್ಟಕ್ಕೆ ನಕ್ಕುದನ್ನು ಮೋಹಿನಿ ನೋಡಿದಳು

" ಅದೇನು ? ನಿಮ್ಮಷ್ಟಕ್ಕೆಯೆ ನಗುತ್ತಿದ್ದೀರಲ್ಲ ? "

" ಏನಿಲ್ಲ. ಸುಮ್ಮನೆ ! "

" ಸುಮ್ಮನೆ ಯಾರಾದರೂ ನಗುತ್ತಾರೆಯೆ ? "

" ಅಲ್ಲ, ಇದೆಲ್ಲ ಎಂಥ ಖಟಾಟೋಪ, ಎಂದೆ ? "

" ಯಾತರದು ? "

" ಇಲ್ಲದ ಸೌಂದರ್ಯವನ್ನು ಸಾಧಿಸಬೇಕೆಂಬ ಸಂಕಟದ್ದು ! "

" ಸಾಕು, ಸಾಕು ! "

" ಅಲ್ಲವೆ ಮತ್ತೆ ? "

" ಚೆಲುವಾಗಿದ್ದವರು ಇನ್ನೂ ಚೆಲುವಾಗಿ ಕಾಣಬಹುದಲ್ಲ ? "

" ಆ ಮಾತು ಬೇರೆ ಹಾಗೆಂದೇ ನಿನಗೆ ನಾನಿಲ್ಲಿ ಬರಬೇಡ ಎನ್ನಲಿಲ್ಲ "

ಮೋಹಿನಿಗೆ ಮಾತು ರುಚಿಸಿತು. ತನಗೆ ಬೇಕಾದ ಒಂದೆರಡು ಸಾಮಾನುಗಳನ್ನು ಪಡೆದು ಹೊರಬಂದು ಕೇಳಿದಳು

" ಇನ್ನು ಮುಂದೆ ? "

" ಹೌದು. ಆಗಲೆ ಕೇಳಲು ಮರೆತಿದ್ದೆ—ನಿನ್ನ ಊಟದ ವ್ಯವಸ್ಥೆ ? "

" ಹೋಗಲಿ. ಅಂತೂ ನೆನಪಾಯಿತು—"

" ಊಟದ 'ವ್ಯವಸ್ಥೆ'ಯ ವಿಚಾರ ಗಂಡಸರಿಗಿಂತ ಹೆಂಗಸರಿಗೆಯೆ ಹೆಚ್ಚಾಗಿ ಇರಬೇಕು."

" ಅದೇ ಅದೇ ಹೆಂಗಸು ಅಂದರೆ ಊಟದ ವ್ಯವಸ್ಥೆ. ಇದೇ ಅಲ್ಲವೆ ನೀವೀಗ ಹೇಳುತ್ತಿರುವುದು ? "

" ನೇರವಾದ ಪ್ರಶ್ನೆಗೆ ನೇರವಾದ ಉತ್ತರ ಹೇಳಿದರೆ ದೇವರಾಣೆ ! "

" ಸರಿ. ನೀವೀಗ ಊಟಕ್ಕಲ್ಲವೆ ಹೋಗಬೇಕಾದದ್ದು ? "

" ತಮ್ಮದೇನಾಯಿತು ? "

" ಏನಾಗುವುದು ? "

" ಊಟದ ವ್ಯವಸ್ಥೆ ! "

" ಏನೂ ಆಗಿಲ್ಲ. ಈಗ ಬಂದಾಗಿನಿಂದ ಕೋಣೆ ಕೊಟ್ಟವರಲ್ಲಿಯೆ ನಾಲ್ಕು ದಿನ ಊಟ ಮಾಡಿದೆ ಇಂದಿನಿಂದ ಬೇರೆಯಾಗಿ ವ್ಯವಸ್ಥೆ ಮಾಡಿಕೊಳ್ಳುತ್ತೇನೆ ಎಂದಿದ್ದೆ—"

" ಏನು ಮಾಡಿದೆ ಹಾಗಾದರೆ ? "

" ಇಂದು ಮಧ್ಯಾಹ್ನವಂತೂ ಫಲಾಹಾರದ ಮೇಲೆ ಮುಗಿಸಿದೆ."

" ಮತ್ತೆ ಈಗ ? "

" ಈಗ ಇನ್ನೂ ಊಟದ ವೇಳೆಯಾಗಿಲ್ಲ ! "

" ಊಟದ ವೇಳೆಯಾಗಿ ಬಹಳ ಹೊತ್ತಾಗಿದೆ—ಮಧ್ಯಾಹ್ನದಿಂದ. ಆದ್ದರಿಂದ ತಮ್ಮ ಪಂಕ್ತಿಲಾಭ ನಮಗಷ್ಟು ದೊರೆಯುವಂತಾಗಲಿ "

ಎನ್ನುತ್ತಿರುವಾಗಲೆ ವಸಂತ ವಾಡಿಕೆಯಾಗಿ ಊಟ ಮಾಡುತ್ತಿದ್ದ ಹೋಟಲನ್ನು ಸೇರಿದರು ಇದಿರಾಗಿ ಕುಳಿತು ಊಟ ನಿಧಾನವಾಗಿ ನಡೆದಿತ್ತು. ಎಡ ಬಲದಲ್ಲಿಯವರು, ಹೋದವರು, ಬಂದವರು—ಮೋಹಿನಿಯನ್ನು ಎರಡು ಬಾರಿಯಾದರೂ ನೋಡಿ ವಸಂತನನ್ನು ಅಸೂಯೆಯ ದೃಷ್ಟಿಯಿಂದ ನೋಡಿ ಕೊಂಡೇ ಮುಂದರಿಯುತ್ತಿದ್ದರು ಹೋಟಲಿನಲ್ಲಿ ಆಗಲಿ, ಮುಂಬಯಿಯ ಬೀದಿಗಳಲ್ಲಿಯೆ ಆಗಲಿ ಇದೆಲ್ಲ ಅನಿವಾರ್ಯವೆಂಬುದನ್ನು ತಿಳಿದಿದ್ದ ವಸಂತ ಮೋಹಿನಿಯರು ಇದಾವುದರ ಕಡೆಗೂ ಗಮನ ಕೊಡದೆ ಊಟ ಮಾಡುತ್ತಿದ್ದರು. ಮಾತನಾಡುತ್ತಿದ್ದರು.

" ಊಟದ ವಿಚಾರ ನಾನು ಕೇಳಿರದಿದ್ದರೆ ಇಂದು ಏಕಾದಶಿಯೇ ಆಗುತ್ತಿತ್ತು, ಹಾಗಾದರೆ—"

" ಹಾಗೇನಿಲ್ಲ ಆದರೂ ಯಾರಿಗೆ ಗೊತ್ತು ? " ಎಂದಳು ಮೋಹಿನಿ ನಿರ್ವಿಕಾರವಾಗಿ

" ಹಾಗಿದ್ದರೆ ನಾಳೆಗೆ ? "

" ಏನಾದರೊಂದು ಏರ್ಪಾಡು ಮಾಡಬೇಕಾಗಿದೆ—"

" ಅಂದರೆ ? "

" ನಿಜವಾಗಿ ಕೋಣೆಯಲ್ಲಿಯೆ ಅಡಿಗೆ ಮಾಡಿಕೊಳ್ಳಬೇಕು—"

" ಇಲ್ಲವಾದರೆ ನಿತ್ಯ ಹೋಟಲಿಗೆ ಹೋಗಬೇಕು "

" ಛೀ ನನ್ನಿಂದಾಗದ ಮಾತು ಒಮ್ಮೆ ಅಡಿಗೆ ಪ್ರಾರಂಭವಾದರೆ ನಿತ್ಯ ಹೇಗಾದರೂ ಮಾಡಿಕೊಂಡೇನು. ಆದರೆ ಮೊದಲುಮಾಡಲಿಕ್ಕೇ ಮನಸ್ಸಾಗ ಲೊಲ್ಲದು "

" ಅದೇಕೆ ? ಹಸಿವೆಯಾಗುವುದಿಲ್ಲವೆ ? "

" ಹಸಿವೆಯಾದರೂ ಮನಸ್ಸಾಗುವುದಿಲ್ಲ ! "

" ಹೀಗಾದರೆ—"

" ಅದೇನಿಲ್ಲ. ನಾಳೆಯಿಂದ ಪ್ರಾರಂಭ—ಅಡಿಗೆಗೆ ! "

" ಅಡಿಗೆ ಬರುತ್ತದೆಯೆ ನಿನಗೆ ? "

" ಸರಿ ನಾನು ಅಂದರೆ ಏನು ಎಂದು ತಿಳಿದಿದ್ದೀರಿ ? "

" ಏನೂ ಇಲ್ಲ ನೋಡೋಣವಂತೆ ಈಗಲೆ ಯಾಕೆ ? "

" ನೋಡುವಿರಂತೆ—"

ಊಟವನ್ನು ಮುಗಿಸಿ ಕೆಳಗಡೆಯ ಫುಟ್‌ವಾಥ್ ಗುಂಟ ನಡೆದರು. ಕೈಗಡಿಯಾರವನ್ನು ನೋಡಿ ವಸಂತನೆಂದ

" ನಾನಿನ್ನು ಹೊರಡುವೆ ವೇಳೆಯಾಯಿತು—"

" ನಾಳೆಗೂ ಇದೇ ಹೊತ್ತಿಗೆ ಬರುತ್ತೀರಾ ಊಟಕ್ಕೆ ? "

" ಅಂತೂ ಅಡಿಗೆ ಮಾಡಿದ ಹಾಗಾಯಿತಲ್ಲ—" ಎಂದು ವಸಂತ ನಕ್ಕ

" ನಾನೇನೂ ಊಟಕ್ಕೆ ಬರುವುದಿಲ್ಲ. ಅಷ್ಟೇಕೆ ಗಾಬರಿ ನಿಮಗೆ ? "

" ಗಾಬರಿಯಲ್ಲ—"

" ಹಾಗಾದರೆ ? "

" ನಾಳೆ ಭಾನುವಾರ. ಇನ್ನೆಲ್ಲಿಯೋ ಹೋಗಬೇಕಾಗಿದೆ. ಸಾಯಂಕಾಲ ಬರಲಿಕ್ಕೂ ಇಲ್ಲ."

" ಸರಿ—"

ಮೋಹಿನಿಗೆ ನಿರಾಶೆಯಲ್ಲದಿದ್ದರೂ ಆ ಮಾತಿನಿಂದ ಸಮಾಧಾನ ವಾಗಿರಲಿಲ್ಲವೆಂಬುದು ಸ್ಪಷ್ಟವಾಗಿದ್ದಿತು ವಸಂತ ಕೇಳಿದ .

" ಹೊರಡಲಾ ಹಾಗಾದರೆ ? "

" ಇನ್ನು ಯಾವಾಗ ಭೆಟ್ಟಿ ? "

" ಏನಾದರೂ ಕೆಲಸವಿದೆಯೆ, ವಿಶೇಷ ? " ವಸಂತನ ಈ ಪ್ರಶ್ನೆಯೂ ಆಕೆಗೆ ರುಚಿಸಲಿಲ್ಲ

" ಈ ದಿನ ಕೆಲಸವಿತ್ತೆ ? "

" ಇಂದು ಭೆಟ್ಟಿಯಾದದ್ದು ಆಕಸ್ಮಾತ್ತಾಗಿ—"

" ನಾಳೆಯೊ, ನಾಡಿದ್ದೊ, ಆಚೆ ನಾಡಿದ್ದೊ, ಮತ್ತೆ ಹಾಗೆಯೇ

ಆಗಬಹುದು!"

ಆಕೆಯ ಮಾತಿನ ಕಡೆಗೆ ವಸಂತನ ಲಕ್ಷ್ಯವಿದ್ದಹಾಗಿರಲಿಲ್ಲ ಅರೆನಿಮಿಷ ಯೋಚಿಸಿ ಹೇಳಿದ

"ಇದು ನೋಡು ಮೋಹಿನಿ, ನಾನೊಂದು ಮಾತು ಹೇಳಿದರೆ ನೀನು ತಪ್ಪು ತಿಳಿಯಬಾರದು—"

"ಅಂಥ ಯಾವ ಮಾತದು ?"

"ನಾನು ನೀನು ಹೆಚ್ಚಾಗಿ ಕೂಡಿ ಅಡ್ಡಾಡಬಾರದು. ನೋಡಿದವರಿಗೆ ಸರಿಯಾಗಿರುತ್ತದೆಯೆ ಅದು ?"

ಮೋಹಿನಿ ಸುಮ್ಮನಾದಳು ವಸಂತ ಈ ಮಾತನ್ನಾಡಬಹುದೆಂದು ಆಕೆಗೆನಿಸಿರಲಿಲ್ಲ ವಸಂತನೇ ಹೇಳಿದ

"ನೋಡಿದೆಯಾ? ನನಗೆ ಗೊತ್ತು, ಈ ಮಾತು ನಿನಗೆ ಸೇರಿಕೆ ಯಾಗುವುದಿಲ್ಲ ಎಂದು—"

"ಬೇಡವಾದರೆ ಬಿಟ್ಟುಬಿಡಬಹುದಲ್ಲ—" ದನಿಯಲ್ಲಿಯ ಅಸಮಾಧಾನ ಸ್ಪಷ್ಟವಾಗಿದ್ದಿತು

"ಹಾಗಲ್ಲ, ಮೋಹಿನಿ ಏನಾದರೊಂದು ಕೆಲಸವಿದ್ದರೆ ಖಂಡಿತವಾಗಿ ಭೆಟ್ಟಿಯಾಗಬಹುದು ನನ್ನಿಂದ ಏನಾದರೂ ಆಗಬೇಕಿದ್ದರೆ ಸಾಯಂಕಾಲ ಏಳೂವರೆಯ ಸುಮಾರಿಗೆ ನಾನು ಇಲ್ಲಿ ಇದ್ದೇ ಇರುತ್ತೇನೆ, ಹೆಚ್ಚುಕಡಿಮೆ. ಆದರೆ ಸುಮ್ಮಸುಮ್ಮನೆ ಕೂಡಿ ಅಡ್ಡಾಡಿ ಜನರಿಗೆ ಮಾತನಾಡಲಿಕ್ಕೊಂದು ಅವಕಾಶ ಕೊಡಬಾರದು—"

ಮೋಹಿನಿ ಮತ್ತೆ ಸುಮ್ಮನಾದಳು ಆಕೆಯನ್ನು ಸಮಾಧಾನಪಡಿಸದೆ ಹೊರಡಲು ವಸಂತನಿಗೆ ಮನಸ್ಸಾಗಲಿಲ್ಲ ಮುಂದೇನು ಹೇಳಬೇಕೆಂದು ಯೋಚಿಸುತ್ತಿದ್ದಾಗ ಆಕೆ ಹೇಳಿದಳು .

"ಹುಂ ನೀವಿನ್ನು ಹೊರಡಿರಿ—ಹೊತ್ತಾಗುತ್ತದೆ—! ಅಲ್ಲದೆ, ಜನರು ನೋಡಿಯಾರು—"

"ನೋಡಲಿ. ಅದಲ್ಲ ನಾನು ಹೇಳುವುದು. ನೋಡಿದರೂ ಆಡಬಾರದು."

"ಇನ್ನೊಂದು ಕೆಲಸವಿಲ್ಲದವರು, ಅಥವಾ ಅದರಿಂದಲೇ ಸಂತೋಷ ಪಡೆಯುವವರು ನಾವು ಹೇಗಿದ್ದರೂ ಮಾತನಾಡಿಯೇ ಆಡುತ್ತಾರೆ. ಜನಕ್ಕೆ

ಹೆದರಿಕೊಂಡರೆ ಜೀವ ಉಳಿಸಿಕೊಳ್ಳುವುದೇ ಕಷ್ಟವಾದೀತು—"

"ನಿನ್ನನ್ನು ಭೆಟ್ಟಿಯಾಗಬಾರದು ಎಂಬುದಕ್ಕೆ ಹೇಳಿದೆನೆ ಆ ಮಾತು? ಈಗ ಆದದ್ದು ಬೇಕಾದಷ್ಟಾಗಿದೆ. ಅದನ್ನಾದರೂ ಯೋಚಿಸಬೇಡವೆ?"

"ಸರಿ ಮತ್ತೆ ಅದೇ ಮಾತು ಅದನ್ನು ಬಿಟ್ಟರೆ ನಮಗೆ ಬೇರೆ ಮಾತೇ ಇಲ್ಲದ ಹಾಗಿದೆ"

"ಹೌದಲ್ಲವೆ? ಆ ಮಾತೇ ಬೇಡ. ಹುಂ—ಯಾವಾಗ ಬರುವೆ ಹಾಗಾದರೆ?"

"ಬರಬಹುದೆ?"

"ಬೇಡ ಎಂದೆನೆ? ಆಗೀಗ ಎಂದೆ!"

"ಆಗಬಹುದು—"

"ಸಿಟ್ಟು ಬಂದಿತೆ—ನಾನು ಹಾಗೆ ಹೇಳಿದೆನೆಂದು?"

"ಸಿಟ್ಟೇಕೆ ಬರಬೇಕು? ನೀವು ಹೇಳುವುದಾದರೂ ಸರಿಯೆ—ಒಂದು ದೃಷ್ಟಿಯಿಂದ!"

"ದ್ಯಾಟ್ಸ್ ರೈಟ್. ಹೊರಡಲೆ ಹಾಗಾದರೆ?"

"ನಾಲ್ಕಾರು ದಿನ ಬಿಟ್ಟು ನೋಡುವೆ—ಒಂದು ವಾರ ಆದರೂ ಆದೀತು ಮನೆ, ಸ್ಕೂಲ್ ಕೆಲಸ ಎಲ್ಲ ಸರಿಯಾಗಿ ಹೊಂದಿಕೊಳ್ಳಬೇಕಾದರೆ"

"ಆಗಬಹುದು. ಅಷ್ಟರಲ್ಲಿ ನಾನೂ ಆನಂದರಾಯರನ್ನು ಮಾತನಾಡಿಸುತ್ತೇನೆ!" ಎಂದು ವಸಂತ ನಕ್ಕ.

"ಹೌದೇ? ಹಾಗಿದ್ದರೆ ಗುಡ್‌ಬಾಯ್—"

"ಗುಡ್‌ಬಾಯ್ ಅಲ್ಲ, ಗುಡ್‌ನೈಟ್—" ವಸಂತ ನಕ್ಕು ಹೊರಟ.

ಮೋಹಿನಿ ನಿಂತಲ್ಲಿಂದಲೇ ಎಚ್ಚರ ಹೇಳುವ ದನಿಯಲ್ಲಿ ಹೇಳಿದಳು.

"ಅಂಥದೇನಾದರೂ ಆಟ ನೀವು ಹೂಡಿದರೆ ನಾನು ನಿಜವಾಗಿಯೂ ನಿಮ್ಮನ್ನು ಇನ್ನೊಮ್ಮೆ ಕಾಣುವುದಿಲ್ಲ. ನಿಜವಾಗಿಯೂ—"

"ಆಲ್‌ರೈಟ್, ಆಲ್‌ರೈಟ್. ಕಾಣುವುದಿಲ್ಲ. ಆಯಿತೆ?"

ಅಷ್ಟಕ್ಕೆ ಯಾವುದೊ ಒಂದು ಲೋಕಲ್ ಬಂದದ್ದು ಕಾಣಿಸಿತಾದ್ದರಿಂದ ವಸಂತ ನಿಲ್ದಾಣದೆಡೆಗೆ ಧಾವಿಸಿದ. ಎರಡು ಮೂರು ನಿಮಿಷ ಅಲ್ಲಿಯೇ ನಿಂತು ಮೋಹಿನಿ ನಿಧಾನವಾಗಿ ಹೆಜ್ಜೆಗಳನ್ನು ಹಿಂದಿರುಗಿಸಿದಳು.

೨

ವಸಂತ ನಿಲ್ದಾಣದ ಕಡೆಗೆ ಧಾವಿಸಿದನಂತರ ಮೋಹಿನಿ ಎರಡು ಮೂರು ನಿಮಿಷ ನಿಂತಲ್ಲಿಯೇ ನಿಂತಳೆಂದು ಹೇಳಿದೆಯಲ್ಲವೆ? ಸುತ್ತುಮುತ್ತಲೂ ಬೇಕಾದಷ್ಟು ಜನ ಗದ್ದಲ ಗಡಿಬಿಡಿಗಳಲ್ಲಿ ಹೋಗುತ್ತಿದ್ದರು, ಬರುತ್ತಿದ್ದರು. ಅಲ್ಲಿ ಆಕೆ ತಾನು ನಿಂತುದನ್ನು, ಅದೇಕೆ ನಿಂತಳು ಎಂಬುದನ್ನು, ಕೇಳಲು ತಿಳಿಯಲು ಯಾರಿಗೂ ವ್ಯವಧಾನವಿರಲಿಲ್ಲ. ತನ್ನ ಪರಿವೆಯೇ ಇರಲಿಲ್ಲ ಇಡೀ ವಿಶಾಲ ಪ್ರಪಂಚಕ್ಕೆ. ಅದೇಕೊ, ಮೋಹಿನಿಗೆ ಆ ಕ್ಷಣಕ್ಕೆ ತನ್ನ ಬದುಕಿನ ಬರಡು ಏಕಾಂತ ಒಮ್ಮೆನೆಯಾಗಿ ಕಣ್ಣೆದುರು ನಿಂತಂತಾಗಿ ಕೆಲಮಟ್ಟಿಗೆ ಎದೆಗೆಡಿಸು ವಂತಾಯಿತು. ಹಾಗೆ ನೋಡಿದರೆ ನಾಲ್ಕು ದಿನ ಮೊದಲು ಬಂದಾಗಿನಿಂದ ಅಂದು ಸಾಯಂಕಾಲದವರೆಗೆ ತಾನು ಮಾಡಬೇಕಾದ ಕೆಲಸಗಳನ್ನೇನೊ ಸರಿಯಾಗಿ ಪೂರೈಸಿದ್ದಳು. ಹೆಚ್ಚುಕಡಿಮೆ ಎಲ್ಲ ವ್ಯವಸ್ಥೆಗಳನ್ನೂ ಮಾಡಿಕೊಂಡಿ ದ್ದಳು. ಆದರೆ ಮನಸ್ಸಿನಲ್ಲಿ ಗೆಲುವಿರಲಿಲ್ಲ. ಅವೆಲ್ಲ ಪರಿಸ್ಥಿತಿಯ ಒತ್ತಾಯ ಕ್ಕಾಗಿ ಮಾಡಿದ, ಮಾಡಬೇಕಾದ ಕೆಲಸಗಳು. ಮಧ್ಯಾಹ್ನ ಎಲ್ಲಿಯೊ ಒಂದೆಡೆ ಕುಳಿತು ಮುಗಿಸಿದ ಫಲಾಹಾರವಾದರೂ ಪರಿಸ್ಥಿತಿಯ ಒತ್ತಾಯಕ್ಕಾಗಿಯೆ ಮುಗಿಸಿದ್ದು. ಇದು ಸಲ್ಲದ ಮನಃಸ್ಥಿತಿ, ಇವರಿಂದ ಸುಖವಿಲ್ಲ. ಎನಿಸಿದ್ದರೂ ತಾನು ತಾನೇ ಆಗಿ, ಇನ್ನಾರಿಗೂ ಕಡಿಮೆಯಲ್ಲವವಳಾಗಿ, ಯಾರಿಗೂ ಯಾವುದಕ್ಕೂ ಮಣಿಯದಿರಬೇಕಾದವಳಾಗಿ ಬದುಕಬೇಕಾದವಳಿಗೆ ಇದು ಸುತರಾಂ ಆಗದು ಎಂಬ ಯೋಚನೆ ಆಗೀಗ ಇಣುಕುತ್ತಿತ್ತು. ಬದುಕನ್ನು ಇಷ್ಟು ನಿರ್ವಿಕಾರವಾಗಿ ಎದುರಿಸಿದರೆ ಯಾವುದನ್ನೂ ಸಾಧಿಸುವುದು ಸಾಧ್ಯವಿಲ್ಲ ಎಂದು ಹೆದರಿಕೆಯೂ ಅನಿಸುತ್ತಿತ್ತು. ತೆರೆತೆರೆಯಾಗಿ ಮುನ್ನುಗ್ಗುತ್ತಿದ್ದ ಮುಂಬಯಿಯ ಮಾನವ ಸಮುದ್ರದ ಮಧ್ಯದಲ್ಲಿ ಮೋಹಿನಿಯ ಮನಸ್ಸು ಏಕಾಂತದ ಇರಿತವನ್ನು ಆ ಕ್ಷಣಕ್ಕೆ ಅನುಭವಿಸಿತು.

ನಾಲ್ಕು ದಿನಗಳಿಂದಲೂ ಬೆನ್ನಟ್ಟಿದ, ವಸಂತನನ್ನು ಸಂಧಿಸಿ ಆತನೊಡನೆ ಮಾತನಾಡಿದನಂತರ ಬಹುಮಟ್ಟಿಗೆ ಹಿಮ್ಮೆಟ್ಟಿದ ಈ ಮನಃಸ್ಥಿತಿಗೆ ಕಳೆದ ಮೂರು ತಿಂಗಳ ಅನುಭವಗಳೇ ಕಾರಣವಾಗಿದ್ದವು. ಮುಂಬಯಿಯಿಂದ ಹೊರಟುಹೋಗುವಾಗ ತನಗೆ ಇನ್ನಾರಿಲ್ಲದಿದ್ದರೂ ತಾಯಿ ಇದ್ದಾಳೆ; ಆಕೆಯ

ಮಡಿಲಲ್ಲಿ ಯಾವ ದುಃಖವನ್ನೂ ಮರೆಯಬಹುದು, ಎಂಬ ಒಂದೇ ಒಂದು ಭರವಸೆಯಿಂದಲ್ಲವೆ ಆಕೆ ಧೈರ್ಯ ಪಡೆದದ್ದು ? ಮೊದಮೊದಲು ಆ ಭರವಸೆ ದುಃಖವನ್ನು ಅಡಗಿಸಿತು, ಪೂರ್ತಿಯಾಗಿ ಅಡಗಿಸದಿದ್ದರೂ ಅದರ ತೀವ್ರತೆಯನ್ನಾದರೂ ಕಡಿಮೆಯಾಗಿಸಿತು ಆದರೆ ಕೆಲವೇ ದಿನಗಳಲ್ಲಿ ತನ್ನ ತಾಯಿಯಾದರೂ ತಾನು ಮಾಡಿದುದನ್ನು ಸಮರ್ಥಿಸಲು ಸಿದ್ಧಳಿರಲಿಲ್ಲವೆಂಬುದು ತಿಳಿದಾಗ ಮೋಹಿನಿಗೆ ತನ್ನ ಏಕಾಂತದ ಅರಿವು ಬರಲಾರಂಭಿಸಿತು ಆನಂದ, ಆತನ ಮನೆಯವರು ಮಗಳನ್ನು ಅಮಾನುಷವಾಗಿ ನಡಸಿಕೊಂಡರು ಎಂಬ ಮಾತನ್ನು ಆಕೆ ಮೋಹಿನಿಯ ವರದಿಯ ಮೂಲಕ ಒಪ್ಪುತ್ತಿದ್ದಳಾದರೂ ಹೀಗೆ ಕೊನೆಯಾಗಿ ಎಲ್ಲವನ್ನೂ ಬಿಟ್ಟು, ಮೋಹಿನಿ ಮತ್ತೆ ಅಲ್ಲಿಗೆ ಮರಳಿ ಹೋಗಲೇ ಕೂಡದು, ಅದರ ಯೋಚನೆಯನ್ನೇ ಇಟ್ಟುಕೊಳ್ಳಲಾಗದು, ಎಂಬುದನ್ನು ಮಾತ್ರ ಆಕೆ ಒಪ್ಪುತ್ತಿರಲಿಲ್ಲ ಈ ವಿಷಯವನ್ನು ಕುರಿತು ತಾಯಿ ಮಗಳ ನಡುವೆ ಎಷ್ಟೋ ಬಾರಿ ಮಾತು ನಡೆದಿತ್ತು ಮನಸ್ತಾಪವೂ ಆಗಿತ್ತು

ಮೋಹಿನಿ ತನ್ನ ಕೋಣೆಯ ಕಡೆಗೆ ನಿಧಾನವಾಗಿ ಹೆಜ್ಜೆ ಹಾಕುತ್ತಿದ್ದಳು ಮನಸ್ಸು ಮಾತ್ರ ಗತಕಾಲದಲ್ಲಿ ಸಿಲುಕಿತ್ತು ಕಳೆದ ತಿಂಗಳು ತಾಯಿ ಕೊನೆಯಾಗಿ ಕೇಳಿದ್ದಳು

" ಇದು ನೋಡು ಮೋಹಿನಿ, ನಿನ್ನಂತೆಯೇ ಆಗಲಿ ಆದರೆ ನೀನು ಏನು ಮಾಡಬೇಕೆಂದಿರುವಿ ? ಅದನ್ನಾದರೂ ಹೇಳು "

" ನಾನೇನು ಹೇಳಲಿ, ಅಮ್ಮ ನಡೆದುದೆಲ್ಲವೂ ನಿನಗೆ ಗೊತ್ತಿದೆ ಒಂದು ದೃಷ್ಟಿಯಿಂದ ಅದು ಹೊಸದೂ ಅಲ್ಲ. ನಿನ್ನ ಮಾತನ್ನು ನಾನು ಕೇಳುವುದಾದರೆ ನಾನು ಮತ್ತೆ ಅದೇ ನರಕಕ್ಕೆ ಹೋಗಿ ತೊಳಲಾಡಬೇಕು. ಅಲ್ಲವೆ ? ಅದು ಮಾತ್ರ ನನ್ನಿಂದ ಸಾಧ್ಯವಿಲ್ಲ."

" ಏನಾದರೂ ಇನ್ನೊಂದು ಬಾರಿಯಾದರೂ ನೀನು ಯತ್ನ ಮಾಡಲೇಬೇಕು ! "

" ಇದುವರೆಗೆ ಮಾಡಿದ್ದು ಸಾಲದೆ ? "

" ಹಾಗೆ ಯೋಚನೆ ಮಾಡಿದರೆ ಸಾಲದು. ನನಗಂತೂ ಬೇರೆ ಯಾವ ಮಾರ್ಗವೂ ಕಾಣುವುದಿಲ್ಲ."

" ಬೇರೆ ಯಾವ ಮಾರ್ಗವೆ ಇಲ್ಲವೆ ? ಅದೇ ಹುಚ್ಚುತನ." ತಾಯಿಗೆ

ನಿಜವಾಗಿಯೂ ಸಿಟ್ಟು ಬಂದಿತ್ತು ಅಂತೆಯೇ ಹೇಳಿದ್ದಳು

" ನಿನ್ನನ್ನು ನಾನು ಕಾಲೇಜಿಗೆ ಕಳಿಸಿದ್ದೇ ತಪ್ಪಾಯಿತು ಏನೇನನ್ನೋ ತಲೆಯಲ್ಲಿ ತುಂಬಿಕೊಂಡು ಕುಳಿತಿದ್ದೀ ಆಗಲೆ ಎಲ್ಲಿಯಾದರೂ ಮದುವೆ ಮಾಡಿಬಿಟ್ಟಿದ್ದರೆ ಎಲ್ಲವೂ ಸುಖವಾಗಿರುತ್ತಿತ್ತು "

" ಹೌದೇ ? ಆಗ ಸುಖವಾಗಿರಬಹುದಾದದ್ದು ಈಗ ಯಾಕೆ ಆಗಲಿಲ್ಲ ? ಅದೂ ಮದುವೆ, ಇದೂ ಮದುವೆ—"

" ಹೌದು ಆದರೆ ನಡುವೆ ನಿನಗೆ ಬುದ್ಧಿ ಬೆಳೆಯಿತು ! "

" ಬುದ್ಧಿ ಬೆಳೆಯಿತೆಂದೇ ಇಂದು ಒದುಕಿದ್ದೇನೆ. ಇಲ್ಲದಿದ್ದರೆ ಎಲ್ಲಿಯೋ ಬಾವಿಯ ಪಾಲಾಗುತ್ತಿದ್ದೆ "

" ಕೆಟ್ಟ ಮಾತು, ಮೋಹಿನಿ ಯಾತಕ್ಕೆ ಕೆಟ್ಟ ಮಾತು ಆಡುತ್ತೀ ? "

" ಕೆಟ್ಟ ಮಾತು ಯಾಕೆ ? ಅಪ್ಪು ಹಟ ಹಿಡಿದೆ, ಓದನ್ನು ಒಂದು ದಡಕ್ಕೆ ಮುಟ್ಟಿಸಿದೆ ಇಂದು ಯಾರಿಲ್ಲದಿದ್ದರೂ ನನ್ನ ಹೊಟ್ಟೆಯನ್ನಾದರೂ ಹೊರೆದುಕೊಂಡು ನನ್ನ ಮಟ್ಟಿಗೆ ನಾನು ಇರಬಲ್ಲೆ ಅಷ್ಟಾದರೂ ಆಯಿತು "

" ಅಷ್ಟಾದರೆ ಆಯಿತೆ ? ಎಂಥ ಹುಚ್ಚು, ಮೋಹಿನಿ ? ನೀನು ಹೆಂಗಸು ಎಂಬುದನ್ನು ಮರೆತೇ ಮಾತನಾಡುತ್ತಿರುವಿ "

"ಹೌದು, ನಾನು ಹೆಂಗಸು ಅಂದಮಾತ್ರಕ್ಕೆ ಈ ಗಂಡಸು ಎಸ್ನುವವ ಎಂಥ ಅನ್ಯಾಯ ಮಾಡಿದರೂ, ಎಷ್ಟು ಅಮಾನುಷವಾಗಿ ನಡಸಿಕೊಂಡರೂ ಅದಕ್ಕೆ ಬಾಗಿ ಬದುಕಿದ್ದೂ ಸತ್ತಹಾಗೆ ಇರಬೇಕು ! ಇಷ್ಟೇ ಅಲ್ಲವೆ, ನೀನು ಹೇಳುತ್ತಿರುವುದು ? "

ಮೋಹಿನಿಯ ಈ ಮಾತಿನಲ್ಲಿ ಹೊಸದಾವುದೂ ಇರಲಿಲ್ಲ. ಎಷ್ಟೋ ಬಾರಿ ತಾಯಿ ಇದನ್ನು ಆಕೆಯ ಬಾಯಿಂದ ಕೇಳಿದ್ದಳೆಂದೇ ಬೇಸರಗೊಂಡು ಕೊನೆಯಾಗಿ ಹೇಳಿದ್ದಳು .

" ನೀನು ಬುದ್ಧಿವಂತೆ ನಿನ್ನ ಹಾಗೆ ಮಾತನಾಡಲು ನನಗೆ ಬರುವುದಿಲ್ಲ ನನಗೆ ತಿಳಿದ ಮಟ್ಟಿಗೆ ಹೇಳುತ್ತಿದ್ದೇನೆ ನಿನ್ನ ಮಟ್ಟಿಗೆ ನೀನು ಹೊಟ್ಟೆಹೊರೆದು ಕೊಂಡರೆ ಆಯಿತೆ ? ನಾಯಿ ನರಿ ಕೂಡ ತಮ್ಮ ಹೊಟ್ಟೆಹೊರೆದುಕೊಂಡು ಇರುತ್ತವೆ. ಗಂಡನಿದ್ದೂ ಗಂಡನಿಲ್ಲದ ಬದುಕು ಎಂಥದು ? "

ಮೋಹಿನಿ ಸುಮ್ಮನಾದಳು. ತಾಯಿಯ ಮಾತನ್ನು ಒಪ್ಪಬಹುದೆಂದಲ್ಲ.

ಆಕೆಗೆ ಉತ್ತರ ಹೇಳಿ ಏನು ಪ್ರಯೋಜನ ? ಆಕೆಯನ್ನು ಮನವೊಲಿಸಿ ತನ್ನ ವಿಚಾರಸರಣಿಗೆಳೆಯುವುದು ಅಸಾಧ್ಯ ಎಂಬ ನಿರಾಶೆಯಿಂದ ಆ ಕ್ಷಣದಿಂದ ಮೋಹಿನಿಗೆ ತನ್ನ ಬದುಕನ್ನು ಆವರಿಸಬಹುದಾದ ಏಕಾಂತದ ಅರಿವು ಬರತೊಡಗಿತು ತಾಯಿಯ ಮಾತು ಆಕೆಗೆ ಅರ್ಥವಾಗಿತ್ತು ಗಂಡಸಿಲ್ಲದೆ ಬದುಕಿರುವುದು ಹೆಂಗಸಿಗೆ ಅಸಾಧ್ಯ ಎಂದೇ ಅಲ್ಲವೆ ಆಕೆಯ ಅಭಿಪ್ರಾಯ ! ಆ ಮಾತು ನಿಜವಿರಬಹುದು ಆದರೆ ಆ ಮಾತು ಗಂಡಸಿಗೂ ಅನ್ವಯಿಸುವುದಿಲ್ಲವೆ ? ಹೆಣ್ಣಿಗೆ ಗಂಡು ಬೇಕಾದರೆ, ಗಂಡಿಗೆ ಹೆಣ್ಣೂ ಬೇಕು ! ಹೀಗಿದ್ದಮೇಲೆ ಹೆಣ್ಣೇ ಯಾತಕ್ಕಾಗಿ ಸದಾ ಕಾಲವೂ ಮಣಿಯಬೇಕು ? ಈ ಅಗತ್ಯ ಅನ್ಯೋನ್ಯವಾದದ್ದಲ್ಲವೆ ?—ಆದರೆ ಇದೆಲ್ಲವನ್ನು ತನ್ನ ತಾಯಿಗೆ ತಿಳಿಹೇಳುವುದೆಂತು ? ಹೇಳಿದರೂ ಆಕೆಗೆ ಅರ್ಥವಾಗಬೇಕಾದದ್ದೂ ಅಷ್ಟರಲ್ಲಿಯಿದೆ! ಅರ್ಥವಾದರೂ ಒಪ್ಪುವ ಬುದ್ಧಿಯ ಪ್ರಾಮಾಣಿಕತೆ ಎಲ್ಲಿ ? ಸಂಪ್ರದಾಯದ ವಿಚಾರಸರಣಿಗೆ ಬುದ್ಧಿಯನ್ನೆಲ್ಲ ಮಾರಿಕೊಂಡು ಸಂಪ್ರದಾಯವನ್ನು ಅನುಸರಿಸುವುದೇ ಬುದ್ಧಿಮಾರ್ಗವೆಂದು ಬಗೆಯುವ ತಾಯಿಗೆ—ತಾಯಿಯಂತೆಯೇ ವಿಚಾರಮಾಡುವ ಸಾಮಾನ್ಯ ಸಾಮಾಜಿಕನಿಗೆ—ಸಮಾಧಾನ ಹೇಳುವುದೇ ಸಾಧ್ಯವಿಲ್ಲವೆಂಬ ನಿರಾಶೆಯೂ ಮೋಹಿನಿಯ ಹೃದಯದಲ್ಲಿ ಇಣುಕತೊಡಗಿತು ಆದರೆ ಅದೆಲ್ಲವೂ ಪರೀಕ್ಷೆಯ ಪರಿಣಾಮ ತಿಳಿಯುವ ವರೆಗೆ ಕಳೆದ ತಿಂಗಳು ಪರೀಕ್ಷೆಯ ಪರಿಣಾಮ ಹೊರಬಿದ್ದು ತಾನು ಮೇಲ್ತರಗತಿಯಲ್ಲಿ ಪಾಸಾದದ್ದು ತಿಳಿದಾಗ ತನ್ನನ್ನು ಸುತ್ತುಗಟ್ಟಿದ ಕತ್ತಲೆಯೆಲ್ಲವೂ ಮಾಯವಾಗಿ ಹೊಸ ಆಸೆ ಬೆಳಗಿತು. ಎಲ್ಲಕ್ಕೂ ಮುಖ್ಯವಾಗಿ ತನ್ನಲ್ಲಿ ಯೋಗ್ಯತೆಯಿದೆ, ಹಟ ಹಿಡಿದು ಏನು ಬೇಕಾದುದನ್ನು ಸಾಧಿಸಿಯೇನು, ಎಂಬ ಆತ್ಮವಿಶ್ವಾಸ ಆ ದಿನ ಆಕೆಯಲ್ಲಿ ನೆಟ್ಟು ನಿಂತಿತು ಎಂಥ ಎಡರು ಬಂದರೂ ಹಟದಿಂದ ಕಾಲೇಜನ್ನು ಮುಂದುವರಿಸಿ ಕೊನೆಯಲ್ಲಿ ಯಶಸ್ವಿಯಾಗಿರಲಿಲ್ಲವೆ ? ಈ ಹಟ ಯಾವುದನ್ನು ಸಾಧಿಸಲಾರದು? ತಾನು ಬೇಡುವುದಾದರೂ ಏನನ್ನು ? 'ಅನ್ಯಾಯಕೆಂದಿಗೂ ಬಾಗದೆಚ್ಚರ!' ಇಷ್ಟೇ ಅಲ್ಲವೆ ? ಅದೇನು ದೊಡ್ಡ ಮಾತು ?—

ನೆನಹು ಯೋಚನೆಗಳ ಜಾಲದಲ್ಲಿ ಸಿಲುಕಿಹೋದ ಆಕೆ ಮನೆಯ ದಾರಿಯನ್ನು ಸರಿಯಾಗಿ ಹೇಗೆ ಕಂಡುಕೊಂಡಿದ್ದಳೊ ! ಕಾಲುಗಳಿಗೆ ದಾರಿ ತಿಳಿಯುತ್ತಿರಬೇಕು , ಇಲ್ಲವೆ ಮನಸ್ಸು ಇಬ್ಬಗೆಯಾಗಿ, ಇಪ್ಪತ್ತು ಬಗೆಯಾಗಿ ಒಂದೇ

ವೇಳೆಗೆ ಕೆಲಸ ಮಾಡುತ್ತಿರಬೇಕು ಆಗಲೆ ಮೋಹಿನಿ ಪಾರ್ಕಿನೆದುರಿನ ದಾರಿಗೆ ಬಂದಿದ್ದಳು ಆ ಬಯಲಿಗೆ ಆಟಗಳಿಗೆಂದು ಬಂದವರು ಯಾವಾಗಲೊ ಹಿಂದಿರುಗಿದ್ದರು ರಹಸ್ಯಕ್ಕಾಗಲಿ, ರಸಿಕತೆಗಾಗಲಿ ಬಂದು ಕುಳಿತು, ಮನಸ್ಸಿಲ್ಲವೆಂಬಂತೆ ಮನೆಗಳಿಗೆ ಮರಳುತ್ತಿದ್ದ ಯುವಕಯುವತಿಯರ ಕೆಲವು ' ಜೋಡಿ 'ಗಳನ್ನು ಬಿಟ್ಟು ಆ ದಾರಿಯಲ್ಲಿ ಆ ವೇಳೆಗೆ ಯಾರೂ ಬರುತ್ತಿರಲಿಲ್ಲ ಬೀದಿಯ ದೀಪಗಳು ಮಾತ್ರ ' ಏನಾದರೇನು ? ನಮ್ಮ ಕೆಲಸ ಇಷ್ಟು ' ಎಂದು ಬೆಳಗುತ್ತಿದ್ದವು. ಮೋಹಿನಿ ಮನೆಯ ಅಟ್ಟದ ಪಾವಟಿಗೆಗಳನ್ನು ಏರಿದಳು

ಕೋಣೆಯಲ್ಲಿ ಬಂದು ದೀಪವನ್ನುರಿಸಿದಾಗ ವೇಳೆ ಒಂಬತ್ತಕ್ಕೆ ಸಮೀಪಿಸಿತ್ತು ಮಧ್ಯಾಹ್ನದಲ್ಲಿ ಅಚ್ಚುಕಟ್ಟಾಗಿರಿಸಿದ ಕೋಣೆ ಹಾಗೆಯೇ ಇತ್ತು ಬದಿಯಲ್ಲಿ ಇದ್ದ–ಈ ಕೋಣೆಯಲ್ಲಿ ತಾನು ಇರುವಂತೆ ಎಲ್ಲ ಏರ್ಪಾಡುಗಳನ್ನೂ ಮಾಡಿಕೊಟ್ಟ—ಆಪಟೆ ದಂಪತಿಗಳು ಹೊರಗೆ ಹೋದವರು ಇನ್ನೂ ಬಂದಿರಲಿಲ್ಲ ಪ್ರತಿನಿತ್ಯವೂ ಅವರು ಅಲ್ಲಿ ಇಲ್ಲಿ ಎಂದು ಹೋದವರೆ ! ಯಾವಾಗಲೊ ಬರುತ್ತಿದ್ದರು ! ಮೋಹಿನಿ ಮತ್ತೊಮ್ಮೆ ಕೋಣೆಯಲ್ಲಿ ಸುತ್ತಲೂ ಕಣ್ಣು ಹೊರಳಿಸಿದಳು ಅಲ್ಲಿಯ ವ್ಯವಸ್ಥೆ, ಅಚ್ಚುಕಟ್ಟುತನಕ್ಕೆ ತಾನೇ ಮನಸೋತವಳಂತೆ ಅರೆನಿಮಿಷ ಅಭಿಮಾನದಿಂದ ಸುಮ್ಮನೆ ತಡೆದಳು ಆದರೆ ಇದೆಲ್ಲ ಸಾಧ್ಯವಾದದ್ದು, ಇಂಥ ಉತ್ತಮವಾದ ಕೋಣೆ, ಕಾಟು, ಕುರ್ಚಿ, ಮೇಜು, ದೀಪ, ಸುಸಜ್ಜಿತವಾಗಿಯೇ ಇದ್ದುದು ತನಗೆ ದೊರೆಯಬೇಕಾದರೆ ಆಪಟೆಯವರ ಔದಾರ್ಯವೇ ಕಾರಣವಲ್ಲವೆ ? ಯಾರಾದರೂ ಅತಿಥಿಗಳು ಬಂದರೆ ಅವರಿಗಾಗಿ ಉಪಯೋಗಿಸಲ್ಪಡುತ್ತಿದ್ದ ಈ ಕೋಣೆ ಈಗ ಪೂರ್ತಿಯಾಗಿ ತನ್ನದಾಗಿದೆ ಜಾಗ ಸಿಗದ್ದಕ್ಕೆ ಮದುವೆಯ ಯೋಚನೆಯನ್ನೂ ಮುಂದೂಡಬೇಕಾಗಿ ನೂರಾರು ಯುವಕರು ಇರಲೊಂದು ಅಂಗುಲ ಜಾಗವಿಲ್ಲದೆ ಹೇಗೋ ಕಾಲ ತಳ್ಳಬೇಕಾಗಿದ್ದ ಕಾಲದಲ್ಲಿ ತಾನು ಬಂದೊಡನೆ ಇಷ್ಟೆಲ್ಲ ಏರ್ಪಾಡು ತನಗಾಗಿ ನಡೆಯಬೇಕಾದರೆ ? ತನ್ನ ಜೀವನದಲ್ಲಿಯ ವಿಷಮ ಕಾಲ ಮುಗಿಯಿತು— ಅಥವಾ ಮುಗಿಯಲು ಬಂದಿದೆ ಎಂಬುದಕ್ಕೆ ಇದೊಂದು ಸಂಕೇತವೆ ? ಎಂದು ಕೇಳಿಕೊಳ್ಳುವಂತಾದಳು. ' ಇದುವರೆಗೆ ಪ್ರಪಂಚ ನನ್ನ ಮೇಲೆ ಸೇಡು ನಡೆಸಿದೆ ' ಎಂದಿದ್ದಳು ವಸಂತನಿಗೆ. ಆ ಮಾತು ಸುಳ್ಳು ಎನಿಸಿತು. ವಸಂತನಂಥವರು, ಆಪಟೆ ದಂಪತಿಗಳಂಥವರು ಇರುವಾಗ ಅಂಥ ಮಾತು ಸತ್ಯವಾಗ

ಲಾರದು ಯಾವ ಬಗೆಯಲ್ಲಿ ಯಾರೂ ಸಹಾಯ ಮಾಡದಿರಲಿ, ಸಹಾನುಭೂತಿಯಿದ್ದರೆ ಸಾಕು ತನ್ನನ್ನು ಜನ ದುಷ್ಟ ದೃಷ್ಟಿಯಿಂದ, ವಕ್ರದೃಷ್ಟಿಯಿಂದ ನೋಡದಿದ್ದರೆ ಸಾಕು ಬೇಕಾದುದನ್ನು ಮಾಡಿಯೇನು, ಎಂಬ ಆತ್ಮವಿಶ್ವಾಸ ನೆಗೆದು ನಿಂತಿತು—

ಜನ ತನ್ನನ್ನು ವಕ್ರದೃಷ್ಟಿಯಿಂದ ನೋಡದಿರಲಿ, ಸಹಾನುಭೂತಿಯಿದ್ದರೆ ಸಾಕು, ಎಂದೆನ್ನಿನಲಿಕ್ಕೆ ಪುಣೆಯಲ್ಲಿಯ ಮೂರು ತಿಂಗಳ ಅನುಭವವೇ ಕಾರಣವಾಗಿತ್ತು. ಯಾವ ವಿಶೇಷ ಸಂದರ್ಭವೂ ನಡೆದಿರಲಿಲ್ಲ ಆದರೆ ತಾನು ಅಲ್ಲಿ ಬಂದು ಇದ್ದಾಗಿನಿಂದ ಸುತ್ತುಮುತ್ತಲಿನವರಿಗೆ ಮಾತನಾಡಲಿಕ್ಕೆ, ಯಥೇಷ್ಟವಾಗಿ ತಮ್ಮ ಕಲ್ಪನೆಯ ಕುದುರೆಗಳನ್ನು ಮುಂದೋಡಿಸಲಿಕ್ಕೆ ತಾನೊಂದು ವಿಷಯವಾಗಿದ್ದಳೆಂಬುದು ಮೋಹಿನಿಗೆ ವಿಪರೀತ ದುಃಖವನ್ನುಂಟುಮಾಡುತ್ತಿತ್ತು 'ಒಂದು ಕಾಲಕ್ಕೆ ಗಂಡಂದಿರು ಹೆಂಡಂದಿರನ್ನು ಬಿಡುತ್ತಿದ್ದರು ಈಗ ಕಾಲ ಬದಲಾಯಿಸಿದೆ ಹೆಂಡಂದಿರೇ ಗಂಡಂದಿರನ್ನು ಬಿಡುತ್ತಾರೆ!' ಎಂಬ ಮಾತು ಬಂದಿತ್ತು 'ಗಂಡನನ್ನು ಬಿಟ್ಟು ಬಂದೆನೆಂಬುದು ಜಂಬದ ಮಾತೇ ಆಗಿದೆ ನೋಡಿದಿರಾ, ಹೇಗೆ ಮೆರೆದು ಆಡ್ತಾಡುತ್ತಾಳೆ? ನಾಚಿಕೆಯೊಂದನ್ನು ಬಿಟ್ಟರೆ ಸುಖಕ್ಕೇನು ಕೊರತೆ?' ಎಂದು ಇನ್ನೊಂದು ಕಡೆಯಿಂದ 'ಈಕೆ ಗಂಡನನ್ನು ಬಿಟ್ಟವಳೆ? ಈಕೆಯ ಗುಣ ಗೊತ್ತಿಲ್ಲದವರು ಆ ಮಾತನ್ನು ನಂಬಬೇಕು. ಆತನೇ ತಳ್ಳಿಹಾಕಿದ್ದಾನೆ' ಎಂದು ಮೂರನೆಯ ಕಡೆಯಿಂದ. 'ಈಕೆ ಗೊತ್ತಿಲ್ಲವೆ? ಬೇಕಾದವರ ಜೊತೆಗೆ ಅಡ್ಡಾಡಿ ಬೇಕಾದ ಹಾಗೆ ಇರುತ್ತೇನೆ ಎಂದರೆ ಯಾವ ಗಂಡನಿಗೆ ಸಹನವಾದೀತು? ಇಷ್ಟು ದಿನ ನಡೆದದ್ದೇ ಹೆಚ್ಚು. ಕೊನೆಗೆ ಇಷ್ಟು ನಡೆಯತಕ್ಕದ್ದೆಂದು ನಮಗೆ ಎಂದಿಗೋ ತಿಳಿದಿತ್ತು!' ಎಂದು ಮಗುದೊಂದು ಕಡೆಯಿಂದ ಇಂಥ ಯಾವ ಮಾತುಗಳನ್ನೂ ಯಾರೂ ಮೋಹಿನಿಯ ಎದುರಿಗೆ ಆಡುವುದು ಸಾಧ್ಯವಿರಲಿಲ್ಲ. ಆದರೆ ಆಡಿದ ಮಾತುಗಳು ಮಾತ್ರ ನಿಧಾನವಾಗಿ ಆಕೆಯ ಕಿವಿಯ ವರೆಗೆ ಬಾರದೆ ಉಳಿಯುತ್ತಿರಲಿಲ್ಲ ಇಂಥ ಮಾತುಗಳನ್ನು ಕೇಳಿದಾಗ ಮೋಹಿನಿಗೆ ತೀರ ಬೇಸರವೆನಿಸುತ್ತಿತ್ತು. ಈ ವಿಚಾರಗಳೊಡನೆ ಮನಸ್ಸು ಮತ್ತೆ ಹಿಂದೋಡಿತು. ಇಂಥ ಮಾತುಗಳನ್ನು ಕೇಳುತ್ತ, ಮನೆಯವರಿಗೂ ಬೇಡವಾಗಿ, ಕೊಳೆಯುತ್ತ ಬೀಳುವುದಕ್ಕಿಂತ ಎಲ್ಲಿಯಾದರೂ ಹೋಗಿಬಿಡಬೇಕು ಎಂದುಕೊಂಡಿದ್ದಳು.

ಕೆಲಸದ ಜಾಹೀರಾತುಗಳನ್ನು ನೋಡುತ್ತಲೇ ಇದ್ದಳು. ಪರೀಕ್ಷೆಯ ಪರಿಣಾಮದ ಒಗೆಯಲ್ಲಿ ಸಂದೇಹವೇ ಇರಲಿಲ್ಲವಾದ್ದರಿಂದ ಆಗಲೆ ಅಪೇಕ್ಷಾ ಪತ್ರಗಳನ್ನು ಒಂದೆರಡು ಕಡೆಗೆ ಕಳಿಸಿಯೂ ಆಗಿತ್ತು ತಾಯಿಗೆ ಇದು ಯಾವುದೂ ಬೇಡವಾಗಿತ್ತು ದಾದರಿನ ಸ್ಕೂಲಿನಲ್ಲಿ ಕೆಲಸದ ನೇಮಕವಾಗು ವಂತೆ ಕಾಗದ ಬಂದಾಗ ತಾಯಿ ಎಷ್ಟು ಸಿಡಿಮಿಡಿಗೊಂಡಿದ್ದಳು! ಕೊನೆಯಲ್ಲಿ ಅಲ್ಲಿಂದ ಹೊರಟು ಬರುವುದು ಒಂದು ಪ್ರಯಾಸವೇ ಆಯಿತು. ತನ್ನ ಆತ್ಮ ವಿಶ್ವಾಸಕ್ಕೆ ಸರಿಯಾಗಿ ತಾಯಿಯಿಂದ ಸಹಕಾರವಿದ್ದಿದ್ದರೆ ಇನ್ನೂ ಹೆಚ್ಚಿನ ನೆಮ್ಮದಿಯಿಂದ ಕೆಲಸ ಮಾಡಬಹುದು—ಸುಖವಾಗಿಯೆ ಇರಬಹುದು ಎಂದು ಕೊಳ್ಳುವಂತಾಗಿತ್ತು

ಎರಡು ಮೂರು ಸಲ ಕೋಣೆಯಲ್ಲಿ ಅತ್ತಿಂದಿತ್ತ ಅಡ್ಡಾಡಿದಳು. ಅನುರಾಧೆ—ಆಪಟೆನ ಹೆಂಡತಿ—ಬಂದಿದ್ದರೆ ಮನಸೋಕ್ತವಾಗಿ ಹರಟೆ ಯನ್ನಾದರೂ ಹೊಡೆಯಬಹುದಿತ್ತು ನಾಲ್ಕೇ ದಿನಗಳಲ್ಲಿ ಎಷ್ಟು ಆತ್ಮೀಯ ವಾಗಿ ಬೆಳೆದಿತ್ತು ಹಳೆಯ ಸ್ನೇಹ! ಓದಲು ಮನಸ್ಸಾಗಲಿಲ್ಲ ಅನಿರೀಕ್ಷಿತವಾಗಿ ಭೆಟ್ಟಿಯಾದ ವಸಂತ, ಆತನಾಡಿದ ಮಾತುಗಳು, ತಾನಾದರೂ ಎಂದಿನಂತೆ ಆತನೊಡನೆ ಮಾತನಾಡಿದಾಗ ಅನುಭವಿಸಿದ ಬಿಚ್ಚುಮನಸ್ಸಿನ ಸಂತಸ—ಇವೆಲ್ಲ ವನ್ನು ನೆನೆಯುವುದೇ ಒಂದು ಕೆಲಸವಾಯಿತು. ಒಳಗಡೆ ಕುಳಿತಾದರೂ ಏನು, ಎಂದು ಪಶ್ಚಿಮಕ್ಕೆ ಇದಿರಾಗಿದ್ದ ಕೋಣೆಯ ಪಕ್ಕದಲ್ಲಿಯ ಗ್ಯಾಲರಿ ಯಲ್ಲಿ ಹೋಗಿ ನಿಂತಳು ಎದುರಿಗೆ ವಿಶಾಲವಾಗಿ ಪಾರ್ಕು ಹಬ್ಬಿತ್ತು—ಆದರೆ ಕತ್ತಲಲ್ಲಿ ಯಾವುದೂ ಕಾಣುತ್ತಿರಲಿಲ್ಲ ಕತ್ತಲನ್ನೇ ದಿಟ್ಟಿಸುತ್ತಿದ್ದ ಹಾಗೆ ಮನಸ್ಸು ಮೆಲಕು ಹಾಕತೊಡಗಿತು ದೂರದಿಂದ ತೇಲಿಬರುತ್ತಿದ್ದ ಕಡಲ ದನಿ ಯಲ್ಲಿ ತಾಯಿಯ ದನಿ ಕೇಳಿಬರುತ್ತಿತ್ತು ಅದರ ಮೊರೆತ—ತಾನು ಹೊರಟು ಬರುವಾಗಿನ ತನ್ನ ತಾಯಿಯ ಅಸಹಾಯದ ಮೊರೆತದಂತಿತ್ತು. ಅದನ್ನು ನೆನೆಯುತ್ತಿದ್ದ ಹಾಗೆ ಮೋಹಿನಿಗೆ ದುಃಖವಾಯಿತು ಕಣ್ಣೀರು ಉಕ್ಕಿತು. ಆದರೆ ಮರುಕ್ಷಣದಲ್ಲಿಯೆ ಕೇಳಿಕೊಂಡಳು ಆಕೆ ಹೇಳಿದ ಹಾಗೆ ನಡೆದು ಕೊಳ್ಳುವುದು ಸಾಧ್ಯವೆ? ಸಾಧ್ಯವಿಲ್ಲವೆಂದಮೇಲೆ ಯಾಕೆ ಆ ಯೋಚನೆ? ಆದರೆ, ಎಷ್ಟಾದರೂ ತಾಯಿ! ಆಕೆಯನ್ನುಳಿದರೆ ತನಗೆ ತನ್ನವರೆಂಬುವವರು ಯಾರಿದ್ದಾರೆ? ಕೊನೆಯ ದಿನ ತನಗೂ ಆಕೆಗೂ ನಡೆದ ಮನಸ್ತಾಪ ನಡೆಯ

ಬಾರದಾಗಿತ್ತು ಎನಿಸಿತು. ಆ ಚಿತ್ರ ಕಣ್ಣೆದುರು ನಿಂತಿತು.

"ನೀನು ಏನು ಬೇಕಾದುದನ್ನು ಮಾಡು, ಮೋಹಿನಿ. ಆದರೆ ಈ ಕೆಲಸಕ್ಕಾಗಿ ನೀನು ಮುಂಬಯಿಗೆ ಹೋಗಿ ಒಬ್ಬಳೇ ಇರುವುದು ಎಷ್ಟು ಮಾತ್ರವೂ ನನಗೆ ಸಮ್ಮತವಿಲ್ಲ."

"ಹಾಗಾದರೆ ನನಗೆ ಏನು ಮಾಡು ಅನ್ನುತ್ತೀ ?"

"ನೀನು ಏನೂ ಮಾಡಬೇಕಾದುದಿಲ್ಲ ನಾವು ಉಣ್ಣುವ ನಾಲ್ಕು ತುತ್ತು ಅನ್ನದಲ್ಲಿ ನಿನಗೆರಡು ಅದಕ್ಕೇನೂ ಕೊರತೆಯಿಲ್ಲ"

"ನನಗೆ ಇಲ್ಲಿ ಉಪವಾಸ ಎಂದು ನಾನೀಗ ಕೆಲಸ ಹಿಡಿಯುತ್ತಿದ್ದೇನೆಯೆ ? ಇಲ್ಲಿ ನಾನು ಬಂದಾಗಿನಿಂದ ಜನ ಯಾವ ರೀತಿ ಮಾತನಾಡುತ್ತಿದ್ದಾರೆ ನಿನಗೆ ಗೊತ್ತು ಎಷ್ಟೋ ಮಾತುಗಳನ್ನು ನೀನೇ ನನಗೆ ಹೇಳಿದ್ದೀ ನಾನು ಕೆಲಸ ಹಿಡಿಯಲಿ, ಹಿಡಿಯದಿರಲಿ, ಇಲ್ಲಿದ್ದರೆ ಮಾತ್ರ ಹುಚ್ಚು ಹಿಡಿಯುತ್ತದೆ ಎಂಥ ಮಾತುಗಳನ್ನಾಡುತ್ತಾರೆ—ಓಹ್ !"

"ಜನರ ಬಾಯನ್ನು ಕಟ್ಟಬಹುದೆ ? ಏನಾದರೂ ಜನ ಬೇಕಾದಹಾಗೆ ಮಾತನಾಡುವವರೆ—"

"ಆಡುವವರು ಆಡಲಿ. ಬೇಕಾದುದನ್ನು ಆಡಲಿ. ಆದರೆ ಅದನ್ನೆಲ್ಲ ಕೇಳಿ ನನಗೆ ತಲೆ ಕೆಡಿಸಿಕೊಳ್ಳಬೇಕಾಗಿಲ್ಲ"

"ನೀನು ಮುಂಬಯಿಗೆ ಹೋದರೆ ಜನರು ಮಾತಾಡುವುದಿಲ್ಲ, ಎಂದು ಕೊಳ್ಳುತ್ತೀಯಾ ?"

"ಅವರು ಮಾತನಾಡಿದರೂ ನನ್ನ ಕಿವಿಯ ವರೆಗಾದರೂ ಬರುವುದಿಲ್ಲ ನನ್ನ ಬೆನ್ನ ಹಿಂದೆ ಅವರು ಬೇಕಾದುದನ್ನು ಬೊಗಳಿದರೂ ಅದರಿಂದ ನನಗೆ ಏನಾಗಬೇಕು ?"

"ಹೌದು ! ನಿನಗೇನಾಗಬೇಕು ? ನಿನಗೆ ಬೇಡವಾದದ್ದನ್ನು ನಾನು ಕೇಳಬೇಕು ಅಷ್ಟೆ, ಈಗಾಗಲೆ ಇದೆಲ್ಲವನ್ನು ಮಾಡಿದವಳು ನಾನೇ ಎನ್ನುತ್ತಾರೆ ಮುಖ್ಯ ನನ್ನ ಹಣೆಯಬರಹ. ನೀನೇನು ಮಾಡೀಯ"

ಎಂದು ಕಣ್ಣೀರು ತಂದಿದ್ದಳು ಮೋಹಿನಿ ಸುಮ್ಮನಾದಳು. ಅರೆನಿಮಿಷ ತಡೆದು ತಾಯಿ ಗದ್ಗದಿತಳಾಗಿ ಹೇಳಿದ್ದಳು

"ಏನೇ ಆಗಲಿ, ಹೋಗಲಿ, ನೀನು ನನ್ನ ಹತ್ತಿರ ಇದ್ದರೆ ನನಗೆ ಸಮಾ

ಥಾನ, ಮಗು ನೀನು ಸುಖವಾಗಿರಬೇಕು. ನೀನು ಎಲ್ಲಿಯೋ ಹೋಗಿ ಹೇಗಾದರೂ ಇದ್ದರೆ ನಾನೇನು ಮಾಡಬೇಕು ? ನಾನು ಏನೆಂದು ಸಮಾಧಾನ ಪಡೆಯಬೇಕು ?—"

ಮುಂದೆ ಮಾತು ಬಾರದಾಯಿತು. ಕಂಠ ಬಿಗಿಯಿತು. ತಾಯಿಯ ದುಃಖವನ್ನು ತಿಳಿದವಳಾದರೂ ಅದಕ್ಕೆ ಬೇರೆಯಾಗಿ ದಾರಿ ಕಡಿಯಲೇ ಬೇಕೆಂದು ಮೋಹಿನಿ ಕೇಳಿದ್ದಳು

"ಹೀಗೇಕಮ್ಮ ನೀನು ಮಾತನಾಡುತ್ತೀ ? ಇಷ್ಟು ದಿನ ನಾನೇನು ನಿನ್ನ ಹತ್ತಿರವೇ ಇರುತ್ತಿದ್ದೆನೆ ? ನಾನು ಯಾವಾಗಲೂ ನಿನ್ನ ಹತ್ತಿರ ಇರುವುದೇ ? ಹೀಗೆಂದರೆ ಹೇಗೆ ? "

"ಇಷ್ಟು ದಿನದ ಮಾತು ಬೇರೆಯಾಗಿದ್ದಿತು ಕಷ್ಟವೊ ನಷ್ಟವೊ, ಏನಿದ್ದರೂ ನೀನು ಗಂಡನ ಮನೆಯಲ್ಲಿರುತ್ತಿದ್ದೆ ನೀನು ಹೇಗಿದ್ದರೂ ನಮಗೆ ಗೊತ್ತಾ ಆಗುತ್ತಿರಲಿಲ್ಲ ಅಲ್ಲದೆ, ಎಷ್ಟಾದರೂ ಗಂಡನ ಮನೆ ಇಂದು ಕಷ್ಟವಾದರೂ ಇಂದಿಲ್ಲ ನಾಳೆ ಎಲ್ಲವೂ ಸರಿಯಾಗಬಹುದೆಂದೆನಿಸುತ್ತದೆ—"

"ಇಂದಿಲ್ಲ ನಾಳೆ ಸರಿಯಾಗುತ್ತದೆ ! ಹುಚ್ಚು ಆಸೆ. ಅಷ್ಟಾಗಬೇಕಿದ್ದರೆ ಎಂದಿಗೋ ಆಗಬಹುದಿತ್ತು ಮನೆ ಬಿಟ್ಟು ಹೊರಗೆ ತಳ್ಳುವ ವರೆಗೆ ಪ್ರಸಂಗವೇ ಬರುತ್ತಿರಲಿಲ್ಲ—"

ಇಬ್ಬರೂ ಸುಮ್ಮನಾದರು. ಮಾತನಾಡಿ ಇಬ್ಬರಿಗೂ ಪ್ರಯೋಜನ ಕಾಣಲಿಲ್ಲ ಮೋಹಿನಿಗೆ ಕೆಲಸವನ್ನು ಒಪ್ಪಿಕೊಂಡು ಕಾಗದವನ್ನು ಬರೆಯ ಬೇಕಾಗಿದ್ದಿತಾದ್ದರಿಂದ ಖಂಡಿತವಾಗಿ ಹೇಳಿದ್ದಳು

"ನೀನು ಏನು ಬೇಕಾದುದನ್ನು ಹೇಳು ನಾನು ಈ ಕೆಲಸವನ್ನು ಒಪ್ಪಿಕೊಳ್ಳುತ್ತೇನೆ ಕೈತುಂಬ ಕೆಲಸವಿದ್ದರೆ ಕೆಲಮುಟ್ಟಿಗಾದರೂ ನಡೆದುದನ್ನು ಮನಸ್ಸು ಮರೆಯಬಹುದು—"

"ನೀನು ಕೆಲಸವನ್ನು ಮಾಡುವುದಾದರೆ ಇಲ್ಲಿಯೇ ಏನಾದರೂ ಮಾಡು"

"ಆಯಿತು. ಎಲ್ಲವೂ ನಮ್ಮ ಅನುಕೂಲಕ್ಕೆ ಸರಿಯಾಗಿ ಆಗಬೇಕು ಹತ್ತು ಕಡೆ ಕಾಗದ ಹಾಕಿದರೆ ಒಂದು ಕಡೆ ಕರೆ ಬಂದಿದೆ ಅದನ್ನೂ ಬಿಟ್ಟು ಕೊಟ್ಟರೆ ಕೆಲಸ ಸಿಕ್ಕಂತೆಯೇ—"

ಏನು ಹೇಳಿದರೂ ಮೋಹಿನಿಯ ನಿರ್ಧಾರವನ್ನು ಕದಲಿಸುವುದು ಸಾಧ್ಯ ವಿಲ್ಲವೆನಿಸಿ ತಾಯಿ ನಿರುಪಾಯಳಾದಳು. ಹತ್ತು ನಿಮಿಷ ಯೋಚಿಸಿ ಕೊನೆ ಯಾಗಿ ಹೇಳಿದ್ದಳು :

" ನಾನು ಯಾವುದನ್ನು ಹೇಳಿದರೂ ನೀನು ಒಪ್ಪುವುದಿಲ್ಲ. ನೀನು ಹೋಗುವುದೇ ಆದರೆ ಹೋಗು ಆದರೆ ನಿನ್ನ ಗಂಡ ಬಂದು ಮಾತನಾಡಿಸಿದರೆ ನೀನು ಸರಿಯಾಗಿ ನಡೆದುಕೊಂಡು ಮತ್ತೆ ಹೊಂದಿಸಿಕೊಂಡು ಹೋಗಬೇಕು ಇಷ್ಟೇ ನಾನು ನಿನಗೆ ಕೇಳಿಕೊಳ್ಳುವುದು—"

" ಹುಚ್ಚು ಆಸೆ ನಿನ್ನನ್ನು ಇನ್ನೂ ಬಿಡಲಿಲ್ಲ ಅವರು ಯಾತಕ್ಕೆ ಬಂದಾರು ? ಅಲ್ಲದೆ—"

" ಬರಬಹುದು ನೀನು ಹೋದನಂತರ ನಾನು ಎಲ್ಲವನ್ನೂ ತಿಳಿಸಿ ಹೇಳುವಂತೆ ಒಂದು ಕಾಗದವನ್ನು ಬರೆಯಿಸುತ್ತೇನೆ—"

" ಅಷ್ಟು ಮಾತ್ರ ಮಾಡಬೇಡ, ದಯಮಾಡಿ. ಈಗ ಆದ ಅವಮಾನ ಬೇಕಾದಷ್ಟಾಗಿದೆ. ನಾನು ಅವರಿಗೆ ಬೇಕಾದದ್ದೇ ಇದ್ದರೆ ಈಗ ಮೂರು ತಿಂಗಳು ಸುಮ್ಮನಿರುತ್ತಿದ್ದರೆ ? ಅವರಿಂದ ಒಂದು ಮಾತು, ಒಂದು ಸೂಚನೆ ಏನಾದರೂ ಬರುತ್ತಿರಲಿಲ್ಲವೆ ? "

" ಎಷ್ಟಾದರೂ ಗಂಡ, ಮೋಹಿನಿ. ನಾವೇ ಮಣಿಯಬೇಕು. ಮಣಿದು ಗೆಲ್ಲಬೇಕು ! "

" ಇಂಥ ಮಾತನ್ನೇ ಹೇಳುತ್ತೀಯಮ್ಮ, ಯಾವಾಗಲೂ ನನಗೆ ಅದೇ ಬೇಡವಾಗಿದೆ ನೀನು ಬೇಕಾದುದನ್ನು ಹೇಳು, ಮಾಡುತ್ತೇನೆ. ಆದರೆ ದಯ ವಿಟ್ಟು ಈ ಕಾಗದವನ್ನು ಬರೆಯಿಸುವ ಗೊಡವೆಗೆ ಹೋಗಬೇಡ ಅದರಿಂದ ಏನೂ ಆಗಬೇಕಿಲ್ಲ—ಅವಮಾನದ ಹೊರತಾಗಿ "

ಆನಂದನಿಗೆ ಕಾಗದವನ್ನು ಬರೆಯಿಸುವ ಮಾತು ಬಂದಾಗಿನಿಂದ ಉಳಿ ದೆಲ್ಲ ವಿಷಯಗಳೂ ಗೌಣವಾದಂತಾದವು ಮೋಹಿನಿ ಎಷ್ಟು ಪರಿಯಿಂದ ಕೇಳಿದರೂ ವಾದಿಸಿದರೂ ತಾಯಿ ಮಣಿಯಲಿಲ್ಲ ಆಕೆಯ ಮಾತಿಗೆ ಆ ಒಂದು ವಿಷಯದಲ್ಲಿಯಾದರೂ ಒಪ್ಪದಿದ್ದರೆ ಹೊರಡುವುದೇ ಅಸಾಧ್ಯವಾದ್ದರಿಂದ ಕೊನೆಗೆ ಮೋಹಿನಿ ಸ್ಪಷ್ಟವಾಗಿ ಒಪ್ಪದಿದ್ದರೂ ತನ್ನ ಹಟವನ್ನು ಬಿಟ್ಟುಕೊಟ್ಟಳು. ತಾಯಿ ಕಾಗದವನ್ನು ಬರೆಯಿಸುವಳೆಂಬ ವಿಷಯದಲ್ಲಿ ಆಕೆಗೆ ಸಂದೇಹವೇ

ಇರಲಿಲ್ಲ. ಆದರೆ ಅದರಿಂದ ಏನೂ ಆಗುವಂತಿರಲಿಲ್ಲವೆಂದೊ, ಆನಂದ ತನ್ನನ್ನು ಮತ್ತೆ ಕಾಣಬೇಕಾಗಿದ್ದರೆ ಈ ಮೊದಲೇ ಅಷ್ಟು ನಡೆಯಬಹುದಿತ್ತು ಎಂದು ತಿಳಿದಿದ್ದಳೆಂದೊ ಮೋಹಿನಿ ಆ ವಿಷಯವನ್ನು ಕುರಿತು ಮತ್ತೆ ಹೆಚ್ಚಾಗಿ ಯೋಚಿಸಲೆ ಇಲ್ಲ ಆದರೆ ಮುಂಬಯಿಗೆ ಬಂದನಂತರ 'ನಿಜವಾಗಿಯೂ ತಾಯಿ ಕಾಗದ ಬರೆಯಿಸಿಬಿಟ್ಟು ಆನಂದ ತನ್ನನ್ನು ಕಾಣಬಂದರೆ?' ಎಂದು ಎರಡು ಮೂರು ಸಲ ಯೋಚನೆ ಸುಳಿದುಹೋಗಿತ್ತು ಅದೇಕೊ ಆತ ಬರುವುದು ಅಸಂಭವವಲ್ಲವೆನ್ನುವಂತಾಗಿತ್ತು ಆದರೆ ಆ ಯೋಚನೆ ಸುಳಿದಾಗಲೆಲ್ಲ 'ಬಂದರೆ ಬರಲಿ ಬಂದಾಗ ನೋಡುವ' ಎನ್ನುವ ಮಾತಿನಿಂದ ಆ ಸನ್ನಿವೇಶವನ್ನು ಮನಸ್ಸಿನಿಂದ ದೂರವಾಗಿಸುತ್ತಿದ್ದಳು

ಮೋಹಿನಿ ಎಷ್ಟು ಹೊತ್ತು ಹಾಗೆಯೇ ನಿಂತಿದ್ದಳೊ! ಎದುರಿಗಿನ ಬೀದಿಯಲ್ಲಿ ಆಗೀಗ ಹಾದುಹೋಗುವವರ ಕಾಲು ಸದ್ದು ದೂರದವರೆಗೆ ಕೇಳಿಬರುತ್ತಿತ್ತು. ಬೀದಿಯಾಚೆ ಹಬ್ಬಿದ ವಿಶಾಲವಾದ ಪಾರ್ಕು ಕತ್ತಲೆಯಲ್ಲಿ ಮುಳುಗಿತ್ತು. ಅದರಾಚೆಯಲ್ಲಿದ್ದ ಸಮುದ್ರದ ತೆರೆಗಳ ಏರಿಳಿತದ ಧ್ವನಿ ಅಸ್ಪಷ್ಟವಾಗಿ ತೇಲಿಬರುತ್ತಿತ್ತು ಹಿಂಗಡೆಯಲ್ಲಿಯ ತನ್ನ ಕೋಣೆ—ಅದರಾಚೆಯಲ್ಲಿಯ ಆಪಟೆಯವರ ಮೂರು ನಾಲ್ಕು ಕೋಣೆಗಳು—ಎಲ್ಲವೂ ನಿಶ್ಶಬ್ದವಾಗಿ ನಿಂತಿದ್ದವು. ಗ್ಯಾಲರಿಯಲ್ಲಿ ಬರುವಾಗ ಕೋಣೆಯಲ್ಲಿಯ ದೀಪವನ್ನಾರಿಸಿ ಬಂದಿದ್ದಳಾದ್ದರಿಂದ ಕತ್ತಲೆಯಲ್ಲಿ ಮುಳುಗಿದ ಕೋಣೆಗೆ ಹಿಂದಿರುಗಲೂ ಅದೇಕೋ ಒಂದು ಕ್ಷಣ ಆಕೆಗೆ ವಿಚಿತ್ರವೆನಿಸಿತು ಆಪಟೆಯವರು ಬಂದಿದ್ದರೆ—ಅವರ ಮನೆಯಲ್ಲಿ ಅವರಿಬ್ಬರೇ ಇದ್ದರೂ—ಅನುರಾಧೆಯ ಹಾಡಿನ ಧ್ವನಿ ನಿರಂತರವಾಗಿ ಪ್ರತಿಧ್ವನಿಸುತ್ತಿತ್ತು ಆದರೆ ಅವರು ಬರುವುದು ಯಾವಾಗಲೊ! ವೇಳೆ ಹತ್ತಾಗಿತ್ತು ಸಂಜೆಯ ಮುಂದೆ ನಡೆದು, ಈಗ ನಿಂತು, ಕಾಲು ನೋಯುತ್ತಿದ್ದವು ದೀಪವನ್ನಾರಿಸಿ ಹಾಸಿಗೆಯಲ್ಲಿ ಮೈ ಚೆಲ್ಲಿದಳು

ಮತ್ತೆ ಮೇಲಿಂದಮೇಲೆ 'ಆನಂದ ಬಂದರೆ?' ಎಂಬ ಯೋಚನೆ ಇಣುಕುತ್ತಿತ್ತು ವಸಂತ ಹೊರಟುಹೋಗುವಾಗ ಆನಂದನನ್ನು ಮಾತನಾಡಿಸುತ್ತೇನೆ ಎಂದನಲ್ಲವೆ? ತಾನು ಬೇಡವೆಂದಮೇಲೆ ಆತನೇನೂ ಹಾಗೆ ಮಾಡುವುದು ಸಾಧ್ಯವಿಲ್ಲವೆಂದು ಭರವಸೆಯೆನಿಸಿತು ಮನಸ್ಸು ವಸಂತನತ್ತ ತಿರುಗಿತು ಇಂದು ಸಾಯಂಕಾಲ ಅಕಸ್ಮಾತ್ತಾಗಿ ವಸಂತ ಸಿಕ್ಕದ್ದು ಎಂಥ ಆಶ್ಚರ್ಯ!

ಎಂಥ ಸಮಾಧಾನ! ಈಗ ಮೂರು ತಿಂಗಳಿಂದ ಯಾರೊಡನೆಯೂ ಮನಬಿಚ್ಚಿ ಮಾತನಾಡಲೂ ಅವಕಾಶ ಸಿಕ್ಕಿರಲಿಲ್ಲ. ಆತನೊಡನೆ ಮಾತನಾಡಿದಾಗ—ಎಲ್ಲವನ್ನೂ ಹೇಳಿಕೊಂಡಾಗ—ಮನಸ್ಸು ಎಷ್ಟು ಹಗುರಾಗಿತ್ತು?

ಮೋಹಿನಿಯ ಮನಸ್ಸು ವಸಂತನತ್ತ ಓಡಿತು. ಎಲ್ಲೆಲ್ಲಿಯೊ ಹೋಯಿತು ತನ್ನ ಆತನ ಪರಿಚಯವಾದಂದಿನಿಂದ ಅಂದಿನ ಸಾಯಂಕಾಲದ ವರೆಗೂ ಆತನೊಡನೆ ಬಂದ ಎಲ್ಲ ಸಂಬಂಧಗಳೂ ಹೆಚ್ಚುಕಡಿಮೆ ಆಕೆಯ ಕಣ್ಣ ಮುಂದೆ ನಿಂತವು ಆತನ ಉದಾರ ಹೃದಯದೆದುರು ಬೇರೊಂದಿಲ್ಲ ಯಾಕೆ ಆತ ತನಗಾಗಿ ಇಷ್ಟು ಸಹಾನುಭೂತಿಯನ್ನು ಸೂರೆಮಾಡಬೇಕು? ಅವನಿಗಾಗಿ ತಾನು ಮಾಡಿದ್ದೇನು? ಈ ಮೊದಲೇ ಒಂದು ಸನ್ನಿವೇಶದಲ್ಲಿಯಾದರೂ ಆತನಿಗೆ ತೊಂದರೆಯನ್ನಲ್ಲದೆ ಬೇರೆ ಏನನ್ನೂ ಕೊಟ್ಟಿರಲಿಲ್ಲ ಅದನ್ನೆಲ್ಲ ನೆನೆದಾಗ ತನಗಿಂತಲೂ ಹೆಚ್ಚಾಗಿ ಆತನಿಗಾಗಿಯೆ ಮೋಹಿನಿಗೆ ಕೆಡಕೆನಿಸಿತು ಹಿಂದೆ ಎಷ್ಟೋ ಬಾರಿ ಸುಳಿದ ವಿಚಾರ ಈಗ ಮತ್ತೆ ಸುಳಿಯಿತು ಆನಂದ ವಸಂತನಂತಿದ್ದರೆ? ಅಥವಾ ವಸಂತನೇ ಆನಂದನಾಗಿದ್ದರೆ? ಸರಿ ಅದೇಕೋ ಮೈಯೆಲ್ಲ ಬೆವರೊಡೆಯುವಂತಾಯಿತು. ಜುಹುವಿನ ನೆನಹು ಮನಸ್ಸನ್ನು ಮೇರೆದಪ್ಪಿಸಿತು ವಸಂತ! ಆದರೇನು ಮಾಡುವುದು? ಎಷ್ಟಾದರೂ ವಸಂತ ಯಾರು? ಇಂದು ಸಾಯಂಕಾಲ ಕೊನೆಯಲ್ಲಿ ಆತ ಹೀಗೇಕೆ ಮಾತನಾಡಿದ? ಇಬ್ಬರೂ ಸೇರಿ ಹೆಚ್ಚಾಗಿ ಅಡ್ಡಾಡಬಾರದು, ಕೂಡಿರಬಾರದು ಎಂದೇ ಹೇಳಿದ ನಲ್ಲವೆ? ಆ ಒಂದು ಯೋಚನೆಯಿಂದ ಹತ್ತಿರವೆನಿಸುತ್ತಿದ್ದ ವಸಂತ ದೂರವಾದ 'ಏನಾದರೂ ಕೆಲಸವಿದ್ದರೆ ಕಾಣಬಹುದು' ಏನು ಕೆಲಸ? ಆತನನ್ನು ಕಾಣುವುದೇ ಒಂದು ಕೆಲಸ, ಎನಿಸಿತು ಮೋಹಿನಿಗೆ ಆದರೆ ಮನಸ್ಸು ಮತ್ತೆ ಚೇತರಿಸಿಕೊಂಡಿತು ಆತ ಹೇಳಿದ್ದೇ ಸರಿ ಎನಿಸಿತು ಹಾಗಾದರೆ ಇನ್ನು ಮುಂದೆ ಆತನನ್ನು ಕಾಣುವ ಹಾಗೆಯೇ ಇಲ್ಲವೆ? ಏನಾದರೂ ಕೆಲಸ ಹುಡುಕಿಕೊಂಡು ಎರಡು ಮೂರು ದಿನಗಳಲ್ಲಿ ಕಾಣಬೇಕು ಎಂದುಕೊಂಡಳು. ಆತನಿಗೆ ಬೇಡವಾಗಿದ್ದರೆ ತಾನಾಗಿಯೇ ಏತಕ್ಕೆ ಹೋಗಬೇಕು? ಎಂದೂ ಅಂದುಕೊಂಡಳು ಹೀಗೆ ಮನಸ್ಸು ಉಯ್ಯಾಲೆಯಾಡುತ್ತಿರುವಾಗಲೆ ಮೋಹಿನಿ ನಿದ್ರೆಹೋಗಿರಬೇಕು .

೩

ಅನುರಾಧೆ ಮೋಹಿನಿಗೆ ಬಹಳ ಹಳೆಯ ಗೆಳತಿ. ಮೊದಲು ಪುಣೆಯಲ್ಲಿದ್ದಾಗ ಇಬ್ಬರೂ ಸೇರಿಯೆ ಶಾಲೆಗೆ ಹೋಗುತ್ತಿದ್ದರು. ಇಬ್ಬರ ಮನೆಗಳೂ ಬಹಳ ದೂರವಾಗಿರದ್ದರಿಂದ ಹೆಚ್ಚುಕಡಿಮೆ ಕೂಡಿಯೇ ಇರುತ್ತಿದ್ದರು, ಬೆಳೆದಿದ್ದರು. ಆದರೆ ಆ ಮಾತಿಗೆ ಎಷ್ಟೋ ವರ್ಷಗಳಾಗಿದ್ದವು. ಅನುರಾಧೆಗೆ ಇಂಟರ್ ಪರೀಕ್ಷೆ ನೀಗಲಿಲ್ಲ. ಅದಕ್ಕೆ ಮುಖ್ಯ ಕಾರಣವೆಂದರೆ ಇಂಟರ್ ಪರೀಕ್ಷೆ ಬರುವ ಹೊತ್ತಿಗೆ ಪರೀಕ್ಷೆಯ ಪತ್ರಗಳಿಗಿಂತಲೂ ಹೆಚ್ಚಾಗಿ ಮದುವೆಯ ಯೋಚನೆಯೇ ಮನಸ್ಸನ್ನು ಸೆಳೆದಿತ್ತು. ಕಾಲೇಜಿನಲ್ಲಿ ಇನ್ನೂ ಒಂದೆರಡು ವರ್ಷವಾದರೂ 'ಮೆರೆಯು'ಬೇಕೆಂಬ ಹಂಬಲವಿದ್ದರೂ ಮದುವೆಯ ಹಂಬಲದೆದುರು ಅದು ತಡೆಯಲಿಲ್ಲ. ಇವಕ್ಕೆ ಸರಿಯಾಗಿ ಆಕೆಯ ತಾಯಿಯ ಕಡೆಯ ದೂರದ ಸಂಬಂಧಿಕನಾದ ಮಧುಕರ ಆಪಟೆ ಈಕೆಯನ್ನು 'ನೋಡಿ'ದಾಗ ಕೂಡಲೆ ಒಪ್ಪಿಕೊಂಡೂ ಬಿಟ್ಟ. ಮಧುಕರ ಹೊರಗಿನವನಾಗಿರದ್ದರಿಂದ ಅನುರಾಧೆ ಆತನನ್ನು ಬಲ್ಲವಳಾಗಿದ್ದಳು. ಆತನನ್ನು ಮದುವೆಯಾಗಬೇಕೆಂಬ ಆಕೆಯ ಹಳೆಯ ಆಕಾಂಕ್ಷೆ ಆತ ತನ್ನನ್ನು 'ನೋಡ'ಬಂದಾಗ ಮಣಿಯದ ಬಯಕೆಯಾಗಿಯೆ ನಿಂತಿತ್ತು. ಇದಕ್ಕೆ ಕಾರಣವೆಂದರೆ ಮಧುಕರನ ಬಣ್ಣ, ಮುಖದ ಚೆಲುವು, ಅವನ ರಸಿಕತೆ. ಮಧುಕರನಿಗೆ ಸಂಗೀತದಲ್ಲಿ, ಅಭಿನಯದಲ್ಲಿ ವಿಶೇಷ ಅಭಿರುಚಿ. ಚಿತ್ರಪಟ 'ಸಂಗೀತ'ವೆಂದರೆಯೇ ಸಂಗೀತವೆಂದು ಬಗೆದ ಅನುರಾಧೆಗೆ ಮಧುಕರನಲ್ಲಿ ಯಾವ ಕೊರತೆಯೂ ಕಾಣಲಿಲ್ಲ. ಆತನನ್ನು ತಾನು ಒಪ್ಪುವ ಮಾತೇ ಇರಲಿಲ್ಲ. ಆತ ಒಪ್ಪಿದರೆ ಆಯಿತು ಎನ್ನುವ ಪರಿಸ್ಥಿತಿ ಇದ್ದಿತು. ಅನುರಾಧೆಯ ಬೆಡಗು ಬಿನ್ನಾಣಗಳು ಆತನ ಮನಸ್ಸಿನ ಮೇಲೆ 'ಯೋಗ್ಯ' ಪರಿಣಾಮಗಳನ್ನು ಮಾಡದಿರಲಿಲ್ಲ. ಒಪ್ಪಿ ಮದುವೆಯಾದ. ಇದೆಲ್ಲ ಐದಾರು ವರ್ಷಗಳ ಹಿಂದಿನ ಕತೆ.

ಈಗ ಆಪಟೆ ಶಾರದಾ ಪಿಕ್ಚರ್ಸ್‌ದಲ್ಲಿ ಅಸಿಸ್ಟೆಂಟ್ ಡೈರೆಕ್ಟರ್ ಆಗಿದ್ದಾನೆ. ಮೊದಲು ಸಹಾಯಕ ಧ್ವನಿಮುದ್ರಕನೆಂದು ಸೇರಿದವ ಮೂರು ವರ್ಷಗಳಲ್ಲಿ ಆ ವ್ಯವಸಾಯದಲ್ಲಿ ಹೆಸರು ಗಳಿಸಿದ್ದ. ಹೆಚ್ಚುಕಡಿಮೆ ಮುಖ್ಯಸ್ಥನಾಗಿಯೇ ಇದ್ದ. ದೊಡ್ಡ ಸಂಬಳವನ್ನು ಪಡೆದು ಸುಖವಾಗಿಯೆ ಇದ್ದ. ಕಳೆದ ವರ್ಷ

ಚಿಕ್ಕದೊಂದು ಕಾರನ್ನು ಕೊಂಡಿದ್ದನೆಂದಮೇಲೆ ಆತನ ಅನುಕೂಲಗಳ ವಿಷಯ ವಾಗಿ ಹೆಚ್ಚಿಗೆ ಹೇಳಬೇಕಾದುದೇ ಇಲ್ಲ ಕಾರು ಕೊಂಡಾಗಿನಿಂದ ಅನುರಾಧೆಗೆ ತಾನಿದ್ದಲ್ಲಿಂದ ಸ್ವರ್ಗ ಬಹಳ ದೂರವೇನೂ ಇದ್ದಹಾಗೆ ಕಾಣುತ್ತಿರಲಿಲ್ಲ.

ತಾನು ಇರುವುದಕ್ಕಾಗಿ ಏನಾದರೊಂದು ಏರ್ಪಾಡನ್ನು ಮಾಡಬೇಕೆಂದು ಮೋಹಿನಿಯಿಂದ ಒತ್ತಾಯದ, ಒಲುಮೆಯ ಕಾಗದ ಬಂದಾಗ ಅನುರಾಧೆ ಕೂಡಲೆ ತಮ್ಮಲ್ಲಿಯ ಒಂದು ಕೋಣೆಯನ್ನು ಆಕೆಗಾಗಿ ಕೊಡಬಹುದೆಂದು ಕೊಂಡು ತನ್ನ ಗಂಡನನ್ನು ಕೇಳಿದಾಗ ಆತ ಅಷ್ಟೊಂದು ಉತ್ಸಾಹವನ್ನು ತೋರಿರಲಿಲ್ಲ ದೊಡ್ಡದಾಗಿ ಮನೆಯನ್ನು ಹಿಡಿದು ಇದ್ದ ಇಬ್ಬರೂ ಸುಖವಾಗಿ ಇರಬಹುದಾದಾಗ ಮೂರನೆಯವರು ಬಂದು ಇಲ್ಲದ ಅಭ್ಯಂತರವನ್ನುಂಟು ಮಾಡುವುದು ಆತನಿಗೆ ಬೇಕಿರಲಿಲ್ಲ ಅವನೆಂದಿದ್ದ

"ಇದೆಲ್ಲ ಮೊದಮೊದಲು ಸರಿಯಾಗಿರುತ್ತದೆ ಆಮೇಲೆ ತೊಂದರೆಗೆ ಕಾರಣ—"

"ತೊಂದರೆಯೇನಾಗಬೇಕು ? ಆಕೆಯೇನು ನನಗೆ ಗೊತ್ತಿಲ್ಲದವಳಲ್ಲ?"

"ಹೌದು ಏನೋ ನಾಲ್ಕೆಂಟು ದಿನದ ಮಾತಾದರೆ ಹೇಗಾದರೂ ಆದೀತು. ಒಮ್ಮೆ ನಿನ್ನ ಗೆಳತಿ ಬಂದು ಇರತೊಡಗಿದಳೆಂದರೆ ಬೇರೆ ಕಡೆಗೆ ಹೋಗು ಎಂದು ಹೇಳಲೂ ಬರುವಹಾಗಿಲ್ಲ ಬೇರೆ ಕಡೆಗೆ ಜಾಗ ಸಿಗುವುದೂ ಸಾಧ್ಯವಿಲ್ಲ. ಅಂದಮೇಲೆ ಆಕೆಯಾದರೂ ಹೋಗುವುದೆಲ್ಲಿಗೆ ?—"

"ನಮ್ಮ ಆಚೆಯ ಕೋಣೆ ಸುಮ್ಮನೆ ತೆರವಾಗಿಯೇ ಬಿದ್ದಿರುತ್ತದೆ ಆ ಕಡೆಗೆ ಆಕೆ ಸ್ವತಂತ್ರವಾಗಿ ಇದ್ದರೆ ನಮಗೆ ಏನು ಅಭ್ಯಂತರವಾಗುತ್ತಾಳೆ ?"

"ಏನೋ, ನೋಡು. ನೀನೇ ಆಮೇಲೆ—"

"ನಾನೇನೂ ಅನ್ನುವುದಿಲ್ಲ ನನಗೆ ಬೇಕಾದವಳು ಪಾಪ, ಕಷ್ಟದಲ್ಲಿ ಇದ್ದಾಳೆ ನಾವು ಇಂಥ ಸಮಯದಲ್ಲಿ ಆಕೆಗೆ ಮಾಡಿದ ಸಹಾಯವನ್ನು ಆಕೆ ಮರೆಯಲಾರಳು—"

ಆಪಟೆ ಸ್ವಭಾವದಿಂದ ಬಹಳ ಮೆತ್ತಗಿನವ ತನ್ನಿಂದ ಇನ್ನೊಬ್ಬರಿಗೆ ಉಪಯೋಗವಾಗುವಂತಿದ್ದರೆ ಎಂದಿಗೂ ಆತ ಹಿಂಜರಿಯದವ ಆದರೂ ಈ ವಿಷಯದಲ್ಲಿ ಆತ ಅನುಮಾನವನ್ನೆತ್ತಲಿಕ್ಕೆ ಮುಖ್ಯವಾದ ಕಾರಣವೆಂದರೆ ಕೋಣೆಗೆ ಬರತಕ್ಕವಳು ಹೆಣ್ಣುಮಗಳು. ಏನೇನೋ ಹಿಂದಿನ ಕತೆಗಳು.

ತಾವು ಎಷ್ಟಾದರೂ ಸ್ವಚ್ಛಂದವಾಗಿ ಇರತಕ್ಕವರು ಇನ್ನೊಬ್ಬರಿಂದ ಸುಮ್ಮನೆ ಯಾಕೆ ತಾವಾಗಿಯೇ ಸಂಕೋಚ ಎನಿಸುವಂಥ ಸಂದರ್ಭವನ್ನು ಉಂಟುಮಾಡಿ ಕೊಳ್ಳಬೇಕು ? ಎಂಬುದಕ್ಕಾಗಿ ಮಾತ್ರ ಆದರೆ ಅನುರಾಧೆ ತನ್ನ ಮಟ್ಟಿಗೆ ಎಲ್ಲವನ್ನೂ ನಿಶ್ಚಯ ಮಾಡಿಕೊಂಡವಳಾಗಿಯೇ ಇದ್ದಳಾದ್ದರಿಂದ ಆವಟಿ ಸುಮ್ಮನಾಗಿಬಿಟ್ಟ

"ಹಾಗಾದರೆ ಆಕೆಗೆ ಏನೆಂದು ಕಾಗದ ಒರೆಯಲಿ ?"

"ನಾನೇನು ಹೇಳಲಿ ? ನಿನಗೆ ತಿಳಿದ ಹಾಗೆ—"

"ನನಗೆ ತಿಳಿದ ಹಾಗಾದರೆ ಬಾ ಎಂದೇ ಬರೆದುಬಿಡುವೆ ! ನನಗೂ ಅನುಕೂಲ—"

"ನಿನಗೇನು ಅನುಕೂಲ ?—"

"ನರಿ ನನಗೇನು ಅನುಕೂಲವೆ ? ನೀವೊ, ಯಾವಾಗ ಹೋಗುತ್ತೀರೊ, ಮುಂಜಾನೆಯಿಂದ ಸಂಜೆಯ ವರೆಗೆ ವೇಳೆ ಸರಿಯವುದೇ ಕಷ್ಟವಾಗುತ್ತದೆ. ಆಕೆ ಬಂದರೆ ನನಗೂ ಕಂಪನಿಯಾಗುತ್ತದೆ"

"ಆದರೆ ಆಕೆ ಕೆಲಸ ಹಿಡಿಯಲಿಕ್ಕಲ್ಲವೆ ಇಲ್ಲಿಗೆ ಬರುವುದು ? "

"ಹಗಲು ಇರುಳು ಬೇರೆ ಹೋಗುವುದಿಲ್ಲವಲ್ಲ—ನಿಮ್ಮ ಹಾಗೆ ! "

"ಅಂತೂ ಆಕೆ ಬಂದಮೇಲೆ ನಾವೇ ದೂರ ಆಗುವ ಹಾಗೆ ಕಾಣುತ್ತದೆ ಅದಕ್ಕೇ ನಾನು—"

"ಸಾಕು, ಸಾಕು—"

ಎಂದು ತನ್ನ ವಿಶಿಷ್ಟವಾದ ರೀತಿಯಲ್ಲಿ ಅನುರಾಧೆ ವೈಯಾರವನ್ನು ಬೀರಿದಳು ಆ ವೈಯಾರವನ್ನು ವರ್ಣಿಸುವುದು ಸಾಧ್ಯವಿಲ್ಲ ಮೈಯ ಮಣಿತ ದಲ್ಲಿಯೊ, ತುಟಿಗಳ ತಿರುವಿನಲ್ಲಿಯೊ, ಕಣ್ಣುಗಳ ಕುಣಿತದಲ್ಲಿಯೊ ಅದು ಯಾವಾಗಲೂ ವ್ಯಕ್ತವಾಗುತ್ತಿದ್ದಿತು ಇಂಥ ಭಾವಭಂಗಿಗಳ ಮೂಲಕವೆ ಇರಬಹುದು—ಇಂಥ ಯಾವ ಸಂದರ್ಭದಲ್ಲಿಯೇ ಆಗಲಿ, ಆಕೆಯನ್ನು ನೋಡಿದ ಯಾರೂ ಆಕೆಯನ್ನು 'ವೈಯಾರಿ' ಎಂಬ ಒಂದು ಮಾತಿನಿಂದಲ್ಲದೆ ಬೇರೆ ಮಾತಿನಿಂದ ವರ್ಣಿಸುವುದೇ ಸಾಧ್ಯವಿರಲಿಲ್ಲ ಹೀಗೆಂದೇ ಅನುರಾಧೆಯಲ್ಲಿ ಆಧುನಿಕತೆ ಅನ್ವರ್ಥಕವಾಗಿತ್ತು.

"ಅಂತೂ ನಿನ್ನ ಗೆಳತಿ ಒಟ್ಟಿನಲ್ಲಿ, ಬಹಳ ಗಟ್ಟಿಗಳು ಎಂದು ಕಾಣುತ್ತದೆ

—ಆಂ ? ”

“ ಅದೇನು ? ಹಾಗೆ ಕೇಳುತ್ತೀರಿ ? ”

“ ಅಲ್ಲವೆ ? ಯಾರ ಮೇಲೆಯೂ ಅವಲಂಬಿಸದೆ ತನ್ನ ಮಟ್ಟಿಗೆ ತಾನು ಎಂದು ಇರಬೇಕೆನ್ನುತ್ತಾಳೆಂದಮೇಲೆ ? ”

“ ಹೌದು, ಮತ್ತಿನ್ನೇನು ಮಾಡುವುದು ? ಕೈಹಿಡಿದ ಗಂಡಸು ಹೀಗೆ ಕೈಬಿಟ್ಟರೆ ? ”

“ ನನಗೆ ತಿಳಿದಮಟ್ಟಿಗೆ ಈಕೆಯೇ ಹಿಡಿದ ಕೈಯನ್ನು ಬಿಟ್ಟಿರಬೇಕು—”

“ ಸುಮ್ಮನೆ ನೀವು ಏನಾದರೊಂದು ಅನ್ನಬೇಡಿರಿ—”

“ ನನಗೇನು ಗೊತ್ತು ಬಿಡು ಅಲ್ಲ, ಅಂದರೆ—ಇಂಥ ಹೆಂಗಸರನ್ನು ಕಂಡರೆ ನನಗಂತೂ ಬಹಳ ಹೆದರಿಕೆಯಾಗುತ್ತದೆ ! ”

“ ಹೆಂಗಸರನ್ನು ಕಂಡರೆ ಹೆದರಿಕೆಯಾಗುತ್ತದೆಯೆ ? **ನಿಮಗೆ** ? ”

“ ಯಾಕೆ ? **ನನಗೆ** ಎಂದು ಜೋರಾಗಿ ಕೇಳುತ್ತಿದ್ದೀ ? ಅಂತೂ ನನ್ನ ವಿಷಯದಲ್ಲಿ ಒಳ್ಳೆಯ ಅಭಿಪ್ರಾಯವನ್ನೇ ಬೆಳಸಿಕೊಂಡಿದ್ದೀ ಎಂದ ಹಾಗೆ ಆಯಿತು—”

“ ಹೌದು ಮತ್ತೆ ! ಹಗಲು ಹನ್ನೆರಡು ಗಂಟೆ ಹೆಂಗಸರ ಮಧ್ಯದಲ್ಲಿಯೆ ಹೊತ್ತು ಕಳೆಯುತ್ತೀರೆಂದಮೇಲೆ ಹೆದರಿಕ ಹೇಗೆ ಅಂದೆ—”

“ ಅಂದರೆ ? ಫಿಲ್ಮ್ ಕಂಪನಿಯೆಂದರೆ ಸ್ತ್ರೀಮಲೆಯಾಳವೆ ? ಅಲ್ಲಿ ಬರೀ ಹೆಂಗಸರೇ ಇರುತ್ತಾರೆಂದುಕೊಂಡಿದ್ದೀಯಾ ? ”

“ ಮತ್ತೆ ಯಾರಿದ್ದರೂ ಮುಖ್ಯ ಆಟ ಅವರದೇ—”

“ ಹೌದೆ ? ನೀನು ಎಲ್ಲಿಯಾದರೂ ಒಂದು ಕಂಪನಿಗೆ ಡೈರೆಕ್ಟರ್ ಆದರೆ—”

“ ಹೆಂಗಸು ಡೈರೆಕ್ಟರ್ ಆಗಬೇಕಾದದ್ದೇ ಇಲ್ಲ. ಆಕೆ ಯಾವಾಗಲೂ ಡೈರೆಕ್ಟರ್—”

“ ಮನೆಯಲ್ಲಿರಬಹುದು. ಆದರೆ ಫಿಲ್ಮ್‌ನಲ್ಲಿ ಸಾಧ್ಯವಿಲ್ಲ ! ”

“ ಅದೇನೂ ಹೇಳಬೇಡಿರಿ. ನಮಗೇನು ಗೊತ್ತಿಲ್ಲವೆ ? ನಿಮ್ಮ ಕಂಪನಿಯಲ್ಲಿಯ ಕತೆಗಳನ್ನು ನೀವೇ ಹತ್ತು ಬಾರಿ ಹೇಳಿದ್ದೀರಿ—”

“ ಅದು ಹೋಗಲಿ. ನಿನ್ನ ಫ್ರೆಂಡ್ ಹೇಗಿದ್ದಾಳೆ ? ”

" ಹೇಗಿದ್ದಾಳೆ ಅಂದರೆ ? "

" ನೋಡಲಿಕ್ಕೆ—ಒಳ್ಳೆ ಹಾವಿನ ಹಾಗೆ ಇರಬೇಕಲ್ಲವೆ ? "

" ಸರಿ ನೀವೇನೊ ನನ್ನನ್ನು ಸಿಟ್ಟಿಗೆಬ್ಬಿಸಬೇಕೆಂದು ಹಟ ಹಿಡಿದಂತೆ ಕಾಣುತ್ತದೆ."

" ನೀನು ಏಳುವುದಿಲ್ಲವಲ್ಲ! ಅಲ್ಲದೆ ನಾನು ಅಂದದ್ದಾದರೂ ಏನು ? ಹಾವು ಚೆಂದಾಗಿರುವುದಿಲ್ಲವೆ ? "

" ನೋಡಲಿಕ್ಕೆ ಚೆಂದಾಗಿರುತ್ತದೆ—ದೂರದಿಂದ ! "

" ಅದಕ್ಕೇ ನಾನು ಹೇಳುವುದು ಹೆಂಗಸನ್ನು ಯಾವಾಗಲೂ ನೋಡಬೇಕಾದದ್ದು ದೂರದಿಂದಲೆ ಎಂದು ! "

" ಹೌದು, ಹೌದು ಯಾರು ಹೇಳಿದ್ದರು, ಸಮೀಪ ಬರಲಿಕ್ಕೆ ? "

" ಯಾರು ಹೇಳಿದ್ದರೆ ? ಯಾರವರು ಸಮೀಪ ಬಂದವರು ಮೊದಲು ? ಚೆನ್ನಾಗಿ ಜ್ಞಾಪಿಸಿಕೊ, ಚೆನ್ನಾಗಿ ಜ್ಞಾಪಿಸಿಕೊ, ಅಂದೆ—"

" ಸಾಕು, ಸಾಕು ! ಇದೆಲ್ಲ ನನಗೆ ಗೊತ್ತು ! "

ಹೀಗೆಂದು ಮತ್ತೆ ಅದೇ ವೈಯ್ಯ ಮಣಿತ, ಅದೇ ವೈಯಾರ ! ಚಿತ್ರಪಟ ತಾರೆಯರ ಭಾವವಿನ್ಯಾಸಗಳನ್ನು ನೋಡಿ ನೋಡಿ ಆವಟನಿಗೆ ಅಭ್ಯಾಸವಾಗಿ ಹೋಗಿರಬೇಕು ಅಂತೆಯೆ ಆತನಿಗೆ ಇದಾವುದೂ ಕೃತಕವಾಗಿ ಕಾಣುತ್ತಿರಲಿಲ್ಲವೆಂದು ಕಾಣುತ್ತದೆ.

ಇದೆಲ್ಲ ನಡೆದದ್ದು ಮೋಹಿನಿ ಬರುವುದಕ್ಕೆ ಮೊದಲು ಆಕೆ ಬಂದಿಳಿದ ಮೇಲೆ ಯಾವ ಮಾತಿಗೂ ಅವಕಾಶವಿರಲಿಲ್ಲ ಇತ್ತೀಚಿನ ವಾರದಲ್ಲಿ ಆಪಟನಿಗೆ ಸ್ಟುಡಿಯೋ ಕೆಲಸವೂ ಅಧಿಕವಾಗಿತ್ತು ಅಲ್ಲದೆ ಮನೆಯಲ್ಲಿದ್ದ ಕೆಲವೇ ಸಂದರ್ಭಗಳಲ್ಲಿ ಮೋಹಿನಿಯನ್ನು ನೋಡಿ—ಬಂದು ನಾಲ್ಕೇ ದಿನಗಳಾಗಿದ್ದರೂ ಅನುರಾಧೆ ಮತ್ತು ಮೋಹಿನಿ ಅನ್ಯೋನ್ಯವಾಗಿದ್ದುದನ್ನು ನೋಡಿ—ಮೋಹಿನಿ ತಮ್ಮ ಜೊತೆಯಲ್ಲಿರುವ ವಿಷಯವನ್ನು ಕುರಿತಾಗಲಿ ಅದರಿಂದುಂಟಾಗಬಹುದಾದ ತೊಂದರೆಗಳನ್ನು ಕುರಿತಾಗಲಿ ಹೆಚ್ಚಾಗಿ ಯೋಚಿಸಿದ್ದಿಲ್ಲ ಆದರೂ ಸಮಯ ಸಿಕ್ಕಾಗ ಅನುರಾಧೆಯನ್ನು ಪೀಡಿಸಲಿಕ್ಕೆಂದು ಬೇಕೆಂತಲೆ ಹೇಳುತ್ತಿದ್ದ :

" ಅಂತೂ ನೀವಿಬ್ಬರೂ ಹರಟೆ ಹೊಡೆಯುವುದನ್ನು ನೋಡಿದರೆ ನಾನೇ ಪರಕೀಯನಾದಂತಾಗಿದೆ ! "

ಇಂದು ಮುಂಜಾನೆಯೂ ಅಂಥದೇ ಮಾತು ನಡೆದಿತ್ತು. ಮೋಹಿನಿ ಅದೇ ಎದ್ದು ಮುಖ ತೊಳೆದಿದ್ದಳು. ಆಪಟೆ ಕೆಲಸಕ್ಕೆ ಹೊರಟು ನಿಂತಂತಿತ್ತು. ಆತ ಅನ್ನುತ್ತಿದ್ದ.

" ವೇಳೆ ಹೇಗೆ ಕಳೆಯುವುದೆ ? ನಿಮಗೇನು ? ಇದ್ದೇ ಇದೆಯಲ್ಲ, ಹರಟೆಯ ಕಾರ್ಯಕ್ರಮ ! "

" ಹೌದೆ ? ನೀವು ಮನೆಯಲ್ಲಿಲ್ಲದಾಗ ನಾವು ಬರೀ ಹರಟೆ ಹೊಡೆಯುತ್ತೀ ವೆಂದುಕೊಂಡಿದ್ದೀರೇನು ? "

" ನನಗೇನು ಗೊತ್ತು—ನಾನು ಮನೆಯಲ್ಲಿಲ್ಲದಾಗ ನೀವು ಏನೇನು ಮಾಡುತ್ತೀರಿ ಎಂಬುದು ? "

ತನ್ನ ಕೋಣೆಯಲ್ಲಿಂದಲೇ ಕೇಳುತ್ತಿದ್ದ ಮೋಹಿನಿಗೆ ಆಶ್ಚರ್ಯ ! ಈ ಅನುರಾಧೆ ತನ್ನ ಗಂಡನ ಜೊತೆಯಲ್ಲಿ ಯಾವಾಗಲೂ ಹೀಗೆಯೆ ಹೇಗೆ ಮಾತನಾಡುತ್ತಾಳೆ ? ಆಪಟೆಯಾದರೂ ಹೀಗೆಯೆ ! ಯಾವುದೇ ಒಂದು ವಿಷಯವನ್ನಾದರೂ ಕುರಿತು ಇವರಿಬ್ಬರೂ ಗಂಭೀರವಾಗಿ ಮಾತನಾಡುತ್ತಿರ ಬಹುದೆ ? ಬಾಳುವೆ ಅನುರಾಧೆಗೆ ಒಂದು ಆಟವಾದಂತಿತ್ತು. ಯಾಕಿರಬಾರದು ? ಎಲ್ಲವೂ ಅನುಕೂಲವಾಗಿದೆ, ಗಂಡನೂ ಅಂಥವನೇ—ಎಂದಮೇಲೆ ಯಾಕೆ ಸುಖವಾಗಿ ಇರಬಾರದು ? ಆದರೆ ಹಗಲು ಹನ್ನೆರಡು ಗಂಟೆಯೂ ಹಲ್ಲು ಕಿರಿಯುತ್ತಲೆ ಇದ್ದರೆ ಸುಖವಾಗಿದ್ದ ಹಾಗೆಯೆ ? ಹಾಗಾದರೆ ಸುಖವಾಗಿರುವು ದೆಂದರೇನು ? ಯೋಚನೆ ಎಲ್ಲೆಲ್ಲಿಯೋ ಓಡಿತು. ಆಪಟೆನ ದನಿ ಮತ್ತೆ ಕೇಳಿಸಿತು .

" ಹಾಗಿದ್ದರೆ ನಿನ್ನ ಮಧ್ಯಾಹ್ನದ ಕಾರ್ಯಕ್ರಮ ಏನಾದಂತಾಯಿತು ? "

" ಆಗುವುದೇನು ? ಆಗಲೆ ಹೇಳಿದೆನಲ್ಲ—ಕಾರಿಲ್ಲದಿದ್ದರೆ ನಾನಂತೂ ಬರುವುದಿಲ್ಲ ! "

" ಭಾರಿ ಆಯಿತು ನಿನ್ನದೂ. ಕಾರಿಲ್ಲದಿದ್ದರೆ ಕಾಲಿಲ್ಲವೆ ನಿನಗೆ ? "

" ನಿಮಗಿಲ್ಲವೇನೊ ! "

" ನನಗಿವೆ. ಆದರೆ ನನಗೆ ಕೆಲಸದ ಅವಸರವೂ ಇದೆ ! "

" ಅವಸರವಿದ್ದರೆ ಹೊರಟುಹೋಗಿರಿ. ಕಾರು ಮಾತ್ರ ಕಳಿಸಿಕೊಡಿರಿ. ಅಂದರೆ ಇಬ್ಬರೂ ಬರುತ್ತೇವೆ ! "

" ಇಬ್ಬರೂ ?—"

" ಹೌದು ಯಾಕೆ ? "

" ಅವರು ಬರುವುದನ್ನು ಹೇಳಿರಲೇ ಇಲ್ಲ. ಅದಕ್ಕೆಂದೆ—"

" ಹಾಗೆ ನೋಡಿದರೆ ಆಕೆಯನ್ನು ನಾನು ಇನ್ನೂ ಕೇಳಿಯೇ ಇಲ್ಲ ಆದರೂ ಬರಬಹುದು—" ಮೋಹಿನಿಗೆ ಮತ್ತೆ ಯೋಚನೆಯಾಯಿತು, ಅನುರಾಧೆ ಮಾತನಾಡುತ್ತಿರುವ ವಿಷಯ ಯಾವುದು ಎಂದು ಎಲ್ಲಿಗೋ ಹೋಗುವ ವಿಷಯವಿದ್ದಿತು ನಿಜ, ಆದರೆ ಯಾವಾಗ ? ಎಲ್ಲಿಗೆ ? ಎಂಬುದು ಯಾವುದೂ ತಿಳಿಯಲಿಲ್ಲ

" ನಾಲ್ಕು ಗಂಟೆಗೆ ಬರೋಣವೆ ? "

" ಕಾರ್ ಯಾರು ಡ್ರೈವ್ ಮಾಡುತ್ತಾರೆ ? "

" ಸಂಬಳವಿಲ್ಲದ ಡ್ರೈವರ್ ಒಬ್ಬರು ಇದ್ದಾರೆ, ಅವರು ! "

" ಅವರಿಗೆ ಬಿಡುವಿಲ್ಲ ಕೆಲಸ ಬಹಳವಿದೆ ನೋಡುತ್ತೇನೆ—"

" ನೋಡುವುದಿಲ್ಲ, ಯಾವುದೂ ಇಲ್ಲ ! "

" ಇವೊಳ್ಳೆಯ ಬಲವಂತ ವೇಳೆ ಸಿಕ್ಕದಿದ್ದರೆ ಏನು ಮಾಡಲಿ ? "

" ಅಂದರೆ ಹೊರಗೆ ಹೋಗುವುದೇ ತಪ್ಪುತ್ತದೆ ಅಲ್ಲವೆ ? "

" ಹಾಗಲ್ಲ ಮಹಾರಾಯಿತಿ ! ನಾನೇ ಬಂದು ಕರೆದುಕೊಂಡು ಹೋಗು ತ್ತೇನೆ ಆಯಿತೆ ? "

" ಏನದು ಆಗುವುದು ? "

" ನಿನ್ನ ಜೊತೆಯಲ್ಲಿ ಮಾತನಾಡುತ್ತ ನಿಂತರೆ—"

ಎಂದವನೆ ಆಪಟೆ ಕೆಳಗಡೆ ಇಳಿದು ಹೋದ ಆತ ಕೆಳಗೆ ಹೋಗಿ ಕಾರ್ ಹೊರಡಿಸುವವರೆಗೂ ಅನುರಾಧೆ ಗ್ಯಾಲರಿಯಿಂದ ನೋಡುತ್ತಲೇ ಇದ್ದಳು ಎರಡು ಮೂರು ಸಲ ' ಬಾಯ್, ಬಾಯ್ ' ಆಯಿತು ಆಕೆಯ ಆ ಬೀಳ್ಕೊಡುವಿಕೆಯ ರೀತಿಯನ್ನು ನೋಡಿದರೆ ಆಪಟೆ ಕನಿಷ್ಠ ಪಕ್ಷ ಒಂದೆರಡು ವರ್ಷ ಪರದೇಶ ಪ್ರಯಾಣಕ್ಕೆ ಹೊರಟಂತೆ ಇದ್ದಿತು. ವ್ಯತ್ಯಾಸವಿಷ್ಟೆ. ಆ ಬೀಳ್ಕೊಡುವಿಕೆಯಲ್ಲಿ ವೇದನೆ ಇರಲಿಲ್ಲ, ಒನಪು ಮಾತ್ರ ಇದ್ದಿತು !

ಕಾರು ಕಣ್ಣುಮರೆಯಾಗುತ್ತಲೆ ಅನುರಾಧೆ ಒಂದು ಕುಣಿತದ ರೀತಿ ಯಲ್ಲಿ ಹಿಂದಿರುಗಿದಳು. ಆಚೆಯ ಕಿಟಕಿಯೊಳಗಿಂದ ಮೋಹಿನಿ ಕೋಣೆ

ಯಲ್ಲಿದ್ದುದನ್ನು ನೋಡಿ,

"ಏನೇ ಮೋಹಿನಿ, ಊರಲ್ಲಿಯಾದರೂ ಇದ್ದೀಯಾ? ಎರಡು ದಿನವಾಯಿತು, ನೋಡುತ್ತಿದ್ದೇನೆ ಒಂದೂ ಸುದ್ದಿಯಿಲ್ಲ, ಸಮಾಚಾರವಿಲ್ಲ—ಮಾಡುತ್ತಿರುವೆಯಾದರೂ ಏನು?" ಎಂದು ಕೇಳಿದಳು.

ಮೋಹಿನಿ ಬಾಗಿಲನ್ನು ತೆರೆದಳು.

"ಏನಿರಬೇಕು ಸುದ್ದಿ? ನನ್ನ ಮಟ್ಟಿಗೆ ಇದ್ದೇನೆ—".

"ಯಾಕೆ, ಬಹಳ ಮೆತ್ತಗಾಗಿ ಇದ್ದೀ? ನಿನ್ನೆ ರಾತ್ರಿಯೂ ನಾವು ಬರುವ ಹೊತ್ತಿಗೆ ಮಲಗಿಬಿಟ್ಟಿದ್ದೆ—"

"ಹೌದು. ಮತ್ತಿನ್ನೇನು ಮಾಡುವುದು? ಹನ್ನೊಂದು ಗಂಟೆಯ ವರೆಗೆ ಕಾದೆ. ಆಮೇಲೆ ದೀಪ ಆರಿಸಿದೆ ಮುಂದೆ ಅರ್ಧ ಗಂಟೆ ಎಚ್ಚರವಾಗಿದ್ದೆ"

"ಹುಂ ನಿನ್ನೆ ತಡವಾಯಿತು ನಾವು ಬಂದಾಗ ಹನ್ನೆರಡೂವರೆ ಆಗಿರಬೇಕು."

"ಹೌದೆ? ಅಷ್ಟು ಹೊತ್ತು ಎಲ್ಲಿಗೆ ಹೋಗಿದ್ದೆ?"

"ನಿನ್ನೆ ಶನಿವಾರ ಶನಿವಾರ ರಾತ್ರಿ ಕ್ಲಬ್‌ನಲ್ಲಿ ಏನಾದರೂ ವಿಶೇಷ ಇದ್ದೇ ಇರುತ್ತದೆ. ಅದು ಹೋಗಲಿ, ನೀನು ಏನು ಮಾಡಿದೆ? ನಿನ್ನೆ ಇಡೀ ದಿನ ನಿನ್ನ ಭೆಟ್ಟಿ ಇಲ್ಲ ಮಾಡುತ್ತಿರುವೆಯಾದರೂ ಏನು?"

"ಏನು ಮಾಡಲಿ? ಶಾಲೆಯಲ್ಲಿಯ ಕೆಲಸವೂ ಈಗ ಪ್ರಾರಂಭವಾಗಿದೆ, ಅದು ಇದು ಎಂದು. ಏನಾದರೂ ಓದಬೇಕೆಂದರೆ ಮನಸ್ಸು ಹಿಡಿಯಲಿಲ್ಲ ನಿನ್ನೆ ಸಾಯಂಕಾಲವಂತೂ ತೀರ ಬೇಸರವಾಗಿ ಬಿಟ್ಟಿತು. ಸುಮ್ಮನೆ ಕುಳಿತಾದರೂ ಏನು ಎಂದು ಪೇಟೆಯವರೆಗೆ ಹೋಗಿ ಬಂದೆ—"

ಅದೇಕೋ ವಸಂತನ ವಿಚಾರವನ್ನು ಅನುರಾಧೆಗೆ ಹೇಳುವ ಮನಸ್ಸಾಗಲಿಲ್ಲ. ಅನುರಾಧೆ ಎಂದಳು.

"ನನಗೆ ಗೊತ್ತು ನಿನಗೆ ತುಂಬ ಬೇಸರವಾಗಿರಬೇಕು ಎಂದು. ನಿನ್ನೆ ನಿನ್ನನ್ನಾದರೂ ಕ್ಲಬ್ಬಿಗೆ ಕರೆದೊಯ್ಯೋಣ ಅಂದುಕೊಂಡಿದ್ದೆ. ಆದರೆ—"

"ಯಾಕೆ? ನೀನು ಒಂದು ಮಾತು ಹೇಳಿದ್ದರೆ—"

"ನಾನು ಹೇಳುವುದೇನೊ ಸರಿ. ಅಷ್ಟು ಮಾಡಬಹುದಿತ್ತು. ಆದರೆ ನಿನ್ನೆ ಶನಿವಾರವಾದ್ದರಿಂದ—"

" ಅಂದರೆ ?—"

" ಶನಿವಾರ ಕ್ಲಬ್ಬಿನಲ್ಲಿ 'ಸೋಶಿಯಲ್ ಈವ್‌ನಿಂಗ್' ಆದ್ದರಿಂದ ಯಾರು ಬಂದರೂ 'ಜೊತೆಯಾಗಿ'ಯೇ ಬರಬೇಕು, ನಿನ್ನನ್ನು ನಾನು ಬರಹೇಳಿದರೆ ನಿನಗೆ ಜೊತೆಯನ್ನೂ ನಾನು ಹುಡುಕಿ ಕೊಡಬೇಕು—"

ಎಂದು ಅನುರಾಧೆ ನಕ್ಕಳು ಆ ನಗುವಿನ ಅರ್ಥ ಮೋಹಿನಿಗಾಯಿತು. ಆದರೆ ಮನಸ್ಸು ಆ ನಗುವಿನ ಹಿಂದೆ ಅಡಕವಾದ ಸಲಿಗೆಯ ಕಡೆಗೆ ಒಲಿಯಲಿಲ್ಲ ಅದಕ್ಕೆಂದೇ ಹೇಳಿದಳು

" ಹೀಗೋ ? ಹಾಗಿದ್ದರೆ ನೀನು ನನ್ನನ್ನು ಕರೆಯದಿದ್ದುದೇ ಸರಿಯಾಯಿತು "

" ಕರೆಯದಿದ್ದುದೆ ಸರಿಯೆ ? ಈ ಹೊತ್ತಾದರೂ ಬರುತ್ತೀಯೊ ಇಲ್ಲವೊ ಹಾಗಿದ್ದರೆ ? ನೀನು ಬರುವಿ ಎಂದು ಆಗಲೆ ಹೇಳಿಬಿಟ್ಟಿದ್ದೇನೆ ಇವರಿಗೆ ನಿನಗೆ ಕೇಳಿಸಲಿಲ್ಲವೆ ? "

" ನಿಮ್ಮ ಮಾತನ್ನು ನಾನು ಕೇಳಬೇಕೆ ನಿಂತುಕೊಂಡು ? ಏನೋ ಒಳ್ಳೆ ಸರಸ ನಡೆದಿತ್ತು ಇಷ್ಟೇ ಗೊತ್ತಾಯಿತು "

" ಸರಸವೇನು ಬಂತು ? ಇಬ್ಬರ ನಡುವೆ ಒಂದೇ ಕಾರ್ ಅವಕ್ಕಾಯೇ ಬರುವುದು ಯಾವಾಗಲೂ ಕಾರು ಬಂದರೆ ಬರುತ್ತೇನೆ ಎಂದೆ "

" ಆದರೆ ಎಲ್ಲಿಗೆ ? ಅದನ್ನೇ ಹೇಳದೆ, ನನ್ನನ್ನೂ ಕೇಳದೆ—"

" ಇಂದೇನೂ 'ಸೋಶಿಯಲ್' ಇಲ್ಲ ಇಷ್ಟೇಕೆ ಗಾಬರಿ ನಿನಗೆ ? "

" ಏನೇ ನಿನ್ನ ಈ ಸೋಶಿಯಲ್ ಅಂದರೆ ? "

" ಏನೂ ಇಲ್ಲ. ಪ್ರತಿ ಶನಿವಾರ ನಾಲ್ಕು ಜನ ಸುಖವಾಗಿ ಕುಳಿತು ಊಟ ಮಾಡುತ್ತೇವೆ ನಕ್ಕು ನಲಿದು ಹರಟೆಹೊಡೆಯುತ್ತೇವೆ ಯಾರಿಗೂ ಸಂಕೋಚವಿರಬಾರದೆಂದು ಆ ದಿನ 'ಜೊತೆ' ಇಲ್ಲವೆ ಯಾರೂ ಬರಕೂಡದೆಂದು ನಿಯಮ ಮಾಡಿಕೊಂಡಿದ್ದೇವೆ ಅಷ್ಟೆ "

" ಇಷ್ಟೇನೆ ? ಅದಕ್ಕೆ ಇಷ್ಟೊಂದು ಗೂಢ ಯಾಕೆ ? "

" ಗೂಢ ಏನು ಬಂತು ! ಗೂಢ ಇಲ್ಲದಿದ್ದರೂ ಒಂದು ವಿಶೇಷವಿರುತ್ತದೆ, ಆ ದಿನ—"

" ವಿಶೇಷ ಏನು ? "

" ಒಂದಿಷ್ಟು ' ಮುಕ್ತವಾದ ವಾತಾವರಣ 'ವಿರಬೇಕೆಂದು ಬೇರೆಯಾದ ಏರ್ಪಾಡೂ ಇರುತ್ತದೆ! "

ಎಂದು ಅನುರಾಧೆ ಕಿಲಕಿಲನೆ ನಕ್ಕಳು. ಮೋಹಿನಿಗೆ ಪೂರ್ತಿಯಾಗಿ ಅರ್ಥವಾಗಲಿಲ್ಲ

" ಬೇರೆಯಾದ ಏರ್ಪಾಡೆಂದರೆ ? "

" ಮತ್ತೇನೂ ಇಲ್ಲ ಮನಸ್ಸು ಒಂದಿಷ್ಟು ಹಗುರಾಗಿರಲಿಕ್ಕೆ ಔಷಧ! ಆದರೆ ತೆಗೆದುಕೊಳ್ಳಲೇಬೇಕೆಂಬ ಒತ್ತಾಯವೇನೂ ಇಲ್ಲ ಬೇಕಾದವರು ತೆಗೆದುಕೊಳ್ಳಬಹುದು "

" ನೀನು ಎಂದಾದರೂ ತೆಗೆದುಕೊಂಡಿದ್ದೀಯಾ ? "

" ಸರಿ. ಅದೇನು ದೊಡ್ಡ ಮಾತು ಎಂದು ಈ ಪರಿ ಕಣ್ಣು ಅರಳಿಸಿ ಕೇಳುತ್ತಿದ್ದೀ ? ನಾನಂತೂ ಉಳಿದ ದಿನ ಕ್ಲಬ್ಬಿಗೆ ಹೋದರೂ ಸರಿ, ಹೋಗ ದಿದ್ದರೂ ಸರಿ, ಸೋಶಿಯಲ್ ಎಂದಿಗೂ ತಪ್ಪಿಸುವುದಿಲ್ಲ! ಮನಸ್ಸು ಹೇಗೆ ಹಗುರಾಗಿ ಹಕ್ಕಿಯಾಗಿರುತ್ತದೆ. ಓಹ್! ಒಂದು ದಿನವಾದರೂ ನೀನು ಬರಲೇಬೇಕು—"

" ಬೇಡ ಮಹಾರಾಯಿತಿ! ಇನ್ನೂ ನಾಲ್ಕು ದಿನ ಬದುಕಿರಬೇಕಾಗಿದೆ ನನಗೆ—ತಲೆ ಎತ್ತಿ! "

" ಅಷ್ಟು ಬಿಗಿಯಾಗಿ ತಲೆ ಎತ್ತಿ ಹಿಡಿಯುವುದರಲ್ಲೇನೂ ಸುಖವಿಲ್ಲ— ಹೆಂಗಸಿಗೆ! ಮನಸ್ಸು ಹಗುರಾಗಿ, ತಲೆ ಭಾರವಾಗಿ ಇನ್ನೊಬ್ಬರ ಎದೆಯ ಮೇಲೆ ಅದು ತಾನಾಗಿಯೇ ಒಲಿದು ಬೀಳುವಂತಾದಾಗ ಹೆಣ್ಣಿನ ಕಣ್ಣೆದುರಿಗೆ ಸ್ವರ್ಗ ಕುಣಿಯುತ್ತದೆ ಪ್ರಪಂಚವೇ ಆಕೆಯ ಕಾಲ ಕೆಳಗೆ ಮಣಿಯುತ್ತದೆ! "

" ಆಯಿತು ನಿನ್ನ ಮಾತು ಕೇಳಿದರೆ ತಲೆ ಕೆಳಗಾಗಿ ಕಾಲು ಮೇಲಾ ಗುವುದೊಂದೇ ಬಾಕಿ! "

" ಏನಾಗುತ್ತದೆಯೊ! ನೀನೇನೊ ಇತ್ತೀಚೆಗೆ ಬಹಳ ಗಂಭೀರವಾಗಿ ಬಿಟ್ಟಿದ್ದೀ ಆದರೆ ಒಂದು ಮಾತನ್ನು ಹೇಳುತ್ತೇನೆ ಕಳೆದ ಕಾಲ ಬರುವುದಿಲ್ಲ ಸುಖವಾಗಿರಬೇಕಾದ ವಯಸ್ಸು ಇದು. ನಾಳೆ ಮುದುಕಿಯಾದೆಯೆಂದರೆ— ಮುದುಕಿಯಾಗುವುದೂ ಬೇಡ—ಈ ಹರೆಯ ಕಳೆದರೆ ಸಾಕು. ಯಾರು ಕೇಳುತ್ತಾರೆ ? "

" ಸರಿ. ಅಂತೂ ತತ್ವಜ್ಞಾನ ಗಟ್ಟಿಮುಟ್ಟಾಗಿದೆ ನಿನ್ನದು. ಆದರೆ ನನಗೇಕೊ—"

" ನನ್ನ ತತ್ವಜ್ಞಾನ ಅನ್ನುತ್ತೀಯಲ್ಲವೆ? ನೀನಾದರೂ ಏನು ಮಾಡ ಬೇಕು ಅನ್ನುತ್ತಿದ್ದೀ? ಅದನ್ನಾದರೂ ಹೇಳಬಾರದೆ?"

ಮೋಹಿನಿಗೆ ನಿಜವಾಗಿಯೂ ಯೋಚನೆಯಾಯಿತು ಬದುಕಿನಲ್ಲಿಯ ಸುಖ ತನಗಾದರೂ ಬೇಡವಾಗಿದೆಯೆ? ಅನುರಾಧೆಯ ದಾರಿ ಒಂದು ದೃಷ್ಟಿ ಯಿಂದ 'ತೀವ್ರ'ವಾದುದೆಂದು ತೋರಿತು ಆದರೆ ಆಕೆ ಹೇಳುವ ಮಾತು ಸುಳ್ಳಾಗಿರಲಿಲ್ಲ ಸುಖವಾಗಿರಬಹುದಾದ ಕಾಲದಲ್ಲಿ ತನಗೆ ಆಸ್ಪದವಿಲ್ಲದೆ ಬರಡು ಜೀವನ ಸಾಗಿಸಬೇಕಾಗಿ ಬಂದುದಕ್ಕಾಗಿ ಒಂದು ಕ್ಷಣ ಮನಸ್ಸು ವ್ಯಥೆ ಗೊಂಡಿತು ಆದರೆ ಏನು ಮಾಡಲಿಕ್ಕಿದೆ? ಮುಂದಿನದು ಯಾವುದೂ ನಿಶ್ಚಿತ ವಾಗಿ ಕಣ್ಣೆದುರಿಗೆ ಕಾಣುತ್ತಿರಲಿಲ್ಲ ಚಳಿಗಾಲದ ಬೆಳಗಿನಲ್ಲಿ ಒಂಬತ್ತು ಗಂಟೆ ಯಾಗಿ ಹೋದರೂ ಮುಸುಕಿದ ಮಂಜಿನಲ್ಲಿ ದಾರಿ ನಡೆಯುವವನಿಗೆ ಹತ್ತು ಅಡಿ ಆಚೆ ಏನಿದೆ ಎಂಬುದು ತಿಳಿಯದೆ, ದಾರಿ ಇದೆ ಎಂಬುದನ್ನು ಮಾತ್ರ ನಂಬಿಕೊಂಡು ನಡೆಯುತ್ತಿರುವ ದಾರಿಗನಂತಾಯಿತು, ಮೋಹಿನಿಯ ಮನಸ್ಸು. ಅನುರಾಧೆಯ ಪ್ರಶ್ನೆಗೆ ನೇರವಾದ ಉತ್ತರವನ್ನು ಹೇಳುವದು ಸುಲಭಸಾಧ್ಯ ವಾಗಲಿಲ್ಲ ಆವಳೆಂದಳು, ನೊಂದ ದನಿಯಲ್ಲಿ

" ನಾನೇನು ಹೇಳಲಿ, ಅನುರಾಧಾ? ನನ್ನ ವಿಷಯ ನನಗೇ ತಿಳಿಯದ ಹಾಗಿದೆ—ಒಂದು ದೃಷ್ಟಿಯಿಂದ ಕತ್ತಲೆಯಲ್ಲಿ ಸಾಗುತ್ತಿದ್ದ ಹಾಗಿದೆ ದಾರಿ ಅಸ್ಪಷ್ಟವಾಗಿದೆ ಈ ಕೆಲಸವನ್ನಂತೂ ಹಿಡಿದಿದ್ದೇನೆ ನಿನಗೆ ಯಾವುದು ಗೊತ್ತಿಲ್ಲ? ಒಂದು ಅನ್ಯಾಯದಿಂದ ಪಾರಾಗಿದ್ದೇನೆ ಸುಖವಾಗಿರುವುದು ನನಗೆ ಬೇಡವಾಗಿದೆಯೆ? ಸುಖವಾಗಿರಬೇಕೆಂದೇ ಅಲ್ಲವೆ ನಾನು ಇಲ್ಲಿಗೆ ಬಂದು ತಲಪಿದ್ದು? ತೇಲಿಬಿಟ್ಟ ನಾವೆ ಒಂದು ದಡಕ್ಕೆ ಬಂದಂತಿದೆ ಆದರೆ—"

" ಇದು ಯಾವ ದಡ, ಮೋಹಿನಿ? ಇದರಿಂದ ಯಾವ ಸುಖ ಸಿಕ್ಕ ಬೇಕು? ನಿನ್ನ ಪರಿಸ್ಥಿತಿ ನನಗೆ ಗೊತ್ತು ಆದರೆ ನನ್ನ ಮಟ್ಟಿಗೆ ಇದಾವುದೂ ಅದಕ್ಕೆ ಪರಿಹಾರವಾಗಿ ಕಾಣುವುದಿಲ್ಲ ಸದ್ಯಕ್ಕೇನೊ ಸರಿಯೆ ಆದರೆ ಕೊನೆಯ ವರೆಗೂ—"

" ಯಾರು ಬಲ್ಲರು? ನನ್ನ ಮಟ್ಟಿಗೆ ಮುಂದಿನ ಯೋಚನೆ ಬಗೆಹರಿಯು

ವುದಿಲ್ಲ. ಈಗಲೇ ಅದನ್ನೆಲ್ಲ ಯೋಚಿಸುತ್ತ ಇರುವುದರಲ್ಲಿ ನನಗೆ ಪ್ರಯೋಜನವೂ ಕಾಣುವುದಿಲ್ಲ. ನಾವು ಎಣಿಸುವುದು ಒಂದು, ಆಗುವುದು ಇನ್ನೊಂದು. ಇದುವರೆಗೆ ಹೀಗೆಯೇ ಆಗಿದೆ—" ಎಂದು ಸುಮ್ಮನಾದಳು.

" ಹಾಗಲ್ಲ, ಮೋಹಿನಿ. ಅದೇಕೊ ನೀನು ಇಂದು ಬಹಳ ನಿರಾಶಳಾಗಿ ಮಾತನಾಡುತ್ತಿರುವಿ. ನಿರಾಶಳಾಗಿ ಯಾವ ಪ್ರಯೋಜನವೂ ಇಲ್ಲ ನಿನ್ನ ಮಟ್ಟಿಗೆ ನೀನು ಇರುವುದು ಅನಿವಾರ್ಯ ಆದರೆ ಒಬ್ಬಳಾಗಿಯೆ ಇದ್ದು ಏನು ಮಾಡಿದ ಹಾಗಾಯಿತು ? "

" ಏನು ಮಾಡು ಅನ್ನುತ್ತೀ ? ಬಿಟ್ಟ ದಾರಿಯನ್ನೇ ಬಳಸಬೇಕಾದರೆ ಆ ದಾರಿಯನ್ನು ನಾನು ಬಿಡಲೇಬಾರದಾಗಿತ್ತು "

" ಅದನ್ನಲ್ಲ, ನಾನು ಹೇಳುವುದು ಒಬ್ಬಳೇ ಎಂದರೆ ಇನ್ನಾರ ಸಂಪರ್ಕವೂ ಇಲ್ಲದೆ ಇರುವುದು ಆ ಅರ್ಥದಲ್ಲಿ ಹೇಳಿದೆ ಅದರಿಂದ ನಿನಗೆ ಸುಖವೂ ಇಲ್ಲ, ಪ್ರಯೋಜನವೂ ಇಲ್ಲ ಎಲ್ಲಿಯೋ ಒಂದು ಮೂಲೆಯಲ್ಲಿ ಬಿದ್ದುಕೊಂಡಹಾಗಿದ್ದು ಎರಡು ಹೊತ್ತು ಹೊಟ್ಟೆಗೆ ಅನ್ನ ತಿಂದರೆ ಏನು ಮಾಡಿದ ಹಾಗಾಯಿತು ? ನಿನ್ನ ಮಟ್ಟಿಗೆ ನೀನು ಇರಬೇಕೆಂಬ ಹಟವನ್ನು ಸಾಧಿಸಬಹುದು. ಆದರೆ ಅದೆಲ್ಲ ಬರಡು ಗೆಲುವು ಮುಖ್ಯವಾಗಿ, ಬದುಕಿನಲ್ಲಿ ಗೆಲುವಿರುವುದಿಲ್ಲ. ಅದಿಲ್ಲದಿದ್ದರೆ ಏನಿದ್ದ ಹಾಗಾಯಿತು ? "

ಅನುರಾಧೆಯ ವಿಚಾರಸರಣಿಯಲ್ಲಿ ತಥ್ಯವಿಲ್ಲದಿಲ್ಲವೆಂಬುದನ್ನು ಮೋಹಿನಿ ಯೋಚಿಸಿ ತಿಳಿಯಬೇಕಾಗಿರಲಿಲ್ಲ ಮುಂಬಯಿಗೆ ಬಂದು ನಾಲ್ಕೇ ದಿನಗಳಾಗಿದ್ದರೂ ಆ ನಾಲ್ಕು ದಿನಗಳ ಅನುಭವವೇ ಈ ಮಾತನ್ನು ಎತ್ತಿ ಹೇಳುವಷ್ಟು ಏಕಾಂತಮಯವಾಗಿದ್ದಿತು. ನಿನ್ನೆ ಸಾಯಂಕಾಲ ವಸಂತ ಸಿಕ್ಕಿರದಿದ್ದರೆ ತಾನಿನ್ನು ಮುಂಬಯಿಯಲ್ಲಿ ಈ ಪರಿಯಾಗಿ ಇರುವುದಾದರೂ ಹೇಗೆ ಎಂದು ಕೇಳಿಕೊಳ್ಳುವಂತಾದ ವಿಚಾರಕ್ಕೆ ಮುಂದೆ ದಾರಿಯೇ ಕಾಣುತ್ತಿರಲಿಲ್ಲ ವಸಂತ ಸಿಕ್ಕಿದ್ದರಿಂದ ಆಗಿನ ಮಟ್ಟಿಗೆ ಮನಸ್ಸು ಗೆಲುವಾಯಿತು ಏಕಾಂತ ಕಳೆಯಿತು ಮನ ಬಿಚ್ಚಿ ಮಾತನಾಡಲು ಅನುವಾಯಿತು ಇದನ್ನೆಲ್ಲ ಯೋಚಿಸಿದಾಗ ಅನುರಾಧೆ ಹೇಳುವುದೂ ಸರಿಯೆ , ಆದರೇನು ಮಾಡುವುದು ? ಬಯಸಿದಂತೆ ಎಲ್ಲವೂ ಎಲ್ಲಿ ನಡೆಯುತ್ತದೆ ? ಮುಂದೆ ಹೇಗಾದರೂ ಆಗಲಿ, ಈಗಿನ ಮಟ್ಟಿಗಂತೂ ಹೀಗೆ ಎಂಬ ಒಂದು ಸಮಾಧಾನದ ಹೊರತು ಬೇರೆಯಾದ ಸಮಾಧಾನ

ಸಾಧ್ಯವಾಗಿ ಕಾಣಿಸಲಿಲ್ಲ ಅಂತೆಯೆ ನಿರ್ವಿಕಾರವಾಗಿ ಹೇಳಿದಳು :

" ಇದ್ದುದರಲ್ಲಿಯೇ ಗೆಲುವನ್ನು ಕಾಣಬೇಕಷ್ಟೆ. ಇಲ್ಲದ್ದಕ್ಕಾಗಿ ಬಾಯಿ ಬಿಟ್ಟರೆ ಏನಾಗಬೇಕು ? "

" ಸರಿ ಬಾಯಿ ಬಿಡಬೇಡ ಬಾಯಿ ಮುಚ್ಚಿಕೊಂಡೇ ಇರು. ಆಯಿತೆ ? ನನ್ನ ಕೂಡ ಆದರೂ ಯಾಕೆ ಈ ಮಾತು ? ಇಕೊ ನಾನು ಹೊರಟೆ—"

ಅನುರಾಧೆಯು ದನಿ ಚೇಷ್ಟೆಯದಾಗಿರದಿದ್ದರೆ ಮೋಹಿನಿ ನೊಂದುಕೊಳ್ಳ ಬಹುದಾಗಿತ್ತು

" ಹೋಗುವಿಯಂತೆ ತಡೆ ಇಂದು ಮಧ್ಯಾಹ್ನದ ವಿಚಾರ ಏನೋ ಅನ್ನುತ್ತಿದ್ದೆಯಲ್ಲ ? "

" ಆದರೇನು ಮಾಡುವುದು ? ಬಾಯಿ ಮುಚ್ಚಿಕೊಂಡೇ ಇರುವವರಿಗೆ— ನನ್ನ ಗೆಳತಿ ಮೂಕ ಎಂದರೆ ನಾನೇನು ಮಾಡಲಿ ? "

" ಅಂದರೆ ಅನ್ನಲಿ, ಎಲ್ಲಿಗೆ ಹೋಗುವುದು ? "

" ಬರುವ ಹಾಗಿದ್ದರೆ ಹೇಳುತ್ತೇನೆ ! "

" ನಾನು ಹೇಳುವ ಮುಂಚೆಯೇ ನೀನು ಎಲ್ಲವನ್ನೂ ಗೊತ್ತುಮಾಡಿ ಕೊಂಡೇ ಇರುವಿ ಹೋಗುವುದಂತೂ ಸರಿಯೆ ಆದರೆ ಎಲ್ಲಿಗೆ ಎಂದು ಕೇಳುವಷ್ಟು ಕುತೂಹಲವನ್ನೂ ತೋರಬಾರದಾಯಿತು. ಎಲ್ಲಿಗೆ ನಾವು ಹೋಗುವುದು ? ಹೇಳಬಾರದೆ ? "

" ಹೋದಮೇಲೆ ತಾನೇ ಗೊತ್ತಾಗುತ್ತದೆ ! " ಎಂದು ವಾಡಿಕೆಯಂತೆ ಅನುರಾಧೆ ತನ್ನ ನಗು ಬೀರಿದಳು

" ಸರಿ, ಹಾಗೇನಾದರೂ ಇದ್ದರೆ ನಾನು ಬರುವುದೇ ಇಲ್ಲ ! "

" ಅದೆಲ್ಲ ನನಗೆ ಗೊತ್ತಿಲ್ಲ ಮಧ್ಯಾಹ್ನ ಇವರು ಬರುತ್ತಾರೆ ಅವರೆದುರಿಗೆ ಹೇಳುವಿಯಂತೆ ! "

" ಎಷ್ಟು ಹೊತ್ತಿಗೆ ಬರುತ್ತಾರೆ ? "

" ಯಾಕೆ ? "

" ಸಿದ್ಧವಾಗಿರಬೇಕಲ್ಲ ಮತ್ತೆ ! "

" ನಾಲ್ಕರ ಸುಮಾರಿಗೆ ಬರಬಹುದು "

" ಹಾಗಿದ್ದರೆ ನಾನು ಮೂರು ಗಂಟೆಗೇ ಮನೆ ಬಿಟ್ಟು ಹೊರಡುತ್ತೇನೆ ! "

" ಹೌದೇ ? ಆಗಲಿ, ನೋಡುವ  ಈಗ ಯಾಕೆ ? "

" ನಿನ್ನದಾದರೂ ಇಷ್ಟು ಹಟ ಯಾಕೆ—ನಾವು ಹೋಗುವುದು ಎಲ್ಲಿಗೆ ಎಂದು ಹೇಳಬಾರದೆಂದು ? "

" ಎಲ್ಲಿಗೂ ಇಲ್ಲ ಮಹಾರಾಯಿತಿ  ಅಷ್ಟೇಕೆ ಗಾಬರಿ ? ಇಂದೇನೂ ಶನಿವಾರವಲ್ಲ ! ಸುಮ್ಮನೆ ಸ್ಟುಡಿಯೋದ ಕಡೆಗೆ ಹೋಗಿ ಬರೋಣ ಎಂದಿದ್ದೆ —ಮನೆಯಲ್ಲಿ ಕುಳಿತಾದರೂ ಏನು ಎಂದು  ಅಲ್ಲದೆ ಇಂದೇನೋ ಒಂದೆರಡು ಒಳ್ಳೆಯ ಶೂಟಿಂಗ್ ಇದೆಯಂತೆ—"

" ಶೂಟಿಂಗ್ ಇದ್ದಾಗ ನಮ್ಮನ್ನು ಒಳಗಡೆ ಬಿಡುತ್ತಾರೆಯೆ ? "

" ಬಿಡುವವರು, ಬಿಡದೆ ಇರುವವರು ಯಾರು ? ನಮ್ಮನ್ನು ಬಿಡದಿದ್ದರೆ—"

" ಓಹೋ ! ಮರೆತೇ ಇದ್ದೆ.  ಹೌದಲ್ಲವೆ ? "

" ಹಾಗಾದರೆ ಬರುವುದು ಎಂದಾಯಿತಲ್ಲವೆ ? ಇಲ್ಲದಿದ್ದರೆ—"

" ನಾನು ಇಲ್ಲ ಅಂದರೆ ನೀನು ಕೇಳುವೆಯಾ ? ನಿನ್ನ ' ಇವರ 'ನ್ನೇ ನೀನು ಕೇಳುವುದಿಲ್ಲ ! "

" ಸಾಕು, ಸಾಕು ! ನಿನ್ನ ಚೇಷ್ಟೆ ! "

ಎಂದವಳೆ ಒಂದೇ ಕುಣಿತದಿಂದೆಂಬಂತೆ ಕೋಣೆಯ ಹೊರಗೆ ಧುಮುಕಿ ತನ್ನ ಮನೆಯನ್ನು ಸೇರಿದಳು. ಯಾವುದೋ ಒಂದು ಚಿತ್ರಪಟದಲ್ಲಿಯ ಹಾಡು ಉತ್ತಾನವಾಗಿ ಆಕೆಯ ಬಾಯಿಂದ ಚಿಮ್ಮಿ ತೂರಿ ತೂರಿ ಬರುತ್ತಿತ್ತು !

೪

ನಾಲ್ಕು ಗಂಟೆಗೆ ಸರಿಯಾಗಿ ಬರುತ್ತೇನೆಂದು ಹೇಳಿದ ಆಪಟೆ ನಾಲ್ಕೂ ಮುಕ್ಕಾಲಾದರೂ ಸುಳಿಯಲಿಲ್ಲ ಅನುರಾಧೆಗೆ ತೀರ ಬೇಸರವಾಯಿತು. ಹತ್ತು ಬಾರಿಯಾದರೂ ಗ್ಯಾಲರಿಯ ವರೆಗೆ ಹೋಗಿ ಕತ್ತು ಚಾಚಿ ಮೂಗು ಮುರಿದು ಬಂದುದಾಯಿತು. 'ಇವರು ಯಾವಾಗಲೂ ಹೀಗೆಯೇ' ಎಂದು ಗೊಣಗಿಯೂ ಆಯಿತು ಹನ್ನೊಂದನೆಯ ಬಾರಿ ಬಂದು ನೋಡಿಯಾಯಿತು ಮದುವೆಯೊಂದರಲ್ಲಿ ಔತಣ ಹೇಳಹೊರಟವರ ಹಾಗೆ ದೊಡ್ಡದಾಗಿ ಉಟ್ಟ ಆಕೆಯ ಹೊಸ ರೇಶಿಮೆಯ ಸೀರೆ ಇಳಿಬಿಸಿಲಿನಲ್ಲಿ ಕಣ್ಣು ಕುಣಿಸುತ್ತಿತ್ತು. ಗಲ್ಲ ತುಟಿಗಳ ಮೇಲಿನ ಬಣ್ಣ ಮೆರೆಯುತ್ತಿತ್ತು ಕೊನೆಗೆ ಮೋಹಿನಿಯ ಕೋಣೆಗೆ ಬಂದು ತಕರಾರು ಹೂಡಿದಳು

"ನೋಡಿದೆಯಾ? ಯಾವಾಗಲೂ ಹೀಗೆಯೆ ಇವರು ನಾವು ಆತುರದಿಂದ ಎಂದು ದಾರಿಕಾಯುತ್ತಿರುವೆವೊ ಅಂದೇ ಇವರು ಹೀಗೆ ಮಾಡುತ್ತಾರೆ—"

"ಏನಾದರೂ ಕೆಲಸದಲ್ಲಿ ಸಿಕ್ಕುಬಿದ್ದಿರಬೇಕು. ಈಗಲಾದರೂ ಏನು ಅಂಥ ಅವಸರ?"

"ಏನೂ ಅವಸರವಿಲ್ಲ. ಅಂತೆಯೇ ನೀನೂ ಯಾವ ಸಿದ್ಧತೆಯೂ ಇಲ್ಲದೆ ಕುಳಿತಿದ್ದೀ."

"ನನ್ನದೇನು ಸಿದ್ಧತೆ? ಒಂದು ಪತ್ತಲ ಉಡಲಿಕ್ಕೆ ಎಷ್ಟು ವೇಳೆ ಬೇಕಾದೀತು?"

"ಮುಖ ಅಷ್ಟು ಬೆಳಗಲಿ—"

"ಮುಖಕ್ಕೇನಾಗಿದೆ? ತೊಳೆದಿದ್ದೇನಲ್ಲ!"

"ಚೆಲುವಾಗಿಯೇ ಇದೆ ಆದರೆ ಪೌಡರ್ ಪೂಜೆಯಷ್ಟಾಗಲಿ"

"ನಾನು ಎಂದಾದರೂ ಪೌಡರ್ ಹಚ್ಚಿದ್ದನ್ನು ನೋಡಿರುವೆಯಾ?"

"ಸಾಕು, ಈ ಮಡಿವಂತಿಕೆ ಏನೇನು ತಲೆಯಲ್ಲಿ ತುಂಬಿಕೊಂಡಿದ್ದೀಯೊ —ಕಾಲೇಜಿಗೆ ಬರುವಾಗ ಪೌಡರಿನಲ್ಲಿ ಮುಳುಗಿ ಏಳುತ್ತಿದ್ದೆ ಈಗೆಲ್ಲಿಂದ ಬಂದಿತು ಈ ವೈರಾಗ್ಯ?"

"ವೈರಾಗ್ಯವಲ್ಲ, ಏನೂ ಅಲ್ಲ ಅದೇಕೊ ಬೇಡವೆನಿಸುತ್ತದೆ."

" ಯಾಕೆ ? ನೋಡುವವರು ಯಾರು ಎಂದೆ ? "

" ಸಾಕು ಬಿಡೆ. ನಿನಗಂತೂ ಯಾವಾಗಲೂ—"

ಕೆಳಗಡೆ ಕಾರು ಬಂದ ಸದ್ದಾಯಿತು. ಅನುರಾಧೆ ಒಂದೇ ನೆಗೆತಕ್ಕೆ ಗ್ಯಾಲರಿಗೆ ಧುಮುಕಿದಳು. ಬಂದವ ತನ್ನ ಪತಿಯೇ ಎಂದು ಮನವರಿಕೆ ಯಾದೊಡನೆ ಕೋಣೆಗೆ ಓಡಿ, ಹುಬ್ಬುಗಂಟಿಕ್ಕಿಕೊಂಡು ಎದುರಿಗಿನ ಸೋಫಾದ ಮೇಲೆ ಬೇಸರದ ಘನಮೂರ್ತಿಯಾಗಿ ಮೈಚೆಲ್ಲಿ ಕಣ್ಣು ಮುಚ್ಚಿದಳು. ಆಪಟೆ ಕೋಣೆಯಲ್ಲಿ ಬಂದಾಗ ಆತನಿಗೆ ಯಾವ ಹೊಸ ದೃಶ್ಯವೂ ಕಾಣಲಿಲ್ಲವಾದ್ದ ರಿಂದ ಆತ ನೇರವಾಗಿ ಮುಖ ತೊಳೆಯಲು ಒಳಗೆ ಹೋದ ಅನುರಾಧೆ ಕಣ್ಣುಬಿಟ್ಟು ಒಮ್ಮೆ ನೋಡಿ, ಆತ ತಿರುಗಿ ಬರುವ ಹೊತ್ತಿಗೆ ಗಟ್ಟಿಯಾಗಿ ಕಣ್ಣು ಮುಚ್ಚಿಕೊಂಡು ನಿದ್ರೆಯನ್ನು ನಟಿಸಿದಳು

" ಏನು ? ಕುಳಿತಲ್ಲಿಯೆ ಬಲವಾಗಿ ನಿದ್ರೆ ಹೊಡೆಯುತ್ತಿದ್ದ ಹಾಗಿದೆ ಯಲ್ಲ ? "

ಎಂದು ಮೊದಲುಮಾಡಿದ. ಅನುರಾಧೆಯ ಕಣ್ಣೆವೆ ಅಲುಗಿತು, ಆದರೆ ತುಟಿ ಮಿಸುಕಲಿಲ್ಲ.

" ಆಯಿತು ಬಿಡು ಒಳ್ಳೆಯದೇ ಆಯಿತು. ಮುಂಜಾನೆ ಹೋದವ ದಣಿದು ಕಂಗಾಲಾಗಿದ್ದೇನೆ. ಹಾಯಾಗಿ ನಾನೂ ಮಲಗಿಬಿಡಬಹುದು "

ಎಂದು ಬೇಕೆಂದೇ ಹೇಳಿದ ಮಾತು ಪರಿಣಾಮಕಾರಿಯಾಯಿತು. ಅನುರಾಧೆಯ ಕಣ್ಣು ಅರಳಿತು ಮುಖ ಮಾತ್ರ ಇನ್ನಷ್ಟು ಬೀಗಿತು

" ಈಗಾಯಿತೇನೊ ನಾಲ್ಕು ಗಂಟೆ ತಮ್ಮ ಗಡಿಯಾರದಲ್ಲಿ ? "

" ಮಧ್ಯಾಹ್ನದ್ದೊ, ರಾತ್ರಿಯದೊ ? ನಿನ್ನ ನಿದ್ರೆ ನೋಡಿದರೆ ರಾತ್ರಿ ಎಂದೇ ಕಾಣುತ್ತದೆ ! "

" ಯಾವುದಾದರೂ ನಿಮಗೇನು ? ಕಾದು ಕಾದು ಸಾಕಾಯಿತು. ಕುಳಿತ ಕಡೆ ಕುಳಿತು ನಿದ್ರೆ ಬಂದಿತು ಮತ್ತಿನ್ನೇನು ಮಾಡುವುದು ? "

" ನಿದ್ರೆ ಬಂದಿತೇ ? "

" ನಿಮಗೂ ಬಂದಿದೆಯಲ್ಲ ಮತ್ತೆ ? "

" ನನ್ನದು ಹಾರಿಹೋಯಿತು—ನಿನ್ನದನ್ನು ನೋಡಿ ! "

ಅಡಿಗೆಯವಳು ಚಹದ ಟ್ರೇ ತಂದಿರಿಸಿದಳು. ಅನುರಾಧೆ ಎದ್ದು

ಕುಳಿತಳು ಆಪಟೆ ಕೇಳಿದ :

"ಇದೇನು ಮೂರು ಕಪ್ಪು ಇದೆಯಲ್ಲ! ಅವರಿಗೂ ಬರಹೇಳಿದ್ದೆಯಾ?"

"ನೀವೇನು—ಆಕೆಯೇನು? ಇಬ್ಬರೂ ಒಂದೇ—ವೇಳೆಯ ವಿಷಯದಲ್ಲಿ!"

ಅಡಿಗೆಯವಳಿಗೆ ಮೋಹಿನಿಯನ್ನು ಕರೆಯಲು ಹೇಳಿಯಾಯಿತು. ಒಂದೆರಡು ನಿಮಿಷದಲ್ಲಿಯೆ ಮೋಹಿನಿ ಬಂದು ಬಾಗಿಲಲ್ಲಿ ತಡೆದಳು. ಆಕೆ ಉಟ್ಟ ತೆಳ್ಳಗಿನ ಬೆಳ್ಳಗಿನ ಪತ್ತಲದ ಮೇಲೆ ಪಶ್ಚಿಮದ ಕಡೆಯಿಂದ ಸೂಸಿ ಬರುವ ಬಿಸಿಲು ಬಿದ್ದು ಅದರ ಪದಿಛಾಯೆ ಕೋಣೆಯನ್ನೆಲ್ಲ ಬೆಳಗಿ, ಆನಟೆಯ ಕಣ್ಣನ್ನು ಸೆಳೆಯಿತು. ನಿಡಿದಾದ ಆ ಮೈಯ ಮಾಟಕ್ಕೆ ಅಂಟಿಕೊಂಡಂತಿದ್ದ ಆ ಪತ್ತಲ, ಅದಕ್ಕೆ ಸರಿಯಾಗಿ ಒಪ್ಪುವಂತೆ ಮೇಲೆ ತೊಟ್ಟ ಕೆಂಪು ಲಿನನ್ ಪೋಲಕ, ಮುಖದ ಮೇಲೆ ಇದ್ದೂ ಇಲ್ಲದಂತಿದ್ದು ಸ್ವಾಭಾವಿಕವಾದ ಬಣ್ಣದ ಬೆಡಗನ್ನೇ ಬೆಳೆಯಿಸಿ ತೋರಿಸುವಂತಿದ್ದ ಪೌಡರಿನ ಛಾಯೆ, ಎಲ್ಲವೂ ಸೇರಿ, ನೋಡಿದ ಯಾರ ಮನಸ್ಸನ್ನೂ ಸೆಳೆಯುವಂತಿದ್ದವು. ಆಪಟೆ ಇಲ್ಲಿಯ ವರೆಗೆ ಆಕೆಯನ್ನು ಇಷ್ಟು ಸಮೀಪದಿಂದ ನೋಡಿರಲಿಲ್ಲವೆಂದೊ, ಅಥವಾ ಮತ್ತೊಮ್ಮೆ ನೋಡಬೇಕೆನಿಸಿತೆಂದೊ ಆಕೆಯನ್ನು ಕಣ್ಣರಳಿಸಿ ನೋಡಿದ ಅನುರಾಧೆ ಕಣ್ಣಸನ್ನೆಯಿಂದಲೇ ಆಕೆಯನ್ನು ಕರೆದು ತನ್ನ ಹತ್ತಿರದ ಕುರ್ಚಿಯನ್ನು ಕೊಂಚ ಸರಿಸಿ ಅಲ್ಲಿ ಕೂಡಬೇಕೆಂದು ಸೂಚಿಸಿದಳು.

ಅನುರಾಧೆಯ ಬೆಡಗಿನ ಮುನಿಸು ಮಾಯವಾಗದ್ದಕ್ಕೆ ಉಪಚಾರದ ರೀತಿಗೆ ಸರಿಯೆಂದೊ, ಇನ್ನಾವ ಕಾರಣಕ್ಕಾಗಿಯೊ ಆಪಟೆ ತಾನಾಗಿಯೇ ಚಹದ ಕಪ್ಪನ್ನು ಎತ್ತಿ ಮೋಹಿನಿಯ ಕೈಗಿರಿಸಿದ ಒಂದೆರಡು ನಿಮಿಷ ಮೌನದಲ್ಲಿಯೇ ಕಳೆಯಿತು. ಅವರ ಮನೆಯಲ್ಲಿಯೇ ಬಂದು ಇರತೊಡಗಿ ನಾಲ್ಕು ದಿನವಾಗಿದ್ದರೂ ಆಪಟೆನ ಜತೆಯಲ್ಲಿ ನೇರವಾಗಿ ಮಾತಾಡುವಷ್ಟರ ಮಟ್ಟಿಗೆ ಮೋಹಿನಿಗೆ ಇನ್ನೂ ಸಂಕೋಚ ಕಳೆದಿರಲಿಲ್ಲ ಏನಾದರೂ ಮಾತನ್ನಾಡಬೇಕೆಂದು ಆಪಟೆಸಿಗೂ ಆತುರ ಕೊನೆಗೆ ಅನುರಾಧೆಯೆ ಮೊದಲು ಮಾಡಿದಳು.

"ಹೀಗೇಕೆ ಸುಮ್ಮನೆ ಕುಳಿತಿರಿ? ಮೂಕದೆವ್ವ ಹಿಡಿದುಕೊಂಡಂತೆ?"

" ಸರಿ ದೆವ್ವ ಯಾರಿಗೆ ಹಿಡಿದಿದೆ ಆಮೇಲೆ ನಿರ್ಣಯ ಮಾಡೋಣ. ಇವರು ಬಂದು ಇಷ್ಟು ದಿನವಾಯಿತು. ಒಂದು ಸಲವಾದರೂ ನಮ್ಮನ್ನು 'ಪರಿಚಯ ಮಾಡಿ 'ಕೊಟ್ಟಿದ್ದೀಯಾ ? "

" ಮನೆಯಲ್ಲಿಯೇ ಇದ್ದವರ ಪರಿಚಯ ಮಾಡಿಕೊಡುವುದೆ ? ಬೇಕಾದಷ್ಟು ಹೇಳಿದ್ದೇನೆ—"

" ಏನೇನು ಹೇಳಿದೆಯೊ ಯಾರು ಬಲ್ಲರು ? " ಎಂದು ಆಪಟೆ ನಕ್ಕ.

ಆ ಮಾತು ತನ್ನ ಬಗ್ಗೆ ಇರಬಹುದೆಂದುಕೊಂಡಿದ್ದ ಮೋಹಿನಿ ಕುರ್ಚಿಯಲ್ಲಿ ಸರಿದಳು

" ಉಪಚಾರದ ಪರಿಚಯವಾಗಬೇಕೆ ? ಹುಂ. ಇವರು ನನ್ನ 'ಇವರು' —ಮಿಸ್ಟರ್—"

" ಅಂದರೆ 'ನಾನು ಸಾಕಿದ ಮಿಕ ಇದು' ಎಂದಲ್ಲವೆ ಅರ್ಥ ? "

ಮೋಹಿನಿಗೆ ನಗು ತಡೆಯದಾಯಿತು

" ಸಾಕು ನಿಮ್ಮ ಚೇಷ್ಟೆ ಯಾರಾದರೂ ಬಂದಾಗ ಒಂದಿಷ್ಟು—"

" ಈಗೇನು ಹೇಳಿದೆ ನಾನು ? ಇದ್ದುದನ್ನೇ ಹೇಳಿದರೆ—"

" ದಯವಿಟ್ಟು ಆ ಮಾತು ನಿಲ್ಲಿಸಿ ? "

ಎಂದವಳೆ ಅನುರಾಧೆ ಆಪಟೆನ ಬಾಯನ್ನು ಕೈಯಿಂದ ಮುಚ್ಚಿಬಿಟ್ಟಳು ಆಪಟೆ ಮಡದಿಯ ಕೈಬೆರಳುಗಳ ಹಿಂದಿನಿಂದಲೇ ಉಸಿರುತ್ತಿದ್ದ

" ನಿಲ್ಲಿಸುತ್ತೇನೆ, ಮಹಾರಾಯಿತಿ ! ಇನ್ನೊಬ್ಬರು ಬಂದಾಗಲಾದರೂ ಒಂದಿಷ್ಟು—"

ಎಂದು ಮೋಹಿನಿಯನ್ನು ನೋಡಿದ. ಆಕೆಯ ತುಟಿಗಳ ಅಂಚಿನಲ್ಲಿ ತಿಳಿನಗೆ ಮಿನುಗುತ್ತಿತ್ತು

" ನೋಡಿದಿರಾ, ಹೇಗಿದೆ ಆಸಾಮಿ ? ನಿಮಗೆ ಈಗಾಗಲೆ ಈಕೆಯ ಪರಿಚಯ ಚೆನ್ನಾಗಿ ಆಗಿರಬೇಕಲ್ಲವೆ ? "

" ನನ್ನ ಪರಿಚಯವನ್ನು ಈಕೆಗೆ ನೀವು ಮಾಡಿಕೊಡುವುದೆ ? "

" ಹಾಗೆ ನೋಡಿದರೆ ನಿನ್ನ ಪರಿಚಯವನ್ನು ಯಾರೂ ಮಾಡಿಕೊಡಬೇಕಿಲ್ಲ. ತಾನಾಗಿಯೆ ಆಗುತ್ತದೆ " ಎಂದು ಆಪಟೆ ನಗು ಸೂಸಿದ.

" ಅಂದರೆ ? "

" ಅಂದರೆ, ರೇಡಿಯೋದ ಪರಿಚಯ ಮಾಡಬೇಕಾಗುತ್ತದೆಯೆ ? "

" ನಾನು ಅಂದರೆ ರೇಡಿಯೊ ಪೆಟ್ಟಿಗೆ—ಇಷ್ಟೇ ಅಲ್ಲವೆ, ನಿಮ್ಮ ಅಭಿಪ್ರಾಯ ? "

" ಹಾಗಲ್ಲ. ನಮ್ಮಲ್ಲಿ ಎರಡು ರೇಡಿಯೊ ಸೆಟ್ಟು ಒಂದು ಬಾಯಿಯವರದು, ಇನ್ನೊಂದು ಬಾಯಿಯವರ ಬಾಯಿಯದು ! "

" ನೋಡಿದೆಯಾ, ಹೇಗೆ ಚೇಷ್ಟೆ ಮಾಡುತ್ತಾರೆ ? " ಎಂದು ಅನುರಾಧೆ

" ಚೇಷ್ಟೆ ಏನು ಇದರಲ್ಲಿ ? ಇದ್ದುದನ್ನು ಹೇಳುತ್ತಿದ್ದೇನೆ. ಒಂದು ರೇಡಿಯೊ ರಾತ್ರಿ ಹನ್ನೊಂದು ಗಂಟೆಗಾದರೂ ನಿಲ್ಲುತ್ತದೆ ಇನ್ನೊಂದು—"

" ಹೌದು, ಹೌದು ಕೇಳುವವರಿದ್ದರಲ್ಲವೆ ರೇಡಿಯೊ ಅರಚಿಕೊಳ್ಳುವುದರ ಪ್ರಯೋಜನ ? "

" ಅದೇಕೆ ? ನಾನಿಲ್ಲದಿದ್ದರೂ ಇವರು ಇದ್ದಾರಲ್ಲ. ಪಾಪ, ಅವರ ಕಿವಿ ಕಿವುಡಾಗಿರಬೇಕು—ನಿನ್ನ ಸಂಗೀತದಿಂದ ! "

ಏನಾದರೂ ಒಂದು ಮಾತನಾಡಿ ಅನುರಾಧೆಯ ಪರವಾಗಿ ನಿಲ್ಲಬೇಕೆಂದು ಮೋಹಿನಿ ಹೇಳಿದಳು

" ಹೀಗೇನು ಹೇಳುತ್ತೀರಿ ? ಎಷ್ಟು ಚೆನ್ನಾಗಿ ಹಾಡುತ್ತಾಳೆ ! "

" ಸರಿ. ಕ್ಷಮಿಸಿ ಹಾಗಿದ್ದರೆ. ನಿಮ್ಮ ಸಂಗೀತದ ಅಭಿರುಚಿ—" ಎಂದು ನಕ್ಕುಬಿಟ್ಟ

" ಅಭಿರುಚಿಯ ಪ್ರಶ್ನೆ ಏನು ಬಂತು ? ಬಾಯಿಗೆ ಬಂದ ಹಾಡನ್ನು ಸುಖವಾಗಿ ಹೇಳಿದರೆ ಸಾಕಲ್ಲವೆ ? " ಎಂದು ಮೋಹಿನಿ

" ಏನೆಂದಿರಿ ? 'ಬಂದ ಹಾಡನ್ನು ಸುಖವಾಗಿ' ಎಂದಿರಲ್ಲವೆ ? ಈಕೆಗೆ ಹಾಡು ಬರುವುದಿಲ್ಲ. ಬಂದದ್ದು ಹಾಡಲ್ಲ. ಹಾಡುವುದು ಸುಖವಾಗಿಯಲ್ಲ ! ಅಂದಮೇಲೆ ? "

" ನಿಮಗೆ ಕೇಳು ಎಂದು ಯಾರು ಹೇಳುವುದು ? ನಿಮಗೆ ಬೇಡವಾದರೆ ಕಿವಿ ಮುಚ್ಚಿಕೊಂಡಿರಿ—" ಎಂದು ಅನುರಾಧೆ ಅರ್ಧ ಸಿಡುಕಿನಲ್ಲಿ ಹೇಳಿದಳು.

" ಸರಿಯಾಯಿತಲ್ಲ. ಆಗಲೆ ಬಾಯಿ ಮುಚ್ಚಿಬಿಟ್ಟೆ. ಈಗ ಕಿವಿ ಮುಚ್ಚು ಎನ್ನುತ್ತೀ. ಇನ್ನು ಕಣ್ಣು ಮುಚ್ಚುವುದೇ ಒಂದು ಉಳಿಯಿತು " ಎಂದು ಗಟ್ಟಿಯಾಗಿ ನಕ್ಕ.

ಮೋಹಿನಿಗೂ ಮಾತು ಮೋಜೆನಿಸಿತು. ತಡೆಯಲಾರದ ನಗು ತುಟಿಗಳನ್ನು ನೂಕಿಕೊಂಡು ಹೊರಬಿದ್ದಿತು ಆಪಟೆ ಆಕೆಯನ್ನು ಕುರಿತೇ ಹೇಳಿದ

"ದಯವಿಟ್ಟು ನೀವೇನೂ ತಪ್ಪು ತಿಳಿಯಬಾರದು. ನನ್ನದು ಯಾವಾಗಲೂ ಒಂದಿಷ್ಟು ನಗೆಯಾಡುವ ಸ್ವಭಾವ. ಹುಂ ನಿಮಗೆ ಮೊದಲಿಗೆ ಹೇಳಿಡುವುದು ಒಳ್ಳೆಯದು ಇಲ್ಲವಾದರೆ ನಾನೇನಾದರೂ ನಿಮಗೆ ಅನ್ನಬೇಕು, ನೀವು ಕೋಪಿಸಿಕೊಳ್ಳಬೇಕು, ಹೀಗಾಗಬಾರದು ನೋಡಿ—"

"ಕೋಪಿಸಿಕೊಳ್ಳಬೇಕೆ? ಅಷ್ಟೂ ಗೊತ್ತಾಗುವುದಿಲ್ಲವೆ? ನನಗಂತೂ ನಗೆಮಾತು ಯಾವಾಗಲೂ ಸೇರಿಕೆಯಾಗುತ್ತದೆ ಮಾತು ಯಾವಾಗಲೂ ಹಾಗೆಯೇ ಇರಬೇಕು."

"ಅಂತೆಯೇ ಗುಮ್ಮೆಂದು ಗಂಭೀರವಾಗಿ ಕೋಣೆಯಲ್ಲೇ ಕುಳಿತಿರುತ್ತೀ ಎಂದು ಕಾಣುತ್ತದೆ" ಎಂದು ಅನುರಾಧೆ ವಾಗ್ಬಾಣ ಎಸೆದಳು

"ಇಲ್ಲದಿದ್ದರೆ ಹನ್ನೆರಡು ಗಂಟೆಯೂ ಹಲ್ಲುಕಿರಿಯುತ್ತ ಹೊರಗಡೆಯೆ ಹಾರಾಡಬೇಕೇನೋ—ನಿನ್ನ ಹಾಗೆ?"

"ನನ್ನಮೇಲೇನು ಬಂದಿದೆ ಈ ದಿನ ನಿಮಗೆ?"

"ಮತ್ತಿನ್ನಾರ ಮೇಲೆ ಬರಬೇಕು? ಮದುವೆ ಮಾಡಿಕೊಂಡದ್ದಕ್ಕೆ ಅಷ್ಟಾದರೂ ಬೇಡವೆ ಗಂಡ ಎಂದುಕೊಂಡವನಿಗೆ?"

"ಅಂತೂ ಹೆಂಡತಿ ಇರಬೇಕಾದದ್ದು ಆಡಿಸಿಕೊಳ್ಳಲಿಕ್ಕೆ ಎನ್ನಬಾರದೆ!"

ಎಂದು ನಕ್ಕು ಮೋಹಿನಿ ತನ್ನ ಅಸಮ್ಮತಿಯನ್ನು ಸೂಚಿಸಿದಳು. ಈ ಮಾತು ಆಕೆಯ ಬಾಯಿಂದ ಬರಬಹುದೆಂದು ಆಪಟೆ ನಿರೀಕ್ಷಿಸಿದ್ದ ಆತ ಬೇಕಂತಲೆ ಹೇಳಿದ

"ಓ! ನಾವು ಏನನ್ನೂ ಅನ್ನಬಹುದು ಆದರೆ ಯಾರು ಕೇಳುತ್ತಾರೆ ಗಂಡಸು ಆಡಿದ್ದನ್ನು ಹೆಂಗಸು ಕೇಳಿಕೊಂಡು ಸುಮ್ಮನಿರುವುದು ಯಾಕೆ ಗೊತ್ತೆ? ಹದಿನಾರು ಗಂಟೆ ಗಂಡಸೆನ್ನುವ ಈ ಮಿಕ ಹೇಳಿದ ಹಾಗೆ ಕುಣಿಯುತ್ತದೆ. ಒಂದರ್ಧ ಗಂಟೆ ಮಂಗನ ಹಾಗೆ ಹಲ್ಲುಕಿರಿದರೆ ಯಾಕೆ ಕೋಪಿಸಿಕೊಳ್ಳಬೇಕು? ಹೀಗೆಂದೇ ಎಲ್ಲ ಹೆಂಡಂದಿರು ಗಂಡಂದಿರಾಡಿದ ಮಾತನ್ನು ತಡೆಯುತ್ತಿರಬೇಕು. ಉಳಿದವರು ಹೇಗೂ ಇರಲಿ. ನಮ್ಮಾಕೆಯಂತೂ—"

"ನೋಡಿದೆಯಾ? ಮತ್ತೆ ನನ್ನ ಮೇಲೆಯೆ—"

" ಹೋಗಲಿ ಬಿಡು. ನಿನಗಾದರೂ ಏನು ಆ ಮಾತು ಮೈಗೆ ಚುಚ್ಚಿ ನಿಲ್ಲುತ್ತದೆಯೆ ? "

" ಹೌದು. ನೀನೇ ಈ ಮಾತನ್ನು ಹೇಳುವವಳು ? ಸರಿ. ಆಯಿತಲ್ಲ, ಇನ್ನೇನು ? "

" ಬೇಡವಾದರೆ ಬಿಡಿರಿ ನಮ್ಮ ಮಾತಾದರೂ ಯಾರಿಗೆ ಬೇಕಾಗಿದೆ ? ಸುಮ್ಮನೆ ನಮ್ಮ ಪಾಡಿಗೆ ನಾವು ಇದ್ದರಾಯಿತು ಯಾವ ತಂಟೆಯೂ ಇಲ್ಲ "

ಎಂದು ಆಪಟೆ ಬೇಕೆಂತಲೆ ಕಣ್ಣು ಮುಚ್ಚಿ ಸೋಫಾದಲ್ಲಿ ಮೈ ಚೆಲ್ಲಿದ ಇದು ಹೊರಗೆ ಹೊರಡಲು ಆತುರಳಾಗಿದ್ದ ಅನುರಾಧೆಯನ್ನು ರೇಗಿಸಲು ಒಂದು ಉಪಾಯವಾಗಿತ್ತು ಇದನ್ನು ಮೋಹಿನಿ ತಿಳಿದಳಾದ್ದರಿಂದ ಗೆಳತಿಯನ್ನು ನೋಡಿ ಕಿರುನಗೆಯೊಂದನ್ನು ಸೂಸಿದಳು ಅನುರಾಧೆ ಸುಮ್ಮನಾಗಿಬಿಟ್ಟಳು. ಆದರೆ ಆತುರ ತಡೆಯಲಾಗದೆ ಒಂದರಡು ನಿಮಿಷಗಳಲ್ಲಿಯೆ ಗೊರಕೆಯ ಸೋಗು ನಡೆಸಿದ್ದ ಆಪಟೆಯನ್ನು ಭುಜ ಅಲ್ಲಾಡಿಸಿ ಕೇಳಿದಳು, ಕಿವಿಯಲ್ಲಿ ಕೂಗಿ—

" ಯಾಕೆ ? ನನ್ನ ನಿದ್ರೆಯಾದ ಮೇಲೆ ನಿಮ್ಮದೇ ? ಏಳುವಿರಲ್ಲವೆ ? ಏಳಿರಲ್ಲ "

" ಆಂ ?—ಏನಂದೆ ?—"

ಎಂದು ಗಬಕ್ಕನೆ ಆಪಟೆ ಎದ್ದು ಕುಳಿತ

" ಛೀ ನಿಮಗಂತೂ ಎಷ್ಟೂ ಪರ್ಸನಲ್ ಡಿಗ್ನಿಟಿ ಇಲ್ಲ ಬಂದವರೆದುರಿಗೆ ಹೀಗೆಲ್ಲ ಮಾಡಿದರೆ ಏನೆಂದುಕೊಂಡಾರು ? ಏಳಬಾರದೆ ? "

" ಏನೆನ್ನುತ್ತಾರೆ ? ಸಿನೇಮಾದವರಿಗೆ ನಾಟಕ ಮಾಡಲಿಕ್ಕೂ ಚೆನ್ನಾಗಿ ಬರುತ್ತದೆ ಎನ್ನುತ್ತಾರೆ " ಎಂದು ಮೋಹಿನಿ ಮಾತು ಕೂಡಿಸಿದಳು

" ಅಲ್ಲವೆ ? ನಾಟಕ ಬಂದರೇನೇ ಸಿನೇಮಾ ಮಾಡುವುದು—" ಎಂದು ಆಪಟೆ.

" ಅದಕ್ಕೇ ನಮ್ಮನ್ನಷ್ಟು ಕರೆದುಕೊಂಡು ಹೋಗಿರೆಂದು ದಾರಿ ಕಾಯುತ್ತ ಕುಳಿತರೆ—"

" ಹೌದಲ್ಲವೆ ? ನನಗೂ ಮರೆವು ಬಹಳವಾಯಿತು ಬಿಡು "

" ಹೊರಡುವುದಿಲ್ಲವೆ ? "

" ಹೊರಡೋಣವೆ ? "

" ಹೊರಡುವುದಾದರೆ ಹೊರಡಿರಿ. ಇಲ್ಲವಾದರೆ ಬಿಡಿರಿ ನಮ್ಮದೇನು ನಡೆಯಬೇಕಾಗಿದೆ ? "

ಎಂದು ಅನುರಾಧೆ ಮತ್ತೆ ಹುಸಿಮುನಿಸಿನಿಂದ ಸೋಫಾದಲ್ಲಿ ಒರಗಿದಳು

" ಇಲ್ಲ ಅಂದರೆ ಹೇಗೆ ನಡೆದೀತು ? "

" ನಡೆಯದೆ ಏನು ಮಾಡುತ್ತದೆ ? ಕುಳಿತಿದ್ದೇವಲ್ಲ ಈಗ—"

" ನೀವು ಕೇಳಬಹುದು ಕೆಲಸವೊಂದು ಕೇಳಬೇಕಲ್ಲ—"

ಎಂದವನೆ ಒಳಕೋಣೆಗೆ ಹೋಗಿ ವೇಷ ಬದಲಾಯಿಸಿ ಬಂದ ಕೆಳಗಡೆ ಇಳಿದು ಬಂದು ಆಪಟೆ ಕಾರಿನಲ್ಲಿ ಕುಳಿತ ಯಾವಾಗಲೂ ಮುಂದಿನ ಸೀಟಿನಲ್ಲಿಯೆ ಕುಳಿತು ಅಭ್ಯಾಸವಾಗಿದ್ದ ಅನುರಾಧೆಗೆ ಹಿಂಗಡೆಯಲ್ಲಿ ಕುಳಿತುಕೊಳ್ಳಲಿಕ್ಕೆ ಮನಸ್ಸಾಗಲಿಲ್ಲವೆಂದು ಕಾಣುತ್ತದೆ ಆದರೂ ನಿರ್ವಾಹವಿಲ್ಲದೆ ಗೆಳತಿಯ ಹತ್ತಿರ ಕೂಡದೆ ಗತ್ಯಂತರವಿಲ್ಲ ಕಾರ್ ಸ್ಟಾರ್ಟ್ ಮಾಡುತ್ತಲೆ ಆಪಟೆ ಮೋಹಿನಿಯನ್ನು ಕೇಳಿದ

" ಸ್ಕೂಲಿನಲ್ಲಿ ಏಕೆ ಕೆಲಸ ಹಿಡಿದಿರಿ ನೀವು ? ಬೇಸರವಾಗುವುದಿಲ್ಲವೆ ? "

" ಇದೀಗ, ಇನ್ನೂ ನಾಲ್ಕು ದಿನ ಕೂಡ ಆಗಿಲ್ಲ ಬೇಸರವೇನು ಬಂತು ? ಅಲ್ಲದೆ, ಬೇರೆ ಯಾವ ಕೆಲಸ ಸಿಕ್ಕಬೇಕು ? ಹತ್ತಾರು ಕಡೆ ಪ್ರಯತ್ನ ಮಾಡಿದ್ದಾಯಿತು ಕೊನೆಗೆ—"

" ನಮ್ಮ ಗ್ರಾಜುಯೇಟುಗಳಿಗೆ ಇನ್ನೊಂದೇನೂ ಕಾಣಿಸುವುದೇ ಇಲ್ಲ ಒಂದು ಗುಮಾಸ್ತಿಕೆ, ಇಲ್ಲವಾದರೆ, ಸ್ಕೂಲ್ ಮೇಷ್ಟ್ರು ! "

" ಗತಿಗಾಣದ ದೇವರಿಗೆ ಏನೋ ಧೂಪ ಎಂದು ಹೇಳುತ್ತಾರಲ್ಲ ! " ಎಂದು ಅನುರಾಧೆ.

" ಹಂ. ಗತಿಗಾಣದವರೇ ಸರಿ " ಎಂದು ಮೋಹಿನಿಯೂ ತನ್ನ ಅಭಿಪ್ರಾಯವನ್ನು ಸೂಚಿಸಿದಳು.

" ನಿಮಗೆ ಸಂಗೀತ ಗೊತ್ತಿದೆಯೆ ? "

" ಶಾಸ್ತ್ರೀಯವಾಗಿ ಗೊತ್ತಿಲ್ಲ ! ಹಾಡಬಲ್ಲೆ ಅಷ್ಟೆ ! ಯಾಕೆ ? "

" ಯಾಕೂ ಇಲ್ಲ ಸುಮ್ಮನೆ ಕೇಳಿದೆ ಈಕೆಯ ಸಂಗೀತವಂತೂ ನಿಮಗೆ ಗೊತ್ತು. ಅದರಿಂದ ಎಚ್ಚರ ತಪ್ಪಿದಾಗ ನಿಮ್ಮಿಂದ ಏನಾದರೂ ಕೇಳಿ ಎಚ್ಚರಗೊಳ್ಳಲು ಅವಕಾಶವಿರಬಹುದೆ, ಎಂದು ಕೇಳಿದೆ ! "

ಮೂವರೂ ನಕ್ಕರು. ಆದರೆ ಅನುರಾಧೆಯ ನಗುವಿನಲ್ಲಿ ಮಾತ್ರ ಗೆಲುವಿರಲಿಲ್ಲ. ಕಾರು ಓಳಕ್ ಬ್ರಿಜ್ ಗುಂಟ ಸಾಗಿತ್ತು. ನಾಲ್ಕಾರು ನಿಮಿಷಗಳಲ್ಲಿಯೇ ಜಿ ಐ ಪಿ ರೈಲ್ವೆಯ ದಾದರ್ ನಿಲ್ದಾಣದ ಹಿಂಬದಿಯ ದಾರಿಗುಂಟ ಸಾಗಿ ಒಂದು ದೊಡ್ಡದಾದ ಆವಾರವನ್ನು ಸೇರಿತು. ಸಾಲು ಸಾಲಾಗಿ ನಿಂತ ಹತ್ತಾರು ಕೋಣೆಗಳಂತಿದ್ದ ಒಂದು ಮಳಿಗೆಯ ಎದುರು ನಿಂತಿತು. ಜವಾನನೊಬ್ಬ ಬಂದು ಕಾರಿನ ಬಾಗಿಲನ್ನು ತೆರೆದಾಗಲೆ ತಾವು ಬಂದದ್ದು ಸ್ಟುಡಿಯೋಕ್ಕೆ ಎಂದು ಮೋಹಿನಿಗೆ ಗೊತ್ತಾಯಿತು.

ಇನ್ನೊಬ್ಬ ಜವಾನ ಬಂದು ಡೈರೆಕ್ಟರ್ ರಂಗನಾಥನ್ ಅವರು ಆಫೀಸಿಗಾಗಿ ಕಾಯುತ್ತಿದ್ದಾರೆಂದೂ ಬಂದ ಕೂಡಲೆ ಕಾಣಬೇಕೆಂದೂ ತಿಳಿಸಿದ್ದರಿಂದ ಆತ ಅನುರಾಧೆಗೆ ತನ್ನ ಕೋಣೆಯಲ್ಲಿ ಕುಳಿತಿರಲು ಹೇಳಿ ಸರಕ್ಕನೆ ಹೋಗಿಬಿಟ್ಟ. ಜವಾನನನ್ನು ಮುಂದಿರಿಸಿಕೊಂಡು ಒಡತಿಠೀವಿಯಿಂದ ಅನುರಾಧೆ ಮೋಹಿನಿಯೊಡನೆ ತನ್ನ ಪತಿಯ ಆಫೀಸು ಕೋಣೆಯನ್ನು ಸೇರಿ ಒಳ್ಳೆ ಆದ್ಯತೆಯಿಂದ ಜವಾನನಿಗೆ ಸ್ಟುಡಿಯೋದಲ್ಲಿ ಏನಾದರೂ ಷೂಟಿಂಗ್ ನಡೆದಿದೆಯೋ ಹೇಗೆ ನೋಡಿಕೊಂಡು ಬರಲು ಹೇಳಿದಳು. ಅದನ್ನು ಇದನ್ನು ಕುರಿತು ವಿವರಿಸಿಯಾದ ಮೇಲೆ ಅನುರಾಧೆಗೆ ಅಲ್ಲಿ ಕುಳಿತಿರುವುದರಿಂದ ತನ್ನ ಮಹತ್ವ ತನ್ನ ಗೆಳತಿಗೆ ತಿಳಿಯದು ಎಂದೆನಿಸಿರಬೇಕು. "ಇವರು ಇನ್ನು ಬರುವುದು ಯಾವಾಗಲೊ! ಇಲ್ಲಿ ಕುಳಿತಾದರೂ ಏನು? ಆಚೆ ಈಚೆ ಎಲ್ಲವನ್ನೂ ತೋರಿಸುತ್ತೇನೆ, ನಡೆ" ಎಂದು ಮೋಹಿನಿಯೊಡನೆ ಹೊರಬಿದ್ದಳು. ಒಂದು ಬದಿಯಲ್ಲಿದ್ದ ಆಫೀಸಿನ ಕೋಣೆಗಳು, ಅದಾದನಂತರ ನಟರಿಗಾಗಿ ಇದ್ದವು, ಆಮೇಲೆ 'ಮೇಕಪ್' ರೂಮುಗಳು, ಬಟ್ಟೆಬರೆ ಸಾಧನಸಾಮಗ್ರಿಗಳ ಕೋಣೆಗಳು, ಇವೆಲ್ಲಕ್ಕೆ ರಾಗಿ ಒಂದು ಬದಿಯಲ್ಲಿ ಪ್ರಯೋಗಶಾಲೆ, ಸಂಪಾದನ, ಸ್ವರ ಮೇಳೈಸುದು ಇತ್ಯಾದಿಯಾಗಿ ಹಬ್ಬಿದ ವಿವಿಧ ಇಲಾಖೆಗಳನ್ನು ತೋರಿಸಿದಳು. ಅನುರಾಧೆಗಾದರೂ ಎಷ್ಟು ತಿಳಿದಿತ್ತೋ. ಆದರೆ ಆಕೆ ತಿಳಿದವಳಂತೆ ತಿಳಿಸಿ ಹೇಳುವುದು, ಅದಕ್ಕಿಂತಲೂ ಹೆಚ್ಚಾಗಿ ಇದೆಲ್ಲವು ತನ್ನದೇ ರಾಜ್ಯ, ತಾನೇ ಇದೆಲ್ಲಕ್ಕೂ ಒಡತಿ, ತನ್ನ ಮಾತು ಇಲ್ಲಿ ಬೇಕಾದ ಹಾಗೆ ನಡೆಯುತ್ತದೆ ಎಂಬ ಭಾವನೆಯೇ ಎದ್ದುಕಾಣುತ್ತಿತ್ತು.

ಫಿಲ್ಮ್‌ಸ್ಟುಡಿಯೊ ಎಂದರೆ ಎಂಥೆಂಥ ಕನಸಿನ ಅರಮನೆಗಳನ್ನು ಕಟ್ಟಿದ

ಮೋಹಿನಿಗೆ ಸ್ಟುಡಿಯೋಕ್ಕೆ ಬಂದಾಗ ಮಾತ್ರ ಸಂಪೂರ್ಣ ನಿರಾಶೆಯಾಯಿತು ಆಕೆ ಅಲ್ಲಿ ಕಂಡದ್ದು ದೊಡ್ಡದಾದ ಒಂದು ಗೋಡೌನಿನಂತಹ ಬಯಲು ಬಯಲಾದ ಹಾಲ್ ಹತ್ತಾರು ಕಡೆಯಿಂದ ದೊಡ್ಡ ದೊಡ್ಡ ದೀಪಗಳು, ಅವನ್ನೆಲ್ಲ ಬೇಕಾದ ಹಾಗೆ ಸರಿಸಲಿಕ್ಕೆ, ಬೇಕಾದ ಕಡೆ ಬೆಳಕನ್ನು ಹರಿಯಿಸಲಿಕ್ಕೆಂದು ಮಾಡಿದ ವ್ಯವಸ್ಥೆಗಳು, ಮೂಲೆಮೂಲೆಗಳಲ್ಲಿ ನಿಲ್ಲಿಸಿದ ಕೃತಕವಾದ ಕಾರ್ಡ್ ಬೋರ್ಡಿನ ಕಂಬ, ಗೋಡೆ, ಕಿಟಕಿಗಳು, ಪಾನಟಿಗೆಗಳು, ಕಾಗದದ ಗಿಡ ಹೂಬಳ್ಳಿಗಳು, ಇಂಥವೇ ನೂರಾರು ಸಾಮಾನುಗಳು ಗತಿಗೆಟ್ಟ ಮನೆಯಲ್ಲಿ ಅಸ್ತವ್ಯಸ್ತವಾಗಿ ಬಿದ್ದಂತೆ ಕಾಣಿಸಿದವು ಒಂದು ಮೂಲೆಯಲ್ಲಿ ಒಂದು ಮನೆಯ ಮುಂಭಾಗ ಮಾತ್ರ ಶೃಂಗಾರವಾಗಿ, ಸುವ್ಯವಸ್ಥಿತವಾಗಿ ನಿಂತಿತ್ತು ಅಂದು ನಡೆಯಬೇಕಾದ ಕೆಲಸ ಅದರ ಎದುರಿನಲ್ಲಿಯೆ ಇರಬೇಕೆಂದು ತೋರಿತು ನಾಲ್ಕಾರು ಆಳುಗಳು ಸಾಮಾನುಗಳನ್ನು ಸರಿಸಿ ಇಡುತ್ತಿದ್ದರು, ಚಪ್ಪರದ ಕಂಬಿಗಳಾಚೆಯಿಂದ ಇಬ್ಬರು ಮೂವರು ದೀಪಗಳು ಸರಿಯಾಗಿ ಬೆಳಕು ಚೆಲ್ಲುವಂತೆ ಹೊಂದಿಸುವುದರಲ್ಲಿದ್ದರು ಇನ್ನೊಂದು ಮೂಲೆಯಲ್ಲಿ ಮೂರು ನಾಲ್ಕು ಜನ—ಬಹುತರವಾಗಿ ಅವರು ನಟರಿರಬಹುದೆಂದು ಕಾಣುತ್ತಿತ್ತು—ತೀರ ಬೇಸರದಿಂದ ಎದುರಿಗೆ ನಡೆದ-ನಡೆಯುತ್ತಿರುವ ವ್ಯವಸ್ಥೆ ಅವ್ಯವಸ್ಥೆಗಳನ್ನು ನಿರ್ವಿಕಾರವಾಗಿ ನೋಡುತ್ತ ಕುಳಿತಿದ್ದರು ದೀಪಗಳು ಉರಿಯುತ್ತಿದ್ದವು, ಆರುತ್ತಿದ್ದವು ಆಚೆಯ ಕೋಣೆಯಿಂದ ಧ್ವನಿವಾಹಕದಲ್ಲಿ ಒಂದೆರಡು ದನಿ ಕೂಗಾಡುತ್ತಿದ್ದವು ಬೇಸರವನ್ನು ಸಿರುತ್ತಿದ್ದವು

"ಇದೇನೇ ಸ್ಟುಡಿಯೋ ಅಂದರೆ?" ಎಂದಳು ಮೋಹಿನಿ ಕೊನೆಗೆ.

"ಹೌದು ಮತ್ತೆ!"

"ಚಿತ್ರಗಳನ್ನು ಇಲ್ಲಿಯೋ ತಯಾರಿಸುತ್ತಾರೆಯೆ?"

"ಯಾಕೆ?"

"ಇಲ್ಲಿ ಯಾವುದೂ ಕಾಣುವುದಿಲ್ಲವಲ್ಲ?"

"ಏನು ಕಾಣಬೇಕು? ಅಲ್ಲಿ ನೋಡಿದೆಯಾ, ಮನೆಯ ಮುಂಭಾಗ? ಈಗ ಅದರ ಎದುರಿನಲ್ಲಿಯೆ ಏನಾದರೂ ಶೂಟಿಂಗ್ ನಡೆಯಬೇಕಾಗಿದೆ ಎಂದು ಕಾಣುತ್ತದೆ—"

"ಮತ್ತೆ ಎಡಕ್ಕೆ ಬಲಕ್ಕೆ ಇದೆಲ್ಲ ಏನು ಈ ಅವ್ಯವಸ್ಥೆ?"

"ಅದೆಲ್ಲ ಚಿತ್ರದಲ್ಲಿ ಯಾತಕ್ಕೆ ಬರುತ್ತದೆ? ಚಿತ್ರಕ್ಕೆ ಎಷ್ಟು ಬೇಕೋ ಅಷ್ಟು ಸಿದ್ಧಮಾಡಿಕೊಂಡು ಅದನ್ನಷ್ಟೇ ತೆಗೆದುಕೊಳ್ಳುತ್ತಾರೆ"

ಅನುರಾಧೆ ತನಗೆ ತಿಳಿದ, ತಿಳಿಯದ, ಗೊತ್ತಿದ್ದ ಇಲ್ಲದ, ಎಲ್ಲವನ್ನು ಬೆರಸಿ ಉಪನ್ಯಾಸವನ್ನು ಬೀರುತ್ತಲೆ ಇದ್ದಳು ಇಬ್ಬರೂ ಹೊರಬಿದ್ದರು ತಿರುಗಿ ಬರುವಾಗ ಒಂದು ಕಡೆ ಮೂರು ನಾಲ್ಕು ಜನ ಹೆಣ್ಣು ಮಕ್ಕಳು ಮುಖಗಳಿಗೆ, ಕೈಗೆ ಮೈಗೆ, ತಿಳಿಯಾದ ಎಣ್ಣೆಗೆಂಪು ಬಣ್ಣವನ್ನು ಬಳಿದುಕೊಂಡು ಸಿದ್ಧರಾಗುತ್ತಿದ್ದರು ಅವರ ವೇಷಗಳಲ್ಲಿಯ ಅಸ್ತವ್ಯಸ್ತ, ಯಾವುದರ ಪರಿವೆಯೂ ಇಲ್ಲದಿರುವಂಥ ಅವರ ಮನೋವೃತ್ತಿಗಳು ಮೋಹಿನಿಗೆ ತುಸು ಬೇಸರವನ್ನುಂಟುಮಾಡಿದವು "ನಟಿಯರೇ ಇವರು?" ಎಂದು ಕೇಳಿದ್ದಕ್ಕೆ ಅನುರಾಧೆ ಮೂಗು ಮುರಿದು "ಇವರೆಂಥ ನಟಿಯರು? ಏನಾದರೂ ಚಿಲ್ಲರೆ ಪಾತ್ರಗಳ ಕೆಲಸ ಇರಬೇಕು ಬಾಡಿಗೆಗೆ ಬಂದ ಹೆಣ್ಣುಗಳು" ಎಂದು ಒಳ್ಳೆ ತಿರಸ್ಕಾರದ ದನಿಯಲ್ಲಿ ಹೇಳಿದಳು "ಮುಖ್ಯ ನಟಿಯಾಗಿದ್ದವಳಾಗಲಿ, ಮಹತ್ವದ ಪಾತ್ರಗಳಿದ್ದವರಾಗಲಿ ಹೀಗೆ ಇರುತ್ತಾರೆಯೆ? ಅವರವರಿಗೆ ಕೋಣೆ ಬೇರೆ ಅವರ ಎಲ್ಲ ಸಿದ್ಧತೆಗಳನ್ನು ಮಾಡಲಿಕ್ಕೆ ಸೇವಕರು, ಸಹಾಯಕರು ಇರುತ್ತಾರೆ. ನೋಡುವ, ತಡೆ ಈಗ ನಡೆದ ಚಿತ್ರದಲ್ಲಿ ಕೆಲಸ ಮಾಡುತ್ತಿದ್ದ ನಟಿ ಮಧುಮಾಲಿಕಾ ಬಂದಿರಬಹುದು ಇವರು ಬಂದಿದ್ದರೆ ಗೊತ್ತಾಗುತ್ತದೆ" ಎಂದು ಇನ್ನೂ ಹತ್ತಾರು ಕಡೆ ಮೋಹಿನಿಯನ್ನು ತಿರುಗಾಡಿಸಿಕೊಂಡು ಮರಳಿ ಆಫೀಸ್ ಕೋಣೆ ಸೇರಿದಳು

ಒಂದೆರಡು ನಿಮಿಷಗಳಲ್ಲಿಯೇ ಆಸಟೆ ಮತ್ತು ರಂಗನಾಥನ್ ಮಾತನಾಡುತ್ತ ಕೋಣೆಯ ಎದುರು ಬಂದರು ಅನುರಾಧೆ ಹೇಳಿದಳು "ಇವರೇ ಲ್ಲಿಯ ಮುಖ್ಯ ನಿರ್ದೇಶಕ—ರಂಗನಾಥನ್ ಅವರು. ಭಾರಿ ಏಬಲ್ ಆಗಿದ್ದಾರೆ!" ಮೋಹಿನಿ ನೋಡಿದಳು ರಂಗನಾಥನ್ ಸುಮಾರು ನಲವತ್ತು ವರುಷದ ಬೇಸಾದ ಆಳು ಮಾತನಾಡುವಾಗ ಮುಖದಲ್ಲಿ ಯಾವಾಗಲೂ ತಿಳಿನಗೆ ತೇಲುತ್ತದೆ ಕೊಂಚ ಉದ್ದವಾದರೂ ತುಂಬಿದ ಮುಖ, ಹೊಳಪಿನ ಕಣ್ಣುಗಳು, ಒಳ್ಳೆ ಅಚ್ಚುಕಟ್ಟಾದ ವೇಷ. ಒಟ್ಟಿನಲ್ಲಿ, ಎಲ್ಲ ಬಗೆಯಲ್ಲಿಯೂ ಸುವ್ಯವಸ್ಥಿತವಾದ ಮನುಷ್ಯ ಎಂದು ಒಮ್ಮೆಲೆ ಒಡೆದು ಕಾಣುತ್ತಿತ್ತು.

"ಹಾಗಿದ್ದರೆ ಒಂಬತ್ತು ಗಂಟೆಯ ವರೆಗೆ ಕಾಯಬೇಕು ಅನ್ನುತ್ತೀರಾ?"

" ಏನು ಮಾಡುವುದು ವತ್ತಿ ? ಮಧುಮಾಲಿಕಾ ಬರದೆ ಯಾವುದೂ ಸಾಗುವಂತಿಲ್ಲ."

" ಯಾಕ ? ಏನಂತೆ ತೊಂದರೆ ? '

" ತೊಂದರೆ ಇಲ್ಲ, ಯಾವುದೂ ಇಲ್ಲ ಏನೊ ಒಂದಿಷ್ಟು ತಲೆನೋವಂತೆ ಇದೀಗ ಟೆಲಿಫೋನ್‌ನಲ್ಲಿ ಕೇಳಿದರೆ, 'ನೋಡುವೆ, ನನಗೆ ಟೆಂಪರೇಚರ್ ಬರುವ ಹಾಗಿವೆ' ಎಂದಳು ನನಗಂತೂ ತೀರ ಬೇಸರವಾಗಿದೆ ಯಾವಾಗ ಲೊಮ್ಮೆ ಈಕೆಯ ಕಾಂಟ್ರಾಕ್ಟ್ ಮುಗಿದೀತೊ ಎನ್ನುವ ಹಾಗಾಗಿದೆ "

" ಕಾಂಟ್ರಾಕ್ಟ್ ಹೇಗೂ ಆದೀತು ಈ ಚಿತ್ರ ಒಂದು ಮುಗಿಯಬೇಕಲ್ಲ ಇನ್ನು ಉಳಿದದ್ದು ಬರೀ ಹದಿನೈದು ದಿನವೊ ಹದಿನಂಟು ದಿನವೊ ಅಷ್ಟರಲ್ಲಿ ಶೂಟಿಂಗ್ ಮುಗಿದರೆ—"

ರಂಗನಾಥನ್ ಲಕ್ಷ್ಯ ಕೋಣೆಯೊಳಕ್ಕೆ ಹೋಯಿತು ಅವನೆಂದ

" ಓ ! ಇದೇನು ? ನಿಮ್ಮ ಮನೆಯವರು ಬಂದಹಾಗಿದೆಯಲ್ಲ ಗುಡ್ ಈವ್‌ನಿಂಗ್ "

ಎನ್ನುತ್ತ ಕೋಣೆಯೊಳಕ್ಕೆ ಬಂದ ಜೆನ್ನ ಹಿಂದೆಯೆ ಆಪಟೆ ಬಂದ ಅನುರಾಧೆ ಮೋಹಿನಿಯರಿಬ್ಬರೂ ಎದ್ದು ನಿಂತರು ಅನುರಾಧೆ ಮೋಹಿನಿಯ ಪರಿಚಯ ಮಾಡಿಕೊಡುತ್ತ ಹೇಳಿದಳು

" ಈಕೆ ನನ್ನ ಫ್ರೆಂಡ್—ಮಿಸೆಸ್ ಮೋಹಿನಿ ಈಗ ನಮ್ಮ ಹತ್ತಿರವೆ ಇರುತ್ತಾಳೆ. ಈಕೆಗೆ ಸ್ಟುಡಿಯೋ ತೋರಿಸಿಕೊಂಡು ಹೋಗೋಣ ಎಂದು ಬಂದೆ."

" ಸಂತೋಷ. ನಮಸ್ಕಾರ—" ಎಂದು ರಂಗನಾಥನ್ ಮೋಹಿನಿಯನ್ನು ಕುರಿತು ಹೇಳಿದ.

" ಆಪಟೆ, ನಿಮ್ಮ ಹತ್ತಿರ ಈ ಚಿತ್ರದ ಪ್ರೋಗ್ರಾಮ್ ಶೀಟಿನ ಇದೆಯೆ ? ಕೆಲಸವಾದರೂ ಎಷ್ಟು ಉಳಿದಿದೆ ನೋಡುವಾ ಇಲ್ಲವಾದರೆ ನನ್ನ ರೂಮಿಗೇ ಹೋಗೋಣ. ಇಲ್ಲಿ ಯಾಕೆ ? "

ಎಲ್ಲರೂ ರಂಗನಾಥನ್‌ರ ಕೋಣೆಗೆ ಹೋದರು. ದೊಡ್ಡದಾದ ಕೋಣೆ, ಕುಳಿತುಕೊಳ್ಳಲಿಕ್ಕೆ ಎದುರಿಗೆ ಸುಖವಾದ ಸೋಫಾಗಳು. ಗೋಡೆಯ ಮೇಲೆ ಬೇರೆಬೇರೆ ಚಿತ್ರಪಟ ತಾರೆಯರ ಭಾವಚಿತ್ರಗಳು. ತಿಳಿನೀಲಿಯಾದ ಬೆಳಕು

ತಿಳಿಹಸಿರು ಬಣ್ಣದ ಗೋಡೆಗಳ ಮೇಲೆ ಬಳುಕುತ್ತಿತ್ತು. ಕುಳಿತವರ ಮುಖ ಗಳನ್ನು ಇಲ್ಲದ ಬೆಡಗಿನಿಂದ ಮೆರೆಯಿಸುತ್ತಿತ್ತು

"ಕ್ಷಮಿಸಿ, ಒಂದೈದು ನಿಮಿಷ" ಎಂದು ರಂಗನಾಥನ್ ಮತ್ತು ಆಪಟೆ ಕೋಣೆಯ ಇನ್ನೊಂದು ಬದಿಯಲ್ಲಿ ಮೇಜಿನೆದುರು ನಿಂತು ನಡೆದ ಕೆಲಸದ ಬಗ್ಗೆ ಚರ್ಚೆ ನಡೆಸಿದರು ಪ್ರತಿಯೊಂದು ಮಾತಿನಲ್ಲಿ ರಂಗನಾಥನ್‌ನ ಚುರುಕುತನ, ಅಚ್ಚುಕಟ್ಟುತನ ಸ್ಪಷ್ಟವಾಗಿ ಕಾಣುತ್ತಿತ್ತು ಸಮಸ್ಯೆ ಎಂಥದೇ ಇರಲಿ, ಅವನ್ನು ಎಲ್ಲ ಬದಿಯಿಂದಲೂ ಕಾಣುವ, ಕಂಡು ಅದಕ್ಕೆ ತಕ್ಕಂತೆ ಎದುರಿಸುವ ಪೂರ್ವಾಲೋಚನೆಗಳು ಅವನಿಗೆ ತಟ್ಟನೆ ಹೊಳೆಯುತ್ತಿರುವಂತಿತ್ತು ಕೊನೆಗೆ ಆಪಟೆಗೆ ಹೇಳಿದ

"ಇನ್ನೊಮ್ಮೆ ಟೆಲಿಫೋನಿನಲ್ಲಿ ಆಕೆಯನ್ನು ವಿಚಾರಿಸಿ ಖಂಡಿತವಾಗಿ ಒಂಬತ್ತು ಗಂಟೆಗಾದರೂ ಬರುವಹಾಗಿದ್ದರೆ ಅದಕ್ಕೆ ತಕ್ಕಂತೆ ಎಲ್ಲರಿಗೂ ಸೂಚನೆ ಕೊಟ್ಟುಬಿಡಿ ಇಲ್ಲವಾದರೆ—ಇಲ್ಲವಾದರೆ ನಾಳೆಗೇ ಆಗಬೇಕಲ್ಲ ಉಪಾಯವೇ ಇಲ್ಲ"

"ಓ ಕೆ" ಎಂದವನೆ ಆಪಟೆ ಕೋಣೆಯೊಳಗಿನಿಂದ ಮಾಯವಾದ. ರಂಗನಾಥನ್ ಅನುರಾಧೆ ಮೋಹಿನಿಯರು ಕುಳಿತಿದ್ದೆಡೆಗೆ ಬರುತ್ತ ವಿಚಾರಿಸಿದ.

"ಹುಂ ಮತ್ತೇನು, ಮಿಸೆಸ್ ಅನುರಾಧಾ ದೇವಿಯವರೆ"

"ಅಂತೂ ಎಂದಿಗೆ ಮುಗಿಯುವುದು ಈ ಚಿತ್ರ?"

"ನೋಡಿದಿರಲ್ಲ ನೀವೇ ಪ್ರತಿಯೊಂದು ಸಲವೂ ಹೀಗೆಯೇ ಆಯತ ವೇಳೆಗೆ ತಲೆನೋವುಗಳು ಬಂದುಬಿಡುತ್ತವೆ, ನಮ್ಮ ಸ್ಟಾರ್ಸ್‌ಗಳಿಗೆ!"

"ಡೈರೆಕ್ಟರ್ಸ್ನ ಮೆತ್ತಗಾದರೆ ಹೀಗೆಯೆ!"

ಎಂದು ಅನುರಾಧೆ ನಗು ಸೂಸಿದಳು.

"ಯಾರು ಡೈರೆಕ್ಟರ್ಸ್?"

"ಮತ್ತೆ ಯಾರು? ನೀವೇ—"

"ಆಪಟೆಯೂ ಡೈರೆಕ್ಟ್ ಮಾಡುತ್ತಾ ಇದ್ದಾರೆ!"

"ಸರಿ—ನೀವೇನು, ಅವರೇನು? ಇಬ್ಬರೂ ಒಂದೇ!"

"ಹಾಗಲ್ಲ, ಮಿಸೆಸ್ ಅನುರಾಧಾ ನಿಜವಾಗಿ ನೋಡಿದರೆ ನಾವಿಬ್ಬರೂ ಡೈರೆಕ್ಟರ್ಸ್ ಅಲ್ಲ! ಡೈರೆಕ್ಟರುಗಳನ್ನು ಡೈರೆಕ್ಟ್ ಮಾಡುವವರು ನಟಿಗಳೇ ಎಲ್ಲ

ಅವರ ಕೈಯಲ್ಲಿಯೆ ಇದ್ದ ಹಾಗಿರುತ್ತದೆ!"

"ಹೌದು. ಎಲ್ಲ ಅವರ ಕೈಯಲ್ಲಿಯೆ!" ಎಂದು ಅನುರಾಧೆ ಮತ್ತೆ ನಕ್ಕಳು.

"ಯಾಕೆ? ನಗುತ್ತೀರಿ?" ಎಂದು ಪ್ರತಿಯಾಗಿ ರಂಗನಾಥನ್ ನಸು ನಗು ಬೀರಿದ.

"ಅಲ್ಲ ಎಲ್ಲವೂ ಅವರ ಕೈಯಲ್ಲಿಯೇ ಎಂದಿರಿ, ಅದಕ್ಕೆ—"

"ಅಲ್ಲವೆ ಮತ್ತೆ? ನನ್ನನ್ನು ಕೇಳಿದರೆ ಎಲ್ಲಿಯಾದರೂ ಅಷ್ಟೆ ಹೆಂಗಸೇ ಡೈರೆಕ್ಟರ್ ಗಂಡಸು ಸುಮ್ಮನೆ ಜಂಬ ಕೊಚ್ಚಿಕೊಳ್ಳುತ್ತಿರಬೇಕು ಅಷ್ಟೆ!"

ರಂಗನಾಥನ್‌ನ ಮಾತಿನ ರೀತಿ ಮನೋಹರವಾಗಿದ್ದರೂ ಮೋಹಿನಿಗೆ ಆ ಅಭಿಪ್ರಾಯ ಒಪ್ಪಿಗೆಯಾಗುವಂತಿರಲಿಲ್ಲ ಇಂಥ ನೋಗಿನ ಮಾತುಗಳಿಂದಲೆ ಗಂಡಸು ಹೆಂಗಸನ್ನು ವಂಚಿಸಿ ಅಧೀನಳನ್ನಾಗಿ ಇಡುವುದು ಎಂದುಕೊಂಡಳು ರಂಗನಾಥನ್‌ನ ಪರಿಚಯ ಹೆಚ್ಚಾಗಿದ್ದಿದ್ದರೆ ಆತ ಹೇಳಿದ್ದಕ್ಕೆ ಎದುರು ಮಾತನಾಡಬಹುದಿತ್ತು ಎಂದು ಸುಮ್ಮನಾದಳು ಆದರೆ ಮನಸ್ಸಿನಲ್ಲಿ ನಡೆದ ವಿಚಾರ ಮುಖದಲ್ಲಿ ಮೂಡದಿರಲಿಲ್ಲ. ಕುರ್ಚಿಯಲ್ಲಿ ಸರಿದು ಕುಳಿತಳು ರಂಗನಾಥನ್‌ನ ಲಕ್ಷ್ಯ ಆಕೆಯೆಡೆಗೆ ಹರಿಯಿತು.

"ಸರಿ ಅದೆಲ್ಲ ಯಾಕೆ? ನಿಮ್ಮ ಫ್ರೆಂಡನ್ನ ಇಂಟ್ರೊಡ್ಯೂಸ್ ಕೂಡ ಮಾಡಬಾರದೆ?"

"ಮಾಡಲಿಲ್ಲವೆ? ಎಲ್ಲಿದ್ದೀರಿ? ಓ! ಮರೆತೆ ಇದ್ದೆ—"

ಎಂದು ಮತ್ತೆ ಅದೇ ಕಿಡಿಗೇಡಿಯಾದ, ಲಘುವಾದ ನಗು ನಕ್ಕಳು

"ಹೌದು, ಹೌದು, ಏನೋ ಹೇಳಿದಿರಿ. ಆದರೆ ನನ್ನ ಲಕ್ಷ್ಯ—"

"ಮಧುಮಾಲಿಕಾ—" ಎಂದು ಮತ್ತೆ ನಗು

"ಅಯ್ಯೋ ನಿಮಗೇನು ಹುಚ್ಚು? ಅದಿರಲಿ. ಏನೆಂದಿರಿ? ಎಲ್ಲಿದ್ದಾರೆ?"

"ನಮ್ಮಲ್ಲಿಯೇ!"

"ಅಂದರೆ?"

"ಇಲ್ಲಿಯೆ ಹೈಸ್ಕೂಲಿನಲ್ಲಿ ಕೆಲಸ ಹಿಡಿದಿದ್ದಾಳೆ—ಆನರ್ಸ್ ಗ್ರ್ಯಾಜುಯೇಟ್—ನಾವಿಬ್ಬರೂ ಬಹಳ ದಿನ ಕೂಡಿಯೇ ಇದ್ದೆವು—ಕಾಲೇಜಿನಲ್ಲಿ!"

" ಹಾದಿ ? "

" ಅದೇನು, ಸ್ಕೂಲ್ ಸೇರಿಬಿಟ್ಟಿರಿ ? " ಎಂದ ರಂಗನಾಥನ್ ಮೋಹಿನಿ ಯನ್ನುದ್ದೇಶಿಸಿ.

" ಹುಂ ಏನಾದರೊಂದು ಕೆಲಸ—"

" ನಾನೂ ಒಂದು ಕಾಲಕ್ಕೆ ಸ್ಕೂಲ್‌ಮೇಷ್ಟ್ರಾಗಿದ್ದೆ ಏನು ಕೆಲಸ! ತೀರಾ ಬೇಸರವಾಗಿಬಿಡುತ್ತದೆ. ಹೇಳಿದ್ದನ್ನೇ ಹೇಳುವುದು. ಮುಂಜಾನೆ ಯಿಂದ ಸಂಜೆಯ ತನಕ ಕುರಿಗಳನ್ನು ಕಾಯುವ ಕೆಲಸ "

" ನನಗೇನೂ ಹಾಗೆನಿಸುವುದಿಲ್ಲ " ಎಂದು ಮೋಹಿನಿ

" ಎಷ್ಟು ದಿನ ಆಯಿತು ನೀವು ಕೆಲಸಕ್ಕೆ ಸೇರಿ ? "

" ಎಷ್ಟು ದಿನ ಎಲ್ಲಿಯದು ? ಇನ್ನೂ ಒಂದು ವಾರ ಕೂಡ ಆಗಿಲ್ಲ" ಎಂದು ಅನುರಾಧೆ ನಡುವೆಯೆ ಬಾಯಿಹಾಕಿದಳು

" ಸರಿಯಾಯಿತಲ್ಲ ಮತ್ತೆ ಮೊದಮೊದಲು ಹಾಗೆಯೇ ಅನಿಸುತ್ತದೆ ಅದರಂಥ ಕೆಲಸ ಬೇರೆ ಇಲ್ಲ ಎಂದೇ ತೋರುತ್ತದೆ ಒಂದೆರಡು ವರ್ಷಗಳಲ್ಲಿ ಜೀವ ಬೇಡವಾಗುತ್ತದೆ ! "

ಮೊದಲು ಅಪ್ಪ, ಈಗ ರಂಗನಾಥನ್, ಅಲ್ಲದೆ ಇನ್ನು ಯಾರು ಯಾರೊ, ಎಲ್ಲರೂ ತನ್ನ ಕೆಲಸದ ಬಗೆಯಲ್ಲಿ ನಿರುತ್ಸಾಹದ ಮಾತುಗಳನ್ನೆ ಹೇಳುತ್ತಿದ್ದುದು ಮೋಹಿನಿಗೆ ಆಶ್ಚರ್ಯವೆನಿಸಿತು ಚಿಕ್ಕ ಮಕ್ಕಳಿಗೆ ವಿದ್ಯಾ ಭ್ಯಾಸ ಹೇಳಿಕೊಟ್ಟು, ಅವರ ಮನಸ್ಸನ್ನು ಬೆಳೆಯಿಸುವ ಕೆಲಸ ಇಷ್ಟು ಬೇಸರದ್ದೆ ? ಅಂಥ ಕೆಲಸ ಬೇಡವಾದವರಿಗೆ ಅದು ಬೇಸರವಾಗಬಹುದು ದ್ಧೆಯಿಲ್ಲದೆ ಕೆಲಸಕ್ಕೆ ತೊಡಗಿದರೆ ಯಾವ ಕೆಲಸ ಬೇಸರವಾಗಲಿಕ್ಕಿಲ್ಲ ? [illegible]ರೆ ತಾನೀಗ ಕೆಲಸ ಹಿಡಿದದ್ದು ಅಂಥ ಶ್ರದ್ಧೆಯಿಂದಲೆ ? ಅಥವಾ ಕೈಗೆ ಬಂದ ಕೆಲಸವನ್ನು ಬಿಡಬಾರದೆಂದ ? ಈಗ ಹಾಗೆ ಇರಬಹುದು—ನಾಲ್ಕು ದಿನ ಅದೇ ಕೆಲಸದಲ್ಲಿ ಮನಸ್ಸನ್ನು ತೊಡಗಿಸಿದರೆ ? ಆದರೆ ಇವರೆಲ್ಲರೂ ಹೇಳು ವಂತೆ ಬೇಸರ ಹುಟ್ಟಿದರೆ ? ಛೆ ! ಅವೆಲ್ಲ ಈಗ ಏಕೆ ? ಪೂರ್ತಿಯಾಗಿ ಕೆಲಸವನ್ನೇ ಪ್ರಾರಂಭಿಸದೆ ಮುಂದಿನ ಯೋಚನೆಗಳೇಕೆ ? ಎಂದುಕೊಂಡು ಮೋಹಿನಿ ಸುಮ್ಮನಾದಳು ಆಕೆ ಸುಮ್ಮನಾದರೂ ಆಕೆಯ ಮುಖದ ಮೇಲಿಂದಲೆ ಮನಸ್ಸಿನಲ್ಲಿ ನಡೆದುದನ್ನು ಗುರುತಿಸಬಲ್ಲ ರಂಗನಾಥನ್

ಸಿಗರೇಟೊಂದನ್ನು ಹೊತ್ತಿಸುತ್ತ ಕೇಳಿದ.

"ಅದು ಹೋಗಲಿ, ಈಗ ಟೀಯೊ ಅಥವಾ ಡ್ರಿಂಕ್ಸ್ ?"

"ಡ್ರಿಂಕ್ಸ್ ? " ಎಂದು ಅನುರಾಧೆ

"ಡ್ರಿಂಕ್ಸ್ ಅಂದರೆ ಆರೆಂಜ್, ಲೆಮನೆಡ್ ಅಥವಾ—"

"ಹೇಗೂ ಹಾಗಿದ್ದರೆ ಟೀ !"

ರಂಗನಾಥನ್ ಗಂಟೆ ಬಾರಿಸಿ ಚಹಕ್ಕೆ ಆರ್ಡರ್ ಹೇಳಿಯಾಯಿತು ಇಷ್ಟರಲ್ಲಿ ಮೋಹಿನಿಯ ಆಕೃತಿಯನ್ನು ಆತ ಎರಡು ಮೂರು ಕಡೆ ನಿಂತು ನೋಡಿದ್ದ ತನ್ನನ್ನು ಆತ ತೀಕ್ಷ್ಣವಾಗಿ ನೋಡಿದ್ದು—ಈಗ ಮತ್ತೆ ಎದುರಿನಲ್ಲಿ ಕುಳಿತಾಗ ತನ್ನ ಕಣ್ಣು ತಪ್ಪಿಸಿ ನೋಡುತ್ತಿದ್ದುದು—ಮೋಹಿನಿಗೆ ಒಂದು ಕ್ಷಣ ಮನಸ್ಸಿನಲ್ಲಿ ಸಂಕೋಚವನ್ನುಂಟುಮಾಡಿತ್ತು ಆದರೆ ಆತನ ಮುಖವನ್ನು ನೋಡಿದರೆ ಸಲ್ಲದ ಯಾವ ವಿಚಾರವೂ ಅಲ್ಲಿ ಇದ್ದಿರಲಾರದೆಂಬುದು ಸ್ಪಷ್ಟವಾಗಿ ಕಾಣಿಸುತ್ತಿತ್ತಲ್ಲದೆ, ಆತನೊಡನೆ ಮಾತನಾಡಬೇಕೆಂಬ ಇಚ್ಛೆಯನ್ನು ಹುಟ್ಟಿಸುವ ಯಾವುದೋ ಒಂದು ಬಗೆಯ ನಯ, ಒಂದು ಸ್ಪಷ್ಟವಾದ ರಸಿಕತೆ ಅಲ್ಲಿ ಎದ್ದು ಕಾಣಿಸುತ್ತಿದ್ದವು ಏನಾದರೊಂದು ವಿಷಯವನ್ನೆತ್ತಬೇಕೆಂದು ಮೋಹಿನಿ ಕೇಳಿದಳು

"ಕುಲೀನ ಸ್ತ್ರೀಯರು ಸಿನೆಮಾ ಸೇರುವ ವಿಚಾರದಲ್ಲಿ ಚರ್ಚೆ ನಡೆದಿದೆಯಲ್ಲಾ ಪೇಪರುಗಳಲ್ಲಿ ? ಅದರ ವಿಷಯ—ನಿಮ್ಮ ಅಭಿಪ್ರಾಯವೇನು ?"

"ನನ್ನನ್ನು ಕೇಳಿದರೆ ಅದರಲ್ಲಿ ಯಾವ ತಥ್ಯಾಂಶವೂ ಇಲ್ಲ ಚರ್ಚೆ ಮಾಡಬೇಕಾದದ್ದೇನಿದೆ ಅದರಲ್ಲಿ ?"

"ಹಾಗಿದ್ದರೆ ಜನಗಳಿಗೆ ಸಿನೆಮಾ ಸೇರಿದ ನಟನಟಿಯರ ವಿಚಾರದಲ್ಲಿ ತಪ್ಪು ತಿಳಿವಳಿಕೆಯಾಗುತ್ತಿರಬೇಕು—"

"ನಿಸ್ಸಂದೇಹವಾಗಿ !"

"ಯಾಕೆ ? ನಿನಗೆ ಸೇರಬೇಕಾಗಿದೆಯೆ ?" ಎಂದು ಅನುರಾಧೆ

"ಇಲ್ಲದಿದ್ದರೆ ಅದರ ಮಾತನ್ನೇ ಆಡಬಾರದೆ ?"

"ಮುಖ್ಯವಾಗಿ, 'ಕಲೆಯ ಸೇವೆ' ಅದು ಇದು ಎಂದು ದೊಡ್ಡ ದೊಡ್ಡ ಮಾತುಗಳನ್ನಾಡಿ ಅನೀತಿಗೆ ಇಳಿದ ಉದಾಹರಣೆಗಳಿಲ್ಲದೆ ಇಲ್ಲ ಇಂಥ ಉದಾಹರಣೆಗಳಿಂದಲೆ ಇದಿ ವ್ಯವಸಾಯಕ್ಕೆ ಬಹುಮಟ್ಟಿಗೆ ಹೆಸರು ಬಂದಿದೆ"

"ಹಾಗಿದ್ದರೆ ಕೆಟ್ಟದಕ್ಕೆ ಆಸ್ಪದವಿಲ್ಲದೆ ಇಲ್ಲ ಎಂದಹಾಗಾಯಿತು ಅಷ್ಟನ್ನಾದರೂ ಒಪ್ಪುತ್ತೀರಲ್ಲ."

"ಆಸ್ಪದ ಎಲ್ಲಿ ಇಲ್ಲ? ಕೆಟ್ಟದು ಬೇಕು ಎನ್ನುವವನಿಗೆ ಎಲ್ಲಿಯೂ ಬಾಗಿಲು ತೆರೆದದ್ದೇ. ಸಿನೆಮಾ ಎಂದೇನು ವಿಶೇಷ? ಇಷ್ಟೇ. ನಾಲ್ಕು ಜನರ ಕೂಡ ಒಂದು ವಿಶೇಷವಾದ ಬಗೆಯಲ್ಲಿ ಸಂಪರ್ಕ ಬರುತ್ತದೆ ಅಷ್ಟರ ಮಟ್ಟಿಗೆ ಆಸ್ಪದ ಅನ್ನಬಹುದು ಆದರೆ ವ್ಯವಸಾಯವೆಂದು ಮಾಡಬೇಕೆಂದ ಕೆಲಸಗಳಲ್ಲಿ ಸ್ವತಹದ ಭಾವನೆಗಳನ್ನು ತೊಡಕಿಸಿದರೆ ತೊಂದರೆ ಖಂಡಿತ ಇಲ್ಲವಾದರೆ ಯಾವ ತೊಂದರೆಯೂ ಇಲ್ಲ!"

"ಅದೇ ಎಷ್ಟರಮಟ್ಟಿಗೆ ಸಾಧ್ಯ ಎಂಬುದೇ ನನ್ನ ಪ್ರಶ್ನೆ" ಎಂದು ಮೋಹಿನಿ ಸವಾಲು ಹಾಕಿದಳು

"ಅದು ನಿಜವಾಗಿಯೂ ಅವರವರಿಗೆ ಸಂಬಂಧಪಟ್ಟ ವಿಷಯ ಅದಕ್ಕೇ ನಾನು ಯಾವಾಗಲೂ ಹೇಳುವುದು ಸುಶಿಕ್ಷಿತರಾಗಿದ್ದವರಿಗೆ ತಮ್ಮ ಹೊಣೆ ತಿಳಿಯುತ್ತದೆ—ಅಂಥವರು ಹೆಚ್ಚಾಗಿ ಈ ವ್ಯವಸಾಯಕ್ಕೆ ತೊಡಗಿದರೆ ಚಿತ್ರಗಳ ಯೋಗ್ಯತೆಯೂ ಬೆಳೆಯುವುದಲ್ಲದೆ ಇಂಥ ಸಮಸ್ಯೆಗಳು ತಾವಾಗಿಯೆ ಇಲ್ಲದಾಗುತ್ತವೆ! ಇದೀಗ ನೀವೇ ನೋಡಿದಿರಲ್ಲ—ಹೇಗೆ ಕೆಲಸಗಳನ್ನು ತಡೆಹಿಡಿದು ತೊಂದರೆ ಮಾಡುತ್ತಾರೆ ಆದರೇನು? ಸುಶಿಕ್ಷಿತರನ್ನು ನಮ್ಮ ಕಡೆಗೆ ಸೆಳೆಯುವುದೆ ಕಷ್ಟದ ಕೆಲಸವಾಗಿದೆ"

"ಜನರಲ್ಲಿ ಇದ್ದ ತಪ್ಪು ಕಲ್ಪನೆ ಇಲ್ಲವಾದರೆ—" ಎಂದು ಮೋಹಿನಿ ಸುಮ್ಮನಾದಳು

ಚಹ ಬಂದಿತು. ಹಿಂದಿನಿಂದ ಆಪಟೆ ಬಂದ

"ಏನಾಯಿತು?"

"ರಾತ್ರಿ ಒಂಬತ್ತು ಗಂಟೆಗೆ ಎಂದು ಎಲ್ಲರಿಗೂ ಹೇಳಿಯಾಗಿದೆ"

"ಮಧುಮಾಲಿಕೆ?"

"ಬರುತ್ತಾಳಂತೆ—ಬರಲೇಬೇಕು ಎಂದು ಹೇಳಿದೆ"

"ಏನೆಂದಳು? ಖಂಡಿತವಾಗಿ ಬರುತ್ತಾಳೆಯೆ?"

"ಏನೇನೊ ಗೊಣಗಾಟ ಹೂಡಿದಳು ಈ ಜ್ವರ ತಲೆನೋವು ಎಲ್ಲ ನೆವ ಎಂದು ಕಾಣುತ್ತದೆ ಅದಕ್ಕೆ ನಾನೂ ಒಂದಿಷ್ಟು ಜೋರಾಗಿಯೆ ಹೇಳಿದೆ.

ಏನಿದ್ದರೂ ಎರಡು ದಿನಗಳಲ್ಲಿ ಶೂಟಿಂಗ್ ನಡೆಯಲೇಬೇಕು ಎಂದು "

"ಸರಿ ಇಂದು ಸೀವಿಲ್ಲದಿದ್ದರೆ ನಾಳೆ ನನಗೇ ಹೇಳಬೇಕಾಗುತ್ತಿದ್ದಿತು. ಒಂದಿಷ್ಟು ಮೆತ್ತಗಾಗಿ ತೋರಿದರೆ ಮೈಮೇಲೆ ಬರುತ್ತಾರೆ—"

ಚಹವನ್ನು ರಂಗನಾಥನ್ ಕಪ್ಪುಗಳಲ್ಲಿ ಸುರುವಿ ಕೊಟ್ಟ. ಮೋಹಿನಿಗೆ ಚಹ ಕೊಡುವಾಗ ಹೇಳಿದ

"ಅಂತೂ ನಿಮಗೆ ಚಿತ್ರಪಟಗಳಲ್ಲಿ ಇಂಟ್‌ರೆಸ್ಟ್ ಇದೆ ಎಂದಹಾಗೆ ಆಯಿತು ಸಂತೋಷದ ವಿಷಯ!"

"ಇಂಟರೆಸ್ಟ್ ಏನು? ಹೀಗೆಯೆ—"

ಅನುರಾಧೆಯಲ್ಲಿ ಈ ಎರಡು ಮಾತಿನಿಂದ ಅಸೂಯೆ ಮೂಡಿರಬೇಕೆಂದು ಕಾಣುತ್ತದೆ ಅಂತೆಯೆ,

"ಇಂಟರೆಸ್ಟ್ ಇಲ್ಲದವರಲ್ಲಿಯೂ ಅದನ್ನು ಹುಟ್ಟಿಸುವವರು ನೀವು—" ಎಂದಳು.

"ಅಷ್ಟು ಮಾಡದಿದ್ದರೆ ನಮ್ಮ ಕೆಲಸವೇ ನಡೆಯುವುದು ಸಾಧ್ಯವಿಲ್ಲ ಹುಟ್ಟಿದಾಗಲೆ ಯಾರೂ ಸ್ಟಾರ್ ಆಗಿಯೆ ಇರುವುದಿಲ್ಲ ಸ್ಟಾರ್ಸ್ ಜನ್ಮ ತಾಳುವುದು ಸ್ಟೂಡಿಯೋಗಳಲ್ಲಿ!"

"ಅದೂ ನಿಮ್ಮ ಸ್ಟೂಡಿಯೋದಲ್ಲಿ ಮಾತ್ರ ಎಂದು ಕಾಣುತ್ತದೆ!" ಎಂದು ಅನುರಾಧೆಯ ಅಣಕು

"ಅಷ್ಟು ದುರಭಿಮಾನ ನನಗೇನೂ ಇಲ್ಲ ಆದರೂ—"

"ಆದರೂ ಏನು?—"

"ನೀವು ಬೇಕಾದರೆ ಒಂದು ಚಾನ್ಸ್ ತೆಗೆದುಕೊಳ್ಳಿರಿ ನಿಮ್ಮನ್ನೂ ಸ್ಟಾರ್ ಮಾಡಿಬಿಡುತ್ತೇವೆ!"

ಈ ಮಾತು ತನ್ನ ಅಣಕಿಗೆ ಪ್ರತಿಯಾಗಿ ಅಣಕು ಎಂಬುದು ಅನುರಾಧೆಗೆ ಗೊತ್ತು ಮಾತು ಹೊಸದೂ ಆಗಿರಲಿಲ್ಲ ಆದ್ದರಿಂದ ಮಾತನ್ನು ನಗುವಿನಲ್ಲಿ ತೇಲಿಸಿ ಮುಗಿಯಿಸಿದಳು

"ನಾನೇ? ಮುಗಿದೇ ಹೋಯಿತಲ್ಲ ಆ ಚಿತ್ರಕ್ಕೆ ದೇವರೇ ಗತಿ!"

"ದೇವರಲ್ಲ ಆಪರೇಟರೇ ಗತಿ!"

ಎಂದುದಕ್ಕೆ ಎಲ್ಲರೂ ಮನಃಪೂರ್ವಕವಾಗಿ ನಕ್ಕರು ಹರಟೆ ಎಲ್ಲೆಲ್ಲಿಯೊ

ಸಾಗಿತು ಒಂಬತ್ತು ಗಂಟೆಯ ವರೆಗೆ ಆ ಪಟಿ ರಂಗನಾಥನ್ನರಿಗೆ ಕೆಲಸವಿರಲಿಲ್ಲ. ಮತ್ತೆ ಚಹವಾಯಿತು ರಂಗನಾಥನ್ ಸಿಗರೇಟು ಸೇದುತ್ತಲೆ ಇದ್ದ ಹೆಚ್ಚಾಗಿ ಆತನೆ ಮಾತನಾಡುತ್ತಿದ್ದ ಮೋಹಿನಿಯೆ ಅನುರಾಧೆಗಿಂತ ಹೆಚ್ಚಾಗಿ ಮಾತ ನಾಡಿದಳು. ಏಳಾಯಿತು, ಏಳೂವರೆಯಾಯಿತು ಮೋಹಿನಿಯ ಹೊರತು ವೇಳೆಯ ಪರಿವೆ ಯಾರಿಗೂ ಇದ್ದಹಾಗೆ ಕಾಣಲಿಲ್ಲ ಕೊನೆಗೆ ಅನುರಾಧೆ ಯನ್ನು ಕೇಳಿದಳು

"ಹೊರಡುವುದಿಲ್ಲವೆ ಇನ್ನು ?"

"ಎಲ್ಲಿಗೆ ? ಮನೆಗಾದರೂ ಹೋಗಿ ಮಾಡುವುದೇನಿದೆ ? ಎಲ್ಲರೂ ಸೇರಿಯೇ ಹೋಗೋಣ!"

"ಎಲ್ಲರೂ ಸೇರಿ ಎಂದರೆ ? ಇವರ ಕೆಲಸ ಮುಗಿದಮೇಲೆಯೆ ?"

"ಮುಗಿದಮೇಲೆಂದರೆ ಹಾಗೆಷ್ಟು ಹೊತ್ತಾದೀತು ? ಹನ್ನೊಂದೂವರೆಗೆ ಮುಗಿಯಬಹುದು ಅಲ್ಲವೆ, ಡೈರೆಕ್ಟರ್ ಸಾಹೇಬ್ ?"

"ಸುರುವಾಗಲಿಕ್ಕೆಯೆ ಗತಿಯಿಲ್ಲ ಅದನ್ನೇನು ಹೇಳಲಿ ? ಎಲ್ಲವೂ ಸರಿಯಾಗಿ ಸಾಗಿದರೆ ಅಷ್ಟಕ್ಕೆ ಮುಗಿಯಬಹುದು—"

"ಅಷ್ಟು ಹೊತ್ತು ಏನು ಕೂಡುವುದೆ ಇಲ್ಲಿ ? ನನ್ನಿಂದ ಸಾಧ್ಯವಿಲ್ಲ, ತಾಯಿ—"

"ಯಾಕೆ, ಏನು ಅವಸರ ? ಇದ್ದರೆ ಶೂಟಿಂಗ್ ನೋಡಬಹುದಲ್ಲ—" ಎಂದು ರಂಗನಾಥನ್

"ಶೂಟಿಂಗ್ ನೋಡಬಹುದು ಆದರೆ ನನಗೆ ನಾಳೆ ತುಂಬಾ ಕೆಲಸ, ಇನ್ನೊಮ್ಮೆ ಯಾವಾಗಲಾದರೂ ನೋಡಬಹುದು—"

"ಅಂತೂ ನೀನಾಗಿಯೆ ಆಮಂತ್ರಣ ಹಚ್ಚಿಕೊಂಡೆ ಎನ್ನು, ಹಾಗಾದರೆ—"

ಎಂದು ಅನುರಾಧೆ ನಗೆಯಾಡಿದಳು

"ಆಮಂತ್ರಣವೇನು ? ಈಗ ನೋಡಬಹುದು ಎಂದುದಕ್ಕೆ ಹೇಳಿದೆ ನೀನು ಬರುವ ಹಾಗಿರದಿದ್ದರೆ ನಾನು ಹೊರಟುಬಿಡುತ್ತೇನೆ" ಎಂದು ಎದ್ದೇ ಬಿಟ್ಟಳು

"ಯಾಕೆ ? ಇಲ್ಲಿಯೇ ಊಟ ಹೇಳಿಬಿಡುವಾ. ಸುಮ್ಮನೆ ಒಬ್ಬಳೇ

ಹೋಗಿ ಏನದು ನೀನು ಮಾಡುವುದು ?”

“ಬೇಡ. ನೀನು ಇರು ನಾನು ಹೊರಡುತ್ತೇನೆ—”

“ಹಾಗಿದ್ದರೆ—”

ಎಂದು ಅನುಮಾನಿಸುತ್ತಿರುವಷ್ಟರಲ್ಲಿ ರಂಗನಾಥನ್ ಕೇಳಿದ :

“ಹೊರಡಲೇಬೇಕೆ ?”

“ಹೌದು”

“ಹಾಗಿದ್ದರೆ ಒಂದು ನಿಮಿಷ ತಡೆಯಿರಿ. ಕಾರ್ ಹೇಳುತ್ತೇನೆ”

ಎಂದು ಗಂಟೆ ಬಾರಿಸಿದ ಎರಡು ನಿಮಿಷಗಳಲ್ಲಿ ಕಾರು ಬಾಗಿಲಿಗೆ ಬಂದು ನಿಂತಿತು ಜವಾನ ಬಾಗಿಲು ತೆರೆದು ನಿಂತಿದ್ದ ಮೋಹಿನಿ ರಂಗ ನಾಥನ್‌ನಿಗೆ ನಮಸ್ಕಾರ ಹೇಳಿ ಕಾರನ್ನೇರಿದಳು.

“ಇನ್ನೊಮ್ಮೆ ಯಾವಾಗಲಾದರೂ ನಿಮಗೆ ಬಿಡುವಾದಾಗ ಬನ್ನಿ—”

“ನಾನಿಲ್ಲವೆಂದರೂ ಈಕೆ ಎಲ್ಲಿ ಕೇಳುತ್ತಾಳೆ ? ಬರುತ್ತೇನೆ ನಮಸ್ಕಾರ”

ಎನ್ನುತ್ತಿರುವಾಗಲೇ ಕಾರು ಹೊರಟಿತು ಹತ್ತು ನಿಮಿಷಗಳಲ್ಲಿ ಮೋಹಿನಿ ತನ್ನ ಕೋಣೆಯ ಬಾಗಿಲನ್ನು ತೆರೆಯುತ್ತಿದ್ದಳು. ರಂಗನಾಥನ್‌ನ ದೊಡ್ಡದಾದ —ವಿಲಾಸಮಯವಾದ—ಹಡ್ಸನ್ ಕಾರಿನೆದುರು ಆಪಟೆಯ ಆಸ್ಟಿನ್ ತೀರ ಚಿಕ್ಕದಾಗಿ ಕಂಡಿತು. ಆದರೆ ಕೋಣೆಯಲ್ಲಿ ಬಂದು ದೀಪವನ್ನುರಿಸಿದಾಗ ಆ ಆಸ್ಟಿನ್ ಅಷ್ಟೇ, ಹಡ್ಸನ್ ಅಷ್ಟೇ, ಎರಡೂ ತನ್ನ ಜೀವನದಿಂದ ಬಹು ದೂರವಾಗಿವೆ ಎಂದು ತೋರಿತು, ಮೋಹಿನಿಗೆ

*

## ೫

ಸ್ಟುಡಿಯೋಕ್ಕೆ ಹೋಗಿಬಂದನಂತರದ ಒಂದು ವಾರವನ್ನು ಮೋಹಿನಿ ಒಳ್ಳೆ ಉತ್ಸಾಹದಲ್ಲಿಯೇ ಕಳೆದಳು ತನ್ನ ಬದುಕಿನ ಸಮಸ್ಯೆ ಬಗೆಹರಿದು ತಾನು ನಿಶ್ಚಿಂತಳಾಗಿ ಇರಬಹುದು ಎಂದು ತೋರಿತು ಪ್ರತಿಯೊಂದು ಮಾತಿನಲ್ಲಿಯೂ ಆಪಟೆ ದಂಪತಿಗಳು ತೋರುತ್ತಿದ್ದ ಸಹಾನುಭೂತಿ, ಒದಗಿಸುತ್ತಿದ್ದ ಸಹಾಯಗಳಿಂದಾಗಿ ಯಾವ ಅನಾನುಕೂಲವೂ ಇರಲಿಲ್ಲ ಅವರ ಮುಖಾಂತರವೇ ಆಗಿದ್ದ ರಂಗನಾಥನ್ ಪರಿಚಯವೂ ಅದೇ ಬಗೆಯ ಸಹಾನುಭೂತಿ ಸಹಾಯಗಳು ಸಿಕ್ಕಬಹುದೆಂಬ ಆಶ್ವಾಸನದಂತೆಯೇ ಇದ್ದಿತು ಆದರೆ ಇದೆಲ್ಲವೂ ಒಂದು ವಾರ ಮಾತ್ರ ಅದೇಕೋ ನಿಧಾನವಾಗಿ ಆ ಗೆಲುವಿನ ಮನಃಸ್ಥಿತಿ ಮಾಯವಾಗತೊಡಗಿತು ಹೇಳಹೆಸರಿಲ್ಲದ ಅಸಂತೋಷವೊಂದು ಒಳಗಡೆ ತಲೆದೋರತೊಡಗಿತು. ಇದಕ್ಕೆ ಮುಖ್ಯವಾದ ಕಾರಣವೆಂದರೆ ಆ ವಾರದ ಕೊನೆಯಲ್ಲಿ ಒಂದೆರಡು ಸಲ ವಸಂತನನ್ನು ಹುಡುಕಿಕೊಂಡು ಹೋದರೂ ಆತ ಸಿಕ್ಕದಿದ್ದುದು ಹಾಗೆ ನೋಡಿದರೆ ಆತನನ್ನು ಕಾಣಲೇ ಬೇಕೆಂಬ ಯಾವ ವಿಶೇಷ ಸಂದರ್ಭವೂ ಇರಲಿಲ್ಲ ಏನೋ ಆತನೊಡನೆ ಒಂದರ್ಧ ಗಂಟೆ ಕಾಲ ಕಳೆದು ಮುಕ್ತಕಂಠವಾಗಿ ಮಾತನಾಡಬೇಕು ಎಂಬ ಒಂದು ಆಸೆಯ ಹೊರತು ಬೇರೆ ಉದ್ದೇಶವೂ ಇರಲಿಲ್ಲ. ಆದರೆ ವಸಂತ ಸಿಕ್ಕಲೇ ಇಲ್ಲ.

ಮತ್ತೆ ಎರಡು ವಾರ ಕಳೆಯಿತು. ಶಾಲೆಯಲ್ಲಿಯ ನಿತ್ಯಕ್ರಮ ಯಥಾವತ್ತಾಗಿ ನಡೆದೇ ಇತ್ತು. ತನ್ನ ಕೆಲಸವನ್ನು ತನಗೆ ತಿಳಿದಂತೆ ಮೋಹಿನಿ ಮಾಡುತ್ತಿದ್ದಳಾದ್ದರಿಂದ ಮುಖ್ಯಾಧ್ಯಾಪಿಕೆಯ ಸದಭಿಪ್ರಾಯವನ್ನು ಗಳಿಸಲಾಗಿರದಿದ್ದರೂ ಆಕೆಯಿಂದ ಯಾವ ಮಾತನ್ನೂ ಹೇಳಿಸಿಕೊಳ್ಳಬೇಕಿರಲಿಲ್ಲ. ಕೈಯಲ್ಲಿಯ ಕೆಲಸವನ್ನು ತನಗೆ ತಿಳಿದಮಟ್ಟಿಗೆ ಉತ್ತಮವಾಗಿ ಮಾಡುವುದರಲ್ಲಿ ಒಂದು ಬಗೆಯ ಸಂತೋಷವೂ ಎನಿಸುತ್ತಿತ್ತು. ಆದರೆ ಶಾಲೆಯಿಂದ ಮನೆಗೆ ಬಂದನಂತರ ಎಲ್ಲವೂ ಬರಿದಾಗಿ ಕಾಣುತ್ತಿತ್ತು ಬದುಕಿನಲ್ಲಿಯ ಅವ್ಯಾಜ ಮನೋಹರವಾದ ಸಂತೋಷಕ್ಕೆ ಸಂಕೇತಗಳಂತಿದ್ದ ಮಕ್ಕಳ ಜೊತೆಯಲ್ಲಿ ದಿನವೆಲ್ಲವೂ ಕಳೆಯುತ್ತಿತ್ತು. ಆದರೆ ಶಾಲೆ ಬಿಟ್ಟನಂತರ ಬರಿದಾಗಿ ಬೋಳಾಗಿ

ಕಾಣುವ ಶಾಲೆಯ ಕಟ್ಟಡದಂತೆಯೇ ಮೋಹಿಸಿಯ ಮನಸ್ಸು ಬರಿದಾಗಿ ಬೋಳಾಗಿ ಮರುದಿನಕ್ಕಾಗಿ ಕಾಯುತ್ತ ನಿಲ್ಲುತ್ತಿತ್ತು ಆಗೀಗ ಅನುರಾಧೆ ಬಂದು ಮನಬಂದಂತೆ ಹರಟೆ ಹೊಡೆಯುತ್ತಿದ್ದಳೇನೋ ನಿಜ ಆದರೆ ಅನುರಾಧೆಯ ರೀತಿಯೇ ಬೇರೆ ಆಕೆಯ ಬದುಕಿನಲ್ಲಿ ಸಮಸ್ಯೆಗಳಿರಲಿಲ್ಲ, ತೊಂದರೆಗಳಿರಲಿಲ್ಲ ಏನಿದ್ದರೂ ಅವನ್ನು ಲೆಕ್ಕಿಸಿ ಮನಸ್ತಾಪ ಮಾಡಿಕೊಳ್ಳುವ ವೃತ್ತಿ ಆಕೆಯದಾಗಿರಲೇ ಇಲ್ಲ ಹೀಗಾಗಿ ಅನುರಾಧೆಯ ಆತ್ಮೀಯತೆ ಬದುಕಿನ ಬಹಿರಂಗಗಳಿಗೆ ಮಾತ್ರ ಸಂಬಂಧಪಟ್ಟುದಾಗಿತ್ತು ಅಂತರ್ಯಕ್ಕೆ ಸಂಬಂಧಿಸಿದ ಯಾವ ಮಾತನ್ನೂ ಆಕೆಯೊಡನೆ ಆಡುವಂತಿರಲಿಲ್ಲ ಆಡಿ ಪ್ರಯೋಜನವೂ ಇರಲಿಲ್ಲ ಆಪಟೆ ಎಷ್ಟಾದರೂ ಗಂಡಸು, ಪರಕೀಯ ನಾಲ್ಕಾರು ಬಾರಿ ತಾನಾಗಿಯೆ ಸಲಿಗೆಯಿಂದ ಮಾತನಾಡಿಸಿದ್ದ ಯೋಗಕ್ಷೇಮವನ್ನು ವಿಚಾರಿಸಿದ್ದ ತಾನು ಶಾಲೆಗೆ ಹೋಗುವ ವೇಳೆಯ ಸುಮಾರಿಗೆ ಸ್ಟುಡಿಯೋದ ಕಡೆಗೆ ಹೋಗುವುದಿದ್ದಾಗಲೆಲ್ಲ ಶಾಲೆಯ ವರೆಗೆ ಕಾರಿನಲ್ಲಿ ಕರೆದುಕೊಂಡೂ ಹೋಗಿದ್ದ. ಆದರೆ ಆತನೊಡನೆ ಯಾವ ಮಾತನ್ನೂ ಮನಬಿಚ್ಚಿ ಆಡಬೇಕು ಎನಿಸುತ್ತಿರಲಿಲ್ಲ ಹೀಗಾಗಿ ಮನಸ್ಸಿನ ಏಕಾಂತ ದಿನದಿನಕ್ಕೂ ಬಲಿಯುತ್ತಿತ್ತು ವಿಮನಸ್ಕತೆ ದಿನದಿನವೂ ಬೆಳೆಯುತ್ತಿತ್ತು ವಸಂತನ ಜೊತೆಯಲ್ಲಿ ಈ ಏಕಾಂತವನ್ನು ಮರೆಯಬಹುದು ಎಂದು ಕಾಣುತ್ತಿತ್ತು ಆದರೆ ವಸಂತ ಸಿಕ್ಕಲೇ ಇಲ್ಲ ಎರಡು ಮೂರು ಸಾರೆ ಆತ ಸಾಯಂಕಾಲ ಊಟಕ್ಕೆ ಬರುವ ಹೊತ್ತಿಗೆ ಹೋಟಲಿನ ಹೊರಗಡೆಯಲ್ಲಿ ನಿಂತು ಕಾದಳು ಇನ್ನೆರಡು ದಿನ ತಡೆದು, ಕೊನೆಗೆ ಮನಸ್ಸು ನಿಲ್ಲಲಾರದ್ದಕ್ಕೆ ಒಳಗಡೆ ಹೋಗಿ ವಿಚಾರಿಸಿಯೂ ಬಂದಳು. ಆಕೆಗೆ ಸಿಕ್ಕ ಉತ್ತರ ಸಮಾಧಾನವನ್ನು ಕೊಡುವಂಥದಾಗಿರಲಿಲ್ಲ ವಸಂತ ಎರಡು ವಾರಗಳಿಂದ ಬಂದಿರಲಿಲ್ಲವೆಂದೂ, ಒಂದು ತಿಂಗಳ ರಜೆಯ ಮೇಲೆ ಹೋದ ಹಾಗಿದೆಯೆಂದೂ ತಿಳಿಯಿತು. ಆತ ಬರುವುದು ಯಾವಾಗ ? ಎಂಬ ಪ್ರಶ್ನೆಯನ್ನು ಮ್ಯಾನೇಜರರಿಗೆ ಕೇಳುವುದು ಸರಿಯಾದುದೂ ಅಲ್ಲ, ಪ್ರಯೋಜನದ್ದೂ ಅಲ್ಲವೆಂದು ಸುಮ್ಮನಾಗಿ, ಭಾರವಾದ ಮನಸ್ಸಿನೊಂದಿಗೆ ಹಿಂದಿರುಗಿದ್ದಳು—

ಕೋಣೆಯೊಂದರೊಳಗೆ ಸೇರುವಾಗ ತೆರೆದಿದ್ದ ಒಂದೇ ಒಂದು ಕಿಟಕಿಯ ಬಾಗಿಲು ಗಾಳಿಯು ಹೊಡೆತಕ್ಕೆ ಮುಚ್ಚಿಬಿಟ್ಟು ಹೊರಗೆ ಹೋಗಲು ದಾರಿ

ಇಲ್ಲದೆ ಒದ್ದಾಡುವ ಪಾರಿವಾಳದಂತೆ ಮೋಹಿನಿಯ ಮನಸ್ಸು ಒದ್ದಾಡುತ್ತಿತ್ತು. ಅತ್ತಿತ್ತ ಸುತ್ತಾಡುತ್ತಿತ್ತು ಫಡಫಡನೆ ರೆಕ್ಕೆ ಬಡಿಯುತ್ತಿತ್ತು. ಗಾಜಿನ ಕಿಟಕಿಗಳೊಳಗಿನಿಂದ ಹೊರಜಗತ್ತೆಲ್ಲವೂ ಕಾಣುತ್ತಿತ್ತು ಭವ್ಯವಾಗಿತ್ತು, ಸುಂದರವಾಗಿತ್ತು—ಆದರೆ ಹೋಗಲು ಮಾರ್ಗವಿಲ್ಲ ಆ ಜಗತ್ತು ತನಗಾಗಿ ಅಲ್ಲ ಎಂದು ಎನಿಸುನಂತಿತ್ತು. ಇಲ್ಲವೇಕೆ ? ಇದೆ ಆದರೆ ಬಾಗಿಲನ್ನೊ ಕಿಟಕಿಯನ್ನೊ ಮುರಿಯಬೇಕು ಒಡೆದು ಹೊರಗೆ ಹೋಗಬೇಕು ಇಲ್ಲವಾದರೆ ಇಲ್ಲ ಮೋಹಿನಿಯ ಪಾಲಿಗೆ ಆ ಒಂದು ಬಾಗಿಲು ಅಥವಾ ಕಿಟಕಿಯೆಂದರೆ ಆನಂದ! ಎಂದೆನಿಸುತ್ತಿತ್ತು

ಮೋಹಿನಿಯ ವಿಮನಸ್ಕತೆ ಬೆಳೆಯಲಿಕ್ಕೆ ಇದೂ ಒಂದು ಕಾರಣವಾಗಿತ್ತು. ದಾರಿಗಾಣದ ಮನಸ್ಸು ಆನಂದನೆಡೆಗೆ ಓಡುತ್ತಿತ್ತು. ಆಸೆಯಿಂದಲ್ಲ, ನೋವಿನಿಂದ. ಆಸೆ ಎಂದಿಗೋ ಬಯಲಾಗಿದ್ದಿತು ಆದರೆ ಮದುವೆಯಾದ ಹೊಸದರಲ್ಲಿಯ ದೃಶ್ಯಗಳು, ಸುಖದ ಸರಸದ ದಿನಗಳು, ಕಣ್ಣೆದುರಿಗೆ ನಿಂತು ಮನಸ್ಸನ್ನು ನೋಯಿಸುತ್ತಿದ್ದವು 'ನಿನಗಾಗಿ ನಾನು ಏನನ್ನೂ ಮಾಡಿಯೇನು' ಎಂದು ಆನಂದ ಹೇಳಿದ ದಿನಗಳವು ನಿಜವಾಗಿಯೂ ಏನು ಬೇಕಾದುದನ್ನೂ ಮಾಡಿದ್ದ ತನ್ನ ಎಲ್ಲ ಬಯಕೆಗಳನ್ನೂ ತನಗೆ ಸಾಧ್ಯವಾದ ಮಟ್ಟಿಗೆ ಪೂರೈಸಿದ್ದ. ಆದರೆ ? ಮುಂದೆ ಆರು ತಿಂಗಳಲ್ಲಿಯೇ ಎಲ್ಲವೂ ಬಯಲಾಯಿತು ಅಕ್ಕನ ಮಾತೇ ಬಲವಾಗತೊಡಗಿತು. ಇತ್ತೀಚಿನ ಚಿತ್ರಗಳು ಮನಸ್ಸನ್ನು ಕಂಗೆಡಿಸಿದವು. 'ಇಂಥವನನ್ನು ಕಟ್ಟಿಕೊಂಡು ಏನು ಮಾಡಿದರೇನು ?" ಎನ್ನುವ ವರೆಗೆ ಮನಸ್ಸು ಕಠೋರವಾಯಿತು. 'ಸರಿ, ನನ್ನ ಬದುಕೇ ವಿಚಿತ್ರವಾಗಿದೆ ಏನೇನು ನಡೆಯಬೇಕೋ ಯಾರು ಬಲ್ಲರು ? ಸುಖವಾಗಿರಬೇಕೆಂದು ನಡೆದ ಎಲ್ಲವನ್ನೂ ಮರೆತು, ಹೃದಯವನ್ನು ಕಲ್ಲುಮಾಡಿ ಕೆಲಸ ಹಿಡಿದೆ. ಆದರೂ ಈ ಮನಸ್ಸು ಸುಮ್ಮನೆ ತೊಳಲಾಡುತ್ತಿದೆಯಲ್ಲ? ಯಾಕೆ ? ನನಗೆ ಬೇಕಾದುದಾದರೂ ಏನು ? ಏನು ? ಯಾಕೆ ಈ ವ್ಯಥೆ ?'—ಎಂದು ಕೇಳಿಕೊಳ್ಳುವಂತಾಗುತ್ತಿದ್ದಳಲ್ಲದೆ ಆ ಪ್ರಶ್ನೆಗಳಿಗೆ ಉತ್ತರ ಹೇಳಲು ಸಮರ್ಥಳಾಗುತ್ತಿದ್ದಿಲ್ಲ. ಮನಸ್ಸು ಮಾತ್ರ ಮಾತಿಗೆ ಮೀರಿದ ಸುಪ್ತಸಂಕಟದಿಂದಾಗಿ ಮೊರೆಯಿಡುತ್ತಿತ್ತು.

ಈ ಅಸಂತೋಷದ ಜೊತೆಯಲ್ಲಿ ಆನಂದ ಮನಸ್ಸಿನೆದುರು ಸುಳಿದಾಗಲೆಲ್ಲ ಇನ್ನೊಂದು ಹೆದರಿಕೆಯೂ ತಲೆದೋರುತ್ತಿತ್ತು. ತನ್ನ ತಾಯಿ ಹೇಳಿದಂತೆ

ನಿಜವಾಗಿಯೂ ಕಾಗದವನ್ನು ಬರೆಯಿಸಿದ್ದರೆ ? ಅದರ ಪರಿಣಾಮವಾಗಿ ಆನಂದ ತನ್ನನ್ನು ಹುಡುಕಿಕೊಂಡು ಬಂದರೆ ? ಎಂದು. ಬಂದು ಬೇಡಿದರೆ, ಅನುನಯ ದಿಂದ ಮಾತನಾಡಿಸಿ ಕೇಳಿದರೆ ? ಆದರೆ ಈ ಯೋಚನೆಗಳು ಬಂದಾಗಲೆಲ್ಲ ಆತನ ಮನೆಯಿಂದ ತಾನು ಆ ಸಾಯಂಕಾಲ ಹೊರಬಿದ್ದ ಚಿತ್ರ ಕಣ್ಣೆದುರಿಗೆ ನಿಲ್ಲುತ್ತಿತ್ತು. ಅಸಹಾಯಳಾಗಿ ರೈಲ್ವೆ ನಿಲ್ದಾಣದ ಮೇಲೆ ಕಳೆದ ಆ ನಾಲ್ಕಾರು ಗಂಟೆ ಕಾಲ ! ರಾತ್ರಿಯ ರೈಲಿನಿಂದ ತಾನು ಅನಾಥಳಂತೆ ಪುಣೆಗೆ ಪ್ರಯಾಣ ಬೆಳಸಿದ್ದು. ಹಸಿದ ಹೊಟ್ಟೆ, ನೊಂದು ಸುಟ್ಟುಹೋದ ಮನಸ್ಸನ್ನು ಹೊತ್ತು ಬೆಳಗಿನಲ್ಲಿ ತಾಯಿಯನ್ನು ಸೇರಿದ್ದು. ಅದನ್ನೆಲ್ಲ ನೆನೆದಾಗ ಈಗ ಮತ್ತೆ ಆನಂದ ಬಂದು ಏನು ಹೇಳಿದರೆ ಏನು ? ಅದನ್ನೆಲ್ಲ ಮರೆತುಬಿಡುವುದು ಸಾಧ್ಯವೆ ? ಸಾಧ್ಯವಾಗಿ ಕಾಣಲಿಲ್ಲ. ಅಲ್ಲದೆ, ಆನಂದ ಬರುವನಾದರೂ ಏತಕ್ಕೆ ? ತಾಯಿ ನಿಜವಾಗಿಯೂ ಪತ್ರ ಬರೆಯಿಸಿದ್ದರೆ, ಆನಂದ ಬರುವಹಾಗಿದ್ದರೆ, ಇಷ್ಟರಲ್ಲಿಯೆ ಆ ಸನ್ನಿವೇಶ ನಡೆದುಹೋಗಬೇಕಾಗಿತ್ತು. ಪುಣೆಯಿಂದ ತಾನು ಬಂದು ಆಗಲೆ ತಿಂಗಳಾಗುತ್ತ ಬಂದಿತ್ತು. ತಾಯಿ ಪತ್ರ ಬರೆಯಿಸಿದ್ದರೂ ಅದರಿಂದ ಯಾವ ಪ್ರಯೋಜನವಾಗಿರದೆ ಆನಂದನಾದರೂ ತನ್ನ ದಾರಿಯನ್ನು ಬಿಟ್ಟಿರ ಬೇಕು ಎಂದು ತೋರಿತು. ಬಿಟ್ಟರೆ ಒಳಿತೇ ಆಯಿತು. ಯಾವ ರೀತಿಯಿಂದಲೂ ಹಿತವಲ್ಲದ ಒಂದು ಸಂದರ್ಭ ತಾನಾಗಿಯೇ ಕಳೆಯಿತು ಎಂದು ಸಮಾಧಾನ ತಂದುಕೊಳ್ಳುತ್ತಿದ್ದಳು. ಆದರೆ ಆ ಸಮಾಧಾನ ಒಳಮನಸ್ಸಿನಲ್ಲಿಯ ಅಳುಕನ್ನು ಮಾತ್ರ ಅಳಿಸುತ್ತಿರಲಿಲ್ಲ. ತೋರಿಕೆಗೆ ಕೆಂಡ ಆರಿಹೋದಂತಿದ್ದರೂ ಎಲ್ಲಿಯೋ ದೂರದಲ್ಲಿ ಒಳಗಡೆಯಲ್ಲಿ ಅಗ್ನಿಕಣ ಉರಿಯುತ್ತಲೇ ಇದ್ದಿತು. ಅವಕಾಶ ಕ್ಕಾಗಿ ಕಾಯುತ್ತಿದ್ದಿತು ಮಾತ್ರ.

ನಾಲ್ಕಾರು ದಿನಗಳಲ್ಲಿಯೆ ವಸಂತನನ್ನು ಮತ್ತೊಮ್ಮೆ ಕಾಣಬೇಕೆಂದ ಅವಳಿಗೆ ಐದು ವಾರಗಳಾದರೂ ಆತನನ್ನು ಕಾಣಲಾಗದೆ ಬೇಸರ ಬಲಿಯಿತು. ನಿಜವಾಗಿಯೂ ಆತ ಒಂದು ತಿಂಗಳ ರಜೆಯನ್ನು ಪಡೆದು ಎಲ್ಲಿಯಾದರೂ ಹೋಗಿದ್ದರೆ—ಆ ತಿಂಗಳೂ ಮುಗಿಯಿತು, ಈಗ ಬಂದಿರಬೇಕು, ಇಲ್ಲದಿದ್ದರೆ ಒಂದೆರಡು ದಿನಗಳಲ್ಲಿ ಬರುವವನಿರಬೇಕೆಂದು ಆತನ ಆಫೀಸಿನ ವರೆಗೂ ಹೋಗಿ ವಿಚಾರಿಸಿಕೊಂಡು ಬಂದಿದ್ದಳು. ಆಕೆಯ ಎಣಿಕೆ ಸರಿಯಾಯಿತು. ಒಂದೆರಡು ದಿನಗಳಲ್ಲಿ ಆತ ಬರುವವನಿದ್ದ. ಇಷ್ಟು ತಿಳಿದ ಮೇಲೆ ಸುಮ್ಮನಿರ

ಲಾಗದೆ, ಬಂದ ಕೂಡಲೆ ತನ್ನನ್ನು ಕಾಣಬೇಕೆಂದೂ, ಪ್ರತಿ ಸಾಯಂಕಾಲವೂ ಏಳು ಗಂಟೆಯ ಸುಮಾರಿಗೆ ಕೋಣೆಯಲ್ಲಿ ಕಾದಿರುತ್ತೇನೆ ಎಂದೂ ಕಾಗದ ಒಂದನ್ನು ಆಫೀಸಿನ ವಿಳಾಸಕ್ಕೆ ಬರೆದಳು ಪ್ರತಿ ಸಾಯಂಕಾಲವೂ ಮಾತು ಕೊಟ್ಟಂತೆ ಕೋಣೆಯಲ್ಲಿ ಕಾದಳು, ಕಾಯುತ್ತಲೆ ಇದ್ದಳು ದಿನ ಕಳೆದ ಹಾಗೆ ನಿರಾಶೆ ಇಮ್ಮಡಿಸಿತು. ಆದರೆ ಆ ನಿರಾಶೆಯ ಕಪ್ಪು ಒಡಲೊಳಗಿಂದಲೆ ಒಂದೊಂದು ಸಲ ಆಸೆ ಮಿನುಗಿ ಬೆಳಗುತ್ತಿತ್ತು ಇಂದು ಸಾಯಂಕಾಲ ಏನಿದ್ದರೂ ವಸಂತ ಬಂದೇ ಬರುವನೆಂಬ ಭರವಸೆ ಅದೇಕೋ ಬೆಳಗಿನಿಂದ ಬೆಳೆಯುತ್ತಿದೆ ಅದಕ್ಕೆ ಸರಿಯಾಗಿ ಮೋಹಿನಿ ವೇಷಭೂಷಣಗಳನ್ನು ಮುಗಿಸಿಕೊಂಡು ಸಿದ್ಧಳಾಗಿ ವಸಂತನಿಗಾಗಿ ದಾರಿ ಕಾಯುತ್ತಿದ್ದಾಳೆ ಬಂದಮೇಲೆ ಆತನೊಡನೆ ಮಾತನ್ನೇ ಆಡದೆ ಪೀಡಿಸುವ ಹಲವಾರು ಚಿತ್ರಗಳನ್ನು ಕಟ್ಟುತ್ತಿದ್ದಾಳೆ

ಆದರೆ ಹತ್ತು ನಿಮಿಷಗಳಲ್ಲಿ ಹೊರಜಗತ್ತು ತಟ್ಟನೆ ವೇಷ ಬದಲಾಯಿಸಿದ ಹಾಗಾಯಿತು. ಪಡುವಣದಿಂದ ಮುಗಿಲುಗಳು ಕರಾಳವಾಗಿ ಏರಿಬಂದು ಮುಚ್ಚಂಜೆಯ ಗಭೀರ ಪ್ರಶಾಂತತೆಯನ್ನು ಇಮ್ಮಡಿಸಿದವು ಇನ್ನು ಐದು ನಿಮಿಷಗಳಲ್ಲಿ ಮಳೆ ಸುರಿಯುವುದು ಖಂಡಿತವೆನಿಸಿತು ಆಗಾಗ ಗಾಳಿಯ ಹೊಡೆತಕ್ಕೆ ಬಾಗಿಲು ದಢಾರೆಂದು ಅಪ್ಪಳಿಸುತ್ತಿತ್ತು. ಮೋಹಿನಿಗೆ ತಡೆಯದಾಗಿ ಬಾಗಿಲನ್ನು ಭದ್ರಪಡಿಸಿ ತೊಳಲಾಟವನ್ನು ತಾಳಲಾಗದೆ ಹಾಸಿಗೆಯಲ್ಲಿ ಮೈಚೆಲ್ಲಿದಳು. ಮತ್ತೆ ಐದು ನಿಮಿಷ ಸರಿದುವು.

ಬಾಗಿಲ ಮೇಲೆ ಟಕ್, ಟಕ್, ಟಕ್ ಎಂದು ಸದ್ದಾಯಿತು

'ಕೊನೆಗೊಮ್ಮೆ ಬಂದ' ಎಂದು ಒಂದೇ ನೆಗೆತಕ್ಕೆ ಮೋಹಿನಿ ಬಾಗಿಲಿಗೆ ಬಂದು ತೆರೆದಳು ಆದರೆ ತೆರೆದ ಬಾಗಿಲೆದುರು ನಿಂತ ವ್ಯಕ್ತಿ ವಸಂತನಾಗಿರಲಿಲ್ಲ. ಬಂದವ—ಆನಂದ!

ಆ ಕ್ಷಣಕ್ಕೆ ಮೋಹಿನಿಯ ಮನಃಸ್ಥಿತಿಯನ್ನು ವರ್ಣಿಸುವುದೇ ಸಾಧ್ಯವಿಲ್ಲ. ಉದ್ವಿಗ್ನತೆ ಮುಗಿಲು ಮುಟ್ಟಿತು. ಆಪಾದಮಸ್ತಕವೂ ಬೆಂಕಿಯಾಗಿ ಉರಿಯಿತು. ತೆರೆದ ಕೈಗಳಿಂದಲೆ ಅವೇ ಬಾಗಿಲುಗಳನ್ನು ಬಾಗಿಲ ಹಲಗೆಗಳು ಮುರಿದು ಪುಡಿಪುಡಿಯಾಗುವಂತೆ ಅಪ್ಪಳಿಸಿ ಬಾಗಿಲನ್ನು ಮುಚ್ಚಿಬಿಡಬೇಕೆನಿಸಿತು. ಆದರೆ ಕೈ ಮುಂದೆ ಸಾಗಲಿಲ್ಲ. ಒಂದು ಕ್ಷಣ ಪುಟದೆದ್ದ ರೊಚ್ಚು

ಮರುಕ್ಷಣದಲ್ಲಿ ಎಲ್ಲಿಯೋ ಮಾಯವಾಯಿತು. ಮೋಹಿನಿಗೆ ನಿಂತಲ್ಲಿಯೆ ನೆಲಕ್ಕೆ ಕುಸಿಯುವಂತಾಯಿತು ಬಾಗಿಲ ಮೇಲಿನ ಕೈಗಳು ಯಾಂತ್ರಿಕವಾಗಿ ಕೆಳಕ್ಕೆ ಬಿದ್ದವು. ದಿಗ್ಭ್ರಾಂತಳಂತೆ ನಿಂತ ಮೋಹಿನಿ ನಿಧಾನವಾಗಿ ಹಿಂದಕ್ಕೆ ಸರಿದಳು. ಕೋಣೆಯೊಳಗಡೆಗೆ ಬಂದಳು ಮನಸ್ಸು ಮಾತ್ರ ಸಂಪೂರ್ಣವಾಗಿ ಬಧಿರವಾಗಿತ್ತು.

ಮೊದಲು ರೊಚ್ಚಿನಿಂದ ಅರಳಿ ಉರಿದು ಆಮೇಲೆ ನಿರುತ್ಸಾಹದಿಂದ, ನಿರಾಶೆಯಿಂದ ಬಾಡಿ ಕೊನೆಗೆ ನಿರ್ವಿಕಾರವಾಗಿ ಕಾಂತಿ ಕಳೆದ ಮೋಹಿನಿಯ ಕಣ್ಣುಗಳು—ಅದೇ ಸ್ಥಿತ್ಯಂತರಗಳನ್ನು ತೋರಿದ ಆಕೆಯ ಆ ಮುಖ—ಆನಂದನ ಮನಸ್ಸಿನ ಮೇಲೆ ಪರಿಣಾಮವನ್ನು ಮಾಡದಿರಲಿಲ್ಲ ಅಂಥ ಆಕೆಯನ್ನು ನೋಡಿ ಕೋಣೆಯೊಳಕ್ಕೆ ಕಾಲಿಡಬೇಕೊ ಬೇಡವೋ ಎಂದು ಚಿಂತಿಸಿರಬೇಕು. ಆದರೆ ಆಕೆ ನಿಧಾನವಾಗಿ ಕೋಣೆಯೊಳಕ್ಕೆ ಹೋದುದನ್ನು ನೋಡಿದಾಗ ತಾನೂ ಒಳಗೆ ಕಾಲಿಡಬಹುದು ಎಂದು ತೋರಿತು ನಿಧಾನವಾಗಿ ಹೆಜ್ಜೆ ಹಾಕಿ ಎದುರಿನಲ್ಲಿದ್ದ ಕುರ್ಚಿಯಲ್ಲಿ ಕುಳಿತ.

ದೊಡ್ಡದಾದ ಗಾಳಿಯು ಸೆಳಕೊಂಡು ಬಲವಾಗಿ ಬೀಸಿತು, ಬಾಗಿಲನ್ನು ಅಪ್ಪಳಿಸಿತು. ಗಾಳಿಯ ಹೊಡೆತದ ಹಿಂದಿನಿಂದಲೆ ಮಳೆ ತೂರಿ ತೂರಿ ಬೀಳತೊಡಗಿತು. ಆದರೆ ಅದರ ಅಬ್ಬರ ಮೋಹಿನಿಯ ಕಿವಿಯನ್ನು ತಲಪಿದ ಹಾಗೆ ಕಾಣಲಿಲ್ಲ. ಮೂಲೆಯಲ್ಲಿಯ ಮೇಜಿನ ಹತ್ತಿರ ಆನಂದನಿಂದ ಮುಖ ತಿರುವಿ ನಿಂತ ಆಕೆ ಈ ಪ್ರಪಂಚದಲ್ಲಿ ಇದ್ದಂತೆ ಇರಲಿಲ್ಲ

ಐದು ನಿಮಿಷಗಳು ಸರಿದವು ಮಾತು ಹೇಗೆ ಮೊದಲು ಮಾಡಬೇಕೆಂಬುದು ಆನಂದನಿಗೆ ಹೊಗೆಹರಿಯದಾಗಿತ್ತು. ಮಳೆಯ ಹೊಡೆತಕ್ಕೆ ಹೆದರಿ ಸಮೀಪದ ಯಾರ ಮನೆಯಲ್ಲಿಯೋ ಸೇರಿ ಆಶ್ರಯಕ್ಕೆ ಬಂದವನ ಮನಃಸ್ಥಿತಿಯಾಗಿತ್ತು ಆತನದು. ಕೊನೆಗೆ ಪ್ರಯಾಸದಿಂದ ತಡವರಿಸಿದ

"ಮಾತನಾಡುವುದಿಲ್ಲವೆ, ನನ್ನ ಕೂಡ ?"

ಬಧಿರವಾಗಿದ್ದ ಮೋಹಿನಿಯ ಮನಸ್ಸು ಆ ಒಂದು ಮಾತಿನಿಂದ ಎಚ್ಚರಗೊಂಡಿರಬೇಕು. 'ಏನೆಂದು ಮಾತನಾಡಲಿ ?' ಎಂದುಕೊಂಡಿರಬೇಕು. ತನ್ನ ಬದುಕನ್ನು ಬರಡುಬಯಲನ್ನಾಗಿ ಮಾಡಿದ ಹಿಂದಿನ ದುಃಖಗಳೆಲ್ಲವೂ ಆಕೆಯ ಕತ್ತನ್ನು ಹಿಸುಕುತ್ತಿದ್ದವು. ಬಿಗಿದ ಕುತ್ತಿಗೆಯ ನೆರೆ ಮುಖವನ್ನು ಕಂಗೆಡಿ

ಸಿತ್ತು. ಹೊರಗಡೆ ಮಳೆಯ ಅಬ್ಬರವಿರದಿದ್ದರೆ ಬಲವಾಗಿ ಸಾಗುತ್ತಿದ್ದ ಆಕೆಯ ಉಸಿರು ಸ್ಪಷ್ಟವಾಗಿ ಕೇಳಬಹುದಾಗಿತ್ತು. ಆಕೆ ಮಿಸುಕದಿದ್ದುದು ಆನಂದನಿಗೆ ಧೈರ್ಯ ಕೊಟ್ಟಿರಬೇಕು.

" ಯಾಕೆ, ಮೋಹಿನಿ, ಮಾತನಾಡುವುದಿಲ್ಲವೆ ? " ಎಂದ.

ತನ್ನನ್ನು ಹೆಸರುಗೊಂಡು, ನಯವಾಗಿ ಹೊರಬಿಬಿದ್ದ ಆನಂದನ ಆ ಮಾತು ಮೋಹಿನಿಯ ಮನಸ್ಸನ್ನು ವಾಸ್ತವ ಪ್ರಪಂಚಕ್ಕೆ ಕರೆತರುವಂತಾಯಿತು. ಪೆಟ್ಟು ತಾಕಿ ನೆಲಕ್ಕೆ ಅಲುಗಾಡದೆ ಬಿದ್ದ ಹುಳು ಮೆತ್ತಗಾಗಿ ಬೀಸಿದ ಬಾಯ ಉಸಿರಿಗೆ ಚೇತರಿಸಿ ಚಲಿಸುವಂತೆ ಆಕಯ ಮನಸ್ಸು ತನ್ನೆದುರಿಗಿದ್ದ ಸನ್ನಿವೇಶದ ಕಡೆಗೆ ಹರಿಯಿತು, ಮುಖ ತಿರುವಿದಳು. ಕಣ್ಣಂಚಿನಲ್ಲಿ ನೀರು ಓಲಾಡುತ್ತಿರುವಂತಿತ್ತು. ಆನಂದ ಮತ್ತೆ ಕೇಳಿದ

" ಯಾಕೆ ? ಮಾತನಾಡುವುದಿಲ್ಲವೆ ? "

" ಏನು ಮಾತನಾಡಲಿ— ? "

ದನಿ ತೀರ ಗಡಸಾಗಿದ್ದಿತು. ಆದರೆ ಆನಂದನಿಗೆ ಅದರ ಕಡೆಗೆ ಲಕ್ಷ್ಯವಿದ್ದ ಹಾಗಿರಲಿಲ್ಲ. ಆಕೆ ಮಾತನಾಡದೆಯೆ ಇರಬಹುದೆಂದುಕೊಂಡಿದ್ದ ಆತನಿಗೆ ಎಷ್ಟೋ ಸಮಾಧಾನವೆನಿಸಿ ಮುಂದುವರಿದ

" ನನಗೆ ನಿನ್ನ ಕೂಡ ಬಹಳ ಮಾತನಾಡುವುದಿದೆ—"

" ಹುಂ—"

" ಆದರೆ ನೀನು ಹೀಗೆ ಅಲ್ಲಿಯೇ ನಿಂತುಬಿಟ್ಟರೆ—"

ಎಂದು ಅರ್ಧಕ್ಕೆಯೆ ತಡೆದ. ತಾನಾದರೂ ಮಾತನಾಡದೆ ಸನ್ನಿವೇಶವನ್ನು ಪರಿಹರಿಸುವುದು ಸಾಧ್ಯವಿಲ್ಲವೆಂದು ತಿಳಿದೊ, ಆನಂದನ ದನಿಯಲ್ಲಿಯ ಮರುಕುಮಾರ್ದವಗಳನ್ನು ನೆನೆದೊ, ಮೋಹಿನಿ ಆನಂದ ಕುಳಿತ ಕುರ್ಚಿಯ ಹತ್ತಿರವಿದ್ದ ಕಾಟಿನ ಮೇಲೆ ಬಂದು ಕುಳಿತಳು. ಬಾಗಿಲೆಡೆಗೆ ನೋಡಿದಳು. ಗಾಳಿಯ ಹೊಡೆತಕ್ಕೆ ಬಾಗಿಲು ತಾನಾಗಿಯೇ ಮುಚ್ಚಿಕೊಂಡಿತ್ತು.

" ಇಲ್ಲಿ ಮತ್ತೆ ಯಾರಾದರೂ ಇರುತ್ತಾರೆಯೆ ಪಕ್ಕದಲ್ಲಿ ? "

" ಯಾರೂ ಇಲ್ಲ—"

ಆಗ ಅನುರಾಧೆ ಮನೆಯಲ್ಲಿರದಿದ್ದುದು ಒಂದು ಅನುಕೂಲವೆ ಆಯಿತೆಂದು ಮೋಹಿನಿಯ ಮನಸ್ಸು ನಿಟ್ಟುಸಿರು ಬಿಟ್ಟಿರಬೇಕು. ಬಂದುದನ್ನು ನೇರ

ವಾಗಿ ಎದುರಿಸಿ ಯಾವ ವಿಕಾರ ವಿಕ್ಷೋಭಗಳಿಗೂ ಎಡೆಗೊಡದೆ ಮಾತಿಗೊಂದು ಮಾತನ್ನು ಹೇಳಿ ಮುಗಿಸತಕ್ಕದ್ದೆಂಬ ನಿರ್ಧಾರ ಮಾಡಿಕೊಂಡೇ ಅಲ್ಲಿ ಬಂದು ಕುಳಿತ ಹಾಗಿತ್ತು. ಆನಂದ ಕೇಳಿದ

" ನಿನ್ನ ತಾಯಿಯಿಂದ ಏನಾದರೂ ಕಾಗದ ಬಂದಿದೆಯೆ ? "

" ಇಲ್ಲ "

" ಯಾವ ವಿಷಯದಲ್ಲಿಯೂ ? "

" ಅಲ್ಲಿ ಎಲ್ಲವೂ ಸರಿಯಾಗಿದ್ದ ಬಗ್ಗೆ ಒಂದು ಕಾಗದ ಬಂದಿತ್ತು, ಕಳೆದ ವಾರ."

" ನನ್ನ ವಿಷಯವಾಗಿ ಏನಾದರೂ ಬರೆದಿದ್ದಳೆ ? "

" ಇಲ್ಲ "

" ನೀನು ಹೊರಟು ಬರುವಾಗ ಏನಾದರೂ ಹೇಳಿದ್ದಳೆ ? "

' ಇಲ್ಲ 'ವೆಂದು ಸುಳ್ಳು ಹೇಳುವ ಮನಸ್ಸಾಗಲಿಲ್ಲ ಅದಕ್ಕೆ,

" ಏನೇನೊ ಹೇಳಿದ್ದಳು ಆದರೆ ನನ್ನ ಲಕ್ಷ್ಯವಿರಲಿಲ್ಲ " ಎಂದಳು

" ಲಕ್ಷ್ಯವಿರಲಿಲ್ಲವೆ ? "

ಮೋಹಿನಿ ಉತ್ತರ ಹೇಳಲಿಲ್ಲ ಏನೆಂದು ಹೇಳಬೇಕು ?

" ನಿನ್ನ ತಾಯಿಯಿಂದ ನನಗೊಂದು ಕಾಗದ ಬರಬಹುದೆಂಬುದು ನಿನಗೆ ಗೊತ್ತಿರಲು ಸಾಕು—"

" ನಾನು ಬೇಡ ಎಂದು ಹೇಳಿದ್ದೆ ! "

" ಬೇಡ ಎಂದು ಹೇಳಿದ್ದೆಯಾ ? "

" ಹೌದು ! "

ಮೋಹಿನಿಯ ಮುಖ ಬಿಗಿಯಿತು. ಆನಂದನೂ ಸುಮ್ಮನಾದ. ಆದರೆ ಇದು ಯಾವುದೂ ಆತನಿಗೆ ಅನಿರೀಕ್ಷಿತವಾಗಿರಲಿಲ್ಲ. ಅಂತೆಯೆ ಕೇಳಿದ :

" ಹಾಗಿದ್ದರೆ ನಾನು ಇಲ್ಲಿಗೆ ಬರಬಾರದಾಗಿತ್ತೆ ? "

" ಅದು ನೀವು ನಿರ್ಣಯಿಸಬೇಕಾಗಿದ್ದ ವಿಷಯ. ನಾನೇನು ಹೇಳಲಿ ? "

" ಆದರೆ ನನಗೆ ಬಂದು ಮಾತನಾಡಬೇಕಾಗಿದ್ದಿತು."

" ಏನದು ಮಾತನಾಡುವುದು ? ಏನಾದರೂ ಉಳಿದಿದೆಯೆ ? "

" ಅದನ್ನು ನೀನು ಹೇಳಬೇಕಾಗಿದೆ. ಉಳಿದಿಲ್ಲ ಎನಿಸಿದ್ದರೆ ನಾನು

ಬರುತ್ತಲೇ ಇರಲಿಲ್ಲ."

"ನಿಮಗೆ ಯಾವಾಗಲೂ ಹಾಗೆಯೇ ಅನಿಸುತ್ತದೆ. ಅದರಿಂದ ಪ್ರಯೋಜನ ಮಾತ್ರ ಎಂದಿಗೂ ಆಗಲಿಲ್ಲ. ಆದರೆ ಈಗ ಯಾಕೆ ಅದೆಲ್ಲ?"

"ಈಗ ಪ್ರಯೋಜನ ಆಗಬಹುದು!"

"ನನಗೆ ವಿಶ್ವಾಸವಿಲ್ಲ! ನನಗೆ ಆ ಪ್ರಯೋಜನ ಬೇಕಾಗಿಯೂ ಇಲ್ಲ!"

ಆನಂದ ಸುಮ್ಮನಾದ. ಆದರೆ ಈ ಮಾತಿಗೂ ಆತ ಸಿದ್ಧನಾಗಿದ್ದ. ಆಕೆಯ ಮನಸ್ಸಿನ ಆಳವನ್ನು—ಆಕೆಯ ಹಟದ ಎತ್ತರವನ್ನು—ತಿಳಿದ ಆತ ಇಂಥ ಮಾತಿಗೆ ಮಣಿಯಬೇಕಾಗಿರಲಿಲ್ಲವೆಂದುಕೊಂಡ. ಒಂದು ಮನಸ್ಸು ಕೇಳುತ್ತಿತ್ತು 'ಯಾಕೆ ಈ ಹಟಕ್ಕೆ ನೀನು ಮಣಿದು ನಿನ್ನ ಸ್ವಾಭಿಮಾನವನ್ನು ಮಣ್ಣುಗೂಡಿಸುತ್ತಿದ್ದೀ?' ಎಂದು ಆದರೆ ಇನ್ನೊಂದು ಮನಸ್ಸು ಹೇಳುತ್ತಿತ್ತು 'ಈವರೆಗೆ ಏನೇನೋ ಆಗಿಹೋಯಿತು ಆದ ಅವಮಾನ ಬೇಕಾದಷ್ಟಾಗಿದೆ. ಎಷ್ಟಾದರೂ ನಾವು ಗಂಡಹೆಂಡಿರು ಗಂಡಹೆಂಡಿರಲ್ಲಿ ಅಭಿಮಾನ-ಸ್ವಾಭಿಮಾನದ ಮಾತು ಎಂಥದು?' ಎಂದು. ಹೀಗೆ ಗಂಡಸೆಂಬ ಹೆಮ್ಮೆ ಒಂದೆಡೆಗೆ ಸೆಳೆಯುತ್ತಿತ್ತಾದರೆ ಇನ್ನೊಂದೆಡೆ ಆತನಿಗೆ ಸಹಜವಾದ ಸಾತ್ವಿಕ ವೃತ್ತಿ ಹೇಗಾದರೂ ಸರಿಪಡಿಸಿಕೊಂಡು ಸುಖವಾಗಿ ಇರಬೇಕೆಂಬ ಸಾಮಾಜಿಕ ಬುದ್ಧಿ ಇನ್ನೊಂದೆಡೆಗೆ ಎಳೆಯುತ್ತಿದ್ದವು ಈ ಎರಡನೆಯ ಎಳೆತಕ್ಕೆ ಮೋಹಿನಿಯ ಸೌಂದರ್ಯದ ಮೋಹ ಒಂದು ಬಂದು ಸೇರಿ ಅದನ್ನು ಇನ್ನೂ ಅಧಿಕವಾಗಿ ಬಲಪಡಿಸುತ್ತಿತ್ತು

"ಇದು ನೋಡು, ಮೋಹಿನಿ. ಇದು ಬಗೆಹರಿಯುವ ದಾರಿಯಲ್ಲ. ನೀನು ಇಲ್ಲಿ ಹೀಗೆ ಇರುವುದು ಸರಿಯಾಗಿ ಕಾಣುತ್ತದೆಯೆ?"

"ಯಾರಿಗೆ—ಯಾರಿಗೆ ಸರಿಯಾಗಿ ಕಾಣುವುದು?"

"ಯಾರಿಗಾದರೂ ಆಯಿತು ನಿನ್ನ ತಾಯಿಯಾದರೂ ಇದಕ್ಕೆ ಒಪ್ಪಿದ್ದಾಳೆಯೆ?"

"ನನ್ನ ತಾಯಿಗೆ ಹುಚ್ಚು ಹಿಡಿದಿದೆ! ಅಂತೆಯೆ ಕಾಗದ ಬರೆಯಿಸಿದ್ದಾಳೆ!"

"ಆಕೆಗೆ ಹುಚ್ಚು ಹಿಡಿದಿಲ್ಲ. ಸರಿಯಾದದ್ದನ್ನೇ ಮಾಡಿದ್ದಾಳೆ ಎಲ್ಲವನ್ನು ತಿಳಿಸಿ ಹೇಳಿ ಪರಿಪರಿಯಾಗಿ ಬೇಡಿದ್ದಾಳೆ—"

" ಸರಿಯಾಯಿತಲ್ಲ! ಒಂದು ಕಾಲಕ್ಕೆ ನಿಮ್ಮ ಅಕ್ಕ, ನಿಮ್ಮ ಅಣ್ಣ ಒಂದು ತೆರನಾಗಿ ತಿಳಿಸಿ ಹೇಳಿದರು, ಈಗ ನನ್ನ ತಾಯಿ ತಿಳಿಸಿ ಹೇಳಿದ್ದಾಳೆ. ಆಗ ಹಾಗಾಯಿತು, ಈಗ ಹೀಗೆ. ಇದಕ್ಕೆ ಯಾವ ಮಹತ್ವ ? "

ಮೋಹಿನಿಯ ದನಿಯಲ್ಲಿಯ ತಿರಸ್ಕಾರ ಸ್ಪಷ್ಟವಾಗಿದ್ದಿತು. ಕ್ಷಣಕ್ಷಣಕ್ಕೂ ಆ ತಿರಸ್ಕಾರ ಆನಂದನನ್ನು ಕೆಣಕುತ್ತಿದ್ದಿತು. ಆದರೆ ಸ್ವಭಾವಗತವಾದ ಆತನ ಸೌಜನ್ಯ ಎಲ್ಲವನ್ನೂ ಸಹಿಸುವಂತೆ ಮಾಡಿ ಮಾತನಾಡಿಸುತ್ತಿದ್ದಿತು

" ನಿನ್ನ ತಾಯಿ ಹೇಳಿಕಳಿಸಿದ್ದಾಳೆ, ಕಾಗದ ಬರೆಯಿಸಿದ್ದಾಳೆ ಎಂದ ಮಾತ್ರಕ್ಕೆ ನಾನು ಬಂದಿದ್ದೇನೆ ಎನ್ನುತ್ತೀಯಾ, ಮೋಹಿನಿ ? ನನಗೆ ಯಾವುದೂ ಏನೂ ಅನಿಸಿಯೇ ಇಲ್ಲ ಅನ್ನುತ್ತೀಯಾ ? "

" ನಿಮಗೇನೆನಿಸಿದೆ ನನಗೇನು ಗೊತ್ತು ? "

" ಅದನ್ನು ಹೇಳಲಿಕ್ಕೆಂದೇ ನಾನಿಂದು ಬಂದದ್ದು ! "

" ಆದರೆ ನನ್ನೆದುರು ಹೇಳಿ ಏನು ಪ್ರಯೋಜನ ಆಗಬೇಕಾಗಿದೆ ? "

" ಹಾಗಾದರೆ ಯಾರ ಮುಂದೆ ಹೇಳಲಿ, ಮೋಹಿನಿ ? ಯಾರ ಮುಂದೆ ಹೇಳಲಿ ? "

ಮಾತು ಬಿಗಿದ ಕಂಠದಿಂದ ಬರುತ್ತಿತ್ತೆಂದು ಮೋಹಿನಿಗೆ ಭಾಸವಾಯಿತು. ಆನಂದನನ್ನು ಬಲ್ಲ ಆಕೆಗೆ ಅದು ಕೂಡ ಅನಿರೀಕ್ಷಿತವಾಗಿರಲಿಲ್ಲ. ಮನಸ್ಸು ಮೆತ್ತಗಿನದು, ಆದರೆ ಅದಕ್ಕೆ ಯಾವ ಬಗೆಯ ಸ್ಥೈರ್ಯವೂ ಇರಲಿಲ್ಲವೆಂಬುದನ್ನು ಆಕೆ ತಿಳಿದವಳಾಗಿದ್ದಳು

" ನಾನು ಯಾರು ಎಂದು ನನ್ನ ಮುಂದೆ ಹೇಳುತ್ತೀರಿ ? "

" ಹೀಗೆ ಮಾತನಾಡಿದರೆ ಆಯಿತೆ ? ಕೆಟ್ಟ ಮಾತು ಬೇಡ, ಮೋಹಿನಿ. ಈಗ ಆಗಿಹೋದದ್ದು ಬೇಕಾದಷ್ಟಾಗಿದೆ "

" ಅದಕ್ಕೇ ನಾನು ಹೇಳುವುದು, ಈಗ ಆದಷ್ಟೇ ಸಾಕು ಎಂದು ! "

" ಹೀಗೆಂದರೆ ಹೇಗೆ ? ನಾಲ್ಕು ಜನ ಏನೆನ್ನಬಹುದು ಎನ್ನುವುದನ್ನಾದರೂ ಯೋಚಿಸಬೇಡವೆ ? "

" ನನ್ನನ್ನು ಮನೆ ಬಿಟ್ಟು ಕುತ್ತಿಗೆ ಹಿಡಿದು ತಳ್ಳುವಾಗ ಇದನ್ನು ಯೋಚಿಸಬೇಕಿತ್ತು ! "

" ಅದನ್ನೆಲ್ಲ ಈಗ ಕಟ್ಟಿಕೊಂಡು ಏನು ಮಾಡುವುದಿದೆ ? ಏನೇನೋ ಆಗಿ

ಹೋಯಿತು. ಅದನ್ನೇ ಮನಸ್ಸಿನಲ್ಲಿಟ್ಟುಕೊಂಡರೆ ಯಾವ ದಾರಿಯೂ ಇಲ್ಲ. ಅದನ್ನೆಲ್ಲ ಮರೆತುಬಿಡಲೇಬೇಕು."

"ಮರೆತುಬಿಡುವುದೆ? ಏನೆಂದು ಮರೆಯಬೇಕು ನಾನು? ನನ್ನ ಕತ್ತು ಹಿಡಿದು ಹೊರದೂಡಿದ್ದನ್ನು ಮರೆಯಲೆ? ಹಿಡಿದ ಕೈಯನ್ನು ಹಿಸುಕಿದಾಗ ಕೈಯಲ್ಲಿಯ ಬಳೆಗಳು ಒಡೆದುಹೋದುದನ್ನು ಮರೆಯಲೆ? ಅನ್ಯಾಯವಾಗಿ ಆಡಿದ ಹತ್ತುಸಾವಿರ ದೂಷಣೆಯ ಮಾತುಗಳನ್ನು ಮರೆಯಲೆ? ಯಾಕೆ ಮರೆಯಬೇಕು ನಾನು? ಮರೆಯಬಹುದಾದ ವಿಷಯವಲ್ಲ. ನನಗೆ ಸಾಧ್ಯವೇ ಇಲ್ಲ, ಮರೆಯುವುದು!"

ಮಾತುಮಾತಿಗೆ ದನಿಯಲ್ಲಿಯ ಆವೇಶ ತಿಳಿಯದಲೆ ಹೆಚ್ಚುತ್ತಿತ್ತು ಆದರೆ ಮಾತನ್ನು ಮುಗಿಸಿದಾಗ 'ಯಾಕೆ ಈ ಆವೇಶ? ಇದರಿಂದ ಏನಾಗ ಬೇಕಾಗಿದೆ? ಯಾರ ಮುಂದೆ ನಾನಿದನ್ನೆಲ್ಲ ತೋಡಿಕೊಳ್ಳುತ್ತಿರುವುದು?' ಎಂದೆನಿಸಿ ತಟ್ಟನೆ ಸುಮ್ಮನಾದಳು ಆದರೆ ಆ ಆವೇಶದ ಪರಿಣಾಮವಾಗಿ ಆನಂದನ ತಾಳ್ಮೆಯೂ ಕುಸಿಯತೊಡಗಿತ್ತು. ಆದರೆ ಆಕೆ ಇದ್ದಲ್ಲಿಗೆ ಬಂದು ಇಲ್ಲದ ಹಗರಣವನ್ನು ಹೂಡುವ ಮನಸ್ಸು ಆತನಿಗಿರಲಿಲ್ಲ ಆದರೂ ಜೋರಾಗಿಯೇ ಹೇಳಿದ

"ನಿನಗೆ ಮರೆಯುವುದು ಸಾಧ್ಯವಿಲ್ಲ, ಅಲ್ಲವೆ?"

ಮೋಹಿನಿ ಮಾತನಾಡಲಿಲ್ಲ ಮುಖವನ್ನು ಇನ್ನೊಂದೆಡೆಗೆ ಮಾತ್ರ ತಿರುವಿದಳು

"ಇದು ನೋಡು, ಮೋಹಿನಿ ಒಂದು ಮಾತನ್ನು ಮಾತ್ರ ಹೇಳುತ್ತೇನೆ ನೀನು ಮರೆಯಬೇಕಾದದ್ದೂ ಇದೆ, ಅದರಂತೆ ನಾನು ಮರೆಯಬೇಕಾದದ್ದೂ ಇದೆ ಅದನ್ನು ಮಾತ್ರ ಮರೆಯಬೇಡ—"

"ಏನದು ನೀವು ಮರೆಯಬೇಕಾದದ್ದು?"

"ನಾನೆಲ್ಲವನ್ನು ಮರೆಯಲು ಸಿದ್ಧನಾಗಿದ್ದೇನೆ ನಿನಗಾಗಿ ಅಲ್ಲ, ನನಗಾಗಿ ಅಲ್ಲ—ಇಬ್ಬರಿಗಾಗಿಯೂ ಎಲ್ಲವನ್ನೂ ಮರೆಯಲು ನಾನು ಸಿದ್ಧನಾಗಿದ್ದೇನೆ ಅಂತೆಯೆ ಅದನ್ನೆಲ್ಲ ಆಡಿ ಪ್ರಯೋಜನವಿಲ್ಲ"

"ಆಡದಿದ್ದರೇನಾಯಿತು? ಮನಸ್ಸಿನಲ್ಲಿ ಇದ್ದರೆ ಸಾಕಲ್ಲ!"

"ಮನಸ್ಸಿನಲ್ಲಿ ಬೇಕಾದಷ್ಟಿದೆ ಆದರೆ ಅದನ್ನು ಇನ್ನುಮುಂದೆ ಯಾವು

ದಕ್ಕೂ ಅಡ್ಡಬರಗೊಡುವಹಾಗಿಲ್ಲ. ಅಷ್ಟರಿಂದ ಸಮಾಧಾನವಾಗಬೇಕು."

"ಮನಸ್ಸಿನಲ್ಲಿ ಇದೆಯಲ್ಲವೆ ಬೇಕಾದಷ್ಟು ?—"

"ಆ ಮಾತು ಬೇಡ ಎಂದು ಹೇಳಿದೆನಲ್ಲವೆ, ಮೋಹಿನಿ ?"

"ಯಾವ ಮಾತೂ ಬೇಡವಾಗಿದೆ ನನಗೆ !"

"ಸಲ್ಲದ ಮಾತು ಇದು—"

"ಸಲ್ಲದ್ದೊ ಅಲ್ಲದ್ದೊ, ಇದ್ದ ಮಾತು ಅದು !"

"ಯಾಕೆ ಈ ಹಟ ? ಏನು ಸುಖ ಇದರಲ್ಲಿ ? ಯಾರಿಗೆ ಸುಖ ? ಅದನ್ನಾದರೂ ಹೇಳು."

"ಈಗ ಬಂದಿತೇ ಈ ಯೋಚನೆ ?"

"ಈಗಲಾದರೂ ಬಂದಿತಲ್ಲ !"

"ಮನೆ ಬಿದ್ದುಹೋದಮೇಲೆ ಬಂದ ಬುದ್ಧಿ, ಕೆಲಸಕ್ಕೆ ಬಾರದ್ದು !"

"ನನಗೆ ನನ್ನ ಮನೆಯನ್ನು ಮತ್ತೆ ಕಟ್ಟಬೇಕಾಗಿದೆ !"

"ಕಟ್ಟಬೇಕೆನ್ನುವವರು ಕೆಡಹುತ್ತಲೇ ಇರಲಿಲ್ಲ !"

"ಕೆಡವಿದವರು ಯಾರು ?"

"ಕಟ್ಟಬೇಕೆನ್ನುವವನಿಗೆ ಈ ಪ್ರಶ್ನೆಗೆ ಉತ್ತರ ಬೇಕಾಗಿಲ್ಲ."

"ಕೆಡವಿದವಳು ನಾನು ಎನ್ನುವ ಹಾಗಿದ್ದರೆ ಕಟ್ಟುವ ಕೆಲಸಕ್ಕೆ ನನ್ನಿಂದೇನಾಗಬೇಕು ?"

"ಕೆಡವಿದವ ನಾನೇ ಆಗಿದ್ದರೂ ಇಬ್ಬರೂ ಸೇರಿಯೇ ಇನ್ನು ಕಟ್ಟಬೇಕಾಗಿದೆ."

"ನನ್ನಿಂದ ಸಾಧ್ಯವಿಲ್ಲ !"

"ಸಾಧ್ಯವಿಲ್ಲವೆ ? ಯಾಕೆ ಸಾಧ್ಯವಿಲ್ಲ ?"

"ನನಗೆ ವಿಶ್ವಾಸವಿಲ್ಲ !

"ವಿಶ್ವಾಸವನ್ನೂ ಕಟ್ಟಬಹುದು !"

"ಅದಕ್ಕೆ ಆಸ್ಪದವಿಲ್ಲ"

"ನಾನಾಗಿಯೇ ನಿನ್ನಲ್ಲಿಗೆ ಬಂದು ಇಷ್ಟು ಮಾತು ಹೇಳಿದರೂ ಆಸ್ಪದವಿಲ್ಲವೆ ?"

"ನೀವಾಗಿಯೇ ಬಂದಿರುವುದು ನಿಜವಾಗಿದ್ದರೆ ಇಂದಿಗೆ ಬರುತ್ತಿರಲಿಲ್ಲ.

ಎಂದಿಗೋ ಬರುತ್ತಿದ್ದಿರಿ. ಮರುದಿನವಲ್ಲದಿದ್ದರೂ ಮರುವಾರದಲ್ಲಿಯಾದರೂ ಬರುತ್ತಿದ್ದಿರಿ."

"ಹೀಗೆ ನೀನು ಹೇಳುತ್ತೀ ಎನ್ನುವುದು ನನಗೆ ಗೊತ್ತು. ಆದರೆ ಆಗ ಬರುವುದು ಸಾಧ್ಯವಿರಲಿಲ್ಲ ಮುಂದೆ ನನ್ನ ಪರೀಕ್ಷೆ ಇದ್ದಿತು—"

ಪರೀಕ್ಷೆ ಏನಾಯಿತೆಂದು ಕೇಳಬೇಕೆಂಬ ಕುತೂಹಲ ಇಣಿಕಿಹೋಯಿತು. ಆದರೆ ಆನಂದನ ಮುಂದಿನ ಮಾತುಗಳಿಂದ ಎಲ್ಲವೂ ತಾನಾಗಿಯೆ ವಿಶದ ವಾಯಿತು

"ನಡೆದುದೆಲ್ಲವನ್ನೂ ನೆನೆದಾಗ ನನ್ನ ಮನಸ್ಸೇ ಒಂದು ತೆರನಾಯಿತು ಅದರಲ್ಲಿಯೂ ಅಂದೇ ರಾತ್ರಿ ವಸಂತರಾಯ ಎಲ್ಲವನ್ನೂ ವಿವರವಾಗಿ ಹೇಳಿದ ನಂತರವಂತೂ ನನ್ನನ್ನು ನಾನೇ ರಪಿಸಿಕೊಳ್ಳುವಂತಾಯಿತು ಯಾವುದೂ ಬೇಡವಾಗಿ ಪರೀಕ್ಷೆಗಾಗಿ ಮುಂದೆ ಓದಲೂ ಇಲ್ಲ—"

ಮೋಹಿನಿ ಸುಮ್ಮನಾದಳು ಆಕೆ ಏನಾದರೂ ಒಂದು ಮಾತನ್ನು ಸಹಾನುಭೂತಿಯಿಂದ ಆಡಬೇಕೆಂಬ ಆನಂದನ ಬಯಕೆ ಬಯಕೆಯಾಗಿಯೇ ಉಳಿಯಿತು ಆನಂದ ಹೇಳಿದ ಮಾತು ನಿಜವಾಗಿತ್ತು ಆಕೆಯನ್ನು ಅಂದು ಸಾಯಂಕಾಲ ತಳ್ಳಿಹಾಕಿದಮೇಲೆ—ಎಲ್ಲವೂ ವಸಂತನಿಂದ ತಿಳಿದಮೇಲೆ—ತನ್ನ ತಪ್ಪಿಗಾಗಿ ವಿಪರೀತ ವ್ಯಥೆಪಟ್ಟಿದ್ದ. ಭಾಸ್ಕರನನ್ನು ಪರಿಪರಿಯಾಗಿ ದೂಷಿಸಿದ್ದ. ತಿರುಗಿ ಹೋಗಿ ಮೋಹಿನಿಯನ್ನು ಮತ್ತೆ ಮಾತನಾಡಿಸಲು ತನಗೆ ಯಾವ ಅಧಿಕಾರ, ಯಾವ ಮುಖವನ್ನು ಹೊತ್ತುಕೊಂಡು ಹೋಗಿ ಆಕೆಯನ್ನು ಮಾತನಾಡಿಸುವುದು ಎಂಬ ಯೋಚನೆಯಲ್ಲಿಯೇ ತಿಂಗಳು ಕಳೆಯಿತು ಕೈಗೆ ಬಂದದ್ದು ಬಾಯಿಗೆ ಬರಲಿಲ್ಲವೆಂಬಂತೆ ಪರೀಕ್ಷೆಯ ಆಸೆಯೂ ದೂರವಾಯಿತು ಅಂಥ ಮನಃಸ್ಥಿತಿಯಲ್ಲಿ ಪಾಸಾಗುವುದೇ ಸಾಧ್ಯವಿಲ್ಲವೆಂದು ಪರೀಕ್ಷೆಗೂ ಹೋಗಲಿಲ್ಲ ಮನೆಯಲ್ಲಿಯ ಮನಸ್ತಾಪಕ್ಕೆ ಸರಿಯಾಗಿ ಇದರಿಂದ ನಿರಾಶೆ ಇಮ್ಮಡಿಸಿ ಯಾವುದೂ ಬೇಡವೆಂಬ ನಿರುತ್ಸಾಹ ತಲೆದೋರಿ ನೆಲೆಯಾಗಿ ನಿಂತಿತು ಈ ನಿರುತ್ಸಾಹ ಏಕಾಂತಕ್ಕೆ ಎಡೆ ಕೊಟ್ಟಿತು. ತನ್ನ ಬದುಕೇ ಒಂದು ರೀತಿಯಾಯಿತು ಅದನ್ನು ಸರಿಪಡಿಸುವುದೇ ಸಾಧ್ಯವಿಲ್ಲವೆಂಬ ನಿರಾಶೆ ಕ್ರಮವಾಗಿ ಬೇರೂರತೊಡಗಿ ಬಾಯಿಯಿಲ್ಲದ ದುಃಖವನ್ನು ಹುಟ್ಟಿಸಿತು. ಮೋಹಿನಿಯನ್ನು ಕಂಡು ತನ್ನ ತಪ್ಪನ್ನು ಒಪ್ಪಿಕೊಂಡು ಮತ್ತೆ ಎಲ್ಲವನ್ನು

ಸರಿಪಡಿಸಿಕೊಳ್ಳಲಾಗದೆ? ಎಂದು ಹತ್ತು ಬಾರಿ ಯೋಚಿಸಿದ. ಯಾವುದೂ ಬೇಡ ಎಂದು ಒಮ್ಮೆ, ಸಾಧ್ಯವೆ? ಎಂದು ಇನ್ನೊಮ್ಮೆ, ಒಂದು ವೇಳೆ ಆಕೆ ಒಪ್ಪಿದರೂ ಮತ್ತೆ ಮೊದಲಿನ ಸಮಸ್ಯೆಗಳೇ ತಲೆದೋರಲಾರವೆಂಬ ಭರವಸೆ ಎಲ್ಲಿಯದು, ಎಂಬ ಅಧೈರ್ಯ ಇನ್ನೊಂದೆಡೆಯಾಗಿ, ಸಾವಿರ ಯೋಚನೆ ಗಳಲ್ಲಿಯೇ ಸಂಜೆಮುಂಜಾವುಗಳು ಸವೆಯುತ್ತಿದ್ದವು ತಿಂಗಳುಗಳು ಉರುಳಿ ದವು ಮೋಹಿನಿಯ ತಾಯಿಯಿಂದ ಕಾಗದ ಬಂದಾಗ ಮತ್ತೆ ಆಸೆ ಚಿಗುರಿತು. ಅವಮಾನವೆನಿಸಿದರೂ ಪರಿವೆ ಇಲ್ಲ, ಎಲ್ಲವನ್ನು ಸರಿಯಾಗಿಸಲೇಬೇಕು, ಸಾಧ್ಯವಿದ್ದ ಎಲ್ಲ ಪ್ರಯತ್ನವನ್ನೂ ಮಾಡಲೇಬೇಕೆಂಬ ಹಟದಿಂದ ಮೋಹಿನಿ ಯನ್ನು ಕಾಣುವುದೆಂದುಕೊಂಡು ಆನಂದ ಬಂದಿದ್ದ ಆದರೆ ಒಳಮನಸ್ಸಿನ ಈ ಕುದಿಯನ್ನೆಲ್ಲ ಆಕೆಗೆ ತಿಳಿಸುವುದು ಹೇಗೆ? ಆಕೆಯಿಂದ ಒಂದು ಸಹಾನು ಭೂತಿಯ, ಆಸೆಯ ಸೂಚನೆ ಬಂದಿದ್ದರೆ ಎಲ್ಲವನ್ನೂ ಹೇಳಬಹುದಾಗಿತ್ತು. ಆದರೆ ಮೋಹಿನಿಯ ಮೌನ ನಿರುತ್ಸಾಹವನ್ನೇಕೆ, ಪ್ರತ್ಯಕ್ಷವಾಗಿ ಪ್ರತಿಭಟನೆ ಯನ್ನೇ ಹೇಳುತ್ತಿತ್ತು 'ನನ್ನ ಮನಸ್ಸೇ ಒಂದು ತೆರನಾಯಿತು' ಎಂಬ ಒಂದು ಮಾತಿನಲ್ಲಿ ಆತ ನಿಜವಾಗಿಯೂ ನೊಂದ ಬಗೆ ಸ್ಪಷ್ಟವಾಗಿದ್ದಿತು. ಆದರೆ ಮೋಹಿನಿಯ ಮನಃಸ್ಥಿತಿಯಲ್ಲಿ ಆ ಒಂದು ಮಾತಿಗೆ ಅಷ್ಟೊಂದು ಅರ್ಥ ಹೇಗೆ ಪ್ರಾಪ್ತವಾಗಬೇಕು? ಆನಂದ ನೊಂದುಕೊಂಡಿದ್ದನೆಂಬುದನ್ನು ಆಕೆ ನಂಬ ಬಹುದಾಗಿತ್ತು, ನಂಬಿದಳು ಆದರೆ ಇದು ಎಲ್ಲಿಗೂ ನಿಲುಕದ್ದು, ಸ್ಥಿರವಾಗಿ ನಿಲ್ಲದ್ದು ಎಂಬುದು ಆಕೆಗೆ ಅನುಭವದಿಂದ ಪಡೆದ ಸತ್ಯವಾಗಿತ್ತು ಇಂದಿನ ಮಾತು ಆ ಸತ್ಯವನ್ನು ಸೋಲಿಸಲಾರದು ಎಂದೇ ತಿಳಿದಳು. ಆನಂದ ಸುಮ್ಮ ನಾದ ಮೋಹಿನಿಯೂ ಸುಮ್ಮನಾದಳು ಇಬ್ಬರಿಗೂ ನೀರವತೆ ಸಹಿಸದಾಗಿ ಕೊನೆಗೆ ಆನಂದ ಕೇಳಿದ

"ಯಾಕೆ ಸುಮ್ಮನಾದೆ, ಮೋಹಿನಿ?"

"ನಾನೇನು ಹೇಳಲಿ?"

"ಸರಿಪಡಿಸಿಕೊಂಡು ಸುಖವಾಗಿ ಇರಲಾಗುವುದಿಲ್ಲ ಎನಿಸುತ್ತದೆಯೆ?"

"ಇರಬಹುದು ಎನಿಸುತ್ತದೆಯೆ ನಿಮಗೆ?"

"ಯಾಕಾಗಬಾರದು?"

"ಆ ಪ್ರಶ್ನೆಗೆ ಅರ್ಥವಿಲ್ಲ ಆಗುತ್ತದೆಯೆ ಎನ್ನುವುದು ಮುಖ್ಯ!"

" ನನ್ನ ಮಟ್ಟಿಗೆ ಆಗಬಹುದು ಎಂದು ತೋರುತ್ತದೆ."

" ಅದು ನಿಮ್ಮ ಆಸೆ—ಬರಿಯ ಆಸೆ."

" ಅಷ್ಟಿದ್ದರೆ ಸಾಲದೆ ? ಅಷ್ಟಿದ್ದರೆ ಬೇಕಾದುದನ್ನು ಮಾಡಬಹುದು."

" ಬೇಕಾದುದನ್ನು ಅಂದರೆ ? "

" ನಾವಿಬ್ಬರೂ ಸುಖವಾಗಿ ಇರುವ ಹಾಗೆ—"

" ಇದುವರೆಗೆ ಏಕೆ ಸಾಧ್ಯವಾಗಲಿಲ್ಲ, ಹಾಗಾದರೆ ? "

" ಹಿಂದಿನದನ್ನೆಲ್ಲ ಬಿಟ್ಟೇ ಮುಂದೆ ಸಾಗಬೇಕಾಗಿದೆ ಹಾಗೆ ಯೋಚಿಸುತ್ತ ಕುಳಿತರೆ ಎಲ್ಲಿಗೂ ನಿಲುಕುವುದಿಲ್ಲ—"

" ನೀವು ಈ ದಿನ ಇಲ್ಲಿಗೆ ಬಂದದ್ದು ನಿಮ್ಮ ಅಕ್ಕನಿಗೆ ಗೊತ್ತಿದೆಯೆ ? "

" ಗೊತ್ತಿದೆ ಅದರದೇನು ? "

" ಅವರಿಗೆ ಹೇಳಿಯೇ ಬಂದಿದ್ದೀರಾ ? ಏನೆಂದರು ಅವರು ? "

" ಅವರೇನೆನ್ನುತ್ತಾರೆ ? ' ನಿನಗೆ ತಿಳಿದ ಹಾಗೆ ಮಾಡು ' ಎಂದರು ! "

" ನೀವು ಇನ್ನೂ ವರೆಗೆ ಅವರ ಒಟ್ಟಿಗೇ ಇರುತ್ತೀರಾ ? "

" ಮತ್ತಿನ್ನೆಲ್ಲಿ ಹೋಗುವುದು ? "

" ಬೇರೆ ಜಾಗವೆ ಇಲ್ಲವೆ ಪ್ರಪಂಚದಲ್ಲಿ ? "

" ನೀನು ಬರಲೊಪ್ಪಿದರೆ—"

" ನಾನು ಬಂದರೆ ನನ್ನಿಂದ ನಿಮಗೆ ಸುಖವಾಗಬಹುದು ಎಂದು ತೋರುತ್ತದೆಯೆ ನಿಮಗೆ ? "

" ಇಲ್ಲದಿದ್ದರೆ ಇಲ್ಲಿಯ ವರೆಗೆ ಬರುತ್ತಲೇ ಇರಲಿಲ್ಲ ನಾನು, ಮೋಹಿನಿ "

" ನನಗೆ ಹಾಗೆ ತೋರುವುದಿಲ್ಲ ನಿಮಗೆ ನಾನು ಸುಖವಾಗಿಸಬಲ್ಲೆನೆಂಬ ವಿಶ್ವಾಸವೂ ನನಗಿಲ್ಲ ನನ್ನ ಹಟಮಾರಿ ಸ್ವಭಾವ ನಿಮಗೆ ಹೊಸದೂ ಅಲ್ಲ ಈಗ ನಡೆದುದೆಲ್ಲದರಿಂದ ನನ್ನ ಹಟ ಇನ್ನೂ ಹೆಚ್ಚಿದೆ ಇನ್ನೊಬ್ಬರಲ್ಲಿ ನಾನು ವಿಶ್ವಾಸವನ್ನಿಡುವುದೇ ಸಾಧ್ಯವಿಲ್ಲದಾಗಿದೆ ನನ್ನ ತಾಯಿಯೂ ನನಗೆ ಇಂದು ದೂರವಾಗಿದ್ದಾಳೆ ಇಂದು—ನಾನು ನಾನೇ ನಾನು ನಾನೇ ಆಗಿ ಉಳಿಯಬೇಕೆಂದಿದ್ದೇನೆ ನನಗಿಂದು ಯಾರ ಸಹಾಯವೂ ಬೇಕಿಲ್ಲ ಆಶ್ರಯವಂತೂ ಎಂದಿಗೂ ಬೇಕಿಲ್ಲ—"

ಮೋಹಿನಿ ತಟ್ಟನೆ ಸುಮ್ಮನಾದಳು ಆನಂದ ಕಿಟಕಿಯಿಂದಾಚೆ ವ್ಯಗ್ರ

ನಾಗಿ ನೋಡುತ್ತಿದ್ದ. 'ಯಾಕೆ ಈ ಮಾತು? ಯಾರ ಮುಂದೆ ಹೇಳಿ ಏನು ಪ್ರಯೋಜನ?' ಎಂದೆನಿಸಿರಬೇಕು ಆಕೆಗೆ. ಆನಂದ ನಿಟ್ಟುಸಿರೆಳೆದು ಮೋಹಿನಿಯನ್ನು ನೋಡಿದ.

"ನಿನ್ನೊಡನೆ ವಾದ ಮಾಡಬೇಕಿಲ್ಲ ನನಗೆ, ಮೋಹಿನಿ. ಹೇಳಬೇಕಾದುದನ್ನು ಹೇಳಿದ್ದೇನೆ ಈ ಹಟದಲ್ಲಿ ಯಾವ ಸುಖವೂ ಇಲ್ಲ ಎಂದು ಮಾತ್ರ ಖಂಡಿತವಾಗಿ ಹೇಳುತ್ತೇನೆ ಇಂದು ನಿನಗೆ ಕೆಲಸ ಸಿಕ್ಕು ನಾಲ್ಕು ಕಾಸು ನೀನು ಸಂಪಾದಿಸಿ ಸ್ವತಂತ್ರಳಾಗಿರಬಹುದು ಆದರೆ ಇಂದಿಲ್ಲ ನಾಳೆ ಈ ಸ್ವಾತಂತ್ರ್ಯದ, ಈ ಸುಖದ ಹುರುಳಿಲ್ಲದ ಸ್ವರೂಪ—! ಸರಿ, ಅದೆಲ್ಲ ನಾನು ಯಾಕೆ ಹೇಳಬೇಕು?"

ಆನಂದನಿಗೆ ತುಂಬ ನಿರಾಶೆಯಾಯಿತು ಒಂದು ಕ್ಷಣ ಸಿಟ್ಟೂ ಬಂದಿತು. ಆದರೆ ಸಿಟ್ಟಿನಿಂದ ಏನೂ ಆಗಬೇಕಿರಲಿಲ್ಲ ಮೋಹಿನಿಯ ಯೋಚನೆ ಯಾವ ದಿಕ್ಕಿನಲ್ಲಿ ಓಡುತ್ತಿದ್ದರೂ ಆನಂದನಿಗೆ ಬೇಕಾದ ಆಶ್ವಾಸನವನ್ನು ಕೊಡಬಲ್ಲ ವಿಚಾರದ ದಿಕ್ಕಿನಲ್ಲಿ ಮಾತ್ರ ಖಂಡಿತವಾಗಿ ಓಡುತ್ತಿರಲಿಲ್ಲ ಇಬ್ಬರೂ ಸುಮ್ಮನಾದರು. ಹೊರಗಿನ ಮಳೆ ಯಾವಾಗಲೊ ನಿಂತು ಹೋಗಿತ್ತು. ದೀಪಗಳು ನಿರ್ವಿಕಾರವಾಗಿ ಉರಿಯುತ್ತಿದ್ದವು ಮಳೆ ನಿಂತದ್ದರಿಂದ ಕೆಳಗಡೆ ಬೀದಿಯಲ್ಲಿ ಜನರು ಹೆಚ್ಚುಹೆಚ್ಚಾಗಿ ಬರತೊಡಗಿದ್ದರಿಂದ ಸದ್ದುಗದ್ದಲಗಳು ತೊಳೆದ ಗಾಳಿಯ ಮೇಲಿನಿಂದ ತೇಲಿಬರುತ್ತಿದ್ದವು ಮೋಹಿನಿ ನೆಲವನ್ನು ನಿಟ್ಟಿಸುತ್ತಿದ್ದವಳು ಮುಖವನ್ನು ಮೇಲಕ್ಕೆತ್ತಲಿಲ್ಲ

"ಹಾಗಾದರೆ ನಾನು ಹೊರಡಲಾ?"

" "

ಆಕೆಯ ನಿರ್ವಿಕಾರವಾದ, ನಿಶ್ಚಯದ ಮುಖವನ್ನು ನೋಡಿ ಆನಂದನಿಗೆ ಅಲ್ಲಿ ಉಳಿಯುವ ಮನಸ್ಸಾಗಲಿಲ್ಲ ಆಸೆ ತುಂಬಿಬಂದ ಹೃದಯ ಹಿಂಜಿಹೋದ ಮೋಡದಂತೆ ಬರಿದಾಗಿತ್ತು ಅಲ್ಲಿ ನೂರು ಬೇರೆ ಯೋಚನೆಗಳು ಧುಮುಕಿದ್ದವು ಅವುಗಳ ಒತ್ತಡಕ್ಕಾಗಿ ಆತ ಅಲ್ಲಿಂದ ಎದ್ದ ಹೊರಡುತ್ತ ಹೇಳಿದ

"ಕೊನೆಯಾಗಿ ಒಂದು ಮಾತನ್ನು ಹೇಳುತ್ತೇನೆ—ನಿನಗೆ ತಿಳಿದ ಹಾಗೆ ನೀನು ಮಾಡಬಹುದು ಆದರೆ ನಿನಗೆ ಯೋಚನೆಗೆ ಆಸ್ಪದ ಕೊಟ್ಟಿದ್ದೇನೆ. ಯೋಚನೆ ಮಾಡಿ ಹೇಳು—"

"ನನ್ನ ಎಲ್ಲ ಯೋಚನೆಗಳು ಎಂದಿಗೋ ಮುಗಿದಿವೆ. ಅದನ್ನು ಮುಗಿಸಿದವರೂ ನೀವೇ—"

"ಹಾಗಾದರೆ—"

"ಏನೂ ಇಲ್ಲ!"

"ಈ ಹಟ ಬೇಡ, ಮೋಹಿನಿ."

"ಈ ಹಟದಿಂದಲೇ ಬದುಕಿದ್ದೇನೆ. ಇನ್ನು ಮುಂದೆಯೂ ಅಷ್ಟೇ."

"ಕೊನೆಯ ಮಾತೇ ಇದು?"

"ಕೊನೆಯ ಮಾತು!"

ಆನಂದ ಒಂದು ಮಾತನ್ನೂ ಆಡದಾದ. ಅರೆನಿಮಿಷ ಸ್ತಬ್ಧನಾಗಿ ನಿಂತ. ಕೈಕಟ್ಟಿ ನಿಂತ ಮೋಹಿನಿ ನಿಂತಲ್ಲಿಂದ ମಿಸುಕಲಿಲ್ಲ. ಆನಂದನಿಗೆ ತಡೆಯದಾಗಿ ದಡದಡನೆ ಪಾವಟಿಗೆಗಳನ್ನು ಇಳಿದು ಹೋದ. ಮೋಹಿನಿ ನಿಂತಲ್ಲಿಯೆ ನಿಂತಳು. ಕಣ್ಣುಗಳು ಏನನ್ನೋ ದಿಟ್ಟಿಸುತ್ತಿದ್ದವು. ಆದರೆ ಯಾವುದೂ ಕಾಣುತ್ತಿರಲಿಲ್ಲ. ಮನಸ್ಸು ನೂರು ಯೋಚನೆಗಳಲ್ಲಿ ದಾರಿಗಾಣದಾಗಿ ನಿಂತುಬಿಟ್ಟಿತ್ತು—ಆಕೆಯ ದೇಹದಂತೆಯೆ. ಎರಡು ಮೂರು ನಿಮಿಷಗಳಾದರೂ ಆಕೆ ಹಾಗೆಯೆ ನಿಂತಿರಬೇಕು. ಕೊನೆಗೆ ಕಣ್ಣು ಅಲುಗಾಡಿದವು, ನೀರು ಚಿಮ್ಮಿತು; ದೊಪ್ಪೆಂದು ಹಾಸಿಗೆಯ ಮೇಲೆ ಬಿದ್ದುಕೊಂಡು ಬಿಕ್ಕಿ ಬಿಕ್ಕಿ ಅಳತೊಡಗಿದಳು.

೬

ಒಂದು ಗಂಟೆಯಾದರೂ ಮೋಹಿನಿ ಹಾಗೆಯೆ ಹಾಸಿಗೆಯಲ್ಲಿ ಬಿದ್ದುಕೊಂಡೇ ಇದ್ದಳು ಕೋಣೆಯಲ್ಲಿಯ ದೀಪವನ್ನೂ ಉರಿಸಿರಲಿಲ್ಲ, ಬೀದಿಯಲ್ಲಿಯ ದೀಪದ ಬೆಳಕು ಕಿಟಕಿಯೊಳಗಿಂದ 'ಇದೇನು, ಈಕೆ ಹೀಗೆ ಬಿದ್ದುಕೊಂಡಿದ್ದಾಳೆ!' ಎಂಬ ಕುತೂಹಲದಿಂದೆಂಬಂತೆ ಒಳನುಗ್ಗಿ ಮುಂದೆ ಆಕೆಯನ್ನು ಮಾತನಾಡಿಸಲು ಧೈರ್ಯ ಸಾಲದ್ದಕ್ಕಾಗಿ ಹಾಸಿಗೆಯ ಅಂಚಿನ ಮಟ್ಟಿಗೆ ಬಂದು ಗೆರೆ ಕೊರೆದ ಹಾಗೆ ನಿಂತಿದ್ದಿತು ಕೋಣೆ ನಿಶ್ಶಬ್ದವಾಗಿದ್ದರೂ ಆಕೆಯ ಮನಸ್ಸಿನಲ್ಲಿಯ ಕೋಲಾಹಲ ಮಾತ್ರ ಹೊರಗಿನ ಆಕಾಶದಲ್ಲಿಯ ಮೋಡಗಳ ತುಮುಲಕ್ಕೆ ಸರಿಯಾಗಿದ್ದಿತು ಆ ಮೋಡಗಳಂತೆಯೇ ಬೀಸಿದ ಗಾಳಿಯ ಹೊಡೆತಕ್ಕೆ ಬಾಗಿ ಅದು ಕರೆದತ್ತ ಓಡುತ್ತಿದ್ದಂತೆ ಮೋಹಿನಿಯ ಯೋಚನೆಗಳು ಯಾವ ಒಂದು ಕ್ರಮವನ್ನೂ ಅನುಸರಿಸದೆ, ನುಗ್ಗಿಬರುತ್ತಿದ್ದ ನೂರು ಭಾವನೆಗಳ ಎಳೆತಕ್ಕೆ ಸರಿಯಾಗಿ ಎಲ್ಲೆಲ್ಲಿಯೊ ಓಡುತ್ತಿದ್ದವು ಒಂದು ಕ್ಷಣ ದುಃಖ ಉಕ್ಕಿಬರುತ್ತಿತ್ತು ಆದರೆ ಯಾಕೆ ಕೆಡಕೆನಿಸಿಕೊಳ್ಳಬೇಕು? ತಾನು ಆನಂದನನ್ನು ಆ ರೀತಿ ಪ್ರತಿಭಟಿಸಿ ಕಳಿಸಿದ್ದರಲ್ಲಿ ಯಾವ ತಪ್ಪು? ಎಂದು ಕೇಳಿಕೊಳ್ಳುತ್ತಿದ್ದಳು ಆದರೆ ಆನಂದ ಎಷ್ಟು ಮೆತ್ತಗಾಗಿ ಮಾತನಾಡಿಸಿದ! ಎಷ್ಟು ಪರಿಯಾಗಿ ಆಸೆಯನ್ನು ತಳೆದು ಬಂದು ಎಲ್ಲವನ್ನೂ ಮರೆತು ಸುಖವಾಗಿ ಇರೋಣ ಎಂದು ಹೇಳಿದ? ಅದೇಕೆ ಆತನ ಮಾತಿನಲ್ಲಿ ತನಗೆ ವಿಶ್ವಾಸ ಹುಟ್ಟಲಿಲ್ಲ? ಹೇಗೆ ಹುಟ್ಟಬೇಕು? ಆ ದಿನ ಸಾಯಂಕಾಲ ತನ್ನನ್ನು ಹೊರ ದೂಡಿದಾಗ ಆನಂದ ತನ್ನ ಹೃದಯದಲ್ಲಿಯ ವಿಶ್ವಾಸವನ್ನೇ ಹೊರದೂಡಿದ್ದ. ಅಷ್ಟು ಮಾಡಿದವನನ್ನು ಮತ್ತೆ ನಂಬಬಹುದೆ? ಅದೇನೋ ಕೋಪದಾವೇಶದಲ್ಲಿ ಮಾಡಿರಬಹುದು. ಇನ್ನೊಬ್ಬರ ಮಾತನ್ನು ನಂಬಿ ಮಾಡಿರಬಹುದು ಹೌದೆ? ಹಾಗಿದ್ದರೆ ಮತ್ತೆ ಅದೇ ರೀತಿಯಾಗಿ ಆತ ನಡೆದುಕೊಳ್ಳಲಾರ ಎಂದು ಯಾವ ಭರವಸೆ? ಅದು ಹೇಗಿದ್ದರೂ, ಆ ಎಲ್ಲದಕ್ಕೂ ಹಿನ್ನೆಲೆಯಾಗಿ ನಿಂತ ಅವರೆಲ್ಲರ ಸಂಶಯಿತ ಮನೋವೃತ್ತಿಗಳು, ಅದರಿಂದಾಗಿ ಅವರು ಆಡಿದ ಮಾತುಗಳು, ಮಾಡಿದ ಕೃತ್ಯಗಳು—ಓ! ಅದೆಲ್ಲವನ್ನು ನೆನೆದರೆ ವಿಶ್ವಾಸ ಹೇಗೆ ಹುಟ್ಟಬೇಕು? ಅವರ ಆ ಸಂಶಯಗಳಲ್ಲಿಯೆ ವಿಶ್ವಾಸ ಸುಟ್ಟುಹೋಯಿತು, ಎಂದುಕೊಂಡಳು.

ಆದರೆ ಆನಂದ ಆಶ್ವಾಸನ ಕೊಟ್ಟಿದ್ದನಲ್ಲ! ತಾನು ಬಂದರೆ—ಎಂದು ಏನೇನೋ ಹೇಳಬೇಕಾದುದನ್ನು ಅರ್ಧಕ್ಕೆ ತಡೆದಿದ್ದನಲ್ಲ! ಆತ ಹೇಳುವುದರಲ್ಲಿ ಹೊಸದೇನು? ತಾನು ಬಂದರೆ— ಮುಂದೇನು ಹೇಳುತ್ತಿದ್ದನೊ ಏನೂ ಇಲ್ಲ ತಾನು ಬಂದರೆ ಸುಖವಾಗಿರಬಹುದು ಎಂದೇ ಹೇಳುತ್ತಿದ್ದ ಯಾರು ಸುಖವಾಗಿ ಇರಬಹುದು? ಆನಂದ ಮಾತ್ರ! ಬಾಯಿಂದ ಆ ಮಾತನ್ನು ಆನಂದ ಒಪ್ಪಲಾರ ಬಹುಶಃ ಮನಸ್ಸಿನಲ್ಲಿಯೂ ಹಾಗೆ ತಿಳಿದುಕೊಂಡಿರಲಾರ ಆದರೆ ಮಾತು ಕೃತಿಗೆ ಬಂದಾಗ ಮಾತ್ರ ಎಲ್ಲವೂ ಮೊದಲಿನಂತೆ ನಡೆಯುವುದು ಇನ್ನುಮುಂದೆ ಎಲ್ಲವೂ ಬೇರೆಯಾಗಿ ನಡೆಯುಬಹುದೆಂಬುದಕ್ಕೆ ಆನಂದ ತನ್ನ ಅಪೇಕ್ಷೆಯ ಹೊರತು ಬೇರೆ ಯಾವ ಭರವಸೆಯನ್ನು ಹೇಳಿದ್ದ? ಇನ್ನೂ ಅಲ್ಲಿಯೇ ಇರುತ್ತೀರಾ? ಎಂದು ಕೇಳಿದ್ದಕ್ಕೆ, ಇನ್ನೆಲ್ಲಿ ಹೋಗುವುದು ಎಂದೇ ಕೇಳಿದನಲ್ಲವೆ? ಪ್ರಪಂಚದಲ್ಲಿ ಬೇರೆ ಜಾಗ ಇಲ್ಲವೆ? ಎಂಬ ಮಾತಿನಲ್ಲಿಯ ವ್ಯಂಗ್ಯ ಆತನನ್ನು ಮುಟ್ಟಿತೊ ಇಲ್ಲವೊ!—

ಆದರೆ ಆನಂದ ಎಷ್ಟು ಮೆತ್ತಗಾಗಿ ಮಾತನಾಡಿದ! ಅದನ್ನು ನೆನೆದರೆ ಮೋಹಿನಿಗೆ ಆತನ ಬಗೆಯಲ್ಲಲ್ಲದೆ ತನ್ನ ಬಗೆಯಲ್ಲಿಯೂ ಮರುಕ ಮರುಕಳಿಸಿ ಬರುತ್ತಿತ್ತು ಆದರೆ ಈ ಮರುಕ ಯಾವ ಪ್ರಯೋಜನದ್ದು? ಗಂಡಹೆಂಡಿರ ನಡುವೆ ಮರುಕ ಒಂದು ಬಂಧನವಾಗಬಹುದೆ? ಒಬ್ಬರನ್ನೊಬ್ಬರು ಏನೋ ಒಂದು ಬಗೆಯಲ್ಲಿ ಕಟ್ಟಬಹುದಾದ ಬಂಧನವಾಗಬಹುದು. ಆದರೆ ಹೊಂದಿಕೆ? ತಿಳಿವು? ಪ್ರೀತಿ? ವಿಶ್ವಾಸ? ಇವಾವವೂ ಇಲ್ಲದೆ ಇಬ್ಬರೂ ಸೇರಿ ಸುಖವಾಗಿ ಇರಬಹುದೆ?—ಆನಂದ ತೀರ ನೊಂದುಕೊಂಡಿದ್ದ, ನಿಜ ಆದರೆ—ಆದರೆ ಎಂದಿಗಾದರೂ ಗಾಳಿಗೆ ತೂರಿದ ತರಗೆಲೆಯಂತೆಯೇ ಆತನ ತಿಳಿವು—ಭಾವನೆ! ಸುಖವಾಗಿರಬೇಕು ಎಂಬ ಬಯಕೆ ಆತನಲ್ಲಿ ಇದ್ದಿತು! ಆದರೆ ಅದನ್ನು ಸಾಧಿಸಬೇಕು, ಸಾಧ್ಯವಾಗಿಸಬೇಕು ಎಂಬ ಹಟ ಬೇಡವೆ? ಆ ಹಟವನ್ನು ಆನಂದ ಎಂದಿಗೂ ತೊಡಲಿಲ್ಲ ಇಂದಿಗೂ ತೊಡಲಿಲ್ಲ. ತೊಡಬಹುದಾಗಿತ್ತು, ಎಂದೆನಿಸಿತು ಮೋಹಿನಿಗೆ

ಹತ್ತಾರು ಬಗೆಯಲ್ಲಿ ಮೋಹಿನಿ ತನ್ನನ್ನು ಸಮರ್ಥಿಸಿಕೊಳ್ಳಲು ಯತ್ನಿಸಿದಳು. ಬುದ್ಧಿ ಸಮಾಧಾನ ಹೇಳುತ್ತಿತ್ತು. ಎದೆಯಲ್ಲಿಯ ಮೊರೆತಕ್ಕೆ ಮಾತ್ರ ಸಮಾಧಾನವಿರಲಿಲ್ಲ. ಏನೆಂದು ಕೇಳಿದರೆ ತನ್ನ ಮಟ್ಟಿಗೆ ಕೂಡ ಮೋಹಿನಿ

ಆ ಮೊರೆತವೇಕೆ ಎಂದು ಹೇಳುವುದು ಸಾಧ್ಯವಿರಲಿಲ್ಲ ತನ್ನಲ್ಲಿ ಹಟ ಬೆಳೆದು ನಿಂತಿದೆ ಎಂದಲ್ಲವೆ ತಾನು ಹೇಳಿದ್ದು ? ಇದೆಂಥ ಹಟ ? ಆತ ಬಂದು ಒಂದು ಮಾತು ಕೇಳಿದ್ದಕ್ಕೆ ತಾನು ಈ ಪರಿಯಾಗಿ ಹೊಯ್ದಾಡಬಹುದಾದರೆ ಹಟದ ಮಾತೇ ಇಲ್ಲ ಎಂದುಕೊಂಡಳು. ಛೆ! ಇದು ಹೊಯ್ದಾಟವಲ್ಲ! ಹೊಯ್ದಾಟ ವಿದ್ದರೆ ಅಷ್ಟು ಗಟ್ಟಿಮುಟ್ಟಾಗಿ ಕೊನೆಯ ಮಾತನ್ನು ಹೇಳಲಾಗುತ್ತಿದ್ದಿತೆ? ಆದರೂ ಎದೆಯಲ್ಲಿ ಎಲ್ಲಿಯೋ ಹುದುಗಿಕೊಂಡು ನಿಂತ ಅಸಮಾಧಾನ ಆಗೀಗ ತಲೆಯೆತ್ತಿ ನೋಯಿಸುತ್ತಿತ್ತು ಕೊನೆಯ ಮಾತು! ಆನಂದ ಏನೆಂದಿದ್ದ ? 'ಈ ಹಟ ಬೇಡ, ಅದರಲ್ಲಿ ಸುಖವಿಲ್ಲ' ಎಂದೆ ? ಯಾರು ಕೇಳಿದ್ದರು ಈತನನ್ನು ಅದರಲ್ಲಿ ಸುಖವಿದೆಯೆ ಅಥವಾ ಇಲ್ಲವೆ ಎಂದು ? ಮೋಹಿನಿಯ ಆತ್ಮಾಭಿ ಮಾನ ಕೆರಳಿತು ಹಟವಲ್ಲ ಇದು, ಇದು ಆತ್ಮಾಭಿಮಾನ ತನ್ನಲ್ಲಿದೆ, ಆನಂದನಲ್ಲಿ ಇಲ್ಲ ಆತ್ಮಾಭಿಮಾನ ಇಲ್ಲದ ಆತನಿಗೆ ತನ್ನಲ್ಲಿಯ ಆತ್ಮಾಭಿ ಮಾನ ಹೇಗೆ ಅರ್ಥವಾಗಬೇಕು ? ಇಂಥವನಿಗೆ ಯಾವ ಬೆಲೆ ? ಇಂಥವನ ಬಗೆಯಲ್ಲಿ ಯಾರಿಗೆ ಯಾಕೆ ಆದರ ಹುಟ್ಟಬೇಕು ? ಯಾರು ಏನೆಂದು ವಿಶ್ವಾಸ ವಿಡಬೇಕು ಇಂಥವನಲ್ಲಿ ? ಗಾಳಿಗೆ ತೂರಿದ ತರಗೆಲೆ ! ಪ್ರವಾಹದಲ್ಲಿ ತೇಲಿ ಹೋಗುತ್ತಿದ್ದ ಕೊರಡು ! ಸೂತ್ರದ ಅಂಕಿತಕ್ಕೆ ಕುಣಿಯುವ ಬೊಂಬೆ ! ಇಂಥವ ಮನುಷ್ಯನೆ ! ಪತಿಯಾಗಬಲ್ಲನೆ ? ಇಂಥವನಿಂದ ಸುಖವಿಲ್ಲ ! ಆತನ ಮಾತಿಗೆ ತಾನು ಮೋಸಹೋಗಲಿಲ್ಲ, ಅದೇ ಸರಿಯಾಯಿತು—

ಮೋಹಿನಿ ಎದ್ದು ದೀಪವನ್ನುರಿಸಿದಳು ಕೋಣೆಯನ್ನು ತುಂಬಿದ ಬೆಳಕು ಅದೇಕೋ ವಸಂತನ ನೆನಹನ್ನು ತಂದೊಡ್ಡಿತು ಎಂಥ ವಿಪರ್ಯಾಸ ! ಅಷ್ಟು ಕಾತರಳಾಗಿ ಆತನಿಗಾಗಿ ಕಾಯುತ್ತಿದ್ದಾಗ ತನ್ನೆದುರಿಗೆ ಅನಿರೀಕ್ಷಿತವಾಗಿ ಆನಂದ ಬಂದು ನಿಲ್ಲಬೇಕೆಂದರೆ! ಮನಸ್ಸು ವಸಂತನತ್ತ ಓಡಿತು. ಆತ ಬಂದಿದ್ದರೆ ಕೋಣೆಯಂತೆ ತನ್ನ ಮನಸ್ಸೂ ಬೆಳಗುತ್ತಿದ್ದಿತು ವಸಂತ—ಆನಂದ ! ಭೂಮ್ಯಾಕಾಶದಷ್ಟು ಅಂತರ. ಹೌದೆ? ಯಾರು ಬಲ್ಲರು? ಆದರೆ ಈ ಸಂದೇಹ ಮೂಡಿದ್ದು ಅರೆ ನಿಮಿಷ ಮಾತ್ರ. ವಸಂತನ ಸಹಾನುಭೂತಿಯಲ್ಲಿ ಯಾವುದೋ ಮಾಯೆ ಮೋಹಿನಿಗೆ ಕಾಣುತ್ತಿದ್ದಿತು. ಆತನಾದರೂ ಮಾತಿ ಗಿಂತ ಹೆಚ್ಚಿನ ಯಾವುದನ್ನು ಒದವಿಸಿದ್ದ ? ಆತನೂ ಬರಿ ಮಾತನ್ನೇ ಆಡು ತ್ತಿದ್ದ. ಆನಂದನೂ ಆಡಿದ್ದ. ಆದರೆ ವಸಂತನ ಮಾತಿನಲ್ಲಿ ಭರವಸೆ ಸ್ಪಷ್ಟವಾಗಿ

ಸಿಕ್ಕುತ್ತಿದ್ದಿತು. ವಿಶ್ವಾಸ ನೇರವಾಗಿ ಹುಟ್ಟುತ್ತಿದ್ದಿತು. ಆದರೇನು ? ವಸಂತ ಯಾರು ? ಆನಂದ ಯಾರು ? ಎಂದು ಯೋಚಿಸಿದಾಗ ಮನಸ್ಸು ಮತ್ತೆ ದೀಪ ವಿಲ್ಲದ ಕೋಣೆಯಂತಾಗುತ್ತಿದ್ದಿತು ಆದರೆ ಆ ಕತ್ತಲೆಯಲ್ಲಿಯೂ ವಸಂತನ ಆಕೃತಿ ಕಣ್ಣೆದುರು ನಿಲ್ಲುತ್ತಿದ್ದಿತು. ಆಕೃತಿ ಕಣ್ಣೆದುರು ನಿಂತರೆ ಏನಾಯಿತು ? ಅದರಿಂದ ಯಾವ ಸಮಾಧಾನ ? ಎಷ್ಟು ದಿನವಾಯಿತು ಆತನನ್ನು ನೋಡಿ ? ಊರಿನಿಂದ ಬಂದ ಕೂಡಲೆ ಬಂದು ತನ್ನನ್ನು ನೋಡಬೇಕೆಂದು ಕಾಗದವನ್ನು ಬರೆದರೂ ಬಂದಿರಲಿಲ್ಲ ಎಷ್ಟಾದರೂ ಗಂಡಸೇ ಅಲ್ಲವೆ, ಎಂದು ಒಂದು ಕ್ಷಣ ಎನಿಸಿದರೂ ವಸಂತ ಹಾಗೆ ಮಾಡಲಾರ ಎಂದೂ ತೋರಿತು ಆತ ಊರಿನಿಂದ ಬಂದೇ ಇರಲಿಕ್ಕಿಲ್ಲವೆ ಎಂಬ ಪ್ರಶ್ನೆ ಆಕೆಯ ನಿರಾಶೆಯನ್ನು ಇನ್ನೂ ತೀವ್ರ ಗೊಳಿಸಿತು ಹೇಗಿದ್ದರೂ ಆತನನ್ನು ಕಾಣಲೇಬೇಕು, ನಡೆದುದನ್ನು ತಿಳಿಸಲೇ ಬೇಕು, ಆತನೊಡನೆ ಒಂದರ್ಧ ಗಂಟೆ ಮಾತನಾಡಿ ನಡೆದುದೆಲ್ಲವನ್ನೂ ಮರೆಯಬೇಕು ಎಂದುಕೊಂಡಳು ಬೇರೆ ಮಾರ್ಗವೇ ಕಾಣಲಿಲ್ಲ ಮರುದಿನ ಮತ್ತೆ ವಿಚಾರಿಸೋಣ ಎಂದುಕೊಳ್ಳುತ್ತಿರುವಾಗಲೆ ಬಾಗಿಲ ಮೇಲೆ ಮತ್ತೆ ಸದ್ದಾಯಿತು

ಮೋಹಿನಿ ಹುಚ್ಚುಕಡಿಮೆ ಬೆಚ್ಚಿಬಿದ್ದಳು ಮತ್ತೆ ಆನಂದ ಬಂದನೆ ? ಎಂದು ಮಿಂಚಿನಂತೆ ವಿಚಾರ ಸುಳಿದು ಹೋಯಿತು ಅಥವಾ ವಸಂತನೇ ಇದ್ದಿರ ಬಹುದೆ, ಎಂಬ ಹುಚ್ಚು ಆಸೆಯೂ ಮಿನುಗಿತು ಆದರೆ ಹೋಗಿ ಬಾಗಿಲು ತೆರೆಯುವ ಧೈರ್ಯವಾಗದೆ "ಯಾರವರು ?" ಎಂದಳು ಉತ್ತರ ಬರಲಿಲ್ಲ. ಮತ್ತೆ ಶಬ್ದವಾಯಿತು. "ಯಾರವರು ?" ಎಂದು ಮತ್ತೆ ಕೇಳುತ್ತಲೆ ಕುತೂಹಲ, ಹೆದರಿಕೆ, ಆಸೆಯನ್ನು ತಡೆಯಲಾಗದೆ ಬಾಗಿಲು ತೆರೆದಳು.

ಜವಾನನೊಬ್ಬ ಲಕ್ಕೋಟೆಯನ್ನು ತಂದಿದ್ದ ! ಯಾರಿಂದ, ಏನಿದೆ, ಎಂಬುದು ಯಾವುದೂ ತಿಳಿಯದೆ—ಅದು ತನಗಾಗಿಯೆ ಇದೆ ಎಂಬುದನ್ನು ಗಟ್ಟಿಮಾಡಿಕೊಂಡು—ಅವಸರದಿಂದ ತೆರೆದು ನೋಡಿದಳು ಸ್ಟುಡಿಯೋದಿಂದ ಅನುರಾಧೆ ಬರೆದು ಕಳಿಸಿದ ಕಾಗದ ಅದು ! ಸರಿ, ಎಲ್ಲವೂ ಅರ್ಥವಾಯಿತು ಅಂದು ಸ್ಟುಡಿಯೋದಲ್ಲಿ ಅದೇ ತಯಾರಾಗಿ ಮುಗಿದ 'ಉದ್ಧಾರ' ಚಿತ್ರಪಟದ ಪ್ರಥಮ ಪ್ರಾಯೋಗಿಕ ಪ್ರದರ್ಶನವೆಂಬುದು ಗೊತ್ತಿತ್ತು. ಮಧ್ಯಾಹ್ನವೇ ಅನುರಾಧೆ ತನ್ನನ್ನು ಬರಹೇಳಿದ್ದಳು. ಶಾಲೆಯಿಂದ ಬಂದನಂತರ ಬರಬೇಕು

ಎನಿಸಿದರೆ ತಾನಾಗಿಯೆ ಬರುತ್ತೇನೆಂದು ಹೇಳಿದ ಮಾತು ಲಕ್ಷ್ಯಕ್ಕೆ ಬಂದಿತು. ಸುಮಾರು ಒಂಬತ್ತು ಗಂಟೆಯಾಗುತ್ತ ಬಂದರೂ ತಾನು ಬಾರದಿದ್ದುದನ್ನು ನೋಡಿ ಅನುರಾಧೆ ಚೀಟಿ ಕಳಿಸಿದ್ದಳು. ತಾನು ಕೂಡಲೆ ಬರಲೇಬೇಕೆಂದೂ, ರಂಗನಾಥನ್ ಬರಹೇಳಿದ್ದಾನೆಂದೂ, ಚೀಟಿಯನ್ನು ತಂದವ ರಂಗನಾಥನ್‌ನ ಡ್ರೈವರ್ ಎಂದೂ ಹೇಳಲಾಗಿದ್ದಿತು ಆತನ ಮುಖ ನೋಡಿದಳು ಹಿಂದೊಮ್ಮೆ ತನ್ನನ್ನು ಸ್ಟುಡಿಯೋದಿಂದ ಕರೆತಂದವ ಆತನೇ ಎಂಬ ನೆನಹು ಅಸ್ಪಷ್ಟವಾಗಿ ಮನಸ್ಸಿನಲ್ಲಿ ಮೂಡಿತು ಆತನಿಗೆ ಐದು ನಿಮಿಷ ಕೆಳಗೆ ಇರಲು ಹೇಳಿ ವೇಷಭೂಷೆಗೆ ತೊಡಗಿದಳು

ಹತ್ತು ನಿಮಿಷಗಳಲ್ಲಿ ಮೋಹಿನಿ ಗಾಳಿಯಲ್ಲಿ ತೇಲುವಂತೆ ಬೀದಿಗುಂಟ ಸಾಗಿದ ಆ ಸುಖವಾದ ಕಾರಿನಲ್ಲಿ ಹೊರಟಿದ್ದಳು ಮನಸ್ಸೂ ಅಷ್ಟೇ ಹಗುರಾಗಿದ್ದಿತು. ಸಾಯಂಕಾಲದ ಸನ್ನಿವೇಶವನ್ನೆಲ್ಲ ಮರೆಯಲೆಂದೊ, ಅದರ ಮೇಲೆ ಸೇಡಿನ ಬುದ್ಧಿಯಿಂದಲೊ ಎನ್ನುವಂತೆ ಮೋಹಿನಿ ತನ್ನ ಆನೆಕೋರೆ ಬಣ್ಣದ ಥಳಥಳಿಸುವ ಸಿಲ್ಕ್ ಸೀರೆಯನ್ನುಟ್ಟು, ಅದನ್ನು ಕೊರೆದು ಮೆರೆಯಿಸಿ ಒಪ್ಪುವಂತಿದ್ದ ಅಚ್ಚ ನೀಲಿ ಬಣ್ಣದ ಜಂಪರ್ ಹಾಕಿಕೊಂಡಿದ್ದಳಲ್ಲದೆ ವಿಶೇಷವಾದ ಆಸ್ಥೆಯಿಂದ ಮುಖ, ಮುಂದಲೆ, ಹಿಂದೆ ಸರಾಗವಾಗಿ ತೂಗುಬಿದ್ದ ದಪ್ಪನಾದ ಹೆಳಲು—ಇವೆಲ್ಲವುಗಳ ಕಡೆಗೆ ಲಕ್ಷ್ಯ ಪೂರೈಸಿದ್ದಳು. ದಾರಿ ಹೊರಳಿದಾಗ ಕಾರಿನಲ್ಲಿ ಮೈ ಮಣಿಯುತ್ತಿದ್ದಿತು ಎದುರಿನಲ್ಲಿಯ ಕನ್ನಡಿಯಲ್ಲಿ ಮಣಿದ ಅರ್ಧಮರ್ಧ ಭಾಗ ಆಗೀಗ ಕಾಣುತ್ತಿತ್ತು ಅದನ್ನೆಲ್ಲ ನೆನೆದಾಗ ಕಾರಿನಲ್ಲಿ ಅಷ್ಟು ಸುಖವಾಗಿ ಕುಳಿತುದು ಅದೇ ಒಂದೆರಡು ಗಂಟೆ ಮೊದಲು ನಡೆದುದರಿಂದ, ಅದರ ಅನಂತರದಲ್ಲಿ ತಾನು ಕತ್ತಲು ಮುಸುಕಿದ ಕೋಣೆಯಲ್ಲಿ ಬಿದ್ದುಕೊಂಡು ನೆನೆದುದರಿಂದ ಎಷ್ಟು ವಿಧವಾಗಿ ಬೇರೆಯಾಗಿದೆ—ಯಾವುದು ಕನಸೊ, ಯಾವುದು ನನಸೊ—ಎಂದು ಕೇಳಿಕೊಳ್ಳುವಂತಾದಳು .

ಅನುರಾಧೆ ರಂಗನಾಥನ್‌ನ ಕೋಣೆಯಲ್ಲಿ ಮೋಹಿನಿಗಾಗಿ ಕಾಯುತ್ತಲೆ ಇದ್ದಳು.

"ಏನೆ, ಎಷ್ಟು ಹೊತ್ತದು ನೀನು ಬರುವುದು? ಕಾದು ಕಾದು ನನಗಂತೂ ತೀರ ಬೇಸರವಾಗಿ ಬಿಟ್ಟಿತು. ಬರುತ್ತೀಯೊ ಇಲ್ಲವೊ ಎಂದು ಚೀಟಿ ಕಳಿಸಿದೆ."

" ಕಾರು ಬಂದಿರದಿದ್ದರೆ ನಾನು ಬರುತ್ತಲೇ ಇರಲಿಲ್ಲ "

" ಓಹೋ ಬರಬೇಕಾದರೆ ಕಾರು ಬರಬೇಕಾಗಿದ್ದಿತೆ ? ಅಂತೂ ಇಷ್ಟರಲ್ಲಿಯೋ—"

ಎಂದು ಸಹಜವಾದ ನಗೆ ಬೀರಿದಳು

" ಕಾರು ಬಂದಿರದಿದ್ದರೆ ಎಂದರೆ ಹಾಗಲ್ಲ ನಾನು ಹೇಳಿದ್ದು ನಿನ್ನ ಚೀಟಿ ಬಂದಿರದಿದ್ದರೆ ಎಂಬುದಕ್ಕಾಗಿ ಹೇಳಿದೆ—"

" ಸರಿ ಏನು ಮಾಡಿದೆ ಮನೆಯಲ್ಲಿ ಕುಳಿತು ಇಷ್ಟು ಹೊತ್ತು ? "

ಪ್ರಶ್ನೆ ಸಹಜವಾಗಿತ್ತು. ಅನಿರೀಕ್ಷಿತವೂ ಇರಲಿಲ್ಲ ಅಂತೇ ಮೋಹಿನಿ ಹೇಳಿದಳು

" ಏನು ಮಾಡುವುದು ? ಸುಮ್ಮನೆ ಕುಳಿತಿದ್ದೆ—"

" ಸಾಯಂಕಾಲ ಬಂದಾಗಿನಿಂದ ಹಾಗೆಯೆ ಹೊತ್ತು ಕಳೆದೆಯಾ ? "

" ಮತ್ತಿನ್ನೇನು ಮಾಡುವುದು ? "

" ಇಲ್ಲಿಗೆ ಬಂದಿದ್ದರೆ ಏನಾಗುತ್ತಿದ್ದಿತು ? ಓಹೊ ! ಆದರೆ ಅಲ್ಲಿಗೆ ಕಾರು ಬರಬೇಕಾಗಿತ್ತಲ್ಲವೆ ! "

" ನಾನು ಬರಬಾರದೆಂದೇ ಅಂದುಕೊಂಡಿದ್ದೆ—"

" ಮನೆಯಲ್ಲಿ ಸುಮ್ಮನೆ ಹಾಗೆ ಕುಳಿತುಕೊಂಡರೆ ನಿನಗೆ ಹೊತ್ತು ಹೇಗೆ ಸರಿಯುತ್ತದೆಯೊ ! ನನಗಂತೂ ಹತ್ತು ನಿಮಿಷ ಹಾಗೆ ಸುಮ್ಮನೆ ಕುಳಿತಿರಲಿಕ್ಕಾಗುವುದಿಲ್ಲ ! "

ಆಕೆ ಹೇಳಿದ ಮಾತು ನಿಜವೇ ದೇಹ ಹತ್ತು ನಿಮಿಷ ಒಂದೇ ಕಡೆಗೆ ಕುಳಿತರೂ ಮನಸ್ಸು ಒಂದು ನಿಮಿಷ ಕೂಡ ಒಂದೇ ವಿಷಯವನ್ನು ಕುರಿತು ಯೋಚಿಸಲಾಗದಷ್ಟು ಚಂಚಲವಾಗಿತ್ತೆಂಬುದನ್ನು ಆಕೆ ಹೇಗೆ ಹೇಳಬೇಕು ? ತನ್ನಂತೆಯೆ ಪರರು, ಎಂದು ಆಕೆ ಭಾವಿಸಿದ್ದರೆ ಅಥವಾ ಇನ್ನೆಲ್ಲರೂ ತನ್ನಂತೆ ಇರದಿದ್ದರೂ ಹಾಗೆ ಇರುವುದೇ ಒಳ್ಳೆಯದು ಎಂದು ಆಕೆ ಬಯಸಿದ್ದರೆ ಆಕೆಯ ತಪ್ಪೇನೂ ಅಲ್ಲ. ಅದು ಆಕೆಯ ಸ್ವಭಾವದೋಷವಷ್ಟೆ !

ರಂಗನಾಥನ್ ಮೋಹಿನಿಯನ್ನು ಕಂಡು ಬಾಗಿಲಲ್ಲಿಯೆ ತಡೆದ. ' ಬ್ಯೂಟಿಫುಲ್ ' ಎಂದು ಮಾತು ನಾಲಗೆಯ ತುದಿಗೆ ಬಂದುದನ್ನು ತಡೆಹಿಡಿದ. ಚಿತ್ರವನ್ನು ನಿರ್ದೇಶಿಸುವಾಗ ನಟನಟಿಯರು ತನ್ನ ಮನಸ್ಸೊಪ್ಪುವಂತೆ ಯಾವು

ದಾದರೊಂದು ಭಂಗಿಯಲ್ಲಿ ನಿಂತುದನ್ನೊ ಕುಳಿತುದನ್ನೊ ನೋಡಿದಾಗ ಆ ಮಾತನ್ನು ಹೇಳಿ ಹೇಳಿ ಅಭ್ಯಾಸವಾದ ಆತನಿಗೆ ಆ ಉದ್ಗಾರ ಬಾಯಿಗೆ ಸಹಜ ವಾಗಿ ಬಂದಿತ್ತು. ಆದರೆ ಮೋಹಿನಿಯನ್ನು ಕುರಿತು ಅದನ್ನು ಹೇಳಬಹುದೆ? ಪರಿಚಯ ಹೆಚ್ಚಾಗಿದ್ದರೆ ಹೇಳಬಹುದಿತ್ತು ಎಂದುಕೊಂಡು, ಬೇರೆ ಮಾತು ಬೆಳೆಯಿಸಿದ

"ಬಂದಿರಾ ಅಂತೂ? ಎಂದಿಗೊ ಒಮ್ಮೆ ಬಂದುಬಿಟ್ಟು ಮತ್ತೆ ಬರುತ್ತೇನೆ ಎಂದು ಹೇಳಿ ಪಾರಾಗಿದ್ದಿರಲ್ಲವೆ?" ಎಂದು ನಗೆಯಾಡಿದ

ಮೋಹಿನಿ ಸುಮ್ಮನಾಗಿಯೆ ಇದ್ದಳು. ಆ ಮಾತಿನಿಂದಾಗಿ ಆಸನದಲ್ಲಿ ಮಿಸುಕಿದಳಷ್ಟೆ ರಂಗನಾಥನ್ ಹತ್ತಿರದ ಕುರ್ಚಿಯಲ್ಲಿ ಬಂದು ಕುಳಿತು,

"ನಮ್ಮ ಮಹಾಕೃತಿಯನ್ನು ನೀವು ನೋಡಲೇ ಬೇಕು ಎಂದೆನಿಸಿ ಚೀಟಿ ಕಳಿಸಿರಿ ಎಂದು ನಾನೇ ಹೇಳಿದೆ—" ಎಂದ

"ಮಹಾಕೃತಿಯೆ?" ಎಂದು ಅನುರಾಧೆ ನಕ್ಕಳು

"ಇನ್ನಾರೂ ಅನ್ನದಿದ್ದರೆ ನಾವಾದರೂ ಅಂದುಕೊಳ್ಳಬೇಕಲ್ಲ!"

"ರಿಲೀಜ್ ಆಗುವ ಮೊದಲೆ ಜನರು ನಿಮ್ಮ ಚಿತ್ರ ಹೊಗಳಬೇಕೆ?"

"ರಿಲೀಜ್ ಆದಮೇಲೆ ಇದ್ದೇ ಇದೆ–ಕಾಂಪ್ಲಿಮೆಂಟಲ್ಲ, ಕೆನ್ನೆಗೇಟು!"

"ಅಂದರೆ ನಾವೀಗ ನಿಮಗೆ ಕಾಂಪ್ಲಿಮೆಂಟ್ ಮಾಡಬೇಕು ಎಂದಾಯಿತಲ್ಲ!" ಎಂದು ಮೋಹಿನಿ.

"ಹೇಳಿದರೆ ಮಾಡುತ್ತಾರೆಯೆ ಯಾರಾದರೂ? ಸುಮ್ಮನೆ 'ಬನ್ನಿರಿ' ಎಂದರೆ ಬಾರದೆ ಇದ್ದವರು? ಒಂದು ತಿಂಗಳ ಮೇಲಾಗಿರಬೇಕಲ್ಲವೆ ನೀವು ಬಂದು?"

"ಹೌದು ಆಗಲೇ ಇಲ್ಲ ಕೆಲಸವಿದ್ದೇ ಇರುತ್ತದೆ. ಅಲ್ಲದೆ, ಸುಮ್ಮನೆ ಬಂದಾದರೂ ಏನು ಮಾಡುವುದು? ನಿಮ್ಮ ಕೆಲಸಗಳಿಗೆ ಅಡ್ಡಿ ಆತಂಕ!"

"ಅಡ್ಡಿ ಆತಂಕಗಳ ಕೂಡ ಕುಸ್ತಿ ಆಡುವುದೇ ನಮ್ಮ ಕೆಲಸ. ಆದ್ದರಿಂದ ಹತ್ತು ನಿಮಿಷ ಆಗೀಗ ಯಾರಾದರೂ ಬಂದರೆ ಅದೇ ನಮಗೆ ಒಂದು ಬಿಡುವು. ಹರಟೆ ಹೊಡೆಯುವುದೇ ವಿಶ್ರಾಂತಿ!"

ಮೋಹಿನಿಯನ್ನೇ ಕುರಿತು ಈ ಎಲ್ಲ ಮಾತು ಎಂಬುದು ಅನುರಾಧೆಗೆ ಹಿಡಿಸಲಿಲ್ಲವೆಂದು ಕಾಣುತ್ತದೆ. ತನ್ನ ಅಸಂತೋಷವನ್ನು ಸೂಚಿಸಲೆಂದೇ

ಹೇಳಿದಳು :

"ಹರಟೆ ವಿಶ್ರಾಂತಿಯೆ ? ಒಳ್ಳೆ ಹೇಳುವವರು ! ತಮಗೆ ಕೆಲಸವಿಲ್ಲದಾಗ ಉಳಿದವರು ಹರಟೆಗೆ ಬೇಕು. ಇಲ್ಲದಿದ್ದರೆ ನಾವಿಲ್ಲಿ ಹತ್ತು ಗಂಟೆಗಟ್ಟಲೆ ಕಾದು ಕುಳಿತಿದ್ದರೂ—"

"ಅನ್ಯಾಯವಾಗಿ ಹೇಳಬೇಡಿರಿ, ಹಾಗೆಲ್ಲ ನಿಮ್ಮ ವಿಷಯದಲ್ಲಿ ಹಾಗೆ ಎಂದಾದರೂ—"

"ಹೋಗಲಿ, ಅದೆಲ್ಲ ಈಗ ಯಾಕೆ ? ಈಗ ತಮ್ಮ 'ಮಹಾಕೃತಿ' ಯನ್ನು ತೋರಿಸುವವರೊ, ಕುಳಿತು ಹರಟೆ ಹೊಡೆಯುವವರೊ ?"

"ನೋಡಿದಿರಾ ? ನಾನು ಹರಟೆ ಹೊಡೆಯುವುದಿಲ್ಲ ಎಂದು ಹೇಳಿ, ಅದಕ್ಕಾಗಿ ಒಂದು ನಿಮಿಷ ಕುಳಿತರೆ ತಳ್ಳಿಹಾಕಬೇಕೆನ್ನುತ್ತೀರಿ !"

"ಸರಿ, ಹಾಗಿದ್ದರೆ ಚಿತ್ರ ಇಲ್ಲ ಎಂದ ಹಾಗೆಯೆ ! ನನ್ನನ್ನು ಸುಮ್ಮನೆ ಕಾಯಿಸಿದಿರಿ, ಈಕೆಯನ್ನು ಕರೆಯಿಸಿದಿರಿ, ಅಥವಾ ಈಕೆಯನ್ನು ಕರೆಯಿಸುವುದಕ್ಕೆ—" ಎಂದು ಮತ್ತೆ ಅದೇ ನಗೆಯನ್ನು ಬೀರಿದಳು

ರಂಗನಾಥನ್ ಮೋಹಿನಿಯ ಮುಖವನ್ನು ನೋಡಿದ. ಅನುರಾಧೆಯ ಮಾತು ಆತನಂತೆ ಆಕೆಗೂ ಸರಿಬಂದಿರಲಿಲ್ಲ. ಮಾತನಾಡಿ ಅದನ್ನೇ ಬೆಳೆಯಿಸುವುದಕ್ಕಿಂತ ಬೇರೆಯಾಗಿ ಮಾತು ತೇಲಿಸಿಬಿಡುವುದೇ ಒಳ್ಳೆಯದೆಂದು ಹೇಳಿದ :

"ದಯವಿಟ್ಟು ಇನ್ನು ಹದಿನೈದು ನಿಮಿಷ ಕ್ಷಮಿಸಿ ಎಲ್ಲವೂ ಸಿದ್ಧವಾಗುತ್ತಾ ಇದೆ ಆಗಬಹುದೆ, ಅನುರಾಧಾದೇವಿಯವರೆ ?" ಎಂದು ಸೋಗಿನ ವಿನಯದಿಂದ ಕೈಮುಗಿದ.

"ಮಧುಮಾಲಿಕಾ ಬಂದಿಲ್ಲವೆ ?" ಎಂದು ಅನುರಾಧೆ.

"ಬಾರದಿರುತ್ತಾಳೆಯೆ ?—"

"ಎಲ್ಲಿ ? ಈಕೆಗೆ ನೋಡಬೇಕಿತ್ತು ಪರಿಚಯ ಮಾಡಿಕೊಡಬಾರದೆ ?"

"ಸರಿ ಅದೇನು ಅಂಥ ದೊಡ್ಡ ಪರಿಚಯ—"

"ನಿಮಗೆಲ್ಲ ಹಾಗೆ ಅನಿಸಬಹುದು ಹೊರಗಿನವರಿಗೆ ಈ ಚಿತ್ರತಾರೆಯರು ಎಂದರೆ—"

"ಏನು ಗಂಧರ್ವಲೋಕದಿಂದ ಬಂದಿರುತ್ತಾರೆಯೆ ?"

"ಯಾವ ಲೋಕದವರೊ ? ಇಲ್ಲಿಯವರಂತೂ ಅಲ್ಲ ಎಂಬ ಹಾಗಿರು

ತ್ತಾರೆ!" ಎಂದು ಮೋಹಿನಿ ನಕ್ಕಳು.

ರಂಗನಾಥನ್‌ನಿಗೆ ಮಾತು ರುಚಿಸಿತು. ಜವಾನನೊಬ್ಬನನ್ನು ಕರೆದು ಮಧುಮಾಲಿಕೆಯನ್ನು ಕೂಡಲೆ ಬರಬೇಕೆಂದು ಹೇಳಿಕಳಿಸಿದ. ಅನುರಾಧೆ ಎದುರಿನ ಕನ್ನಡಿಯಲ್ಲಿ ತನ್ನ ಮುಖವನ್ನು ನೋಡಿಕೊಂಡು, ಮುಂಗೂದಲು ಗಳನ್ನು ಮತ್ತಷ್ಟು ಕೆದರಿಕೊಂಡು ಬಂದು ಮೋಹಿನಿಗೆ ಹೇಳಿದಳು .

"ನೋಡುವಿಯಂತೆ ಹೇಗಿದ್ದಾಳೆ—"

"ಹೇಗಿದ್ದಾಳೆ ?"

"ಒಳ್ಳೆ ದೆವ್ವ ಇದ್ದಹಾಗೆ ಇದ್ದಾಳೆ!" ಎಂದ ರಂಗನಾಥನ್.

"ಹೌದೆ? ಈಗ ಬರಲಿ, ತಡೆಯಿರಿ ನಿಮ್ಮ ಅಭಿಪ್ರಾಯವನ್ನು ತಿಳಿಸು ತ್ತೇನೆ ಆಕೆಗೆ!" ಎಂದು ಅನುರಾಧೆ ನಕ್ಕಳು

"ಸರಿ ಹೀಗೆ ಇದಕ್ಕೆಲ್ಲ ಹೆದರಿಕೊಳ್ಳಬೇಕಿದ್ದರೆ ದಿನಕ್ಕೆ ಹತ್ತು ಸಾರೆ ಸಾಯುತ್ತಿದ್ದೆ! ನೀವೇತಕ್ಕೆ ಹೇಳುವುದು ? ನಾನೇ ಹೇಳುತ್ತೇನೆ ಬೇಕಾದರೆ."

ಮೋಹಿನಿಯ ಕುತೂಹಲವನ್ನೂ ಅನುರಾಧೆಯ ಆತುರವನ್ನೂ ರಂಗನಾಥನ್ ನೋಡಿ ತನ್ನಲ್ಲಿಯೆ ನಗುತ್ತಿರುವಂತಿತ್ತು. ಐದು ನಿಮಿಷಗಳಲ್ಲಿ ಮಧುಮಾಲಿಕೆಯ ಸವಾರಿ ದಯಮಾಡಿಸಿತು. ಆಕೆ ಕೋಣೆಯಲ್ಲಿ ಬರಲು ರಂಗನಾಥನ್ ಹೇಳಿದ ಮಾತು ತೀರ ಸರಿಯಾದದ್ದು ಎಂದೇ ತೋರಿತು, ಮೋಹಿನಿಗೆ. ಆಕೆ ಕುರೂಪಿಯಾಗಿದ್ದಳೆಂದಲ್ಲ, ಕಪ್ಪಾಗಿದ್ದಳೆಂದಲ್ಲ, ದಪ್ಪಾ ಗಿದ್ದಳೆಂದೂ ಅಲ್ಲ ಚೆಲುವೆಯಾಗಿದ್ದಳು, ತೆಳ್ಳಗಾಗಿದ್ದಳು, ಬೆಳ್ಳಗಾಗಿದ್ದಳು ಆದರೆ ಇದ್ದ ಸೌಂದರ್ಯವನ್ನು ಕಂಗೆಡಿಸುವಂತೆ ಆಕೆ ಬಳಿದುಕೊಂಡ ಬಣ್ಣ, ನೊಗಸಾಗಿದ್ದ ತಲೆಗೂದಲನ್ನು ಕೆದರಿ ಹರವಿಕೊಂಡ ಬಗೆ, ನಯವಾದ ಮೈಮಾಟವನ್ನು ಮುರಿದು ಹಾಳುಮಾಡುವಂತಹ ಆಕೆಯ ಅಂಗವಿನ್ಯಾಸಗಳು, ಬೆಳೆಯಿಸಿದ ಉಗುರು, ಅದರ ಮೇಲೆ ಕಣ್ಣೊಡೆಯುವಂಥ ಕೆಂಪು ಬಣ್ಣ, ಹಾಗೆಯೇ ವಿಪರೀತವಾಗಿ ಬಣ್ಣಗೊಂಡ ತುಟಿಗಳು—ಇವೆಲ್ಲಕ್ಕೆ ಕಳಸವಿಡು ವಂತೆ ಕೃತ್ರಿಮವಾದ ನಡೆನುಡಿಗಳೆಲ್ಲವೂ ಸೇರಿ ಆಕೆಯನ್ನು ನೋಡಿದರೆ ನೇರವಾಗಿ ಹೆದರಿಕೆ ಎನಿಸದಿದ್ದರೂ 'ಇದು ಬೇಡ' ಎನ್ನಿಸುವಂತಿದ್ದಿತು! ರಂಗನಾಥನ್‌ನ ಹತ್ತಿರ ಬಂದು ಆಕೆ,

"ಅದೇನು ಹೀಗೆ ಒಮ್ಮೆಲೆ ಹೇಳಿಕಳಿಸಿದಿರಿ?"

ಎಂದು ಹೆಚ್ಚುಕಡಿಮೆ ಆತನ ಮೈಯೊರಸಿಯೆ ಕುಳಿತು ಕೇಳಿದಳು. ಹುಬ್ಬಿನ ಗೆರೆ ವಕ್ರವಾಗಿ ಮುರಿಯುವುದರಲ್ಲಿತ್ತು ಮುಖ ರಂಗನಾಥನ್ ಎಡೆಗೆ ಒಲಿದಿತ್ತು

" ಏನೂ ಇಲ್ಲ. ಇವರಿಗೆ ನಿನ್ನನ್ನು ನೋಡಬೇಕಿತ್ತು—"

" ಓಹ್ ! ಮಿಸೆಸ್ ಅನುರಾಧಾ ಯಾವಾಗ ಬಂದಿರಿ ? ನಾನು ನೋಡಲೆ ಇಲ್ಲವಲ್ಲ ಹುಂ ಇವರು ಯಾರು ? "

" ಈಕೆ ನನ್ನ ಗೆಳತಿ—" ಎಂದು ಅನುರಾಧೆ ಹೇಳಿದಳು.

" ಹೌದೆ ? "

ಮೋಹಿನಿ ಮುಂದೆ ಸರಿದು ನಮಸ್ಕಾರ ಮಾಡಿದಳು. ರಂಗನಾಥನ್ ಹೇಳಿದ

" ನಿನ್ನ ಭಯಂಕರ ಅಭಿನಯ ನೋಡಲಿಕ್ಕೆಂದು ಬಂದಿದ್ದಾರೆ ! "

" ಪ್ಲೀಜ್ ಈ ನಿಮ್ಮ ಚೇಷ್ಟೆ—" ಮಧುಮಾಲಿಕೆ ಒಯ್ಯಾರ ಬೀರಿದಳು.

" ಅಲ್ಲವೆ ಮತ್ತೆ ? ನಿನ್ನ ಅಭಿನಯ ಅಂದರೆ ನೋಡಿದವರಿಗೆ ಮೈಮೇಲೆ ಮುಳ್ಳು ಬರುತ್ತದೆ ! "

" ಹಾಗಿದ್ದರೆ—ನಾನು ಹೊರಟೇಬಿಡುತ್ತೇನೆ "

" ನಾನೇನೆಂದೆ ? ಮೈಮೇಲೆ ಮುಳ್ಳು ಬರುತ್ತದೆ ಎಂದರೆ ಕೆಟ್ಟದ್ದು ಎಂದೇ ಅರ್ಥ ? "

" ನಿಮ್ಮ ಅರ್ಥ ನಿಮಗೇ ಗೊತ್ತು ! ಮತ್ತೇನು, ಮಿಸೆಸ್ ಅನುರಾಧಾ ದೇವಿ ? ಅದೇನೋ ಬಹಳ ದಿನ ಆದಹಾಗಿದೆ ನಿಮ್ಮನ್ನು ನೋಡಿ—"

" ಆಗದೇನು ಮಾಡುತ್ತದೆ ? ನೀವೀಗ ಶನಿವಾರ ಬರುವುದನ್ನು ತಪ್ಪಿಸುತ್ತಲೇ ಇದ್ದೀರಿ—"

" ಅದಕ್ಕೆ ಇವರೇ ಜವಾಬುದಾರರು ಸಂಜೆಯ ವರೆಗೆ ಸೆಟ್ ಮೇಲೆ ಸಾಯಿಸಿಬಿಡುತ್ತಾರೆ ಯಾವಾಗಲೊಮ್ಮೆ ಮನೆಗೆ ಹೋಗಿ ಬಿದ್ದುಕೊಂಡೇನೋ ಎನ್ನುವ ಹಾಗಾಗಿರುತ್ತದೆ—"

" ಬಹಳ ನಾಜೂಕು, ಬಹಳ ನಾಜೂಕು ! " ಎಂದ ರಂಗನಾಥನ್.

" ಅಲ್ಲವೆ ? ಈಗ ಮೂರು ವಾರ ಸುಮ್ಮನೆ ಹಗಲು ರಾತ್ರಿ ಕೊಂದು

ಹಾಕಿದ್ದೀರಿ."

"ಆದರೂ ಸಾಯಲಿಲ್ಲವಲ್ಲ!"

"ಮಾಡಿದ ಕೆಲಸ ನೋಡಿಯೇ ಸಾಯೋಣ ಎಂದು ಬಂದಿದ್ದೇನೆ! ಅದು ಹೋಗಲಿ. ಇವರ ಮಾತೇ ಹೀಗೆ, ಅನುರಾಧಾದೇವಿ. ಅಲ್ಲವೆ? ಈ ನಿಮ್ಮ ಫ್ರೆಂಡ್ ಏನು ಮಾಡುತ್ತಾರೆ?"

"ಇಲ್ಲಿ ಗರ್ಲ್ಸ್ ಹೈಸ್ಕೂಲಿನಲ್ಲಿ ಮಿಸ್ಟ್ರೆಸ್ ಆಗಿದ್ದಾರೆ"

"ಸ್ಕೂಲ್ ಮಿಸ್ಟ್ರೆಸ್ಸೆ?"

ಮಧುಮಾಲಿಕೆ ಮೂಗು ಮುರಿದ ಬಗೆಯನ್ನು ನೋಡಿ ಮೋಹಿನಿಯ ಮನಸ್ಸಿಗೆ ನೋವಾಯಿತು ಅಷ್ಟರಲ್ಲಿ ಜವಾನ ಬಂದು ಎಲ್ಲವೂ ಸಿದ್ಧವಾಗಿದೆ ಎಂದು ಹೇಳಿದ್ದರಿಂದ ಆ ಮಾತು ಅಲ್ಲಿಗೇ ಮುಗಿದು ಮೋಹಿನಿಗೆ ಸಮಾಧಾನ ವೆನಿಸಿತು. ಎಲ್ಲರೂ ಪ್ರೊಜಕ್ಶನ್ ರೂಮಿನ ಕಡೆ ಹೊರಟರು ರಂಗನಾಥನ್ ಮೋಹಿನಿಯ ಬದಿಯಲ್ಲಿಯೆ ಹೆಜ್ಜೆ ಹಾಕಿದ

ಚಿತ್ರಪಟ ಮೋಹಿನಿಯ ಮನಸ್ಸನ್ನು ಹಿಡಿಯಲಿಲ್ಲ 'ಉದ್ಧಾರ' ಎಂಬ ಹೆಸರಿಗೆ ತಕ್ಕಂತೆ, ದೇಶದಲ್ಲಿಯ ರಾಜಕೀಯ ಸನ್ನಿವೇಶಕ್ಕೆ ಸರಿಹೊಂದು ವಂತೆ ಏನೇನೋ ಕತೆಯನ್ನು ಹೊಂದಿಸಿಕೊಂಡು ದೇಶದ ಪ್ರಥಮ ಸ್ವಾತಂತ್ರ್ಯೋತ್ಸವದ ದಿನ ಪ್ರದರ್ಶಿಸಲಿಕ್ಕೆ ಸರಿಯೆನಿಸುವಂತೆ ಚಿತ್ರವೊಂದನ್ನು ತಯಾರಿಸಿದಂತಿತ್ತು. ಸಾಮಾನ್ಯ ಕಾಂಗ್ರೆಸ್ ಸೇವಕನೊಬ್ಬ ಅಪ್ರತಿಮ ನಿಷ್ಠೆಯಿಂದ ದೇಶಕ್ಕಾಗಿ ದುಡಿದು, ದೇಶದ ಉದ್ಧಾರಕ್ಕಾಗಿ ಆತ ಮಾಡಿದ ತ್ಯಾಗಸೇವೆಗಳು ಎದ್ದುಕಾಣುವಂತೆ ಕತೆಯನ್ನು ಹೆಣೆಯಲಾಗಿತ್ತು ಮಧು ಮಾಲಿಕೆ ನಾಯಿಕೆಯಾಗಿ ನಾಯಕನೊಡನೆ ಕಷ್ಟನಷ್ಟಗಳನ್ನು ಅನುಭವಿ ಸಿದ್ದಳು ಸತ್ಯಾಗ್ರಹ ಸಮರ, ನಲವತ್ತೆರಡರ ಭೂಮಿಗತ ಆಂದೋಲನ, ಪೊಲೀಸರೊಡನೆ ತಿಕ್ಕಾಟ, ಲಾಠಿಗುಂಡುಗಳ ಸುರಿಮಳೆ ಮುಂತಾದ ವಿಷಯ ಗಳನ್ನೊಳಗೊಂಡು, ಕೊನೆಯಾಗಿ ೧೫ನೆಯ ಆಗಸ್ಟ್ ೧೯೪೭ ದಿನ ಮಧ್ಯ ರಾತ್ರಿಗೆ ತ್ರಿವರ್ಣ ಧ್ವಜವು ದೇಶದ ದಾಸ್ಯವಿಮೋಚನೆಯ ಸಂಕೇತವೆಂದು ಗಗನಕ್ಕೇರುವ ದೃಶ್ಯಕ್ಕೆ ಕತೆ ಮುಗಿದಿತ್ತು

ಚಿತ್ರಪಟ ಪ್ರದರ್ಶಿತವಾಗುತ್ತಿದ್ದಾಗ ಉಳಿದವರ ಲಕ್ಷ್ಯವನ್ನು ಸೆಳೆಯು ವಂತೆ ಗಟ್ಟಿಯಾಗಿ ಮಾತನಾಡುತ್ತಿದ್ದವಳೆಂದರೆ ಮಧುಮಾಲಿಕೆ ಒಬ್ಬಳೇ

ಅದಕ್ಕಾಗಿ ರಂಗನಾಥನ್‌ನಿಂದ ಎರಡು ಮೂರುಸಲ ಉಡುಗರೆಯೂ ದೊರಕಿತ್ತು. ಆದರೆ ಕಣ್ಣೆದುರಿಗೆ ನಡೆಯುತ್ತಿದ್ದ ಚಿತ್ರಗಳು ಸಿದ್ಧವಾಗುತ್ತಿದ್ದಾಗ ತಾನು ಅನುಭವಿಸಿದ ಕಷ್ಟಪರಂಪರೆಯನ್ನು ಬದಿಯಲ್ಲಿ ಕುಳಿತ ಅನುರಾಧೆಗೆ—ಆಕೆಯ ಮೂಲಕ ಮೋಹಿನಿಗೆ—ತಿಳಿಯಪಡಿಸದ ಹೊರತು ಆಕೆಗೆ ಸಮಾಧಾನವಿದ್ದ ಹಾಗಿರಲಿಲ್ಲ ಅಂಥ ಕಷ್ಟಗಳನ್ನು ನಿಜವಾಗಿಯೂ ಅನುಭವಿಸಿದವರು ಕೂಡ ಅಷ್ಟು ಪರಿಯಿಂದ ನರಳಿರಲಾರರು ನಿಟ್ಟುಸಿರು ಬಿಟ್ಟಿರಲಾರರು, ನೋವನ್ನು ತೋರಿಸಿರಲಾರರು ರಂಗನಾಥನ್ ಮಾತ್ರ ಬದಿಯಲ್ಲಿ ಕುಳಿತ ಚಿತ್ರಪಟದ 'ಸಂವಾದಕ'ನಿಗೆ ಆಗೀಗ ಮೆಲುಮಾತಿನಲ್ಲಿ ಏನೇನೋ ಸೂಚನೆಗಳನ್ನು ಕೊಡುತ್ತಿದ್ದ ಚಿತ್ರಪಟ ಮುಗಿದಾಗ ಆತನ ಮುಖದಲ್ಲಿ ಗೆಲುವಿದ್ದಿತು ಮಧುಮಾಲಿಕೆ ದೇಶದ ಉದ್ಧಾರದ ಶ್ರೇಯಸ್ಸು ತನಗೊಬ್ಬಳಿಗೆಯೇ ಸಲ್ಲಬೇಕೆಂಬ ರೀವಿಯಿಂದ ಹೊರಬಂದಳು ಆಕೆಯ ಅಭಿನಯ ಹೇಗೇ ಇರಲಿ, ಅದಕ್ಕೆ ಮಿಗಿಲಾದ ಅಭಿನಯ ಯಾರಿಗೂ ಸಾಧ್ಯವಿಲ್ಲವೆಂಬ ಅಭಿಪ್ರಾಯ ಅನುರಾಧೆಯ ಮುಖದಲ್ಲಿ ಕಾಣುತ್ತಿತ್ತು ಹತ್ತು ಬಾರಿ ಆ ಅಭಿಪ್ರಾಯವನ್ನು ಆಕೆ ಬಾಯಿಂದ ಹೇಳಿಯೂ ಆಯಿತು. ಮೋಹಿನಿ ಮಾತ್ರ ಯಾವುದನ್ನೂ ಮಾತನಾಡದೆ ಸುಮ್ಮನಿದ್ದಳು.

ಆಕೆ ಸುಮ್ಮನಾಗಿಯೇ ಇದ್ದದ್ದು, ಉಳಿಯುತ್ತಿದ್ದದ್ದು ರಂಗನಾಥನ್‌ನ ಲಕ್ಷ್ಯಕ್ಕೆ ಬಾರದಿರಲಿಲ್ಲ ಚಹಾ ಫಲಾಹಾರಕ್ಕೆ ಕುಳಿತಾಗ ಮಾತನಾಡಿಸೋಣವೆಂದು ಸುಮ್ಮನಾದ ಮರುದಿನವೇ ಚಿತ್ರವನ್ನು ಸೆನ್ಸರ್ ಬೋರ್ಡಿನೆದುರು ತೋರಿಸಬೇಕಾಗಿದ್ದುದರಿಂದ ಮಾಡಬೇಕಾದ ಮಾರ್ಪಾಟುಗಳನ್ನು ಮುಗಿಸಿಯೇ ಬಿಡಬೇಕೆಂದು ಸಂಪಾದಕ ಕಾಮತ್ ಮತ್ತು ದಿಗ್ದರ್ಶನದ ಅರ್ಧಮರ್ಧ ಹೊಣೆಯನ್ನು ಹೊತ್ತ ಆಪಟೆಸಿಗೆ ರಂಗನಾಥನ್ ಸೂಚನೆಗಳನ್ನು ಕೊಟ್ಟ ಹೊಡೆತ ಬಡೆತಗಳ ಕರ್ರ್ರಿರಸನ್ನಿವೇಶಗಳನ್ನು ಕೆಲವೆಡೆಗಳಲ್ಲಿ ಕಡಿಮೆ ಮಾಡಲು ಹೇಳಿದ ಸ್ವಾತಂತ್ರ್ಯೋತ್ಸವದ ನಿಮಿತ್ತವಾಗಿ ನಡೆದ ಮಸಸಂಘಸೆಯ ಕಾರ್ಯಕ್ರಮಗಳ ಚಿತ್ರಗಳಲ್ಲಿ ಒಂದೆಡೆ ನಡೆದ ನೃತ್ಯಸಂಗೀತಾದಿಗಳಲ್ಲಿ ಒಬ್ಬಿಬ್ಬ ನಟನಟಿಯರು ತೋರಿದ ವಿಪರೀತಾಭಿನಯಗಳನ್ನು ಕಡಿದೊಗೆಯಬೇಕೆಂದು ಸೂಚಿಸಿದ ಇಂಥವೇ ಹತ್ತಾರು ಸೂಚನೆಗಳನ್ನು ಟಿಪ್ಪಣಿ ಮಾಡಿಕೊಂಡು ಆಪಟೆ–ಕಾಮತರು ಹೊರಟುಹೋದರು ಮಧುಮಾಲಿಕೆ ಇಡೀ ಸ್ವಾತಂತ್ರ್ಯ

ಸಮರದಲ್ಲಿ ಆಗಿರಬಹುದಾದಷ್ಟು ದಣಿವನ್ನು ಮುಖದಲ್ಲಿ ತೋರಿಸಿಕೊಂಡು ರಂಗನಾಥನ್‌ನ ಜೊತೆಯಲ್ಲಿಯು ಉಪಾಹಾರವೂ ಬೇಡವೆಂದು ಹೇಳಿ ಹೊರಟುಹೋದಳು. ಅನುರಾಧೆ ಮೋಹಿನಿಯರೊಡನೆ ರಂಗನಾಥನ್ ತನ್ನ ಕೋಣೆಯನ್ನು ಸೇರಿ, ಹಾಯಾಗಿ ಮೋಹಿನಿ ಕುಳಿತ ಕುರ್ಚಿಯ ಬದಿಯಲ್ಲಿಯ ಸೋಫಾದಲ್ಲಿ ಮೈ ಚೆಲ್ಲಿದ

ಹತ್ತು ನಿಮಿಷಗಳಲ್ಲಿ ಸೇವಕ ಮೇಜಿನ ಮೇಲೆ ಚಹ ಉಪಾಹಾರದ ಸಿದ್ಧತೆಯನ್ನು ಮಾಡಿಹೋದ. ಆವಟಿ–ಕಾಮತರ ಸಲುವಾಗಿ ಎಲ್ಲವನ್ನು ಬೇರೆಯಾಗಿ ಟ್ರೇಯಲ್ಲಿ ಸಿದ್ಧಮಾಡಿ 'ಎಡಿಟಿಂಗ್ ರೂಮ್'ಗೆ ಕಳುಹಿಸಲಾಯಿತು ಮೋಹಿನಿಯ ಕೈಗೆ ಚಹದ ಕಪ್ಪನ್ನು ಕೊಡುತ್ತ ರಂಗನಾಥನ್ ಕೇಳಿದ

"ಅದೇನು? ಇಷ್ಟು ಸ್ತಬ್ಧರಾಗಿಯೇ ಇದ್ದೀರಿ?"

"ನಿಮ್ಮ ಚಿತ್ರಪಟವನ್ನು ನೋಡಿ ದಂಗು ಬಡೆದು ಕುಳಿತಿದ್ದಾಳೆ!" ಎಂದು ಅನುರಾಧೆ

"ಹಾಗೇ?"

"ಹಾಗೇನಿಲ್ಲ ಚಿತ್ರಪಟವನ್ನು ನೋಡಿಯಾಯಿತಲ್ಲ, ಮಾತನ್ನೇನು ಆಡುವುದು?"

"ಅಂದರೆ ಅಷ್ಟು ಅಯೋಗ್ಯ ಎಂದೇ ಅರ್ಥ?" ಎಂದು ರಂಗನಾಥನ್ ನಗು ಸೂಸಿದ.

"ಹಾಗೇಕೆ ತಿಳಿಯಬೇಕು? ಅತ್ಯುತ್ತಮವಾಗಿದ್ದರೂ ಕೂಡ ಯಾವ ಮಾತನ್ನೂ ಹೇಳದೆ ಇರಬಹುದು!"

"ಸರಿ. ಅಂತೂ ಹೇಗಿದೆ ಎಂದು ನಾನು ಕೇಳದ ಹೊರತು ನೀವು ನಿಮ್ಮ ಅಭಿಪ್ರಾಯವನ್ನು ಹೇಳಬಾರದು ಎಂದು ಹಟ ಹಿಡಿದಂತೆ ಕಾಣುತ್ತದೆ"

"ನೀವು ಕೇಳುವುದು ಯಾತಕ್ಕೆ? ಚೆನ್ನಾಗಿಯೇ ಆಗಿದೆಯಲ್ಲ!"

"ಆಯಿತೆ, ಅಷ್ಟು ಹೇಳಿದರೆ?"

"ಮತ್ತಿನ್ನೇನು ಹೇಳಲಿ?" ಎಂದು ಮೋಹಿನಿ ನಸುನಕ್ಕಳು

"ನೀವು ಹೇಳಬೇಕಾದುದನ್ನು ನಾನೇ ಹೇಳಬೇಕಿದ್ದರೆ ನಾನೇತಕ್ಕೆ ಕೇಳಬೇಕು?"

"ನನಗೆ ಬೇರೆಯಾಗಿ ಏನಾದರೂ ಹೇಳಲೇಬೇಕಾಗಿದೆ, ಅಥವಾ ನಾನು

ಹೇಳಬೇಕು, ಎಂದು ಗ್ರಹೀತವಿಟ್ಟುಕೊಂಡೇ ನೀವು ಯಾಕೆ ಮಾತನಾಡ ಬೇಕು ? ”

“ ಹಾಗೇನೂ ಇಲ್ಲ. ಆದರೆ ಇದೀಗ ನೀವು ನಕ್ಕಿರಲ್ಲಾ, ಅದಕ್ಕೆ ಹೇಳಿದೆ.”

“ ಅದೇ ? ಸುಮ್ಮನೆ ನಕ್ಕೆ ! ನೀವು ಜನರನ್ನು ಹೇಗೆ ಮಾತಿನಲ್ಲಿ ಹಿಡಿಯುತ್ತೀರಿ ಎಂಬುದನ್ನು ನೆನೆದು ”

ತಾನು ಎಷ್ಟು ಮುಕ್ತಕಂಠವಾಗಿ ರಂಗನಾಥನ್‌ನ ಜೊತೆಯಲ್ಲಿ ಮಾತನಾಡುತ್ತಿದ್ದೇನೆಂಬುದು ಒಂದು ಕ್ಷಣ ಮೋಹಿನಿಗೇ ಅಚ್ಚರಿಯನ್ನುಂಟುಮಾಡಿತು ಆದರೆ ಯಾರಿಂದಲೂ ಸಹಜವಾಗಿ ಸಲಿಗೆಯ ಮಾತನ್ನು ಸೆಳೆಯಬಲ್ಲ ಸಾಮರ್ಥ್ಯ ರಂಗನಾಥನ್‌ನ ನಡೆನುಡಿಗಳಲ್ಲಿದ್ದಿತು ಯಾವ ಬಗೆಯ ಅಹಂಕಾರದ ಬಿಗುಮಾನವೂ ಅಲ್ಲಿ ಕಾಣುತ್ತಿರಲಿಲ್ಲವೆಂದೇ ತಾನು ಅಷ್ಟು ಸಹಜವಾಗಿ ಮಾತನಾಡುವುದು ಸಾಧ್ಯವೆಂದುಕೊಂಡಿರಬೇಕು, ಮೋಹಿನಿ ರಂಗನಾಥನ್ ಹೇಳಿದ .

“ ಮಾತಿನಲ್ಲಿ ಏನು ಹಿಡಿಯುವುದು ? ಸುಮ್ಮನೆ ಯಾರಾದರೂ ನಗುತ್ತಾರೆಯೆ ? ಆಡಿದ ಮಾತಿನ ಹಿಂದೆ ಅಡಗಿದ ಅರ್ಥ ಬೇರೆಯಾಗಿ ಇದ್ದಾಗಲೇ ಹಾಗೆ ನಗುತ್ತಾರೆ ! ”

“ ಸರಿ ! ನೀವು ದಿಗ್ದರ್ಶಕರಲ್ಲವೆ ? ”

ರಂಗನಾಥನ್‌ನಿಗೆ ಕುತೂಹಲ ಬೆಳೆಯಿತು ಅವನೆಂದ

“ ನಿಮಗೆ ಮನಸ್ಸಿನಲ್ಲಿದ್ದುದನ್ನು ಹೇಳಬಾರದು ಎಂದಿದ್ದರೆ ಹಾಗೆ ಹೇಳಿಬಿಡಬಾರದೆ ? ”

“ ಹೇಳಬಾರದು ಎಂದೇನೂ ಇಲ್ಲ ಆದರೆ—”

“ ಆದರೆ ಏನು ? ಅನುಮಾನ ಯಾಕೆ ? ನಾನು ತಪ್ಪು ತಿಳಿದುಕೊಳ್ಳುತ್ತೇನೆ ಅನ್ನುತ್ತೀರಾ ? ಅಂಥದು ಯಾವುದೂ ಇಲ್ಲ ನನ್ನ ಮಟ್ಟಿಗೆ ನನಗೆ ಹೊಳೆಯದಿದ್ದುದು ಇನ್ನೊಬ್ಬರಿಗೆ ಹೊಳೆಯಬಹುದು ಅಲ್ಲವೆ ? ”

ಈ ಒಂದು ಮಾತಿನಿಂದ ಮೋಹಿನಿ ತಾನು ಸ್ಪಷ್ಟವಾಗಿ ಮಾತನಾಡಬಹುದು ಎನಿಸಿತು ಅರೆನಿಮಿಷ ಯೋಚಿಸಿ ನಿಧಾನವಾಗಿ ಹೇಳಿದಳು

“ ಚಿತ್ರಪಟ ಚೆನ್ನಾಗಿದೆ ಎನ್ನುವುದಕ್ಕಿಂತ ಯಶಸ್ವಿಯಾಗಿದೆ ಎಂದು

ಹೇಳಬಹುದು."

" ಅಂದರೆ ? "

" ಅಂದರೆ ಜನ ಯಾವುದನ್ನು ಮೆಚ್ಚಬಹುದೋ ಅದನ್ನೆಲ್ಲ ಯೋಚಿಸಿ, ಅದಕ್ಕೆ ತಕ್ಕಂತೆ ಎಲ್ಲವನ್ನೂ ಹೊಂದಿಸಿಕೊಂಡಿದ್ದೀರಿ—"

" ಸರಿ ತಪ್ಪೇನು ಅದರಲ್ಲಿ ? "

" ತಪ್ಪು ಎಂದು ಹೇಳಿದೆನೆ ನಾನು ? ಯಶಸ್ವಿಯಾದದ್ದು ಚೆನ್ನಾಗಿಯೆ ಇರಬೇಕಾಗಿಲ್ಲವಲ್ಲ ! "

" ಅಂತೂ ನಮ್ಮ ಜನಗಳ ಅಭಿರುಚಿಯ ಬಗ್ಗೆ ಒಳ್ಳೆಯ ಅಭಿಪ್ರಾಯವೆ ಇದ್ದ ಹಾಗಿದೆ ನಿಮಗೆ ! "

" ನಮ್ಮ ಜನಗಳ ಅಭಿರುಚಿ ಚೆನ್ನಾಗಿದೆ ಎಂದು ನೀವು ಹೇಳಬಹುದೆ ? ಹಾಗೆ ಹೇಳುತ್ತೀರಾ ? "

" ಯಶಸ್ವಿಯಾದದ್ದು ಚೆನ್ನಾಗಿ ಇರುವುದು ಸಾಧ್ಯವೇ ಇಲ್ಲ ಎಂದ ಹಾಗಾಯಿತಲ್ಲ ಹಾಗಾದರೆ ? "

" ನಮ್ಮಲ್ಲಿಯ ಚಿತ್ರಪಟಗಳ ವಿಷಯದಲ್ಲಿ ಅಷ್ಟು ಮಾತನ್ನು ಇಂದಿಗೆ ನಿಸ್ಸಂಕೋಚವಾಗಿ ಹೇಳಬಹುದಾಗಿದೆ ! "

" ಅದು ಹೇಗೂ ಇರಲಿ. ಈ ಚಿತ್ರದಲ್ಲಿ ಅಂಥ ಯಾವ ವಿಷಯವಿದೆ ? "

" ಬೇರೆ ಏನಾದರೂ ಇದೆಯೆ ಅದರಲ್ಲಿ ? "

ಅನುರಾಧೆಗೆ ಈ ಮಾತು ರುಚಿಸಲಿಲ್ಲ ಇದೇನು ತನ್ನ ಗೆಳತಿ ಎಲ್ಲವನ್ನೂ ತಿಳಿದವಳಂತೆ ಮಾಡನಾಡುತ್ತಿದ್ದಾಳೆ ಎಂದು ಸಂಕೋಚವೆನಿಸಿತು—ಅದೂ ರಂಗನಾಥನ್‌ನಂಥ ಸಮರ್ಥನಾದ ದಿಗ್ದರ್ಶಕನೆದುರು ಅಲ್ಲದೆ 'ತಮ್ಮ' ಸ್ಟುಡಿಯೋದಿಂದ ಆದೇ ತಯಾರಾದ—ಇನ್ನೂ ಬಹಿರಂಗವಾಗಿ ಪ್ರದರ್ಶಿತ ವಾಗದೆ ಇದ್ದ—ಚಿತ್ರದ ವಿಷಯವಾಗಿ ಈಕೆ ಹೀಗೆ ಮಾತನಾಡುತ್ತಿರುವುದು ಅನುರಾಧೆಗೆ ಎಷ್ಟುಮಾತ್ರವೂ ಸರಿಬೀಳಲಿಲ್ಲ ಹೆಚ್ಚುಕಡಿಮೆ ಸಿಡುಕಿನಲ್ಲಿಯೇ ಹೇಳಿದಳು

" ಸಾಕು ಮಾಡೆ ನಿನ್ನ ಬುದ್ಧಿವಂತಿಕೆಯನ್ನು ! ಹತ್ತಾರು ಚಿತ್ರಗಳನ್ನು ತಯಾರು ಮಾಡಿದವರಕಿಂತಲೂ ಹೆಚ್ಚಾಗಿ ತಿಳಿದವಳ ಹಾಗೆ ಮಾತನಾಡು ತ್ತಿದ್ದೀ—"

" ನನಗೆ ತೋಚಿದ್ದನ್ನು ಹೇಳಲಿಕ್ಕೆ ಚಿತ್ರ ತಯಾರುಮಾಡುವ ಅನುಭವ ಬೇಕೆ ? "

" ಕ್ವೈಟ್ ರೈಟ್—" ಎಂದ ರಂಗನಾಥನ್.

" ಹೋಗಲಿ ಬಿಡಿರಿ ಸುಮ್ಮನೆ ಈಕೆಗೆ ಸಿಟ್ಟು ಬರುತ್ತದೆ ! "

" ಚಿತ್ರ ತಯಾರು ಮಾಡಿದವರು ಯಾರು ? ನಾನೊ, ಅವರೊ ? ನನಗೆ ಕೇಳಬೇಕಾಗಿದೆ ! "

" ಸಾಗಲಿ ಹಾಗಾದರೆ—ನಾನಂತೂ ನನ್ನ ಕಿವಿ ಮುಚ್ಚಿಕೊಳ್ಳುತ್ತೇನೆ "

ಎಂದು ಅನುರಾಧೆ ಕಿವಿಯಲ್ಲಿ ಬೆರಳು ಇಟ್ಟುಕೊಂಡೇ ಬಿಟ್ಟಳು. ಮೋಹಿನಿ ಆಕೆಯ ಕೈಗಳನ್ನು ಬಿಡಿಸುತ್ತ ಕೇಳಿದಳು

" ಅಂಥಾದ್ದೇನು ನಾನು ಹೇಳುತ್ತಿರುವುದು ? ಸಾಮಾನ್ಯವಾಗಿ ಚಿತ್ರ ಯಶಸ್ವಿಯಾಗಬೇಕಾದರೆ ಜನರು ಯಾವುದನ್ನು ಅಪೇಕ್ಷೆಮಾಡುತ್ತಾರೆ ಅದನ್ನು ಸೇರಿಸಬೇಡವೆ ? ಅಷ್ಟನ್ನು ಇಲ್ಲಿಯೂ ಮಾಡಿದ್ದಾರೆ ಎಂದು ಹೇಳಿದೆ ಚಿತ್ರ ಯಶಸ್ವಿಯಾಗಿದೆ ಎಂದರೆ ಕೆಟ್ಟದನ್ನು ಹೇಳಿದ ಹಾಗಾಯಿತೆ ? "

" ಏನನ್ನು ಅಪೇಕ್ಷ ಮಾಡುತ್ತಾರೆ ಜನ ? " ಎಂದು ರಂಗನಾಥನ್ನನ ಕುತೂಹಲದ ಪ್ರಶ್ನೆ

" ನಿಮಗೆ ತಿಳಿಯದೆ ಆ ವಿಷಯ ? "

" ನೀವು ಹೇಳಿರಿ, ನೋಡುವಾ "

" ಮುಖಸ್ತುತಿ ! " ಎಂದು ಮೋಹಿನಿ ನಕ್ಕಳು.

" ಮುಖಸ್ತುತಿ ಏನಿದೆ ಚಿತ್ರದಲ್ಲಿ ? "

" ನಿಮ್ಮ ನಾಯಕ—ನಿಜವಾಗಿಯೂ ಆದರ್ಶ ಪುರುಷ ! "

" ಇರಬಾರದೆ ? ದೇಶಕ್ಕಾಗಿ ದುಡಿದವರು ಆದರ್ಶ ಪುರುಷರಲ್ಲವೆ ? " ಎಂದು ರಂಗನಾಥನ್ ಬೇಕೆಂತಲೆ.

" ಹಾಗೆ ದುಡಿದವರಲ್ಲಿ ಆದರ್ಶ ಪುರುಷರು ಇದ್ದಿರಬಹುದು—ಒಂದು ವೇಳೆ. ಊರಿಗೊಬ್ಬರಂತೆ ಗಾಂಧೀಜಿ ಹುಟ್ಟಲಿಲ್ಲ ! ಆದರೆ ನಿಮ್ಮ ನಾಯಕ ಅದಕ್ಕೂ ಒಂದು ಕೈ ಮೇಲು. ಹೆಚ್ಚುಕಡಿಮೆ, ದೇವರೇ ಆತ ! "

" ಸರಿ. ಒಳ್ಳೇ ಚೇಷ್ಟೆ ಮಾಡುತ್ತೀರಿ ! "

" ಚಿತ್ರ ಎಂದಮೇಲೆ ಕೆಲವು ಗುಣಗಳನ್ನು ಎತ್ತಿ ತೋರಿಸಬೇಡವೆ ?

ಜೀವನದಲ್ಲಿ ಚಿಕ್ಕದಾಗಿದ್ದುದನ್ನು ಕಲೆಯಲ್ಲಿ ಒಂದಿಷ್ಟು ಹಿಗ್ಗಿಸಿ, ಹಿರಿದಾಗಿಸಿ ತೋರಿಸಿವರೆಯೆ ನೋಡಿದವರಿಗೆ ಅರ್ಥವಾಗುತ್ತದೆ "

" ಒಪ್ಪಿದೆ ಆದರೆ—ಆತ ಮನುಷ್ಯನೇ ಆಗಿದ್ದರೆ ಆತನಲ್ಲಿ ಕೆಲವೊಂದು ಕುಂದುಕೊರತೆ ಇರಬೇಕಲ್ಲವೆ ? "

" ಸರಿ. ಎಲ್ಲವನ್ನೂ ಹೇಳಲಾಗುತ್ತದೆಯೆ ? ತೋರಿಸಲಾಗುತ್ತದೆಯೆ ? ನಮ್ಮ ಆದರ್ಶ ದೇಶಸೇವಕ ಸ್ಥಳೀಯ ಕಾಂಗ್ರೆಸ್ಸಿನ ದುಡ್ಡು ಎತ್ತಿ ಹಾಕಿರಬಹುದು ಆದರೆ ಅದನ್ನೆಲ್ಲ ಹೇಳಲಾಗುತ್ತದೆಯೆ ? "

" ಅದಕ್ಕೇ ನಾನೆನ್ನುವುದು—ಮುಖಸ್ತುತಿ ಎಂದು ! "

ರಂಗನಾಥನ್ ನಕ್ಕು ತನ್ನ ಸಮ್ಮತಿಯನ್ನು ಸೂಚಿಸಿದ. ಮೋಹಿನಿಯ ಮಾತನ್ನು ಒಪ್ಪದಿರುವುದು ಸಾಧ್ಯವಿರಲಿಲ್ಲ ಜನರ ಬೇಡಿಕೆಯನ್ನು ಪೂರೈಸದಿರುವುದೂ ಸಾಧ್ಯವಿರಲಿಲ್ಲ ಒಂದೆಡೆ ಕಲೆಯ ವಿವೇಕ, ಇನ್ನೊಂದೆಡೆ ಚಿತ್ರಕ್ಕೆ ಸಂಬಂಧಿಸಿದ ವ್ಯಾವಹಾರಿಕ ವಿಚಾರ—ಇವುಗಳಲ್ಲಿ ನಡೆಯುತ್ತಿದ್ದ ತಿಕ್ಕಾಟ ರಂಗನಾಥನ್‌ನ ತಿಳಿವಿಗೆ ಹೊಸದಾಗಿರಲಿಲ್ಲ ಅವನೆಂದ

" ಹುಂ. ಅದಂತೂ ಆಯಿತಲ್ಲ ಇನ್ನೇನು ? "

ತನ್ನ ವಿಮರ್ಶೆಯನ್ನು ರಂಗನಾಥನ್ ಒಪ್ಪಿಕೊಂಡಿದ್ದರಿಂದ ಮೋಹಿನಿಗೂ ಆತ್ಮವಿಶ್ವಾಸ ಬೆಳಯಿತು ಅಂತೆಯೆ ಕೇಳಿದಳು

" ನಿಮ್ಮ ನಾಯಿಕೆ ಜೇಲಿನಲ್ಲಿದ್ದಾಗಲೂ ಸಿಲ್ಕ್ ಸೀರೆಗಳನ್ನೇ ಉಡುತ್ತಿದ್ದಳೆ ? ಅಲ್ಲಿದ್ದಾಗಲೂ—ಅದೂ ಮೂರನೆಯ ವರ್ಗದಲ್ಲಿ—ಆಕೆಗೆ ಸ್ನೋ, ಪೌಡರ್, ಲಿಪ್‌ಸ್ಟಿಕ್‌ಗಳ ಕೊರತೆ ಇದ್ದ ಹಾಗೆ ಕಾಣಲಿಲ್ಲ ! ಅಲ್ಲದೆ, ಅಲ್ಲಿ ಶ್ರಮಶಿಕ್ಷೆಯನ್ನು ಅನುಭವಿಸುತ್ತಿದ್ದಾಗಲೂ ಮುಖದ ಮೇಲಿನ 'ಮಂದಹಾಸ'ಗಳೇನೂ ಮಾಯವಾದ ಹಾಗೆ ಕಾಣಲಿಲ್ಲ."

ರಂಗನಾಥನ್‌ನಿಗೆ ನಗು ತಡೆಯದಾಯಿತು. ಮೋಹಿನಿಯ ಮಾತುಗಳನ್ನು ಒಪ್ಪದಿರುವುದೂ ಸಾಧ್ಯವಿರಲಿಲ್ಲ.

" ಸರಿ. ಹೀಗೆಲ್ಲ ನೋಡುತ್ತ ಕುಳಿತರೆ ಮುಗಿದೇ ಹೋಯಿತು. ಇಷ್ಟೆಲ್ಲ ಹೀಗೆ ನಡೆಯಲೇ ಬೇಕು. ಇಲ್ಲದಿದ್ದರೆ—ನಮ್ಮ ಚಿತ್ರಕ್ಕೆ ದೇವರೇ ಗತಿ ! "

" ಅದಕ್ಕೇ ಹೇಳಿದೆ. ಚಿತ್ರ ಯಶಸ್ವಿಯಾಗದೆ ಎಂದು ! "

" ಮತ್ತೇನು ? "

" ನೃತ್ಯದ ಸನ್ನಿವೇಶ ಇಲ್ಲದೆ ಚಿತ್ರವನ್ನು ತಯಾರು ಮಾಡುವುದು ಸಾಧ್ಯವಿಲ್ಲವೆ ? "

" ಸ್ವಾತಂತ್ರ್ಯ ಬಂದ ಉತ್ಸಾಹದಲ್ಲಿ ಜನ ನೃತ್ಯವೊಂದನ್ನು ಏರ್ಪಾಡು ಮಾಡಿದರೆ ತಪ್ಪೆ ? "

" ಅದು ತಪ್ಪು ಎಂದು ನಾನು ಹೇಳುವುದಿಲ್ಲ ಆದರೆ ಚಿತ್ರದಲ್ಲಿ ನೃತ್ಯ ಬೇಕು ಎಂಬುದಕ್ಕೇ ಅಲ್ಲವೆ ನೀವು ಆ ಸನ್ನಿವೇಶವನ್ನು ಹೊಂದಿಸಿಕೊಂಡದ್ದು ? "

" ಹೌದು ಮತ್ತು ಅಲ್ಲ ! " ಎಂದು ರಂಗನಾಥನ್ ಗಟ್ಟಿಯಾಗಿ ನಕ್ಕ.

ಮೋಹಿನಿಯ ಪ್ರತಿಯೊಂದು ವಿಮರ್ಶೆಯನ್ನೂ ರಂಗನಾಥನ್ ಒಪ್ಪುತ್ತಿದ್ದನಲ್ಲದೆ ಆಕೆಯೊಡನೆ ಹಚ್ಚಾದ ಆದರ ಕೂಡಿದ ಆಸ್ಥೆಯಿಂದ ಮಾತನಾಡುತ್ತಿದ್ದುದನ್ನು ನೋಡಿ ಅನುರಾಧೆಗೆ ಆಶ್ಚರ್ಯವೂ ಅಸೂಯೆಯೂ ಅನಿನತೊಡಗಿತು ಏನಿದ್ದರೂ ತನ್ನ ಪರಿಚಯ ಹಳೆಯದು ಈಕೆಯ ಪರಿಚಯವೊತನ್ನ ಮುಖಾಂತರವೇ ಆದದ್ದು ಹೀಗಿದ್ದರೂ ತಾನು ಅಲ್ಲಿಯೇ ಇದ್ದೂ ಇಲ್ಲದ ಹಾಗೆ ಅವರಿಬ್ಬರೂ ಮಾತನಾಡುತ್ತಿದ್ದುದೂ ಆಕೆಗೆ ಹಿಡಿಸಲಿಲ್ಲ ಆದರೆ ಹೆಚ್ಚಾಗಿ ರಂಗನಾಥನ್‌ನೇ ಮಾತಿನಲ್ಲಿ ಮುಂದರಿಯುತ್ತಿದ್ದಾಗ ಆಕೆಗೆ ಏನೂ ಮಾಡಬರುವಂತಿರಲಿಲ್ಲ ಮೋಹಿನಿಯ ವಿಮರ್ಶೆ ವಾಸ್ತವವಾಗಿದ್ದಿತು, ನೇರವಾಗಿ ನಿರ್ದಾಕ್ಷಿಣ್ಯವಾಗಿದ್ದಿತು ಆಕೆಯ ಅಕೃತ್ರಿಮ ರೂಪವೈಖರಿಯಿಂದಲ್ಲದೆ ಆಕೆಯ ಅಭಿರುಚಿಯಿಂದ ಸೂರೆಗೊಂಡ ರಂಗನಾಥನ್ ಅನುರಾಧೆಯ ವಿಚಾರಗಳ ಕಡೆಗೆ ಗಮನ ಕೊಡುವ ಸ್ಥಿತಿಯಲ್ಲಿಯೂ ಇರಲಿಲ್ಲ ಮೋಹಿನಿಯನ್ನುದ್ದೇಶಿಸಿ ಮುಂದುವರಿದ .

" ನಿಮ್ಮ ಪ್ರತಿಯೊಂದು ಮಾತನ್ನೂ ನಾನು ಒಪ್ಪುತ್ತೇನೆ. ಈ ಎಲ್ಲ ವಿಷಯ ನನಗೆ ಗೊತ್ತಾಗಿಲ್ಲ ಎನ್ನುತ್ತೀರಾ ? ಆದರೆ ನಮ್ಮ ಕೆಲಸಗಳಲ್ಲಿ ನೂರು ತೊಡಕುಗಳು. ಎಲ್ಲಕ್ಕೂ ಮುಖ್ಯವಾಗಿ ಸೂರೆಸೂರೆಯಾಗಿ ಹಾಕಿದ ಹಣ ಹಿಂದಿರುಗಿ ಬರಬೇಕು. ಅದಾಗದಿದ್ದರೆ ವ್ಯವಸಾಯ ಸಾಗುವಂತಿಲ್ಲ ಜನಗಳಿಗೆ ಬೇಕಾದ ಮನರಂಜನೆಯನ್ನು ಒದಗಿಸದಿದ್ದರೆ ಚಿತ್ರಗಳನ್ನು ಯಾರು ನೋಡಲಿಕ್ಕೆ ಬರಬೇಕು ? "

" ನೀವೆನ್ನುವುದು ಸರಿಯೆ. ಆದರೆ ಜನರ ಅಭಿರುಚಿಗಳು ಸರಿಯಾಗಿಲ್ಲ

ವೆಂಬುದನ್ನು ತಿಳಿದ ನಿಮ್ಮಂಥವರು ಕೂಡ ಅವರನ್ನೆ ಹಿಂಬಾಲಿಸುವುದಕ್ಕಿಂತ ಅವರ ಅಭಿರುಚಿಗಳನ್ನೆ ಬದಲಾಯಿಸುವ ಕೆಲಸವನ್ನು ನೀವು ಮಾಡಬಹುದು. ಇದು ಹೀಗೆಯೆ ನಡೆಯಬೇಕಾದರೆ ಕಾಲಕ್ರಮದಲ್ಲಿ ಚಿತ್ರಪಟಗಳ ಮಟ್ಟ ಎಲ್ಲಿಗೆ ಮುಟ್ಟಬೇಕು ? "

" ಅದನ್ನೂ ಒಪ್ಪುತ್ತೇನೆ. ಜನಗಳ ಅಭಿರುಚಿಯನ್ನು ನಾವು ತಿದ್ದ ಬಹುದು ಆದರೆ ಅದು ಕೆಲಮಟ್ಟಿಗೆ ಮಾತ್ರ ಅಲ್ಲದೆ ಅದು ತೀರ ನಿಧಾನವಾಗಿ ನಡೆಯಬೇಕಾದ ಕೆಲಸ ಈ ಸಮಸ್ಯೆಗಳನ್ನು ತಿಳಿದ ಒಬ್ಬಿಬ್ಬ ನಿರ್ದೇಶಕರು ಆ ರೀತಿಯಲ್ಲಿ ಪ್ರಯತ್ನವನ್ನು ಮಾಡಲೂ ಬಹುದು ಆದರೆ ಜನರಿಗೆ ಬೇಕಾ ದುದನ್ನೇ ಕೊಟ್ಟು, ಅಭಿರುಚಿಯೆಂಬ ಮಾತನ್ನೇ ಮರೆತು, ತಮ್ಮ ಜೇಬು ಗಳನ್ನು ತುಂಬಿಕೊಳ್ಳುವ ನೂರಾರು ಚಿತ್ರ ನಿರ್ಮಾತೃಗಳು ಇರುವಾಗ ನಮ್ಮ ಪ್ರಯತ್ನ ಎಲ್ಲಿಗೆ ಮುಟ್ಟಬೇಕು ? ಇದೂ ಅಲ್ಲದೆ, ವಾಸ್ತವ ಜೀವನದ ಸಮಸ್ಯೆಗಳನ್ನು, ರಂಜಕ-ರುದ್ರ ಸನ್ನಿವೇಶಗಳನ್ನು ವಾಸ್ತವವಾಗಿಯಾದರೂ ಮನಮುಟ್ಟುವಂತೆ ಚಿತ್ರಿಸಬೇಕಾದರೆ ವಿದ್ಯಾವಂತರಾದ ನಟನಟಿಯರ ಸಹ ಕಾರ ಬೇಕು ಇಂಥ ಸಹಕಾರವನ್ನು ಎಷ್ಟು ಜನ ಕೊಡಲು ಸಿದ್ಧರಿದ್ದಾರೆ ? "

ರಂಗನಾಥನ್ ತಡೆದ ಸಿಗರೇಟೊಂದನ್ನು ಹೊತ್ತಿಸಿ ಮತ್ತೆ ಹೇಳಿದ

" ಹೀಗೆ ಒಂದು ಕಡೆ ಹೊರಗಿನಿಂದ ಒಂದು ಬಗೆಯ ಒತ್ತಡವಾದರೆ ಇನ್ನೊಂದು ಕಡೆ ಒಳಗಿನ ತೊಂದರೆಗಳು ಹೀಗಾಗಿ ದಿನದಿನಕ್ಕೆ ಚಿತ್ರ ವ್ಯವಸಾಯ ತನ್ನ ಯೋಗ್ಯತೆಯನ್ನಲ್ಲದೆ ಉಪಯುಕ್ತತೆಯನ್ನೂ ಕಳೆದುಕೊಳ್ಳ ತೊಡಗಿದ ಬುದ್ಧಿವಂತರು, ರಸಾಭಿಜ್ಞರು ಇಂದಿಗೆ ಚಿತ್ರಪಟಗಳನ್ನು ನೋಡ ಲಿಕ್ಕೆ ಬರುವುದೇ ಇಲ್ಲ ಎನ್ನುವುದು ನನಗೆ ತಿಳಿಯದ ವಿಷಯ ಎನ್ನುತ್ತೀರಾ ? ಒಳ್ಳೆಯ ಚಿತ್ರಗಳನ್ನು ನೋಡಬೇಕು ಅನ್ನುವವರು ಪಾಶ್ಚಿಮಾತ್ಯ ಚಿತ್ರಗಳನ್ನು ನೋಡಹೋಗುತ್ತಾರೆ. ಅವರು ಹಾಗೆ ಹೋಗುವುದೂ ಸಹಜವೇ—"

" ಹಾಗಾದರೆ ಈ ಸ್ಥಿತಿಗೆ ಪರಿಹಾರವೇ ಇಲ್ಲದಾಯಿತು, ಹೌದೆ ? "

ಅನುರಾಧೆ ನಡುವೆ ಬಾಯಿ ಹಾಕಲಿಕ್ಕೆ ಸಮಯ ಸಿಕ್ಕಿತು. ಅವಳೆಂದಳು.

" ಈ ಪರಿಸ್ಥಿತಿಗೆ ಪರಿಹಾರವೆಂದರೆ—ನಾವು ಈಗಿಂದೀಗ ಮನೆಗೆ ಹೊರಡುವುದು ! ಹನ್ನೆರಡು ಗಂಟೆಯಾಗಿ ಹೋಯಿತು. ನನಗಂತೂ ತೂಕಡಿಕೆ ಬರುತ್ತಿದೆ ? "

ಆದರೆ ರಂಗನಾಥನ್ ಆಕೆಯ ಪರಿಹಾಸವನ್ನೂ ಅಸೂಯೆಯನ್ನೂ ತಿಳಿಯುವ ಮನಃಸ್ಥಿತಿಯಲ್ಲಿಯೇ ಇರಲಿಲ್ಲ ಮೋಹಿನಿಯ ಮಾತಿನಿಂದ ಆತನ ಯೋಚನೆಗಳು ಮೊನೆಗೊಂಡಿದ್ದವು—ದೂರ ದೂರ ಓಡುತ್ತಿದ್ದವು ಕಲೆಯ ದೃಷ್ಟಿಯಿಂದ ನಿರ್ದೋಷವಾಗಿದ್ದೂ ಜನರಿಗೆ ರುಚಿಸಿ ಯಶಸ್ವಿಯಾಗಬಹುದಾದ ಚಿತ್ರವೊಂದನ್ನು—ಹತ್ತಾರು ಅಂಥ ಚಿತ್ರಗಳನ್ನು—ತಯಾರಿಸಬೇಕು, ಅಷ್ಟು ಸಾಧಿಸಿದರೆ ತನ್ನಿಂದ ವ್ಯವಸಾಯಕ್ಕೆ ಏನಾದರೊಂದು ಪ್ರಯೋಜನ, ಎಂಬ ಆತನ ಹಳೆಯ ಆಕಾಂಕ್ಷೆ ಮನಸ್ಸಿನಲ್ಲಿ ಮುನ್ನುಗ್ಗಿ ಬಂದಿತ್ತು. ಮೋಹಿನಿಯಂಥವರು ಮುಂದಾಗಿ ಬಂದರೆ ಅದು ಅಸಾಧ್ಯವೂ ಅಲ್ಲ ಎನ್ನುವವರೆಗೂ ಆತನ ಯೋಚನೆ ಮುಂದೋಡಿತ್ತು ಅಂತೆಯೇ ಅನುರಾಧೆಯ ಅಷ್ಟು ಮಾತನ್ನು ಗಮನಿಸದೆ ಹೇಳಿದ

" ಪರಿಹಾರವಿಲ್ಲದೆ ಏನು ? ಇದೆ ಆದರೆ ನಿಮ್ಮಂಥವರು ಮುಂದಾಗಿ ಬರಬೇಕು ಸುಮ್ಮನೆ ಹಿಂದೆ ಕುಳಿತು ಹೊರಬರುವ ಚಿತ್ರಗಳು ಸರಿಯಾಗಿಲ್ಲ ಎಂದು ಹೇಳಿದರೆ ಏನಾಯಿತು ? "

" ನಮ್ಮಂಥವರು ಬಂದರೆ ಏನಾಗುತ್ತದೆ ? "

" ಏನಾಗುತ್ತದೆಯೆ ? ಏನು ಬೇಕಾದುದನ್ನು ಮಾಡಬಹುದು ಎಂಬ ವಿಶ್ವಾಸ ನನಗಿದೆ. ಈಗ ನಾವು ಕೆಲಸ ತೆಗೆದುಕೊಳ್ಳುತ್ತಿರುವ ನಟಿಯರ ಯೋಗ್ಯತೆಯನ್ನು ನೋಡಿದಿರಲ್ಲವೆ ? ಅವರಿಗೆ ಮಾತು ಹೇಳಿಕೊಡಬೇಕು, ಅದರ ಅರ್ಥ, ಭಾವ, ಅಭಿನಯ ಎಲ್ಲವನ್ನೂ ತಿಳಿಸಿಕೊಡುವುದಕ್ಕೆ ತಲೆ ಒಡೆದುಕೊಳ್ಳಬೇಕು ಇಷ್ಟಾದರೂ ಕೊನೆಗೆ ಕಲಿತ ಬುದ್ಧಿ ಎಲ್ಲಿಗೆ ನಿಲುಕುತ್ತದೆ ? ಹೀಗೆಂದೇ ನಮ್ಮ ಚಿತ್ರಪಟಗಳಲ್ಲಿಯ ಅಭಿನಯ ನೂರಕ್ಕೆ ಎಂಭತ್ತಕ್ಕೂ ಮಿಕ್ಕಿ ಕೃತಕವಾಗಿರುತ್ತದೆ."

" ಕಲಿತವರೆಂದಮಾತ್ರಕ್ಕೆ ಅಭಿನಯ ಒಂದು ಬರಬೇಕೆ ? "

" ಭಾವ ತಿಳಿಯುವ ಯೋಗ್ಯತೆ ಇದ್ದರೆ ಕೆಲಸ ಎಷ್ಟೋ ಸುಲಭ. ಮುಂದೆ ಬೇಕಾದುದನ್ನು ಸುಧಾರಿಸಿಕೊಳ್ಳಬಹುದು. ಅಲ್ಲದೆ, ದಯವಿಟ್ಟು ಕ್ಷಮಿಸಿ, ಇಂದು ಕಲಿತ ಹೆಂಗಸರಿಗೆ ಅಭಿನಯವನ್ನು ಹೇಳಿಕೊಡುವ ಅಗತ್ಯ ಉಳಿದಿಲ್ಲ ! "

" ಹೌದೆ ? " ಎಂದು ಮೋಹಿನಿ ಅಸಮ್ಮತಿಯನ್ನು ಸೂಚಿಸುವಂತೆ

ಮುಖವನ್ನು ಮುದುಡಿಸಿ ಮೈ ಮಣಿಯಿಸಿ ಕುರ್ಚಿಯಲ್ಲಿ ಹಿಂದಕ್ಕೆ ಸರಿದಳು

" ನೋಡಿದಿರಾ ? " ಎಂದು ರಂಗನಾಥನ್ ನಸುನಕ್ಕ

" ಏನು ? "

" ಇದೀಗ ನೀವು ಮಾಡಿದ ಅಭಿನಯವನ್ನು ? "

" ಅಭಿನಯ ಮಾಡಿದೆನೆ ? ಎಂಥ ಅಭಿನಯ ? "

" ಏನು ಮಾಡಿದಿರೆಂಬುದು ನೋಡಿದ ನನಗೆ ಗೊತ್ತು ! ಮಾಡಿದ ನಿಮಗೆ ಹೇಗೆ ಕಾಣಿಸಬೇಕು ? ಹಾಗೆ ತನಗೆ ತಿಳಿಯದಲೆ ಮಾಡಿದ ಅಭಿನಯವೇ ಸ್ವಾಭಾವಿಕ—"

" ಹಾಗಿದ್ದರೆ ನಾನೂ ಅಭಿನಯಿಸಬಹುದು ಎಂದೆನಿಸುತ್ತದೆಯೆ ನಿಮಗೆ?"

" ನನಗೆ ಸಂದೇಹವೇ ಇಲ್ಲ ! "

" ನಾನೇನು ಮಾಡಿಯೇನು ? ಇನ್ನೂ ಅನುರಾಧೆಯಾದರೆ—"

" ಯಾಕೆ ? ನಾನು ನಿನಗೆ ನಟಿಯಾಗಿ ಕಾಣುತ್ತೇನೇನು ? " ಎಂದಳು ಅನುರಾಧೆ.

" ನಟಿ ಎಂದರೆ ಬೈಗುಳದ ಮಾತಂತೂ ಅಲ್ಲವಲ್ಲ ! " ಎಂದು ರಂಗನಾಥನ್.

" ಬೈಗುಳೆ ? ಆಧುನಿಕ ಅಪ್ಸರೆಯರು ಅವರು ! " ಎಂದು ಮೋಹಿನಿ

" ಅವರು ಅಪ್ಸರೆಯರಾದರೆ ತಪಸ್ಸು ಮಾಡುತ್ತಿರುವ ಋಷಿಗಳೂ ಇರಬೇಕಾಯಿತಲ್ಲ ! "

" ಇರದೆ ಏನು ? ಚಿತ್ರನಿರ್ದೇಶಕರೆ ಋಷಿಗಳು ! " ಎಂದು ಅನುರಾಧೆ.

" ಸರಿ. ನಿಮ್ಮ ಮಾತನ್ನು ಕೇಳಿದರೆ ನಾವೆಲ್ಲರೂ ಋಷಿಗಳ ಹಾಗೆ ಅಡವಿ ಪಾಲಾಗಿ ಹೋಗಬೇಕಾದೀತು ! "

" ಅಡವಿಗಳಿಗೂ ಹೋಗುತ್ತೀರಿ—ಅಪ್ಸರೆಯರ ಕೂಡ ! ಔಟ್‌ಡೋರ್ ಶೂಟಿಂಗ್‌ಗೆ ! "

" ಆದರೆ ವ್ಯತ್ಯಾಸವಿಷ್ಟೆ. ನೀವು ಹೇಳುವ ಈ ಋಷಿಗಳಿಗೆ ಜಡೆ ಗಡ್ಡಗಳಿಗಿಂತ ಹೆಚ್ಚಾಗಿ ಬುದ್ಧಿ ಇರುತ್ತದೆ. ಅಂತೆಯೆ ಈ ಅಪ್ಸರೆಯರ ಆಟ ನಡೆಯುವುದಿಲ್ಲ ! "

" ಹಾಗಿದ್ದರೆ ನೀವು ವಿಶ್ವಾಮಿತ್ರನಿಗೂ ಮಿಗಿಲಾಗಬೇಕಾಯಿತು."

" ಅಲ್ಲವೆ ? ನಿತ್ಯನೂತನವಾದ ಪ್ರತಿಸೃಷ್ಟಿಯನ್ನೇ ನಿರ್ಮಿಸುತ್ತೇವೆ ! "

" ಸಾಕು, ಸಾಕು ವಿಶ್ವಾಮಿತ್ರರೇ ಏನೇನು ಸೃಷ್ಟಿ ಮಾಡುವಿರೋ ನೋಡೋಣ ಈಗಲಂತೂ ನಮ್ಮನ್ನಷ್ಟು ಮನೆಯ ಕಡೆಗೆ ಸಾಗಿಸುವ ವ್ಯವಸ್ಥೆ ಮಾಡಿರಿ—"

" ಯಾಕೆ, ನಿನ್ನ ಯಜಮಾನರು ಬರುವುದಿಲ್ಲವೆ ? "

" ಯಾರಿಗೆ ಗೊತ್ತು ? ನೋಡಿದೆಯಲ್ಲ ನೀನೇ ಆಗ ಹೋದವರು—"

" ಬರಬಹುದು ಇಷ್ಟರಲ್ಲಿಯೇ ಇಲ್ಲದಿದ್ದರೆ ನಾನೇ ನೋಡಿಕೊಂಡು ಬರುತ್ತೇನೆ ಏನೇನು ಮಾಡಿದ್ದಾರೆಯೊ—"

ಎಂದು ಸಿಗರೇಟೊಂದನ್ನು ಹೊತ್ತಿಸಿ ರಂಗನಾಥನ್ ಕೋಣೆಯಿಂದ ಹೊರಬಿದ್ದ ಮೋಹಿನಿ ಎಂದಳು

" ತುಂಬಾ ರಾತ್ರಿಯಾಗಿಬಿಟ್ಟಿತು ಒಂದಿಷ್ಟು ಅವಸರ ಮಾಡು "

" ಅಂತೂ ಎಚ್ಚರಾಯಿತು ಕೊನೆಗೆ—ನಿಮ್ಮ ಮಾತು ಮುಗಿದೀತೊ ಇಲ್ಲವೊ ಅನ್ನುವ ಹಾಗಾಗಿತ್ತು ನನಗಂತೂ ನಡುವೆ ಒಮ್ಮೆಯಂತೂ ತೂಕಡಿಸುತ್ತಲೇ ಇದ್ದೆ ಅಂತೂ ಭಾರಿ ಇಂಪ್ರೆಶನ್ ಮಾಡಿಬಿಟ್ಟಹಾಗಿದೆಯಲ್ಲ ! "

" ಇಂಪ್ರೆಶನ್ ಇಲ್ಲ, ಯಾವುದೂ ಇಲ್ಲ ಏನೋ ಮಾತಿಗೆ ಮಾತು ಬಂದಿತು, ಹೇಳಿದೆ ನನಗೇನಾಗಬೇಕು ಇದರಿಂದ ? "

ಮುಂದೆ ಹದಿನೈದು ನಿಮಿಷಗಳಲ್ಲಿ ಆಪಟಿನ ಕಾರಿನಲ್ಲಿ ಮೂವರೂ ಮನೆಗೆ ಹೊರಟರು. ಹೊರಡುವಾಗ ರಂಗನಾಥನ್ ಸ್ವಾತಂತ್ರ್ಯೋತ್ಸವದ ದಿನ ಚಿತ್ರದ ಬಹಿರಂಗ ಪ್ರದರ್ಶನ 'ಮೆಜಸ್ಟಿಕ್'ನಲ್ಲಿ ನಡೆಯಲಿದೆಯೆಂದೂ ಮೋಹಿನಿ ಬರಲೇಬೇಕೆಂದೂ ಆಗ್ರಹಪೂರ್ವಕವಾಗಿ ಹೇಳಿದನಲ್ಲದೆ ಒಳ್ಳೆ ಆಸ್ಥೆಯಿಂದ ನಮಸ್ಕಾರ ಹೇಳಿ, ಸೌಹಾರ್ದದಿಂದ ಕೈ ಕುಲುಕಿದ. ಇದನ್ನು ಅನುರಾಧೆ ನೋಡಿದ್ದಳೆಂದೇ ಕಾರು ಹೊರಟನಂತರ ಮತ್ತೆ 'ಭಾರಿ ಆಯಿತು ಬಿಡು, ನಿನ್ನದೂ—' ಎಂದಿದ್ದಳು. ಆದರೆ ಮೋಹಿನಿ ಯಾವುದಕ್ಕೂ ಅನುರಾಧೆ ಅನ್ವಯಿಸುತ್ತಿದ್ದ–ಅನ್ವಯಿಸಬಹುದಾಗಿದ್ದ–ಅರ್ಥವನ್ನು ಗ್ರಹಿಸಲು ಸಿದ್ಧಳಾಗಿರಲಿಲ್ಲ. ಏನೋ ಅಂದಿನ ಮಾತು ಸರಾಗವಾಗಿ ಸಾಗಿತ್ತು. ತನ್ನ ಅಭಿಪ್ರಾಯಗಳನ್ನು ಆತ ಒಪ್ಪಿದ್ದ. ಪರಿಚಯ ಬೆಳೆದಿತ್ತು. ಅಷ್ಟೇ ಅಲ್ಲವೆ ? ಅನುರಾಧೆ ಏನಾದರೊಂದು ಯೋಚನೆಯನ್ನು ತನ್ನ ತಲೆಯಲ್ಲಿ ತುರುಕಿಕೊಂಡಿದ್ದರೆ ಅದು

ಆಕೆಯ ಸ್ವಭಾವಕ್ಕೆ ಸಹಜವಾದ ವಿಷಯ, ಅದಕ್ಕಾಗಿ ಹೆಚ್ಚಿಗೆ ಯೋಚಿಸಬೇಕಿಲ್ಲ ಎಂದು ಅಂದುಕೊಂಡಳು ಮೋಹಿನಿ ಕೋಣೆಯಲ್ಲಿ ಕಾಲಿಟ್ಟಾಗ ಮಾತ್ರ ಮುಚ್ಚಂಜೆಯಲ್ಲಿ ಅದೇ ಕೋಣೆಯಲ್ಲಿ ನಡೆದ ನಾಟಕ ಕಣ್ಣೆದುರಿಗೆ ನಿಂತಾಗ ಮಾತ್ರ ಮೋಹಿನಿಗೆ ವಿಚಿತ್ರವೆನಿಸಿತು! ವ್ಯಥೆಯೂ ಆಯಿತು ಇದುವರೆಗೆ ತಾನಿದ್ದ ಪ್ರಪಂಚವೇ ಬೇರೆ. ಅಲ್ಲಿಯ ಜನ–ಚಿತ್ರ–ರಂಗನಾಥನ್ –ಅವನ ನಯವಾದ ಮಾತು–ಸೌಹಾರ್ದ—ಅದೆಲ್ಲ ಒಂದು ಬಣ್ಣಬೆಡಗುಗಳ ಬೇರೆಯಾದ ಪ್ರಪಂಚವೇ ಎಂದೆನ್ನುವಂತೆ ಸಾಯಂಕಾಲದ ಕಹಿನೆನಹು ಮನಸ್ಸನ್ನು ಕೊರೆಯಿತು ಆದರೇನು? 'ಎಲ್ಲವನ್ನು ಮುಗಿಯಿಸುವ ಮಾತನ್ನೇ ಹೇಳಿದೆ. ಇನ್ನುಮೇಲೆ ಮತ್ತೆ ಯಾಕೆ ಅದೇ ಯೋಚನೆ?' ಸಾಯಂಕಾಲ ಅನುರಾಧೆಯಿಂದ ಕರೆಬಂದಿರದಿದ್ದರೆ ತಾನು ಅದೇ ಕೋಣೆಯಲ್ಲಿ ಹೇಗೆ ನರಳುತ್ತ ಬಿದ್ದಿರಬಹುದಾಗಿತ್ತು? ಹೀಗೆ ಯೋಚಿಸುತ್ತಿರುವಾಗ ಮನಸ್ಸು ಸ್ಟುಡಿಯೋದ ಕಡೆಗೆ ಓಡಿತು ಅಲ್ಲಿ ನಡೆದುದನ್ನು ನೆನೆಯಿತು ಹಠಾತ್ತಾಗಿ ಮತ್ತೆಲ್ಲಿಯೊ ಹಾರಿತು ವಸಂತ ಸಿಕ್ಕಲೇ ಇಲ್ಲ! ಇಂದು ಸಾಯಂಕಾಲ ನಡೆದುದನ್ನು ಆತನಿಗೆ ಹೇಳದಿದ್ದರೆ ಇನ್ನಾರಿಗೆ ಹೇಳಬೇಕು? ಒಂದೆರಡು ದಿನಗಳಲ್ಲಿ ಕಾಣಲೇಬೇಕು. ಮರುದಿನ ವಿಚಾರಿಸಿಕೊಂಡು ಬರೋಣವೆ? ಎಂದುಕೊಂಡಳು ಆದರೆ ಶಾಲೆ. ಹೇಗಿದ್ದರೂ ಆತನಾಗಿಯೇ ಬರಬಹುದು ಬರದಿದ್ದರೆ? ಆಫೀಸಿನವರೆಗೆ ಹೋಗಿ ಬರಬೇಕು. ಆದರೆ ಯಾವಾಗ? ಹೋದರೆ ಮಧ್ಯಾಹ್ನ ಹೋಗಬೇಕು. ಆಗಂತೂ ಶಾಲೆಯ ಕೆಲಸ. ತನ್ನ ಕಾಗದ ಸಿಕ್ಕಮೇಲೆ ಬಾರದೆ ಇರುತ್ತಾನೆಯೆ? ಇದುವರೆಗೆ ಬರಲಿಲ್ಲವಾದರೆ ಆತ ಊರಿಂದ ಮರಳಿ ಬಂದೇ ಇರಲಿಕ್ಕಿಲ್ಲ ಹೀಗೆ ವಸಂತನ ಸುತ್ತಲು ಸುತ್ತುತ್ತಿರುವಾಗಲೆ ಆಕೆಗೆ ತಿಳಿಯದಲೆ ಮೋಹಿನಿಯ ಮನಸ್ಸು ಯಾವಾಗಲೊ ನಿದ್ರೆಯಲ್ಲಿ ಮುಳುಗಿತ್ತು

# ೭

ವಸಂತನನ್ನು ಕುರಿತು ಮೋಹಿನಿ ಹಾಕಿದ ಕೊನೆಯ ಎಣಿಕೆಯೇ ಸರಿಯಾಗಿತ್ತು. ಆತ ಮುಂಬಯಿಗೆ ಮರಳಿಬಂದದ್ದು ಮೋಹಿನಿ ಚಿತ್ರಪಟವನ್ನು ನೋಡಿ ಬಂದ ಮರುದಿನದ ಬೆಳಗಿನಲ್ಲಿ ಆತ ಊರಿಗೆ ಹೊರಟುಹೋದದ್ದು ಅಕಸ್ಮಾತ್ತಾಗಿಯೇ. ಹೋದನಂತರ ಐದು ವಾರ ಅಲ್ಲಿ ಉಳಿಯಬೇಕಾದದ್ದು ಒಂದು ದೃಷ್ಟಿಯಿಂದ ಅಕಸ್ಮಾತ್ತಾಗಿಯೇ ಆದರೂ ಮುಂದೆ ಅನಿವಾರ್ಯವಾಗಿತ್ತು ದಾದರಿನಲ್ಲಿ ಮೋಹಿನಿಯನ್ನು ಬೀಳ್ಕೊಡುವಾಗ ತಾನು ಮುಂದೆ ಒಂದೆರಡು ದಿನಗಳಲ್ಲಿ ತನ್ನ ಅಕ್ಕನಿದ್ದ ರಾಯಚೂರಿಗೆ ಹೋಗಬೇಕಾಗಬಹುದೆಂದು ತಿಳಿದಿದ್ದರೆ ಆ ಮಾತನ್ನು ಆತ ಮೋಹಿನಿಗೆ ಹೇಳದಿರುತ್ತಿದ್ದನೆ? ಏನಾದರೂ ಅಗತ್ಯ ಬಿದ್ದರೆ ತನ್ನನ್ನು ಊಟದ ಆ ಹೋಟಲಿನಲ್ಲಿ ಸಾಯಂಕಾಲ ಕಾಣಬಹುದೆಂದು ಹೇಳಿ ಹೊರಟುಹೋದ ಮೂರನೆಯ ದಿನ ಅಕ್ಕನ ಗಂಡನಿಂದ ತಂತಿ ಬಂದಿತ್ತು—'ಕಮಲಳಿಗೆ ಖಾಯಿಲೆ, ಕೂಡಲೆ ಹೊರಟು ಬಾ' ಎಂದು. ಎಂಟು ಹತ್ತು ದಿನ ಮುಂಚೆ ಎಲ್ಲರೂ ಕ್ಷೇಮವಾಗಿದ್ದ ಬಗ್ಗೆ ಕಾಗದ ಬಂದಿತ್ತು. ಹೀಗಿದ್ದು 'ಖಾಯಿಲೆ' ಎಂದು ತಂತಿ ಬಂದದ್ದು ಒಂದು ಕ್ಷಣ ವಿಚಿತ್ರವೆನಿಸಿತ್ತು. ಕೆಲವು ದಿವಸವಾದರೂ ತಮ್ಮಲ್ಲಿಗೆ ಬಂದು ಇದ್ದು ಹೋಗಬೇಕೆಂದು ಹತ್ತಿಪ್ಪತ್ತು ಬಾರಿ ಅಕ್ಕನಿಂದ, ಆಕೆಯ ಯಜಮಾನರಿಂದ ಕಾಗದ ಬಂದಿದ್ದವು ತಾನು ಹೋಗಿರಲಿಲ್ಲ ಅದಕ್ಕೇ ಇದೆಲ್ಲ ತಂತಿಯ ಆಟ ಇರಬೇಕು ಎಂದುಕೊಂಡಿದ್ದ. ಆದರೂ ಯಾರು ಬಲ್ಲರು? ಏನು ಸಮಾಚಾರವೊ? ತನಗೆ ಹತ್ತಿರದವಳೆಂದರೆ ಆಕೆಯೊಬ್ಬಳೇ ಇಂಥ ತಂತಿ ಬಂದರೂ ಹೋಗದಿರಲಿಕ್ಕಾಗುತ್ತದೆಯೆ? ಹೀಗೆಂದುಕೊಂಡು ಮರುದಿನವೆ ಒಂದು ವಾರದ ರಜೆಯನ್ನು ಪಡೆದು ಹೋಗಿದ್ದ ಗಾಡಿಯಲ್ಲಿ ಕುಳಿತಾಗ ಇನ್ನೂ ಒಂದು ಯೋಚನೆಯೂ ಸುಳಿದು ಹೋಗಿತ್ತು ತನ್ನ ಮದುವೆಯ ವಿಷಯದಲ್ಲಿ ಅಕ್ಕ ಈ ಸಲ ಹಟವನ್ನೇ ತೊಟ್ಟ ಹಾಗೆ ಕಾಣುತ್ತಿತ್ತು ತನ್ನ ಆ ವಿಶೇಷ ಪರಿಚಯಸ್ಥರ ಕನ್ಯೆಯ ವಿಚಾರವಾಗಿ ಕಾಗದಗಳನ್ನು ಬರೆದೇ ಬರೆದಿದ್ದಳು ತನ್ನನ್ನು ಹೀಗೆ ತಂತಿ ಮೂಲಕ ಕರೆಯಿಸಿಕೊಂಡದ್ದು ಅದಕ್ಕಾಗಿಯೇ ಇದ್ದಿರಬಹುದೆ ಎಂಬ ಸಂದೇಹವೂ ಮನಸ್ಸಿನೆದುರು ನಿಂತು ಮಾಯವಾಗಿತ್ತು. ಹೀಗೆ ಹತ್ತಾರು ಊಹೆಗಳನ್ನು

ಹೊತ್ತುಕೊಂಡೇ ವಸಂತ ರಾಯಚೂರನ್ನು ಸೇರಿದ್ದ.

ಮರುದಿನ ಸಾಯಂಕಾಲ ಮನೆಯನ್ನು ಸೇರಿದಾಗ ತನ್ನ ಊಹೆಗಳು ಸರಿಯಾಗಿದ್ದುವೆಂಬುದನ್ನು ತಿಳಿಯಲಿಕ್ಕೆ ತಡವಾಗಲಿಲ್ಲ. ಅಕ್ಕನ ಮುಖ ಅಸ್ವಾಸ್ಥ್ಯದಿಂದ ಬಾಡಿದ್ದಿತಾದರೂ ಆಕೆ ಹಾಸಿಗೆಯಲ್ಲಿರಲಿಲ್ಲ. ಅದನ್ನು ನೋಡಿ ಕೆಲಮಟ್ಟಿಗಾದರೂ ಗಾಬರಿಗೊಂಡು ಬಂದಿದ್ದ ಆತನಿಗೆ ಸಮಾಧಾನವಾಗಿತ್ತು. ಅಂತೆಯೆ ಕೇಳಿದ್ದ

" ಅಂತೂ ಒಳ್ಳೆ ಆಟ ಹೂಡಿದೆ, ಹಾಗೆ ತಂತಿ ಕಳಿಸಿದರೆ ನನಗೆ ಗಾಬರಿ ಯಾಗುವುದಿಲ್ಲವೆ ? "

" ಆಟ ಯಾತರದು ? ನಿಜವಾಗಿಯೂ ಎರಡು ದಿನ ವಿಪರೀತ ಜ್ವರ ಬಂದುಬಿಟ್ಟು ಬಹಳ ತೊಂದರೆಯಾಯಿತು "

" ಆದರೆ ನೀನು ತಂತಿ ಕಳಿಸಿದ್ದು ಮಾತ್ರ ಜ್ವರ ಬಿಟ್ಟಮೇಲೆಯೆ ಎಂದು ಕಾಣುತ್ತದೆ ! "

" ಈಗೇನಾಯಿತು ? ತಂತಿ ಕೊಟ್ಟಿದ್ದಕ್ಕೆ ಬಂದದ್ದಾದರೂ ಆಯಿತು "

" ಇಲ್ಲದಿದ್ದರೆ ಬರುತ್ತಿರಲಿಲ್ಲವೆ ? "

" ಬಹಳ ಬಂದವ ! ಎಷ್ಟು ಸಲ ಅದು ನಿನಗೆ ಕಾಗದ ಬರೆಯುವುದು ? ಹೋದ ಸಲವಂತೂ ದೀಪಾವಳಿಗೆ ಬರುತ್ತೇನೆಂದು ಹೇಳಿ, ಹೊರಡುವ ದಿನವನ್ನೂ ತಿಳಿಸಿ ಕೊನೆಗೆ ಕೈಕೊಟ್ಟುಬಿಟ್ಟೆ. ಮುಂದೆ ಕ್ರಿಸ್‌ಮಸ್‌ನಲ್ಲಿಯೂ ಹಾಗೆಯೇ—"

" ಅದಕ್ಕೆ ಈ ಸಲ ಹೀಗೆ ಮಾಡಿದೆಯಾ ? "

" ಮತ್ತಿನ್ನೇನು ಮಾಡುವುದು ಹಾಗಾದರೆ ? "

" ಇಷ್ಟೆಲ್ಲ ನನಗೆ ತಿಳಿದೇ ಇತ್ತು ನಾನು ಹೊರಡಬಾರದೆಂದೇ ಅಂದು ಕೊಂಡಿದ್ದೆ "

" ಬಂದಿರದಿದ್ದರೆ ದಿನಕ್ಕೆರಡರಂತೆ ತಂತಿ ಬಿಡಿಸುತ್ತಿದ್ದೆ ಇಲ್ಲಿಂದ ! "

" ಯಾಕೆ ! ಭಾವಯ್ಯನಿಗೆ ದುಡ್ಡು ಹೆಚ್ಚಾಗಿದೆಯೆಂದು ಕಾಣುತ್ತದೆ ಅದು ಹೋಗಲಿ, ಬಂದಂತೂ ಆಯಿತಲ್ಲ ಏನು ಈ ವರಿ ಅಗತ್ಯ ? ಸುಮ್ಮನೆ ಬರುವುದಾಗಿದ್ದರೆ ಹೊರಡುವಾಗ ಮಕ್ಕಳಿಗೆ ಏನಾದರೂ ನಾಲ್ಕು ಬಟ್ಟೆಬರೆ ಯಾದರೂ ತರುತ್ತಿದ್ದೆ. ತಂತಿ ಕಂಡ ಕೂಡಲೆ ಯಾವುದಕ್ಕೂ ಅವಕಾಶವೇ

ಉಳಿಯಲಿಲ್ಲ."

" ಏನಾದರೂ ತಂದರೇನೆ ಆಯಿತೆ? ನೀನು ಬಂದದ್ದೇ ಎಷ್ಟು ಅಪರೂಪ ಅವಕ್ಕೆ. ಸುಧಾ, ರಾಜು ಅಂತೂ ಈಗ ಎರಡು ದಿನದಿಂದ ಬಂದವರ ಹೋದವರ ಎದುರು ಹೇಳುತ್ತಿದ್ದಾರೆ 'ನಾಳೆ ಮಾವಯ್ಯ ಬರುತ್ತಾನೆ' ಎಂದು "

" ಎಲ್ಲಿದ್ದಾರೆ? ಕಾಣುವುದೇ ಇಲ್ಲವಲ್ಲ?"

" ಶಾಲೆಯಿಂದ ಬರುವ ಹೊತ್ತಾಗಿದೆ—ಈಗ ಬರಬಹುದು. ರಾಜು ಅಂತು ಹೇಳಿಯೇ ಹೋಗಿದ್ದಾನೆ. 'ಇಂದು ಮಾವಯ್ಯ ಬಂದೇ ಬರುತ್ತಾನೆ' ಎಂದು."

ಸ್ನಾನ ಉಪಾಹಾರಾದಿಗಳು ಮುಗಿದಮೇಲೆ ಕಮಲಕ್ಕ ಮಾತಿಗೆ ಮೊದಲುಮಾಡಿದ್ದಳು

" ಮುಖ್ಯ, ನಿನ್ನನ್ನು ಇಲ್ಲಿಯ ವರೆಗೆ ಕರೆಯಿಸಿದ್ದು ಬೇರೆ ಕೆಲಸಕ್ಕೆ " ಎಂದು.

" ಮತ್ತೇನು ಕೆಲಸ!" ಸೋಗಿನ ಅಜ್ಞಾನವನ್ನು ಸೂಸಿದ್ದ ವಸಂತ.

" ಸಾಕು ಬಿಡು, ಈ ಸೋಗು. ಯಾಕೆ ಕಾಡುತ್ತೀ ಆ ಜನಗಳನ್ನು? ಏನೆಂಬುದನ್ನು ಒಂದು ಮಾತು ಹೇಳಿಬಿಟ್ಟರೆ ಆಗದೆ? ಅವರಂತೂ ಪ್ರತಿನಿತ್ಯ ಮುಂಜಾನೆ ಸಾಯಂಕಾಲ ಬಂದು 'ಕಾಗದ ಬಂದಿತೆ?' ಎಂದು ಕೇಳಿಯೇ ಕೇಳುತ್ತಾರೆ ಪ್ರತಿನಿತ್ಯ ಏನಾದರೂ ಒಂದು ಸುಳ್ಳು ಕತೆ ಕಟ್ಟಿ ಹೇಳಿ ಹೇಳಿ ನನಗಂತೂ ಸಾಕಾಗಿದೆ."

" ಸುಳ್ಳು ಕತೆ ಯಾಕೆ ಕಟ್ಟಬೇಕು? ಇದ್ದುದನ್ನೇ ಹೇಳಿಬಿಟ್ಟರೆ?"

" ಇದ್ದುದನ್ನೇ ಎಂದರೆ ಏನು ನನ್ನ ತಲೆ ಹೇಳಲಿ? ನೀನು ಒಪ್ಪಿದ್ದನ್ನು ನನಗೆ ತಿಳಿಸಿದ್ದೀಯಾ?"

" ಅಂತೂ ನಾನು ಒಪ್ಪಿದ್ದೇನೆ ಎಂದ ಹಾಗಾಯಿತಲ್ಲ?"

" ಯಾರಿಗೆ ಗೊತ್ತು? ನೀನೇ! ಮನಸ್ಸಿನಲ್ಲಿದ್ದುದನ್ನು ನೇರವಾಗಿ ಹೇಳಿದರೆ ದೇವರಾಣೆ!"

" ಹೇಳದಿದ್ದರೂ ಇಷ್ಟು ತಿಳಿದುಕೊಳ್ಳುತ್ತೀ ಹೇಳುವ ಅಗತ್ಯ ಏನು? ನಿನಗೆ ಹೇಳಬೇಕಾದದ್ದೇ ಇಲ್ಲ!"

" ನಾನು ಯಾವುದನ್ನೂ ಅವರಿಗೆ ಹೇಳಿಲ್ಲ. ಸಾಧ್ಯವಿದ್ದಷ್ಟು ಪ್ರಯತ್ನ ಮಾಡುತ್ತೇನೆ ಎಂದು ಮಾತ್ರ ಹೇಳಿದೆ. ಪಾಪ! ಬಹಳ ಆಸೆ ಇಟ್ಟು ಕೊಂಡಿದ್ದಾರೆ."

" ಅಂತೂ ಅವರು ನೀನು ಇಬ್ಬರೂ ಸೇರಿ ನನ್ನನ್ನು ಮದುವೆ ಮಾಡಿಯೇ ಬಿಡಬೇಕೆಂದು ಹಟ ಹಿಡಿದಹಾಗೆ ಕಾಣುತ್ತದೆ ! "

" ಹಟವೇನು ? ಅವರಿಗೆ ಆತುರ ಇರುವುದು ಸಹಜ ನನ್ನ ಮಟ್ಟಿಗೆ ನಾನು ಪೂರ್ತಿಯಾಗಿ ಹುಡುಗಿಯನ್ನು ಪಾಸುಮಾಡಿದ್ದೇನೆ ಎಷ್ಟಾದರೂ ನಮ್ಮ ಕಣ್ಣೆದುರಿನ ಹುಡುಗಿ. ಗೊತ್ತಿದ್ದವರು. ನೋಡುವುದಕ್ಕೂ ಚೆಲುವೆ ಬಿ ಎ ಪಾಸ್ ಮಾಡಿದ್ದಾಳೆ ಮನೆಕೆಲಸ ಎಲ್ಲ ಸಾಗಿಸಿಕೊಂಡು ಹೋಗುವ ಹಾಗೆ ಇದ್ದಾಳೆ ಇನ್ನೇನು ಬೇಕು ಮತ್ತೆ ? "

" ಮದುವೆಯಾಗಬೇಕು ಎನ್ನುವ ಮನಸ್ಸು ? "

" ನಿನಗೊ ಹುಡುಗಿಗೊ ? "

" ಇಬ್ಬರಿಗೂ ಆಯಿತು. ಅದರಲ್ಲಿ ನನಗೆ ಮುಖ್ಯ ! "

" ಅಂದರೆ ನಿನಗೆ ಇನ್ನೂ ಮದುವೆಯಾಗುವ ವಯಸ್ಸಾಗಿಲ್ಲ ಎನ್ನುತ್ತೀ ಯೇನು ? "

" ವಯಸ್ಸಾಗಿದೆ. ಮನಸ್ಸಾಗುವುದಿಲ್ಲ ! "

" ಸಾಕು ಅದೆಲ್ಲ ಇನ್ನು ನನಗೆಲ್ಲ ಗೊತ್ತು. ಸುಮ್ಮನೆ ಹಿಂದಿನ ದನ್ನು ಕಟ್ಟಿಕೊಂಡು ಕೊರಗಿದರೆ ಯಾತಕ್ಕೆ ಬಂತು ? ನನ್ನ ಮಾತು ಕೇಳು. ಹುಡುಗಿಯೂ ಇಲ್ಲಿಯೇ ಇದ್ದಾಳೆ ಇನ್ನೊಮ್ಮೆ ನೋಡಬೇಕಿದ್ದರೆ ಹಾಗೆ ಹೇಳು. ತಕ್ಷಣ ವ್ಯವಸ್ಥೆ ಮಾಡುತ್ತೇನೆ—"

ಮದುವೆಯ ಮಾತು ಬಂದಾಗಲೆಲ್ಲ ವಸಂತನಿಗೆ ಮಾಲತಿಯ ನೆನಪು ಬರುತ್ತಿತ್ತು ಆ ಸುಕುಮಾರಕೋಮಲವಾದ ಮುಖ, ಆ ಕೊನೆಯ ಮಾತು, ಆತನನ್ನು ಮುಂದುಗಾಣದಂತೆ ಮಾಡುತ್ತಿದ್ದವು. ಆದರೆ ಆ ಕೊರಗನ್ನೇ ಕಟ್ಟಿ ಕೊಂಡು ಏನು ಪ್ರಯೋಜನ ಎಂದು ತನ್ನ ಅಕ್ಕನಂತೆಯೇ ಹಲವಾರು ಬಾರಿ ಯೋಚಿಸಿದ್ದ ಸರಿಯಾದ ಕನ್ಯೆಯನ್ನು ನೋಡಿ ಮದುವೆಯಾದರೆ ಎಲ್ಲವೂ ತಾನಾಗಿಯೆ ಹೊಂದಿಕೊಳ್ಳುತ್ತದೆ—ಮುಂಬಯಿಯಂಥ ದೊಡ್ಡ ಊರಿನಲ್ಲಿಯ ಏಕಾಂತವಾಸದ ಬೇಸರ ತಾನಾಗಿಯೇ ಕಳೆಯುತ್ತದೆ—ಎಂದು ಮುಂತಾಗಿ

ಯೋಚಿಸಿಯೂ ಇದ್ದ. ಆದರೆ ಮಾಲತಿಯ ನೆನಹಿನಿಂದ ಮನಸ್ಸು ಅಳುಕುತ್ತಿತ್ತು. ಹಿಂಜರಿಯುತ್ತಿತ್ತು ಆದರೆ ಈ ಸಲ ಮಾತ್ರ ಅಕ್ಕನ ಬಲವಂತವನ್ನು ಮೀರುವುದು ಅಸಾಧ್ಯವಾಗಿ ಕಾಣುತ್ತಿತ್ತು ಇದಕ್ಕೆ ಮುಖ್ಯ ಕಾರಣವೆಂದರೆ ಕನ್ಯೆಯನ್ನು 'ನೋಡಿ'ದಾಗ ತಾನಾಗಿಯೆ ಅರೆಮರ್ಧ ಒಪ್ಪಬೇಕು ಎನ್ನುವ ಮನಃಸ್ಥಿತಿಯಲ್ಲಿದ್ದದ್ದು ಒಳಮನಸ್ಸಿನಲ್ಲಿ ಒಪ್ಪಿದ್ದನೆಂದೇ ಹೇಳಿದರೂ ಸಲ್ಲುವಂತಿತ್ತು

ಸಾಯಂಕಾಲ ಭಾವ ಮೋಹನರಾಯ ಆಫೀಸಿನಿಂದ ಬಂದನಂತರ ಸ್ವಾಭಾವಿಕ ಮಾತುಕತೆಗಳು ಮುಗಿದಾಗ ಮತ್ತೆ ಇದೇ ವಿಷಯ ತಲೆಯೆತ್ತಿನಿಂತಿತ್ತು ಅವರಾದರೂ ವಧುವನ್ನು ಒಪ್ಪಿಕೊಂಡೇ ಮಾತನಾಡಿದ್ದರು. ವಸಂತನ ಮಾತಿನಮೇಲಿಂದ ಆತನನ್ನು ಪೂರ್ತಿಯಾಗಿ ಒಪ್ಪಿಸಿಬಿಡುವುದು ಅಷ್ಟೇನೂ ಕಠಿಣವಾದ ಕೆಲಸವಲ್ಲವೆಂದು ಅವರಿಗೆ ತೋರಿರಬೇಕು. ನೇರವಾಗಿ ಕೇಳದೆ,

"ಹೇಗೂ ಆಗಲಿ, ಬಂದದ್ದಂತೂ ಆಯಿತು. ಎಷ್ಟು ದಿನ ರಜೆ ಪಡೆದಿದ್ದೀ?" ಎಂದರು.

"ಒಂದು ವಾರ."

"ಒಂದು ವಾರ! ಆದರಲ್ಲಿ ಎರಡು ದಿನ ಪ್ರವಾಸ ಅದೇನೂ ಆಗದ ಕೆಲಸ. ನಾಳೆಗೇ ಒಂದು ಕಾಗದ ಬರೆ—ರಜೆ ಬೆಳೆಯಿಸಲಿಕ್ಕೆ"

"ಈಗ ರಜೆ ಸಿಕ್ಕುವುದು ಕಷ್ಟ, ಭಾವಯ್ಯ. ತುಂಬಾ ಕೆಲಸ ಇದೆ—"

"ಅದನ್ನೆಲ್ಲ ನನಗೆ ಹೇಳುತ್ತೀಯ? ಆಫೀಸಿನಿಂದ ಹೊರಬೀಳುವವರೆಗೆ ಅದರ ಯೋಚನೆ ಅಲ್ಲದೆ ಆಫೀಸಿನ ಕೆಲಸ ಎಂದಿಗಾದರೂ ಮುಗಿಯುವುದೆ? ಹೀಗೆ ಕುಳಿತರೆ ರಜೆಗೆ ಅವಕಾಶವೆ ಇಲ್ಲ ಯಾರಿಗೂ!"

"ಅದು ಸರಿ ಆದರೆ ಈಗ ರಜೆ ಕೊಡುವುದೇ ಇಲ್ಲ!"

"ಕೊಡುವುದೇ ಇಲ್ಲವೆ? ನೋಡುವಾ ಇಲ್ಲಿಂದಲೆ ಬೇಕಾದರೆ ಒಂದು ಮೆಡಿಕಲ್ ಸರ್ಟಿಫಿಕೇಟ್ ಕಳಿಸಿಬಿಡುವಾ ಆಮೇಲೆ ನೋಡೋಣ, ಹೇಗೆ ಕೊಡುವುದಿಲ್ಲ ರಜೆಯನ್ನ"

"ಸರಿ. ಅಂಥಾದ್ದೇನು ಈಗ ಬಂದದ್ದು? ಮೆಡಿಕಲ್ ಲೀವ್ ಪಡೆಯುವಂಥಾದ್ದು?"

"ಏನು ಬಂದದ್ದು, ಯಾಕೆ, ಎಂಬುದೆಲ್ಲ ಈಗ ಯಾಕೆ? ಎಲ್ಲ ನಿಧಾನವಾಗಿ ತಾನಾಗಿಯೆ ಗೊತ್ತಾಗುತ್ತದೆ! ನಿನಗೆ ರಜ ಬಾಕಿ ಇದೆಯೊ ಇಲ್ಲವೊ?" ಎಂದು ನಕ್ಕು ಕೇಳಿದ್ದರು.

"ರಜೆ ಬಾಕಿ ಇದೆ. ಈಗ ಎರಡು ವರ್ಷದಿಂದ ನಾನು ರಜೆ ತೆಗೆದುಕೊಂಡೇ ಇಲ್ಲ."

"ಸರಿ ಮತ್ತೆ. ನಾಳೆ ಒಂದು ಕಾಗದ ಬರೆದು ಹಾಕಿಬಿಡು—ಮೈಯಲ್ಲಿ ಸ್ವಸ್ಥವಿಲ್ಲ ಎಂದು. ರಜೆ ಮಂಜೂರಾಗದಿದ್ದರೆ ಸರ್ಟಿಫಿಕೇಟ್ ಕೊಟ್ಟುಬಿಟ್ಟರಾಯಿತು!"

ವಸಂತನ ಯುಕ್ತಿವಾದಗಳು ನಡೆಯಲಿಲ್ಲ ಮೋಹನರಾಯರ ಬಲವಂತವನ್ನು ಮುರಿಯುವ ಮನಸ್ಸೂ ಆಗಲಿಲ್ಲ. ಹೀಗಾಗಿ ಒಂದು ವಾರವೆಂದು ಬಂದವ ಮತ್ತೆ ಒಂದು ತಿಂಗಳ ವರೆಗೆ ರಜೆಯನ್ನು ಬೆಳೆಸಿಯೂ ಆಯಿತು

ಮಾಡಬೇಕಾದ ಕೆಲಸಗಳ ವಿಷಯದಲ್ಲಿ ವ್ಯರ್ಥ ಕಾಲಹರಣ ಮಾಡುವ ಸ್ವಭಾವ ಕಮಲಕ್ಕನದಾಗಿರಲಿಲ್ಲ. ಮರುದಿನ ಬೆಳಿಗ್ಗೆ ಶಕುಂತಲೆಯ—ವಧುವಿನ—ಮನೆಯ ವರೆಗೆ ಹೋಗಿ ವಸಂತ ಬಂದ ಸಮಾಚಾರವನ್ನು ತಿಳಿಸಿದಳಲ್ಲದೆ 'ನೋಡುವ' ನಾಟಕ ಮತ್ತೊಮ್ಮೆ ನಡೆಯಬೇಕೆಂದೂ ತಿಳಿಸಿದ್ದಳು ಕಮಲಕ್ಕ ವಸಂತನನ್ನು ಅಲ್ಲಿಯ ವರೆಗೆ ಬರಮಾಡಿಕೊಂಡದ್ದು ಅಷ್ಟಕ್ಕಾಗಿಯೆ ಎಂಬುದು ತಿಳಿದ ಜಹಗೀರದಾರರ ಮನೆಯವರಿಗೆ ಇನ್ನೂ ಉತ್ಸಾಹವೆನಿಸಿತು. ಅಲ್ಲದೆ ಕಮಲಕ್ಕನ ಮಾತಿನ ಬಗೆಯಲ್ಲಿ ಅವರು ಹಚ್ಚಾದ ಆಸೆಯನ್ನು ಕಂಡಿದ್ದರು ವಸಂತ ಒಪ್ಪಿದ ಹಾಗೆಯೇ ಎನ್ನುವ ಮಟ್ಟಿಗೆ ಅವರಿಗೆ ಭರವಸೆ ಎನಿಸಿತ್ತು ಹೀಗೆಂದು, ಕಮಲಕ್ಕ ಹೇಳಿದ ಯಾವುದಕ್ಕೂ ಅವರು ಹಿಂದೆ ಮುಂದೆ ನೋಡುವಂತಿರಲಿಲ್ಲ. ಮುಂಜಾನೆ ಶಕುಂತಲೆಯ ತಾಯಿ ರಮಾಬಾಯಿ ಹೇಳಿದ್ದಳು "ನೀವೇನು ಬೇಕಾದ್ದು ಹೇಳಿರಿ. ಈ ಕೆಲಸವನ್ನು ಮಾಡಿಕೊಡುವುದು ನಿಮ್ಮಸ್ನೇ ಕೂಡಿದೆ ಅಷ್ಟು ಮಾಡಿದರೆ ಶಕುಂತಲೆಯ ಮದುವೆ ಮಾಡಿದ ಶ್ರೇಯಸ್ಸು ನಿಮಗೇ" ಎಂದು ಕಮಲಕ್ಕ ಹೇಳಿದ್ದಳು "ಅಷ್ಟೆಲ್ಲ ದೊಡ್ಡ ಮಾತು ನನಗೆ ಯಾಕೆ? ನನಗೆ ಸಾಧ್ಯವಿದ್ದಷ್ಟೆಲ್ಲ ಹೇಳಿದ್ದೇನೆ ಇವರೂ ಹೇಳಿದ್ದಾರೆ ಅವನು ಒಪ್ಪಿಗೆ ಹೇಳಿದರೆ ಆಯಿತು" "ಆಗಲಿ ತಾಯಿ, ಒಪ್ಪಿಗೆಯಾದರೆ ನಮ್ಮ ಶಕುಂತಲೆಯ ದೈವ" ಎಂದು ಮುಂತಾಗಿ ಮಾತು

ನಡೆದಿತ್ತು.

ಮುಂದೆ ಎರಡು ಮೂರು ದಿನಗಳಲ್ಲಿಯೆ ಶಕುಂತಲಾ 'ಪ್ರದರ್ಶನ' ನಡೆಯಿತು. ಮುಂಬಯಿಯಲ್ಲಿ ನೋಡಿದಾಗಿನಕಿಂತಲೂ ಶಕುಂತಲೆ ಚೆಲುವೆಯಾಗಿ ಕಂಡಳು. ಅಲ್ಲಿ ನೋಡಿದ ದಿನ ಪ್ರವಾಸದ ದಣಿವಿನಿಂದ ಆಕೆ ಅಷ್ಟೊಂದು ಚೆಲುವೆಯಾಗಿ ಕಂಡಿರಲಿಕ್ಕಿಲ್ಲವೆಂಬ ಸಮರ್ಥನೆಯನ್ನು ಎಲ್ಲರೂ ಹೇಳಿದರು. ಈ ಕಾರ್ಯಕ್ರಮವೆಲ್ಲ ಸ್ವಾಭಾವಿಕವಾಗಿ ಜಹಗೀರದಾರರ ಮನೆಯಲ್ಲಿಯೆ ನಡೆಯಿತಾದ್ದರಿಂದ ಅವರ ಸಾಂಪತ್ತಿಕ ಮತ್ತು ಇತರ ಯೋಗ್ಯತೆಗಳನ್ನು ತಿಳಿಯಲು ವಸಂತನಿಗೆ ಸಾಧ್ಯವಾಗಿತ್ತು ಆದರೆ ವಸಂತನ ದೃಷ್ಟಿಯಿಂದ ದುಡ್ಡು ಮುಖ್ಯವಾಗಿರಲಿಲ್ಲ ಜನ ಎಂಥವರು, ಅವರ ರೀತಿ ನೀತಿ ಅಭಿರುಚಿಗಳು ಎಂಥವು ಎಂಬುದರ ಕಡೆಗೆ ಆತನ ಲಕ್ಷ್ಯವಿದ್ದಿತು ಇವಕ್ಕೂ ಹೆಚ್ಚಾಗಿ ಆತನ ಲಕ್ಷ್ಯ ವಧುವಿನ ಕಡೆಗಿದ್ದಿತು ಎಲ್ಲರಿಗೂ ಅಚ್ಚರಿಯಾಗುವಂತೆ ಕನ್ಯೆಯನ್ನೇ ನೇರವಾಗಿ ಮಾತನಾಡಿಸಿ ಎಷ್ಟೋ ವಿಷಯಗಳನ್ನು ತಿಳಿದುಕೊಂಡಿದ್ದ ಇಂಥ ಸಂದರ್ಭಗಳಲ್ಲಿ ಮಧ್ಯಸ್ಥಿಗರಾಗುವ ಅಧಿಕಾರ ತಮಗೆ ಸಹಜವಾಗಿಯೇ ಪ್ರಾಪ್ತವಾಗುವುದೆಂದು ದಯಮಾಡಿಸಿದ ಸುತ್ತುಮುತ್ತಲಿನ ಮೂರು ನಾಲ್ಕು ಜನ ಮುದುಕರಿಗೆ ತುಂಬಾ ನಿರಾಶೆಯಾಗಿರಬೇಕು. "ಆಯಿತು, ಮುಂಬಯಿಯಲ್ಲಿ ಇದ್ದವರು!" ಎಂಬ ಮಾತನ್ನು ಹೇಳಿ ಹಿಂದೆ ಸರಿದಿದ್ದರು. ಆದರೆ ನೇರವಾಗಿ ಸಂಬಂಧಪಟ್ಟವರಿಗೆ, ಶಕುಂತಲೆಯ ತಾಯಿತಂದೆಗಳಿಗೆ, ಕಮಲಕ್ಕ ಮೋಹನರಾಯರಿಗೆ ಮಾತ್ರ ಎಲ್ಲವೂ ಆಶಾದಾಯಕವೆನಿಸುವಂತೆ ಅಂದಿನ ಕಾರ್ಯಕ್ರಮ ನಡೆದಿತ್ತು ವಸಂತ ಮಾತನಾಡುತ್ತಿದ್ದ ರೀತಿ, ಆತ ಕೇಳುತ್ತಿದ್ದ ಪ್ರಶ್ನೆಗಳ ಮೇಲಿಂದಲೇ ಆತ ಒಪ್ಪುತ್ತಾನೆಂದು ಸಹಜವಾಗಿ ತಿಳಿಯಬಹುದಿತ್ತು ಆದರೂ 'ರೀತಿ'ಗೆ ಸರಿಯಾಗಿ, "ಒಂದೆರಡು ದಿನಗಳಲ್ಲಿಯೇ ತಿಳಿಸುತ್ತೇನೆ" ಎಂದು ಹೇಳಿ ಮನೆಗೆ ಮರಳಿದ್ದ

ಶಕುಂತಲೆಯನ್ನು ಮತ್ತೊಮ್ಮೆ ನೋಡಿದಾಗಿನಿಂದ ವಸಂತನಿಗೆ ಮೋಹಿನಿಯ ನೆನಹು ಬಾರದಿರುವುದು ಅಸಾಧ್ಯವೇ ಇದ್ದಿತು ದನಿ, ನಡೆನುಡಿಗಳ ರೀತಿ ಬೇರೆಯಾಗಿದ್ದರೂ ಮುಖದ ಮಾಟ, ನಿಲುವಿನ ಬಗೆ, ಕಣ್ಣೋಟ, ಜಡೆಹಾಕುವ ಪದ್ಧತಿಗಳಲ್ಲಿ ವಿಚಿತ್ರವೆನಿಸಬಹುದಾದ ಸಾಮ್ಯವಿದ್ದಿತು ನೋಡಿದಷ್ಟು ಸಲ, ನೆನೆದಷ್ಟು ಸರಿಯಾಗಿ ಆ ಸಾಮ್ಯ ವಸಂತನ ಮನಸ್ಸನ್ನು

ವಿಚಿತ್ರವಾಗಿ ಕೊರೆಯುತ್ತಿತ್ತು. ಮೋಹಿನಿಯ ಸೌಂದರ್ಯಕ್ಕೆ ಮಾರುಹೋದ ತನ್ನೆದುರು ಅಂಥದೇ ಚೆಲುವು ಈಗ ತನ್ನೆದುರು ಬೇರೆಯಾದ ಸಂದರ್ಭದಲ್ಲಿ—ತಾನು ಒಂದು ಮಾತಿನಿಂದ ಒಪ್ಪಿದ ಮಾತ್ರಕ್ಕೆ ತನ್ನದೇ ಆಗಬಹುದಾದ ಪರಿಸ್ಥಿತಿಯಲ್ಲಿ—ನಿಂತುದನ್ನು ನೆನೆದಾಗ ' ಏನು ವಿಚಿತ್ರ ! ' ಎಂದುಕೊಳ್ಳು ವಂತಾಗುತ್ತಿದ್ದಿತು ಇನ್ನು ಯಾವ ಕಾರಣಗಳಿಗಾಗಿ ಅಲ್ಲದಿದ್ದರೂ ಅಷ್ಟಕ್ಕಾ ದರೂ ತಾನು ಶಕುಂತಲೆಯನ್ನು ಒಪ್ಪಬೇಕು ಎಂದೆನಿಸುತ್ತಿತ್ತು ಆದರೆ ಅದೇಕೋ ಮನಸ್ಸು ತಟ್ಟನೆ ಒಪ್ಪಿಗೆ ಹೇಳುವಂತಿರಲಿಲ್ಲ ಹೀಗೆಂದೇ ಎರಡು ದಿನಗಳನಂತರ ' ತಿಳಿಸುವುದು ' ಎಂದುಕೊಂಡಿದ್ದ ಹೀಗಾಗಿ ಎರಡು ದಿನವೂ—ಹಗಲು ರಾತ್ರಿ—ವಸಂತ ಶಕುಂತಲೆಯನ್ನಲ್ಲದೆ—ಆದರೆ ಶಕುಂತಲೆಗಿಂತ ಹೆಚ್ಚಾಗಿ—ಮೋಹಿನಿಯನ್ನು ಕುರಿತೇ ಯೋಚಿಸಿದ್ದ !

ಗಂಟೆ ಗಂಟೆ ಯೋಚಿಸಿ—ಯಾವ ಗೊತ್ತುಗುರಿಯಿಲ್ಲದೆ ಮುಂದೋಡು ತ್ತಿದ್ದ ಯೋಚನೆಗಳನ್ನು ಹಿಂಬಾಲಿಸಿ, ದಣಿದು—ಕೊನೆಗೆ ತನ್ನನ್ನು ತಾನೇ ಕೇಳಿಕೊಳ್ಳುವಂತಾಗುತ್ತಿದ್ದಿತು, ವಸಂತನ ಮನಸ್ಸು. ಮೋಹಿನಿಯನ್ನು ಕುರಿತು ತಾನು ಇಷ್ಟು ಯಾಕೆ ಯೋಚಿಸಬೇಕು ? ಈಗ ತಾನು ಒಪ್ಪಬಹು ದಾಗಿದ್ದ, ಹೆಚ್ಚುಕಡಿಮೆ ಒಪ್ಪಿದ್ದ, ಮದುವೆಗೂ ಮೋಹಿನಿಗೂ ಯಾವ ಸಂಬಂಧ ? ಒಂದು ಕಾಲಕ್ಕೆ ಏನೋ ನಡೆಯಿತು. ಆದರೆ ಅದು ಒಂದು ' ಆಕರ್ಷಣೆ ' ಮಾತ್ರ ಆ ಆಕರ್ಷಣೆಯೂ ಒಂದು ರೀತಿಯಲ್ಲಿ ಕೊನೆಗೊಂಡು ಹೋಯಿತು ಈಗ ಮತ್ತೆ ಯಾಕೆ ಅದೇ ಯೋಚನೆ ? ಆಕೆಯನ್ನು ತಾನು ಮದುವೆಯಾಗುವುದಂತೂ ಸಾಧ್ಯವಿಲ್ಲ ! ಆಕೆ ಆನಂದನ ಹೆಂಡತಿ ಆತನನ್ನು ಬಿಟ್ಟು ತನ್ನಮಟ್ಟಿಗೆ ಬೇರೆಯಾಗಿ ಇರುತ್ತಿದ್ದರೂ ಆಕೆ ಆನಂದನ ಹೆಂಡತಿಯೆ ! ಆದರೂ ಮೊನ್ನೆ ದಾವರಿನಲ್ಲಿ ಸಿಕ್ಕಾಗ ಮತ್ತೆ ಮೊದಲಿನಂತೆಯೆ ಸೌಹಾರ್ದ ದಿಂದ ಮಾತನಾಡಿಸಿಯಾಗಿತ್ತು ತನಗಿಂತಲೂ ಹೆಚ್ಚಾದ ಆತ್ಮೀಯತೆಯಿಂದ ಆಕೆ ಮಾತನಾಡಿದ್ದಳು ತನ್ನ ಬಗೆಯಲ್ಲಿ ಆಕೆ ಇಂಥ ಏನಾದರೂ ಆಕಾಂಕ್ಷೆ ಗಳನ್ನು ಇಟ್ಟುಕೊಂಡಿರಬಹುದೆ ? ಹಾಗಿದ್ದರೆ ? ಹಾಗಿದ್ದರೆ ಅದು ತಪ್ಪು ಅಂಥದನ್ನು ತಾನು ಉತ್ತೇಜಿಸುವುದೂ ತಪ್ಪು ! ಹೀಗೆಂದೇ ಆಕೆಗೆ ತಾನು ಹೇಳಿರಲಿಲ್ಲವೆ, ಇನ್ನುಮುಂದೆ ತಾವಿಬ್ಬರೂ ಹೆಚ್ಚಾಗಿ ಕೂಡಿ ಅಡ್ಡಾಡುವುದು ಸರಿಯಲ್ಲ ಎಂದು ? ಆದರೆ— ? ಆದರೆ ಅದೇಕೊ ಬುದ್ಧಿಯ ಕಣ್ಣು ತಪ್ಪಿಸಿ

ವಸಂತನ ಹೃದಯ ಆ ಕಡೆಗೆ ಒಲಿಯುತ್ತಿದ್ದಿತು ! ತನ್ನಮಟ್ಟಿಗೆ ಕೂಡ ಯಾವ ಕಾರಣವನ್ನೂ, ಸಮರ್ಥನೆಯನ್ನೂ ವಸಂತ ಹೇಳಲಾರದಾದ ಕೊನೆಗೆ, ಇದು ಬಗೆಹರಿಯದ ವಿಷಯ. ಸರಿಯಾದದ್ದೂ ಅಲ್ಲ ಮೊನ್ನೆ ಆಕೆಗೆ ತಾನು ಹೇಳಿದ್ದೇ ಸರಿ ಸುಮ್ಮನೆ ಆಕೆಯಲ್ಲಿ ಇಲ್ಲದ ಆಕಾಂಕ್ಷೆಗಳನ್ನು ತಾನು ಬೆಳೆಯಲು ಆಸ್ಪದ ಕೊಡಕೂಡದು, ಎಂದೇ ಹೇಳಿಕೊಳ್ಳುವಂತಾಯಿತು ಹಿಂದೊಮ್ಮೆ ಸ್ಪಷ್ಟವಾಗಿ ಮೇಲೆ ಬಂದು ಈಗ ತಡೆಹಿಡಿಯಲಾಗಿದ್ದ ಈ ಒಲವು, ಇಲ್ಲದ ಅನರ್ಥಪರಂಪರೆಗೆ ಕಾರಣವಾಗಬಹುದು, ಇಬ್ಬರ ದೃಷ್ಟಿಯಿಂದಲೂ ಸರಿಯಾಗದ, ಇಬ್ಬರಿಗೂ ಯಾವ ದಾರಿಯನ್ನೂ ತೋರದ ಒಲವು ಅದು. ಅದನ್ನು ಮುರಿಯಲೇಬೇಕು ಎಂದುಕೊಂಡ ಅಲ್ಲದ ಹೊರಚೆಲುವಿನಲ್ಲಿ ಮೋಹಿನಿಯ ತದ್ರೂಪದಂತೆಯೆ ಇದ್ದ ಶಕುಂತಲೆಯನ್ನು ತಾನು ಒಪ್ಪಿದರೆ ಮೋಹಿನಿಯನ್ನು ಮನಸ್ಸಿನಿಂದ ಹಿಂದೂಡುವುದು ಕಠಿಣದ ಕೆಲಸವೂ ಆಗಲಿಕ್ಕಿಲ್ಲವೆಂದುಕೊಂಡು, ಮತ್ತೆ ಹತ್ತು ಬಾರಿ, ಇಪ್ಪತ್ತು ಬಾರಿ ಅದನ್ನೇ ಯೋಚಿಸಿ, ಕೊನೆಗೆ ಮೂರನೆಯ ದಿನ ಅಕ್ಕನಿಂದ ಒತ್ತಾಯದ ಪ್ರಶ್ನೆ ಬಂದಾಗ ವಸಂತ "ಆಗಬಹುದು" ಎಂದಿದ್ದ

"ಇಷ್ಟನ್ನು ಮೊದಲೇ ಹೇಳಿಬಿಡಬಾರದಿತ್ತೇ, ಮಹಾರಾಯಾ ?"

"ನಾನು ಇಲ್ಲ ಎಂದರೆ ನೀನೊಂದು ಕೇಳಬೇಕಲ್ಲ ? ನೀನು, ಭಾವಯ್ಯ ಇಬ್ಬರೂ ಎಲ್ಲ ಸಂಚುಮಾಡಿಕೊಂಡೇ ನನ್ನೆದುರು ಈ ಎಲ್ಲ ನಾಟಕ ಹೂಡಿದ್ದಿರಿ !"

"ಹೌದೆ ? ಸಾಕು ಬಿಡೊ, ಎಲ್ಲಾ ನನಗೆ ಗೊತ್ತು ಯಾರು ನಾಟಕ ಹೂಡಿದವರು ?"

"ನಾನೇ ? ನಾನೇನು ನಾಟಕ ಮಾಡಿದೆ ?"

"ಏನು ನಾಟಕ ಮಾಡಿದೆಯಾ ? ಅಲ್ಲೊ, ಕನ್ಯೆ ನೋಡಲಿಕ್ಕೆ ಹೋಗಿದ್ದೆಯೊ, ಆಕೆ ಕೂಡ ಹರಟೆ ಹೊಡೆಯಲಿಕ್ಕೆ ಹೋಗಿದ್ದೆಯೊ ? ಎಷ್ಟು ಅದು ಮಾತನಾಡುತ್ತ ಕೂಡುವುದು ?"

"ಅಂಥಾದ್ದೆಷ್ಟು ಮಾತನಾಡಿದೆ ? ಅಲ್ಲದೆ, ಎಲ್ಲ ತಿಳಿದುಕೊಳ್ಳುವುದು ಬೇಡವೇನೊ !"

"ಅದಕ್ಕೆ ರಜಿಸ್ಟರ್ ಮದುವೆಗೆ ಒಪ್ಪುತ್ತೀ ಏನು ಎಂದೂ ಕೇಳ

ಬೇಕೇನೊ ! ”

“ ಸುಮ್ಮನೆ ಕೇಳಿ ನೋಡಿದೆ—ಮೋಜು ಎಂದು ! ”

“ ಅದಕ್ಕೇ ನಾನು ಹೇಳಿದ್ದು—ನಾಟಕ ಎಂದು ! ”

“ ನಾಟಕವೇ ಆಗಲಿ, ಏನೇ ಆಗಲಿ ನಿನ್ನ ಮನಸ್ಸಿನಂತೆ ಆಯಿತೊ ಇಲ್ಲವೊ ? ”

“ ನನ್ನ ಮನಸ್ಸು ತೆಗೆದುಕೊಂಡು ಏನು ಮಾಡುತ್ತೀ ? ನಿನ್ನ ಮನಸ್ಸಿಗೆ ಬಂದಿದ್ದರೆ ಆಗಿಹೋಯಿತು ”

“ ಅದಂತೂ ಆಯಿತಲ್ಲ ! ”

ಅಂದೇ ಸಾಯಂಕಾಲ ವಸಂತ ಒಪ್ಪಿಗೆ ಹೇಳಿದ ಹತ್ತು ನಿಮಿಷಗಳಲ್ಲಿ ಕಮಲಕ್ಕ ರಮಾಬಾಯಿಗೆ ಸಂತೋಷ ಸಮಾಚಾರವನ್ನು ಮುಟ್ಟಿಸಲೆಂದು ಹೆಚ್ಚುಕಡಿಮೆ ಓಡುತ್ತಲೆ ಹೋಗಿದ್ದಳು ಮುಂದೆ ಅರ್ಧಗಂಟೆಯಲ್ಲಿ ಎರಡೂ ಮನೆಗಳಲ್ಲಿ ಮಿಠಾಯಿ ಹಂಚಿಯೂ ಆಗಿತ್ತು ರಾತ್ರಿ ಒಂಬತ್ತು ಗಂಟೆಯ ಸುಮಾರಿಗೆ ಜಹಗೀರದಾರ ಜನಾರ್ದನರಾಯರು ತೋರಿಕೆಗೆ ಮೋಹನರಾಯರ ಕೂಡ ಹರಟೆಗೆಂದು ಬಂದಿದ್ದರೂ ವಸಂತನನ್ನು ಕಂಡು—ವಸಂತನನ್ನು ವಸಂತ ರಾಯರನ್ನಾಗಿ ಮಾಡಿ—ಮಾತನಾಡಿಸಿ ತಮ್ಮ ಸಂತೋಷವನ್ನು ವ್ಯಕ್ತಮಾಡಿ ಹೋಗಿದ್ದರಲ್ಲದೆ ಮರುದಿನ ಮಧ್ಯಾಹ್ನಕ್ಕೆ ಎಲ್ಲರಿಗೂ ಊಟಕ್ಕೆ ಔತಣವನ್ನು ಹೇಳಿ ಹೋಗಿದ್ದರು. ಅವರ ಉತ್ಸಾಹಕ್ಕೆ ಮೇರೆ ಉಳಿದಿರಲಿಲ್ಲ. ಊಟವಾದ ಮೇಲೆ ಮುಂದಿನ ‘ ಮಾತುಕತೆ ’ಗಳನ್ನಾಡಬಹುದು ಎಂದು ಸೂಚಿಸಿದ್ದರು.

ಜನಾರ್ದನರಾಯರು ಹೊರಟುಹೋಗುತ್ತಲೆ ವಸಂತ ಕೇಳಿದ ಮೋಹನ ರಾಯರನ್ನು :

“ ಇದೇನು ಭಾವಯ್ಯಾ, ಸುರುವೆ ಮಾಡಿಬಿಟ್ಟಿರಲ್ಲ ! ”

“ ಏನು ? ”

“ ಊಟ ಉಪಚಾರ ಎಂದು ! ”

“ ಸರಿ, ಮತ್ತೆ, ಅಪರೂಪದ ಅಳಿಯ, ಅಪರೂಪದ ಉಪಚಾರ, ಇನ್ನು ಮೇಲೆ ನೀನು ಅವರಿಗೆ ಅಳಿಯದೇವರಪ್ಪಾ. ನೋಡುವಿಯಂತೆ ! ನೀನೇ ಮುಂದೆ, ಇನ್ನುಮೇಲೆ ನಾವೆಲ್ಲಾ ಏನು ? ಸುಮ್ಮನೆ ದೊಡ್ಡದೇವರ ಹತ್ತಿರದ ಪ್ರಾಣದೇವರು ಇದ್ದಹಾಗೆ ! ”

" ಆಯಿತು ಹಾಗಾದರೆ ನಾನು ಇಂದೇ ಸಾಮಾನು ಕಟ್ಟಲಡ್ಡಿ ಇಲ್ಲ! "

" ಯಾಕೆ? ಅವರಲ್ಲಿಯೆ ಇದ್ದು ಬಿಡಬೇಕೆಂದೆ? " ಎಂದು ಗಟ್ಟಿಯಾಗಿ ನಕ್ಕಿದ್ದರು.

" ಸರಿ, ಇದೊಳ್ಳೆ ಚೇಷ್ಟೆ ಪ್ರಾರಂಭವಾಯಿತು! "

" ಮದುವೆ ಬೇಕು, ಮಾತು ಬೇಡ ಅಂದರೆ ಹೇಗಪ್ಪಾ—"

" ಅದು ಹೋಗಲಿ ಭಾವಯ್ಯ, ಅವರೇನೋ ನಾಳೆ 'ಮಾತುಕತೆ' ಅಂದರಲ್ಲ? "

" ಹೌದು ಮತ್ತೆ. ನಿನ್ನದೆಲ್ಲ ಏನೇನು ಯೋಚನೆ ಅದನ್ನೆಲ್ಲ ಮೊದಲಿಗೇ ಹೇಳಿಬಿಟ್ಟೆರು "

" ನನ್ನದೇನು ಯೋಚನೆ? ಮುಖ್ಯವಾದುದನ್ನು ಹೇಳಿಬಿಟ್ಟಿದ್ದೇನೆ "

" ಅದಾಯಿತೊ! ವರದಕ್ಷಿಣೆ ಉಪಚಾರ ಯಾವುದೂ ಇಲ್ಲವೆ? "

" ವರದಕ್ಷಿಣೆ ತೆಗೆದುಕೊಳ್ಳುವುದೆ? "

" ನಿನಗೇನು ಹುಚ್ಚೊ? ಜಹಗೀರದಾರರು ತಾವಾಗಿಯೇ ಮುಂದೆ ಬಂದಿದ್ದಾರೆ? "

" ಅದಕ್ಕೆಂದು ಇಷ್ಟು ಅಷ್ಟು ಎಂದು ಕರಾರು ಹಾಕುವುದೆ? "

" ಇಲ್ಲದಿದ್ದರೆ ಏನೂ ಇಲ್ಲದೆ ಮಾಡಿಕೊಳ್ಳುವುದೆ? "

" ಏನೂ ಇಲ್ಲ ಯಾಕೆ? ಮಗಳನ್ನೇ ಕೊಡುತ್ತಿದ್ದಾರೆ! "

" ಮಗಳನ್ನು ಬಿಟ್ಟು ವರದಕ್ಷಿಣೆ ತೆಗೆದುಕೊ ಎಂದು ಹೇಳುತ್ತಿದ್ದೇನೆಯೆ ನಾನು? "

" ಏನಾದರೂ ವರದಕ್ಷಿಣೆ ಬೇಡ ಭಾವಯ್ಯ. ನನಗಂತೂ ತುಂಬಾ ನಾಚಿಕೆಯಾಗುತ್ತದೆ. ನಮ್ಮ ಬೆಲೆ ನಾವೇ ಕಟ್ಟಿಕೊಂಡಹಾಗೆ—"

" ಹಾಗಿದ್ದರೆ ಅವರು ಏನೂ ಕೊಡುವುದೆ ಬೇಡವೆ? "

" ಕೊಡುವುದೆ ಇದ್ದರೆ ಮನೆ ಬಿಟ್ಟು ಹೋಗುವ ಮಗಳಿಗೆ ಪ್ರೀತಿಯಿಂದ ತಮಗೆ ತೋಚಿದ್ದನ್ನು ಕೊಡಲಿ. ನಾವು ಬೇಡುವುದು ಎಂಥ ಮಾತು? "

" ಅಂತೂ ನಿನಗೆ ವರದಕ್ಷಿಣೆ ಎಂಬ ಮಾತು ಬೇಡ ಎಂದ ಹಾಗಾಯಿತು!"

" ಅದು ಹೇಗೆ? ಮಗಳಿಗೆ ಅವರು ಏನೂ ಕೊಡದಿದ್ದರೆ ಯಾಕೆ ಕೊಡಲಿಲ್ಲ ಎಂದು ಕೇಳಿದರಲ್ಲವೆ ಈ ಮಾತು? ನಾನು ಕೇಳುವುದಿಲ್ಲ. ಒಂದು

ಮಾತನ್ನು ಮಾತ್ರ ಕೇಳುತ್ತೇನೆ ಮದುವೆಯ ಬಾಬತ್ತಿನಲ್ಲಿ ನನಗೆ ಯಾವ ತೊಂದರೆ, ಖರ್ಚೂ ಆಗಬಾರದು ನಾನು ಸುಮ್ಮನೆ ಈಗ ಬಂದಹಾಗೆ ಕೈಬೀಸಿಕೊಂಡು ಬರುವವ ಇಲ್ಲಿ ಕುಳಿತಿರು ಅಂದರೆ ಇಲ್ಲಿ, ಅಲ್ಲಿ ಎಂದರೆ ಅಲ್ಲಿ ಇಷ್ಟೇ ನನ್ನ ಕೆಲಸ!"

"ಹೌದೆ? ಇಷ್ಟಕ್ಕೆ ಬಂದುಬಿಟ್ಟಿಯೊ ಈಗಲೆ?" ಎಂದು ಮೋಹನ ರಾಯರು ಗೇಲಿಮಾಡಿದ್ದರು

"ಮದುವೆ ಅಂದರೆ ಮತ್ತಿನ್ನೇನು? ನೀವೇನೂ ನನಗೆ ಬಹಳ ದೂರದವ ರಲ್ಲವಲ್ಲ!" ಎಂದು ವಸಂತನೂ ಮಾತಿಗೊಂದು ಮಾತು ಹೇಳಿ ನಕ್ಕುಬಿಟ್ಟ ಮೋಹನರಾಯರು ಹೇಳಿದರು

"ಅದಿರಲಿ ನಾನು ಒಂದು ಮಾತು ಹೇಳುತ್ತೇನೆ ಕೇಳು ನಿನಗೆ ವರದಕ್ಷಿಣೆ ಬೇಡವಾಗಿದ್ದರೆ ಬಿಡು ಆದರೆ ಬರಬೇಕಾದದ್ದು ಒಂದಿಲ್ಲೊಂದು ರೂಪದಲ್ಲಿ ಬರಲಿ ಸುಮ್ಮನೆ ಬಿಟ್ಟರೆ ಯಾರಿಗೆ ಹೋಯಿತು? ಮದುವೆಯಾಗಿ ಹೋದಮೇಲೆ ಮಗಳಿಗಾದರೂ ಕೈಯೆತ್ತಿ ಕೊಡುವುದು ಯಾರಿಗಾಗುತ್ತದೆ? ಆ ಮಾತುಗಳನ್ನೆಲ್ಲ ನನಗೆ ಬಿಟ್ಟುಬಿಡು ಎಲ್ಲವನ್ನೂ ವ್ಯವಸ್ಥಿತವಾಗಿ ಮಾಡಿ ಕೊಡುತ್ತೇನೆ ದುಡ್ಡಿದ್ದವರು, ಉತ್ಸಾಹದಿಂದ ಮಾಡಬೇಕೆನ್ನುವವರು— ನಾವಾಗಿಯೇ ಯಾಕೆ ಅವರ ಕೈಯನ್ನು ಕಟ್ಟಬೇಕು?"

ಹೀಗಾಗಿ ಮರುದಿನ ಮಧ್ಯಾಹ್ನ ಸಂಭ್ರಮದ ಸ್ವಾಗತ, ಊಟ, ಉಪ ಚಾರ ಎಲ್ಲವೂ ಮುಗಿದಮೇಲೆ ಮಾತುಕತೆ ಪ್ರಾರಂಭವಾಗಬೇಕಿತ್ತು. ಆದರೆ ಮೋಹನರಾಯರು "ಅದೆಲ್ಲ ಏನು ದೊಡ್ಡ ವಿಷಯ? ನಾನಿದ್ದೇ ಇರುತ್ತೇನೆ. ಆಮೇಲೆ ಮಾತನಾಡೋಣ!" ಎಂದು ಮಾತನ್ನು ಮುಂದೆ ಹಾಕಿದರು ಜನಾರ್ದನರಾಯರ ಧಾರಾಳವಾದ ಮನಸ್ಸನ್ನು ಬಲ್ಲ ಮೋಹನರಾಯರಿಗೆ ತಮ್ಮ ಬೇಡಿಕೆಗಳನ್ನು ಸಹಜವಾಗಿಯೆ ಪೂರೈಸಿಕೊಳ್ಳಬಹುದೆಂಬ ಭರವಸೆ ಇದ್ದಿತಾದ್ದರಿಂದಲೆ ಈ ಮಾತನ್ನು ಹೇಳಿದ್ದರು. ಆದರೆ ಆ ಒಂದು ಮಾತಿ ನಿಂದ ಜನಾರ್ದನರಾಯರ ಮನಸ್ಸಿನಲ್ಲಿಯಲ್ಲದೆ ಅವರ ಬಳಗದವರಲ್ಲಿ ಮೋಹನ ರಾಯರ ತೂಕ ವರ್ಚಸ್ಸು ಮಾತ್ರ ವಿಪರೀತವಾಗಿ ಏರಿಬಿಟ್ಟಿತು ಆದರೂ ಚಾಣಾಕ್ಷರಾದ ಜನಾರ್ದನರಾಯರು ಹತ್ತು ಜನ ಕೂಡಿದ ಸಂದರ್ಭವನ್ನು 'ಮದುವೆ ನಿಶ್ಚಯ'ವಾಯಿತು ಎಂಬ ಮಾತನ್ನು ಬಾಹಿರ ಪಡಿಸುವ

ರೀತಿಯಲ್ಲಿ ಉಪಯೋಗಿಸಿಕೊಂಡರು ಒಂದೆರಡು ದಿನಗಳಲ್ಲಿ ಬಂಧುಬಳಗದ ವರೆಗೆ ಕಾಗದಗಳನ್ನು ಬರೆದು ಎಲ್ಲರಿಗೂ ತಿಳಿಸಿ ವಸಂತನ ಒಪ್ಪಿಗೆಗೆ ಒಂದು ಸ್ಥಿರಸ್ವರೂಪ ಕೊಟ್ಟರು

ಮುಂದಿನ ನೂರು ಮೂರೂವರೆ ವಾರಗಳು ವಸಂತನ ಪಾಲಿಗೆ ಸುಖದ ಉತ್ಸಾಹದ ದಿನಗಳಾದವು. ಒಂದು ಕಡೆ ಅಪರೂಪಕ್ಕಾಗಿ ಬಂದ ತಮ್ಮನಾಗಿ ಅಕ್ಕನ ಅಕ್ಕರೆಯನ್ನು ಅನುಭವಿಸಿದ ಇನ್ನೊಂದು ಕಡೆ ಅಳಿಯದೇವರಾಗಿ ಆತಿಥ್ಯ ಉಪಚಾರಗಳನ್ನು ಪಡೆದ ಇನೆರಡನ್ನು ಮರೆಯಿಸುವಂತೆ ಬರುಬರುತ್ತ ಶಕುಂತಲೆಯ ಪರಿಚಯವೂ ಬೆಳೆದು ಆಕೆಯಿಂದ ಮನಸ್ಸೂ ಸೂರೆಗೊಳ್ಳು ವಂತಾಯಿತು ಇದಕ್ಕೆ ಮುಖ್ಯ ಕಾರಣವೆಂದರೆ ಅಕ್ಕನ ಉತ್ಸಾಹ ಉತ್ತೇಜನ ಗಳು ಅಕ್ಕನ ಮನೆಯಲ್ಲಿ ಶಕುಂತಲೆಯ ಓಡಾಟ ಹೆಚ್ಚಾಯಿತು "ಈಗ ನೋಡು, ಹೇಗೆ ಕರೆಯದೆ ತಾನಾಗಿಯೆ ಬರುತ್ತಾಳೆ! ಈ ಮೊದಲು ಎಂದಾದರೂ ಹೀಗೆ ಬರುತ್ತಿದ್ದೆಯಾ?" ಎಂದು ಶಕುಂತಲೆಯನ್ನು ಕೇಳಿಯೂ ಆಗಿತ್ತು. ಅಡ್ಡಾಟ ತಿರುಗಾಟಗಳಾದವು ಮಾತುಕತೆಗಳಾದವು ಸಿನೀಮಾ ಆಯಿತು ಕಾವ್ಯಗಾಯನವಾಯಿತು ಒಟ್ಟಿನಲ್ಲಿ ಇಬ್ಬರಿಗೂ ತಮ್ಮ ತಮ್ಮ ಬೇಕು ಬೇಡ ಗಳನ್ನು ತಿಳಿಯಲು ಒಳ್ಳೆಯ ಸಂದರ್ಭವಾಯಿತು ಕಮಲಕ್ಕ ಸಮಯ ಸಿಕ್ಕಾಗಲೆಲ್ಲ ವಸಂತ ಶಕುಂತಲೆಯರನ್ನು ಪೀಡಿಸುತ್ತಲೆ ಇದ್ದರೂ ಒಳಗೊಳಗೆ ಅವರಿಬ್ಬರಂತೆ ಸಂತೋಷಿಸುತ್ತಲೇ ಇದ್ದಳು "ಯಾಕಪ್ಪಾ? ಹೇಗಿದೆ ರಾಯಚೂರು? ರಜೆ ಬೆಳೆಯಿಸುವುದು ಬೇಡ ಅನ್ನುತ್ತಿದ್ದೆ ಮತ್ತೆ ಬೆಳೆಯಿಸುವ ಹಾಗಿದ್ದರೆ ಹೇಳು!" ಎಂದು ಭಾವಯ್ಯನೂ ನಗೆಯಾಡಿದ್ದರು

ಊರಿಗೆ ಹೊರಡುವುದು ಒಂದೆರಡು ದಿನವಿದ್ದಾಗ ವಸಂತ ಕೇಳಿದ್ದ :

"ಒಂದು ಮಾತು ಕೇಳಿದರೆ ನೀನು ನಗುತ್ತೀ, ನನಗೆ ಗೊತ್ತು ಭಾವಯ್ಯ. ಆದರೆ ಕೇಳಲೇಬೇಕಾಗಿದೆ—ಇಷ್ಟೆಲ್ಲ ಮಾತಾಯಿತು, ಕತೆಯಾಯಿತು, ಮದುವೆ ಯಾವಾಗ ಎಂಬುದೇ ತಿಳಿಯಲಿಲ್ಲವಲ್ಲ!"

"ನೋಡಿದೆಯಾ? ಏನೇ? ಇದು ನೋಡು ಏನು ಕೇಳುತ್ತಿದ್ದಾನೆ— ಮದುವೆ ಯಾವಾಗ ಅಂತೆ?"

**ಅಕ್ಕನಿಗೆ ಮತ್ತೆ ಚೇಷ್ಟೆಗೊಂದು ಸಂದರ್ಭ ಸಿಕ್ಕಂತಾಯಿತು. ಆಕೆ ಹೇಳಿದಳು :**

" ಗಂಟೆಗಟ್ಟಲೆ ಆಕೆಯ ಕೂಡ—ಈ ಮೂರು ದಿನವಂತೂ—ಹರಟೆ ಹೊಡೆದೆ. ಅಷ್ಟು ಕೇಳಿರಲಿಕ್ಕಿಲ್ಲವೆ ಆಕೆಯನ್ನು ? "

" ಕೇಳಿರಲೇ ಬೇಕು ಅನ್ನು ! "

" ಕೇಳದೆ ಇರುತ್ತೀಯಾ—ನಮ್ಮನ್ನು ಕೇಳುತ್ತೀ ಎಂದಮೇಲೆ ? "

" ಕೇಳಿದೆ. ಇನ್ನೂ ಎರಡು ಮೂರು ತಿಂಗಳಾದರೂ ಇಲ್ಲ ಎಂದಳು ! "

" ಇನ್ನು ಮೂರು ತಿಂಗಳು ಸಾಧ್ಯವೇ ಇಲ್ಲ—ಚಾತುರ್ಮಾಸ ಪುಷ್ಯ ಮುಗಿಯಬೇಕು."

" ಈ ಪುಷ್ಯಗಿಷ್ಯ ಲೆಕ್ಕ ನನಗೆ ತಿಳಿಯುವುದಿಲ್ಲ ಸುಮಾರು ಇನ್ನೂ ಎಷ್ಟು ತಿಂಗಳು ಹೇಳಿಬಿಡು "

" ನೋಡಿದೆಯಾ ? ಬೇಡ ಎಂದು ಬಂದವ ಒಂದು ತಿಂಗಳಲ್ಲಿ ಹೇಗೆ ಬದಲಾಯಿಸಿಬಿಟ್ಟ ! ಮೊದಲು ಬೇಡ ಎಂದ ಮಾತಿಗಾಗಿಯಾದರೂ ಇಷ್ಟು ಆತುರ ತೋರಬಾರದಪ್ಪಾ ! " ಎಂದರು ಮೋಹನರಾಯರು

" ಮಾಡಿಕೊಳ್ಳುವುದು ಎಂದಮೇಲೆ ಆತುರ ಏನು ಬಂತು ? "

" ಅಲ್ಲವೆ ? "

" ಹೌದು ಮತ್ತೆ ! ಎಲೆ ಬಡಿಸಿಟ್ಟು ಊಟ ಮಾಡಬೇಡ ಎಂದು ಹೇಳಿದ ಹಾಗೆ—ಇದೆಲ್ಲ ! "

" ನೋಡಿದೆಯಾ ? ಹೇಗೆ ತಯಾರಾಗಿದ್ದಾನೆ ! "

" ಏನಿದ್ದರೂ ಡಿಸೆಂಬರ್ ವರೆಗೆ ಹೀಗೇ ನೀನು ಕಣ್ಣುಬಿಡುತ್ತಾನೇ ಇರಬೇಕು. ಬೇರೆ ಉಪಾಯವೇ ಇಲ್ಲ. ಅದಕ್ಕೇ ನಾನು ನಿನ್ನೆ ಹೇಳಿದ್ದು. ದೀಪಾವಳಿಗೆ ಬಂದುಬಿಡು, ಮದುವೆಯ ಮೊದಲೇ 'ಅಳಿಯತನವು' ಆಗಿ ಬಿಡುತ್ತದೆ ! "

" ಸರಿ, ಸರಿ. ನಿಮ್ಮ ಮಾತನ್ನು ಕೇಳಿದರೆ ನಾನು ಇಲ್ಲಿಂದ ಹೊರಡಲೇ ಬಾರದಾಯಿತು."

" ನೋಡೋಣ, ಹೊರಡಲಿಕ್ಕೆ ಹೇಗೆ ಕಾಲು ಕೀಳುತ್ತದೆ ಎಂಬುದನ್ನ ! "

ನಿಜವಾಗಿಯೂ ಕೊನೆಯ ಮಾತು ಊರಿಗೆ ಹೊರಡುವಾಗ ವಸಂತನ ಅನುಭವಕ್ಕೆ ಬಂದಿತ್ತು. ನಿರುಪಾಯನಾಗಿ ಹೊರಟಂತಿತ್ತು. ನಿಲ್ದಾಣಕ್ಕೆ ಎಲ್ಲರೂ ಬಂದಿದ್ದರು—ಜನಾರ್ದನರಾಯರ ಕಾರಿನಲ್ಲಿ. ವಸಂತ ಎಲ್ಲರ

ಜೊತೆಯಲ್ಲಿಯೂ ಮಾತನಾಡುತ್ತಿದ್ದ ಆದರೆ ಮನಸ್ಸು ಹತ್ತಿರದಲ್ಲಿ ಇದ್ದ ಶಕುಂತಲೆಯಲ್ಲಿ ನೆಟ್ಟಿತ್ತು. ಗಾಡಿ ಹೊರಡುವಾಗ ಕಣ್ಣಿನೋಟದಿಂದ ಆಕೆಯನ್ನು ಬೀಳ್ಕೊಟ್ಟ ಹೊರಡುವುದು ಬೇಡವೆನ್ನುವ ವಸಂತನ ಮನಸ್ಸಿನಂತೆ ರೈಲು ನಿಧಾನವಾಗಿ ನಿಲ್ದಾಣದಿಂದ ಹೊರಟಿತು. ಬೀಳ್ಕೊಡಲು ಬಂದವರೆಲ್ಲರೂ ಕಣ್ಮರೆಯಾಗುವ ವರೆಗೆ ವಸಂತ ಬಾಗಿಲಲ್ಲಿಯೆ ನಿಂತಿದ್ದ

೬

ಮನಸ್ಸಿನ ಇಂಥ ಹಿನ್ನೆಲೆಯಲ್ಲಿ ಹನ್ನೊಂದನೆಯ ದಿನಾಂಕ ಮಧ್ಯಾಹ್ನ ವಸಂತ ಕೆಲಸಕ್ಕೆ ಮತ್ತೆ ಹಾಜರಾಗಲು ಅಫೀಸಿಗೆ ಹೋದರೆ ತನ್ನ ಮೇಜಿನ ಮೇಲೆ ಮೊದಲು ಆತನ ಕಣ್ಣು ನೆಳೆದದ್ದೆಂದರೆ ತನಗಾಗಿ ಕಾಯುತ್ತಿದ್ದ ಮೋಹಿನಿಯ ಕಾಗದ! ಕಾಗದ ಬಂದು ಆಗಲೆ ಮೂರು ನಾಲ್ಕು ದಿನವಾಗಿತ್ತು. ಐದು ವಾರಗಳಿಂದ ಕೆಲಸ ಮಾಡುವ ಅಭ್ಯಾಸವೂ ತಪ್ಪಿಹೋಗಿತ್ತು ಅಲ್ಲದೆ, ಈ ಕಾಗದದ ಯೋಚನೆ ಹೀಗಾಗಿ ಸಂಜೆಯ ವರೆಗೆ ತೀರ ಬೇಸರವೆನಿಸಿತು. ಒತ್ತಡಕ್ಕಾಗಿ ಇದ್ದಬಿದ್ದ ಕೆಲಸಗಳನ್ನು ಬಂದ ಹಾಗೆ ಮುಂದೆ ತಳ್ಳುತ್ತಿದ್ದ ಆದರೆ ಮನಸ್ಸೆಲ್ಲವೂ ಒಂದೇ ಪ್ರಶ್ನೆಯು ಸುತ್ತು ಸುಳಿದಾಡುತ್ತಿತ್ತು ಮೋಹಿನಿ ಕಾಯುತ್ತಿದ್ದಾಳೆ ಆಕೆಯನ್ನು ಕಾಣಬೇಕೆ, ಬಾರದೆ? ಕಾಣುವುದು ಸರಿಯೆ? ಕಂಡರೂ ಅದರಿಂದ ಪ್ರಯೋಜನವೇನು? ಕಾಣದಿದ್ದರೆ ಆಕೆಗೆ ಎಷ್ಟು ನಿರಾಶೆಯಾಗಬಹುದು? ಈಗಾಗಲೆ ಎಷ್ಟು ಆತುರದಿಂದ ಕಾದಿರಬಹುದು? ಆದರೆ ಅದನ್ನೆಲ್ಲ ತಾನು ಕೊನೆಯವರೆಗೂ ಯೋಚಿಸುತ್ತಿರುವದು ಸಾಧ್ಯವೆ? ಶಕುಂತಲೆ! ಕಳೆದ ಹದಿನೈದು ದಿನಗಳಲ್ಲಿ ಆಕೆಯ ಸುಖ ಸಹವಾಸದಲ್ಲಿ ಆಗೀಗ ಕಳೆದ ಕ್ಷಣಗಳ ಚಿತ್ರ ಕಣ್ಣು ಮುಂದೆ ನಿಂತವು ಆದರೆ ಆ ಮುಖ ಮೋಹಿನಿಯ ಮುಖವನ್ನೇ ನೆನಹಿನೆದುರು ಹಿಡಿಯುತ್ತಿತ್ತು ಮನಸ್ಸು ಹತ್ತಾರು ಬಾರಿ ಹೊಯ್ದಾಡಿತು. ಒಮ್ಮೆ ಹೋಗಿ ನೋಡಿಕೊಂಡು ಬಂದರೆ ಏನಾಗಬೇಕು? ಅದೇನು ಅಪರಾಧ? ಆಕೆಗೆ ಏನಾದರೂ ಸಹಾಯ ಬೇಕಾಗಿದ್ದರೆ? ಹೀಗೆಲ್ಲ ವಿಚಾರಗಳಿಗೊಳಗಾಗಿ ಹೋಗಬೇಕೊ ಬಾರದೊ ಎಂಬುದನ್ನು ನಿರ್ಣಯಿಸಲಿಕ್ಕಾಗದೆ ಮೂರು ದಿನ ಸರಿದವು ಅದಕ್ಕೆ ತಕ್ಕಂತೆ ಆಫೀಸಿನಲ್ಲಿ ಕೆಲಸವೂ ವಿಪರೀತ ಉಳಿದಿದ್ದಿತಾದ್ದರಿಂದ ಹೋಗುವ ಯೋಚನೆ ಬಲಗೊಳ್ಳಲಿಕ್ಕೆ ಅವಕಾಶವೂ ಇರಲಿಲ್ಲ ಆದರೆ ಕೊನೆಯಲ್ಲಿ ಕೇಳಿಕೊಂಡ· 'ಆಕೆಗೆ ನನ್ನ ವಿಳಾಸ ಗೊತ್ತಿದೆ ಆಫೀಸೂ ಗೊತ್ತಿದೆ. ತಾನಾಗಿಯೆ ಬಂದುಬಿಟ್ಟರೆ? ಅದು ಹೆಚ್ಚಿನ ಬಿಕ್ಕಟ್ಟು' ಎಂದುಕೊಂಡು, ಒಂದು ಸಲ ನೋಡಿಕೊಂಡು ಬರುವುದೆಂದು ನಿಶ್ಚಯಿಸಿ ಮರುದಿನ ಹೇಗಿದ್ದರೂ ಸ್ವಾತಂತ್ರ್ಯೋತ್ಸವದ ನಿಮಿತ್ತವಾಗಿ ರಜೆಯಿದ್ದುದರಿಂದ ಸಾಯಂಕಾಲದ ಸುಮಾರಿಗೆ ಹೋಗಿಬಿಟ್ಟ

ರಾಯಿತು , ದಾದರಿನಲ್ಲಿಯು ಗೆಳೆಯನನ್ನು ನೋಡಿದ ಹಾಗೂ ಆಯಿತು ಎಂದು ಹಾಗೆ ನಿರ್ಧರಿಸಿದ

ಸ್ಟುಡಿಯೋದಿಂದ ಬಂದಾಗಿನ ಗೆಲುವು ಮರುದಿನಕ್ಕೆ ಮೋಹಿನಿಯಲ್ಲಿ ಪೂರ್ತಿ ಮಾಯವಾಗಿತ್ತು ಏನಾದರೂ ಮರುದಿನ ಸಾಯಂಕಾಲ ವಸಂತ ಬಂದೇ ಬರುವನೆಂದು ಕಾದು ಕಾದು ತೀರ ನಿರಾಶೆಯೆನಿಸಿತು ಮುಂದೆ ಎರಡು ದಿನವಾದರೂ ವಸಂತನ ಸುಳಿವೇ ಇಲ್ಲ ಮೋಹಿನಿ ತೀರ ಹತಾಶಳಾದಳು. ಮರುದಿನ ತಾನಾಗಿಯೇ ಆತನನ್ನು ಕಾಣಬೇಕೆಂದರೆ ರಜೆ ಶಾಲೆಯಲ್ಲಿ ಮುಂಜಾನೆ ಏನೇನೋ ಕಾರ್ಯಕ್ರಮ ಸಾಯಂಕಾಲ ಯಾರದೊ ಪ್ರತಿಷ್ಠಿತರ ಭಾಷಣವೂ ಇದ್ದಿತು, ತಪ್ಪಿಸುವಂತಿರಲಿಲ್ಲ ಹೀಗಾಗಿ ನಿರಾಶಳಾಗಿ ಕಾದು ಬೇಸರಪಡುವಹೊರತು ಬೇರೆ ಏನನ್ನೂ ಮಾಡಲು ಸಾಧ್ಯವಿರಲಿಲ್ಲ ಒಂದೊಂದು ಸಲ ಕೇಳಿಕೊಳ್ಳುತ್ತಿದ್ದಳು 'ಯಾಕೆ ಈ ನಿರಾಶೆ? ಈ ವಸಂತ ಯಾರು? ಅವನಿಂದಾದರೂ ಏನಾಗಬೇಕಾಗಿದೆ? ಆತನನ್ನು ನೆಚ್ಚಿಕೊಂಡು ನಾನು ಇಲ್ಲಿಯ ವರೆಗೆ ಬಂದು ಕೆಲಸವನ್ನು ಹಿಡಿದಿರಲಿಲ್ಲವಲ್ಲ! ನಾನು ಯಾರನ್ನೂ ನೆಚ್ಚಿ ನಂಬಿ ನಿಂತಿರಬೇಕಾಗಿಲ್ಲವೆಂದಲ್ಲವೆ ಈ ಎಲ್ಲ ಹಟ? ಅಂದಮೇಲೆ ಯಾಕೆ?' ಆದರೆ ಇದೆಲ್ಲ ಬುದ್ಧಿಯ ಸಮಾಧಾನ, ತಲೆಯಲ್ಲಿ ಮೂಡಿದ ವಿಚಾರ ಹೊರಬಿದ್ದಾಗ ಹೊರಬಿದ್ದೇ ಹೋಗುತ್ತಿದ್ದವು ಹೃದಯದ ಸಮೀಪಕ್ಕೆ ಸುಳಿಯುತ್ತಿರಲಿಲ್ಲ. ಆಕೆಗೆ ತಿಳಿಯದಲೆ ಬಲಿಯುತ್ತಿದ್ದ ಒಂದು ಕಾಲದ ಒಲವು ಆಕೆಯನ್ನು ಇಂಥ ನಿರಾಶೆಯ ಕಡೆಗೆ ತಳ್ಳುತ್ತಿತ್ತು. ಆತನನ್ನು ಕಾಣುವುದರಲ್ಲಿಯೇ ಒಂದು ಸಮಾಧಾನವನ್ನು ಅಪೇಕ್ಷಿಸುತ್ತಿತ್ತು

ದೇಶಕ್ಕೆ ಸ್ವಾತಂತ್ರ್ಯ ಬಂದ ದಿನ ಅದು. ಆದರೆ ಮೋಹಿನಿಯ ಮನಸ್ಸು ಗೆಲುವಾಗಿರಲಿಲ್ಲ ದೇಶದಾದ್ಯಂತವೂ ದಾಸ್ಯವಿಮೋಚನೆಯನ್ನು ದಿಗ್ದಿಗಂತಗಳಲ್ಲಿ ಸಾರಿ ತೂರಿ ಹೇಳುವಂತೆ ಕೊಂಬು ಕಹಳೆ ಜಯಘೋಷಗಳು ಮುಗಿಲಿಗೇರುತ್ತಿದ್ದವು ಮೋಹಿನಿಯ ಮನಸ್ಸು ಮಾತ್ರ ಅದೇಕೊ ನೆಲಕ್ಕೆ ಕುಸಿಯುವುದರಲ್ಲಿತ್ತು ಜನರಲ್ಲಿ ಎಲ್ಲಿಲ್ಲದ ಉತ್ಸಾಹ ತುಳುಕುತ್ತಿತ್ತು ಆ ಉತ್ಸಾಹ ತನಗೆ ಅದೇಕೆ ಅನಿಸುತ್ತಿರಬಾರದು? ಸ್ವಾತಂತ್ರ್ಯ ದೇಶಕ್ಕೆ ಬಂದಿತು ಎಂಬ ಮಾತಿನ ಅರ್ಥ ತಿಳಿದೊ, ತಿಳಿಯದೆಯೊ ಅಥವಾ ತಿಳಿಯದಿದ್ದರೂ ಕೂಡ ಮಕ್ಕಳು ಮುದುಕರು ಎಲ್ಲರೂ ಎಲ್ಲಿಲ್ಲದ ಸಂತೋಷವನ್ನು ಸಾವಿರ ಬಗೆಯಲ್ಲಿ ವ್ಯಕ್ತ

ಮಾಡುತ್ತಿದ್ದರು. ತಾನೇಕೆ ಹೀಗೆ? ದೇಶಕ್ಕೆ ಸ್ವಾತಂತ್ರ್ಯ ಸಿಕ್ಕುವ ಮೊದಲೇ ತನಗೆ ಸ್ವಾತಂತ್ರ್ಯ ಸಿಕ್ಕಿದೆ ಆನಂದನಿಗೆ ಕೊನೆಯ ಮಾತನ್ನು ಹೇಳಿದಂದಿನಿಂದಂತೂ ತನ್ನನ್ನು ಕೇಳುವವರೇ ಇಲ್ಲ! ಸರ್ವತಂತ್ರಸ್ವತಂತ್ರ ತಾನು! ಹಟಗೆದ್ದಿದೆ, ಆದರೂ ಗೆಲುವಿಲ್ಲ. ಯಾಕೆ? ಬಂದ ಸ್ವಾತಂತ್ರ್ಯವನ್ನು ಸರಿಯಾಗಿ ಉಪಯೋಗಿಸುವ ಧೈರ್ಯ, ಯೋಗ್ಯತೆ ಇಲ್ಲವೆಂದೆ? ಸ್ವಾತಂತ್ರ್ಯದ ಮುಂಬರವಿನಲ್ಲಿ ಮುನ್ನಾದಿನ ರಾತ್ರಿ ಊರ ತುಂಬ ದೀಪಗಳು ಉರಿದು ಊರನ್ನು ಅಮರಾವತಿಯಾಗಿ ಮಾಡಿದ್ದವು ತನ್ನ ಸ್ವಾತಂತ್ರ್ಯದ ಮುಂಬರವಿನಲ್ಲಿ ಅಂಥ ಸಾವಿರ ದೀಪಗಳು ತನ್ನ ಅಂತರಂಗದಲ್ಲಿಯೂ ಬೆಳಗಿ ನಾಳೆ ಎಂಬ ಮಾತು ಸಾವಿರ ಆಸೆಗಳಿಗೆ ಸಂಕೇತವಾಗಿದ್ದಿತು. ಆದರೆ ಬಂದ ಸ್ವಾತಂತ್ರ್ಯವನ್ನು ನಮ್ಮ ಜನ ಎಷ್ಟು ಮಟ್ಟಿಗೆ ಸರಿಯಾಗಿ ಅರ್ಥಮಾಡಿಕೊಳ್ಳಬಹುದು—ಮಾಡಿಕೊಳ್ಳಬಹುದೆ? ಎಂಬ ಸಂಶಯ ದೂರದರ್ಶಿಗಳ ಹೃದಯವನ್ನು ಕೊರೆದಿತ್ತು ಸಾವಿರ ಬೆಳಕು ಬಿನ್ನಾಣಗಳ ಹಿಂದೆ ಅರೆಭರವಸೆಯೊಂದು ಹುದುಗಿಕೊಂಡ ಹಾಗಿತ್ತು ತನ್ನ ಜೀವನದಲ್ಲಿಯೂ ಅಂಥದೇ ಒಂದು ಬಗೆಯ ಅರೆಭರವಸೆ ಅದೇಕೊ, ಹೇಳಬಹುದಾದ ಕಾರಣಗಳನ್ನು ಮೀರಿ, ಮರೆಯಿಸಿ, ಮೋಹಿನಿಯ ಹೃದಯವನ್ನು ಕಾಡುತ್ತಿತ್ತು. ವಸಂತನನ್ನು ಕಾಣದೆ, ಆತನೆದುರು ತನ್ನ ಎದೆಯ ನೋವನ್ನು ತೋಡಿಕೊಳ್ಳದೆ ಮನಸ್ಸಿನ ಈ ವಿಹ್ವಲತೆ ಕಳೆಯದು ಎಂದೇ ತೋರಿತು. ಕೈಹಿಡಿದು ದೇಶವನ್ನು ಮುಂದೆ ನಡೆಯಿಸಿ ಸ್ವಾತಂತ್ರ್ಯವನ್ನು ದೇಶೋದ್ಧಾರಕ್ಕಾಗಿ, ಪ್ರಗತಿಗಾಗಿ ಉಪಯೋಗಿಸುವಂತೆ ಮಾಡುವ ವ್ಯಕ್ತಿ ದೇಶಕ್ಕೆ ಬೇಕಾಗಿದ್ದಂತೆ ತನ್ನ ಸ್ವಾತಂತ್ರ್ಯದ ಸಮಸ್ಯೆಯನ್ನು ಬಗೆಹರಿಸಲಿಕ್ಕೆ ಮೋಹಿನಿಗೆ ಕೈಹಿಡಿದು ನಡೆಯಿಸುವವರು ಬೇಕಾಗಿದ್ದರೆ? ಯಾರಿಗೆ ಗೊತ್ತು? ಮೋಹಿನಿಗೆ ಈ ಯೋಚನೆ ಕೊನೆಗೂ ಬಗೆಹರಿಯಲಿಲ್ಲ. ಏನಿದ್ದರೂ ವಸಂತನನ್ನು ಕಾಣದ ಹೊರತು ಮನಸ್ಸಿಗೆ ಸಮಾಧಾನವಿಲ್ಲ ಆದರೆ ಎರಡು ದಿನದ ರಜೆ ಕಳೆಯುವವರೆಗಾದರೂ ದಾರಿ ಕಾಯುವುದರ ಹೊರತು ಏನು ಮಾಡುವುದಕ್ಕಿತ್ತು?

ಅಂದು ಮಧ್ಯಾಹ್ನ ಮೂರು ಗಂಟೆಗೆ ಮೆಜೆಸ್ಟಿಕ್‌ನಲ್ಲಿ 'ಉದ್ಧಾರ'ದ ಉದ್ಘಾಟನ ಸಮಾರಂಭ ನಡೆಯಲಿತ್ತು. ತಾನು ಬರಲೇಬೇಕೆಂದು ಆ ದಿನ ರಂಗನಾಥನ್ ಹೇಳಿದ್ದನಲ್ಲದೆ ಮುನ್ನಾದಿನ ಅನುರಾಧೆಯ ಮುಖಾಂತರ ಆಗ್ರಹಪೂರ್ವಕವಾಗಿ ಮತ್ತೆ ಹೇಳಿಕಳಿಸಿದ್ದ. ಆದರೆ ಹೋಗುವುದು ಸಾಧ್ಯ

ವಿರಲಿಲ್ಲ. ಐದೂವರೆಗೆ ಶಾಲೆಯಲ್ಲಿ ಮತ್ತೆ ಏನೇನೋ ಕಾರ್ಯಕ್ರಮಗಳು. ಮುಖ್ಯವಾಗಿ ಸರಕಾರದ ಉಪಮಂತ್ರಿಯೊಬ್ಬರು ಆ ಸಂದರ್ಭದಲ್ಲಿ ಭಾಷಣ ಮಾಡುವವರಿದ್ದರು. ಎಲ್ಲರೂ ಸರಿಯಾಗಿ ವೇಳೆಗೆ ಮುಂಚಿತವಾಗಿ ಬಂದಿರ ಬೇಕೆಂದು ಮುಖ್ಯಾಧ್ಯಾಪಿಕೆಯ ಕಟ್ಟಪ್ಪಣೆಯಾಗಿತ್ತು. ಒಂದು ಮನಸ್ಸು ವಸಂತ ನನ್ನು ಅರಸುತ್ತಿತ್ತಾದರೆ, ಆತ ಸಿಕ್ಕಲಿಲ್ಲವೆಂಬ ನಿರಾಶೆಯನ್ನು ಮೆಜೆಸ್ಟಿಕ್‌ಗೆ ಹೋಗಿ ಅಲ್ಲಿಯ ಸಂಭ್ರಮದಲ್ಲಿ ಮರೆಯಬಹುದು ಎಂದು ಇನ್ನೊಂದು ಮನಸ್ಸು ಹೇಳುತ್ತಿತ್ತು ಆ ಕ್ಷಣಕ್ಕೆ ಮೋಹಿನಿಗೆಸಿತು ಈ ಪ್ರಪಂಚ ವಿಶಾಲವಾಗಿದೆ ಎನ್ನುವ ಮಾತು ಸುಳ್ಳು ಜಗತ್ತು ಸಾವಿರಾರು ಮೈಲು ದೊಡ್ಡದಾಗಿದೆ— ವಿಸ್ತಾರವಾಗಿದೆ ಎಂಬುದು ಒಂದು ವ್ಯಕ್ತಿಯ ಸಾಮಾನ್ಯ ಜೀವನದಲ್ಲಿ ಒಂದು ಬರಿಯ ಕಲ್ಪನೆಯಲ್ಲವೆ? ಆತ ತನ್ನ ಕಾಲಿನಿಂದ ತುಳಿದು ಕಣ್ಣಿನಿಂದ ನೋಡಿ ಪ್ರತ್ಯಕ್ಷವಾಗಿ 'ಪ್ರಪಂಚ ಇಷ್ಟು' ಎಂದು ಹೇಳಬಹುದಾದದ್ದು ಎಷ್ಟು ? ಪ್ರತಿಯೊಂದು ವ್ಯಕ್ತಿಯ ಸುತ್ತಲಿನ ಪರಿಸ್ಥಿತಿ-ಪರಿಸರಗಳು, ಬದುಕಿನಲ್ಲಿಯ ಅವಕಾಶಗಳು ಆ ವ್ಯಕ್ತಿಯ ಬದುಕಿನ ಕ್ಷಿತಿಜವನ್ನೇ ನಿರ್ಣಯಿಸಿ ಗೆರೆ ಕೊರೆದು ಬಿಡುತ್ತವೆಯಲ್ಲ! ಬಾಹ್ಯಪ್ರಪಂಚಕ್ಕೆ ಅನ್ವಯಿಸುವ ಈ ಮಾತು ಬುದ್ಧಿಯ ಭಾವನೆಗಳ ಪ್ರಪಂಚಕ್ಕೂ ಅನ್ವಯಿಸುತ್ತದೆ ತನ್ನ ಬಯಕೆ-ಬೇಡಿಕೆ, ಆಕಾಂಕ್ಷೆ-ಉದ್ದೇಶಗಳು, ಎಲ್ಲವನ್ನೂ ಪರಿಮಿತಗೊಳಿಸುತ್ತವೆ ಎಂದು ತೋರಿತು. ತಾನು ಉದ್ಘಾಟನ ಸಮಾರಂಭಕ್ಕೆ ಹೋದರೆ ಯಾವ ದೊಡ್ಡ ಅನುಭವ ವಿಶೇಷವನ್ನೂ ಜ್ಞಾನಾಧಿಕ್ಯವನ್ನೂ ಪಡೆಯಬೇಕಾಗಿರಲಿಲ್ಲ ಆದರೆ ಹೋಗಬೇಕು ಎಂಬ ಬಯಕೆ ಇದ್ದಾಗಲೂ ಅದನ್ನು ಬಂಧಿಸಿ ಮುರಿದುಹಾಕುವ ಸಾಮರ್ಥ್ಯ ತನ್ನ ಸುತ್ತಲಿನ ಪರಿಸ್ಥಿತಿಯಲ್ಲಿದೆ ಎಂಬ ಅರಿವು ಮಾತ್ರ ಮನಸ್ಸಿನ ದುಗುಡವನ್ನು ಬೆಳೆಯಿಸಿತು

ಅನುರಾಧೆ ಎರಡು ಗಂಟೆಯ ಸುಮಾರಿಗೆ ಹೊರಟುಹೋಗಿದ್ದಳು ವೇಳೆ ನಾಲ್ಕೂವರೆಯಾಗಿ ಹೋಗಿತ್ತು. ಅರ್ಧ ಗಂಟೆಯಲ್ಲಿ ಶಾಲೆಯನ್ನು ತಲಪ ಬೇಕು ಹೀಗೆಂದು ಮನಸ್ಸಿಲ್ಲದೆ ಎದ್ದು ಮುಖ ತೊಳೆದಳು ಯಾವ ವಿಶೇಷ ಆಸ್ಥೆಯೂ ಇಲ್ಲದೆ ಹಾಗೂ ಹೀಗೂ ಕೂದಲುಗಳನ್ನು ತಿದ್ದಿಕೊಂಡು ಸಾಮಾನ್ಯ ವಾದ ಬಿಳಿಯ ಪತ್ತಲವೊಂದನ್ನು ಉಟ್ಟು ಹೊರಡುವುದರಲ್ಲಿದ್ದಳು ಇಷ್ಟು ಬೇಗ ಹೋಗಿಯಾದರೂ ಏನು ? ವೇಳೆಗೆ ಮೊದಲು ಹೋದರೆ ಇಲ್ಲದ ಬಿಟ್ಟಿ

ಕೆಲಸ ನೈಗೆ ತಗಲುತ್ತದೆ. ವೇಳೆಗೆ ಸರಿಯಾಗಿ ಹೋದರಾಯಿತು ಎಂದು ಹಾಗೆಯೆ ನಿರ್ವಿಕಾರವಾಗಿ ಕುಳಿತಳು. ಬೀದಿಯಲ್ಲಿಯ ಜನರ ಸದ್ದು ಗದ್ದಲಗಳು ಎಲ್ಲಿಂದಲೋ ತೇಲಿಬರುವ ಕನಸಿನಲ್ಲಿಯ ಸದ್ದುಗದ್ದಲಗಳಂತೆ ಕೇಳಬರುತ್ತಿದ್ದವು. ಮನಸ್ಸು ಶೂನ್ಯವಾಗಿತ್ತು.

ಗಡಿಯಾರದ ಮುಳ್ಳು ಐದಕ್ಕೆ ಸಮೀಪಿಸಿತು. ಹೊರಡುವುದೆಂದು ಎದ್ದು ನಿಂತಳು ಬಾಗಿಲಲ್ಲಿ ಹೆಜ್ಜೆ ಕೇಳಿಸಿತು ಯಾರೆಂದು ಕಣ್ಣು ತಿರುವಿ ನೋಡುತ್ತಾಳೆ—ವಸಂತ! ತಲೆಯ ಮೇಲೆ ತೂಗಾಡುವ ಕಾರ್ಮುಗಿಲುಗಳನ್ನು ನೋಡಿ ಬೇಸರಪಟ್ಟು ಹಿಂದಿರುಗಿ ನೋಡಿದಾಗ ಕಣ್ಣು ತಣಿಯುವಂತೆ ದಿಗಂತದುದ್ದಕ್ಕೂ ಚಾಚಿ ನಿಂತ ಇಂದ್ರಚಾಪವನ್ನು ನೋಡಿದವನಂತಾಯಿತು ಮೋಹಿನಿಯ ಮನಃಸ್ಥಿತಿ ಬಾಗಿಲಲ್ಲಿಂದಲೆ ವಸಂತ ನಸುನಕ್ಕು ಕೇಳಿದ

"ಒಳಕ್ಕೆ ಬರಬಹುದೆ?"

"ಬರುವ ಮನಸ್ಸಾದರೆ ಬರಬಹುದಲ್ಲ!"

ಇದು ವಸಂತನಿಗೆ ಅನಿರೀಕ್ಷಿತವಾಗಿರಲಿಲ್ಲ. ಈ ಸೋಗಿನ ಸಿಡುಕನ್ನು ಎದುರಿಸಬೇಕಾಗುತ್ತದೆಂದು ಬಲ್ಲ ಆತ ಇಷ್ಟಕ್ಕೆ ಸಿದ್ಧನಾಗಿಯೇ ಬಂದಿದ್ದ.

"ಬರುವ ಮನಸ್ಸಿರದಿದ್ದರೆ ಇಲ್ಲಿಗೇಕೆ ಬರುತ್ತಿದ್ದೆ?"

"ದಾರಿ ತಪ್ಪಿ ಬಂದಿದ್ದರೆ—ಯಾರಿಗೆ ಗೊತ್ತು?"

"ದಾರಿ ತಪ್ಪಿದ್ದರೆ ಬೀದಿಯಲ್ಲಿಯೆ ಅಲೆಯುತ್ತಿದ್ದೆ ಎಂದು ಕಾಣುತ್ತದೆ. ದಾರಿ ತಪ್ಪಿದವರು ಜನರ ಮನೆ ನೇರುತ್ತಾರೆಯೆ?"

"ಹುಂ—"

"ವಿಪರೀತ ಕೋಪ ಬಂದಿದೆಯಲ್ಲವೆ ನಿನಗೆ?"

ಎನ್ನುತ್ತಿರುವಾಗಲೆ ಎದುರಿಗಿನ ಕುರ್ಚಿಯಲ್ಲಿ ಕುಳಿತ. ನಾಲ್ಕೈದು ದಿನಗಳ ಮುಂಚೆ ಅದೇ ಕುರ್ಚಿಯಲ್ಲಿ ಆನಂದ ಕುಳಿತಿದ್ದನೆಂಬುದು ಮೋಹಿನಿಯ ಗಮನಕ್ಕೆ ಬಂದಿತು

"ಬಂದೇನು ಮಾಡುತ್ತದೆ? ಉರಿದು ಉರಿದು ಆರುತ್ತದೆ, ಅಷ್ಟೆ!"

"ಏನಾದರೂ ಆಗಲಿ, ಆರುವ ಆಸೆ ಇದ್ದರೆ ಸಾಕು ಎಷ್ಟು ತಡವಾದರೂ ಕಾಯಬಹುದು" ಎಂದು ವಸಂತ ನಕ್ಕ ಆ ನಗುವಿನಲ್ಲಿಯ ಮೋಡಿಯಿಂದ ಮೋಹಿನಿಯ ಸಿಡುಕು ಮಾಯವಾಗಿರಬೇಕು, ಒಂದು ಬಾರಿ ವಸಂತನನ್ನು

ನೋಡಿದಳು. ಕಿರುನಗೆಯೊಂದು ತುಟಿಗಳಂಚಿನಲ್ಲಿ ಮಿಂಚಿತು. ಒಂದು ತಿಂಗಳ ಹಿಂದೆ ನೋಡಿದ್ದ ವಸಂತ ಈಗ ಬೇರೆಯಾಗಿದ್ದ ಮುಖ ತುಂಬಿಕೊಂಡಹಾಗಿತ್ತು. ಯಾವುದೋ ಒಂದು ಸುಪ್ತ ಸಂತೋಷ ಆ ಮುಖದಲ್ಲಿ ನಲಿಯುತ್ತಿದ್ದಂತಿತ್ತು.

" ನಿಜವಾಗಿಯೂ ನಿಮ್ಮ ಕೂಡ ನಾನು ಮಾತೇ ಆಡಬಾರದು ! "

" ಅಂಥಾದೇನಪ್ಪಾ ನಾನು ಮಾಡಿದ್ದು ? "

" ಊರಿಗೆ ಹೋಗುವಾಗ ಒಂದು ಮಾತು ಹೇಳಿದ್ದರೆ ಏನಾಗುತ್ತಿತ್ತೊ ! "

" ನನಗೆ ಗೊತ್ತಿದ್ದರಲ್ಲವೆ ನಿನಗೆ ತಿಳಿಸುವುದು ? ತೀರ ಅಕಸ್ಮಾತ್ತಾಗಿ ಹೋಗಬೇಕಾಯಿತು "

" ಅಕಸ್ಮಾತ್ತಾಗಿ ಹೋದವರು ಒಂದು ತಿಂಗಳಿಗೂ ಹೆಚ್ಚಾಗಿ ಇರಬೇಕಾಯಿತು ಅಲ್ಲವೆ ? "

" ಆ ದಿನ ನಿನ್ನ ಕಂಡ ಮರುದಿನ—ಮರುದಿನವೊ ಮೂರನೆಯ ದಿನವೊ —ತಂತಿ ಬಂದಿತು—ಅಕ್ಕನಿಗೆ ಮೈಯಲ್ಲಿ ಸರಿಯಿಲ್ಲ, ಎಂದು ಹೋದವ ನಿಲ್ಲಲೇ ಬೇಕಾಯಿತು "

" ಈಗ ಸರಿಯಾಗಿದೆಯೆ ? "

" ಹುಂ—"

ಎಂದಿಷ್ಟೇ ಹೇಳಿ ಸುಮ್ಮನಾದ. ಉಳಿದ ಸಮಾಚಾರವನ್ನು ಹೇಳುವ ಮನಸ್ಸಾಗಲಿಲ್ಲ ಹೇಳಿಯಾದರೂ ಏನು ? ಎಂದುಕೊಂಡು ಒಂಟಿ ಮಾತಿನಲ್ಲಿ ಉತ್ತರ ಮುಗಿಸಿದ ಮೋಹಿನಿ ಕೇಳಿದಳು .

" ನನ್ನ ಕಾಗದ ಸಿಕ್ಕಿತೆ ? "

" ಕಾಗದ ಸಿಕ್ಕಿತೆಂದೇ ಬಂದೆ ಅದು ಹೋಗಲಿ, ಈ ಒಂದು ತಿಂಗಳಲ್ಲಿ ಏನು ಸಮಾಚಾರ ? ಹೇಗಿದ್ದೀ ? "

" ಹೇಗೇನು ! ಹೀಗಿದ್ದೇನೆ ತೀರ ಬೇಸರವಾಗುತ್ತಿದೆ—"

ತಾನು ಶಾಲೆಗೆ ಹೊರಡಬೇಕಿತ್ತೆಂಬುದನ್ನು ಮೋಹಿನಿ ಆಗಲೆ ಮರೆತು ಬಿಟ್ಟಿದ್ದಳು. ವಸಂತನೇ ಕೇಳಿದ .

" ನೀನೆಲ್ಲೋ ಹೊರಟಹಾಗಿದೆಯಲ್ಲ ? "

" ಹೌದು. ಹಾಳು ಶಾಲೆಗೆ ಹೋಗಬೇಕಿತ್ತು ಯಾರದೋ ಭಾಷಣ ! "

" ಹೊರಡೋಣ ಹಾಗಿದ್ದರೆ. ಬಹಳವಾದರೆ ನಾನು ಅಲ್ಲಿಯವರೆಗೆ ಬಂದು

ಹಿಂದಿರುಗುತ್ತೇನೆ."

"ಬೇಡ ನಾನು ಹೋಗದಿದ್ದರೆ ಏನಾಗಬೇಕಾಗಿದೆ? ಎಲ್ಲ ಭಾಷಣಗಳೂ 'ಪಡಿಯಚ್ಚಿನ' ಭಾಷಣಗಳೇ—ಅದರಲ್ಲಿಯೂ ಕಾಂಗ್ರೆಸ್ ಮುಂದಾಳುಗಳ ಈಗಿನ ಭಾಷಣ!"

ವಸಂತ ಸುಮ್ಮನಾದ. ಕೋಣೆಯಲ್ಲಿ ಆಚೆ ಈಚೆ ಕಣ್ಣು ತಿರುವಿದ ಒಳ್ಳೇ ಅಚ್ಚುಕಟ್ಟಾಗಿ ಸುವ್ಯವಸ್ಥಿತವಾಗಿದ್ದಿತು ಕೋಣೆ ಎದುರಿನ ಗೋಡೆಯ ಮೇಲೆ ಮೋಹಿನಿ ತನ್ನ ಒಂದು ಭಾವಚಿತ್ರವನ್ನು ತೂಗಹಾಕಿದ್ದಳು ಒಂದು ಬದಿಯ ಆ ಚಿತ್ರ ತಟ್ಟನೆ ವಸಂತನ ಮನಸ್ಸನ್ನು ಶಕುಂತಲೆಯೆಡೆಗೆ ಓಡಿಸಿತು ಮೂರು ನಾಲ್ಕು ಬಾರಿ ಅದನ್ನೇ ದಿಟ್ಟಿಸಿ ನೋಡಿದ—ಅಲ್ಲಿ ಶಕುಂತಲೆಯನ್ನು ನೆನೆದ.

"ಅದೇನು? ಇಷ್ಟು ಸರಿ ಆ ಚಿತ್ರವನ್ನು ನೋಡುತ್ತಿದ್ದೀರಿ—ನಾನೇ ಎದುರಿಗಿರುವಾಗ!"

"ನಿನಗಿಂತಲೂ ಆ ಚಿತ್ರ ಚೆಲುವಾಗಿದೆ!"

"ನನ್ನದೇ ಎಂದಮೇಲೆ ನನಗಿಂತಲೂ ಹೇಗೆ ಚೆಲುವಾಗಿರಬಹುದು?"

"ಸಾಧ್ಯವಿದೆ! ಫೋಟೋ ತೆಗೆದವರಿಗೆ ಅಷ್ಟು ಮಾಡಲು ಬರುವುದಿಲ್ಲವೆ?"

ಎಂದು ನಕ್ಕು ತನ್ನ ಅರ್ಥವನ್ನು ಮರೆಮಾಚಿದ. ಆ ಚಿತ್ರದಲ್ಲಿ ವಸಂತ ಏನು ಕಾಣುತ್ತಿದ್ದನೆಂಬುದು ಮೋಹಿನಿಗೆ ಹೇಗೆ ತಿಳಿಯಬೇಕು?

"ಮತ್ತಿನ್ನೇನು ಸಮಾಚಾರ?"

"ನೀವು ಹೇಳಿರಿ ಊರಿಂದ ಬಂದವರು—"

"ಅಕ್ಕನಿಗೆ ಖಾಯಿಲೆ ನಾನೇನು ಸಮಾಚಾರ ಹೇಳಬಹುದು?"

"ನಾನು ಮಾತ್ರ ನಿಮಗೆ ವಿಶೇಷ ಸಮಾಚಾರ ಹೇಳಬಹುದು!" ಎಂದು ಮೋಹಿನಿ ನಕ್ಕಳು

"ವಿಶೇಷ ಸಮಾಚಾರವೆ? ಏನದು?"

"ಮೊನ್ನೆ ಆನಂದ ಬಂದಿದ್ದರು!"

"ಆನಂದ ಬಂದಿದ್ದರೆ? ಎಂದು? ಯಾವಾಗ?"

ವಸಂತನ ದನಿಯೇ ಆತನ ಆಶ್ಚರ್ಯವನ್ನೂ ಕುತೂಹಲವನ್ನೂ ಸ್ಪಷ್ಟವಾಗಿ ಸಾರಿ ಹೇಳುತ್ತಿತ್ತು.

" ಇಂದಿಗೆ ನಾಲ್ಕೋ–ಐದೋ ದಿನವಾಯಿತು ! "

" ಆಮೇಲೆ ? "

" ಆಮೇಲೇನು ? ಬಂದರು, ಬಂದ ದಾರಿಯಿಂದ ಹೋದರು ! "

ಆ ಒಂದು ಮಾತಿನಿಂದ ನಡೆದ ಸನ್ನಿವೇಶದ ಪೂರ್ತಿಯಾದ ಕಲ್ಪನೆ ವಸಂತನಿಗಾಯಿತು ಮುಂದೆ ಕೇಳಬೇಕಾದುದೇ ಇರಲಿಲ್ಲ ಸರಿಪಡಿಸಿಕೊಂಡು ಹೋಗಬೇಕೆಂದು ಬಂದ ಆನಂದನನ್ನು ಈಕೆ ಹಿಂದಿರುಗುವಂತೆ ಮಾಡಿದ್ದರೆ ಹಾಗೆ ಹೇಳಲೇಬೇಕು ಎಂದು ವಿವರಗಳನ್ನು ತಿಳಿಯ ಬಯಸಿದ ಆನಂದ ಬಂದ ಉದ್ದೇಶವೇನು ? ನಡೆದದ್ದು ಏನು ? ಎಂಬುದು ತಿಳಿಯದೆ ಯಾವು ದನ್ನೂ ಹೇಳುವಂತಿರಲಿಲ್ಲ.

" ಏನೇನಾಯಿತು, ವಿವರವಾಗಿ ಹೇಳಬಾರದೆ ? "

" ಏನಾಗುವುದು ? ಗೊತ್ತೇ ಇದೆಯಲ್ಲ ನಾನು ಮತ್ತೆ ಬರಬೇಕು ಎಂದರು ಸರಿಪಡಿಸಿಕೊಂಡು, ಎಲ್ಲವನ್ನು ಮರೆತುಬಿಟ್ಟು ಸುಖವಾಗಿರಬೇಕು ಇತ್ಯಾದಿ–ಇತ್ಯಾದಿ "

" ಅದಕ್ಕೆ ನೀನೇನೆಂದೆ ? "

"ಏನೆನ್ನುವುದು ? ಆ ಮಾತುಗಳ ಮೇಲೆ ವಿಶ್ವಾಸವಿಡಬಹುದಾಗಿತ್ತೆ ? "

ವಸಂತನಿಗೆ ನಿಜವಾಗಿಯೂ ಸಿಟ್ಟು ಬಂದಿತು. ಆನಂದನ ಸ್ವಭಾವವನ್ನು ಆತ ಸರಿಯಾಗಿ ತಿಳಿದಿದ್ದೇ ಆದರೆ ಇಷ್ಟು ಮಾತುಗಳನ್ನು ಹೇಳಿದ ಆತ ಅನುನಯದಿಂದ, ಮೆತ್ತಗಾಗಿಯೇ ಹೇಳಿರಬೇಕು ಹೀಗಿದ್ದರೂ ಈಕೆ ಆ ಮಾತುಗಳನ್ನು ನಂಬಲಿಲ್ಲ ಎಂದರೆ—

" ಯಾಕೆ ವಿಶ್ವಾಸವಿಡಲಾಗಲಿಲ್ಲ ? " ವಸಂತನ ದನಿಯಲ್ಲಿ ಬಿರುಸು ಮೂಡಿದಂತಿತ್ತು

" ಅವರಲ್ಲಿ ಯಾವ ಮಾತು ಹೊಸದು ಎಂದು ವಿಶ್ವಾಸ ಹುಟ್ಟಬೇಕು ? "

" ಮಾತು ಹೊಸದಿರದಿದ್ದರೂ ಪರಿಸ್ಥಿತಿ ಬೇರೆಯಾಗಿದ್ದಿತು— "

" ಪರಿಸ್ಥಿತಿಯಲ್ಲಿಯಾದರೂ ಏನು ಹೊಸದು ? "

" ಅವರು ತಾವಾಗಿಯೇ ಇಲ್ಲಿಯ ವರೆಗೆ ಬಂದು ಕೇಳಬೇಕೆಂದರೆ ಹೊಸ ದಲ್ಲವೆ ? ಇದಕ್ಕೂ ಹೆಚ್ಚಿಗೆ ಯಾವುದು ಬೇಕು ? ಎಲ್ಲವನ್ನೂ ಮರೆತು—ತಮ್ಮ ಅಭಿಮಾನವನ್ನೂ ಮರೆತು ಬಂದಾಗ— "

" ಇದ್ದರಲ್ಲವೆ ಅಭಿಮಾನವನ್ನು ಮರೆಯುವುದು ? "

" ಹೀಗೆ ಮಾತನಾಡಬೇಡ, ಮೋಹಿನಿ—"

" ಅದೇನು ? ನೀವೂ ಅವರ ಹಾಗೆಯೇ ಮಾತನಾಡುತ್ತಿದ್ದೀರಲ್ಲ— ಎಲ್ಲವನ್ನೂ ಹೇಳಿ ನಿಮ್ಮ ಕಿವಿಯನ್ನು ಚೆನ್ನಾಗಿ ತುಂಬಿದ ಹಾಗಿದೆ "

" ನನ್ನ ಕಿವಿಯನ್ನೇನು ತುಂಬುತ್ತಾರೆ ? ನಾನು ಅವರನ್ನು ನೋಡಿಯೇ ಇಲ್ಲ "

" ಹಾಗಾದರೆ ಅವರ ಪರವಾಗಿಯೇ ಹೇಳುತ್ತಿದ್ದೀರಲ್ಲ, ಮತ್ತೆ."

" ಪರವಾಗಿ ಏನು ? ಬಾಗಿಲ ತನಕ ಬಂದು—"

" ಅಂದರೆ ಅವರ ಮಾತಿಗೆ ಒಪ್ಪಿ ಅವರು ಹೇಳಿದಂತೆ ಹೋಗಿಬಿಡ ಬೇಕಾಗಿತ್ತೆ ? "

" ನಿಸ್ಸಂದೇಹವಾಗಿ ! "

ಮೋಹಿನಿ ಸುಮ್ಮನಾದಳು. ವಸಂತನ ಮಾತು, ಅವನ ಮನೋವೃತ್ತಿ ಆಕೆಗೆ ದಿಗ್ಭ್ರಮೆಗೊಳಿಸಿದ್ದವು ಈ ಮಾತನ್ನು ವಸಂತ ಹೇಳಲಿಕ್ಕಿಲ್ಲ ಎಂದು ಕೊಂಡಿದ್ದ ಆಕೆಗೆ ತುಂಬಾ ನಿರಾಶೆಯಾಯಿತು.

" ಈ ಮಾತನ್ನು ನೀವು ಹೇಳಬಹುದು ಎಂದು ನನಗೆ ನಿಜವಾಗಿಯೂ ಅನಿಸಿರಲಿಲ್ಲ."

" ಹೌದೆ ? ಹಾಗಾದರೆ ನೀವು ಮಾಡಿದ್ದೇ ಸರಿ ಎಂದು ಹೇಳ ಬೇಕಾಗಿತ್ತೆ ? "

" ಇದೇನು ಹೀಗೆ ಮಾತಾಡುತ್ತಿದ್ದೀರಲ್ಲ ? ನೋವಿನ ಮೇಲೆ ಯಾಕೆ ಬರೆ ಎಳೆಯುತ್ತಿದ್ದೀರಿ—"

ತಾನು ಬಿರುಸಾಗಿ ಆಡಿದ ಮಾತು ಮೋಹಿನಿಯನ್ನು ನೋಯಿಸಿತ್ತು ಎಂಬುದು ವಸಂತನಿಗೆ ತಿಳಿಯಿತು ಆದರೆ ತಾನು ಯಾವುದನ್ನೂ ತಪ್ಪಾಗಿ ಹೇಳಿರಲಿಲ್ಲ ಆನಂದನನ್ನು ಹಿಂದಿರುಗಿಸಿದ್ದು ಆತನಿಗೆ ಎಷ್ಟು ಮಾತ್ರವೂ ಒಪ್ಪಿಗೆ ಇರಲಿಲ್ಲ ಮಾತ್ರವಲ್ಲದೆ, ಆಕೆ ಹಾಗೆ ಮಾಡಿದ್ದನ್ನು ಕೇಳಿದಾಗಿನಿಂದ ಆಕೆಯ ಬಗೆಯಲ್ಲಿಯ ಆತನ ಅಭಿಪ್ರಾಯವೇ ಬದಲಾಗುವುದರಲ್ಲಿದ್ದಿತು. ಅವನೆಂದ ನಿಧಾನವಾಗಿ .

" ಇದು ನೋಡು ಮೋಹಿನಿ, ನಿನ್ನನ್ನು ನೋಯಿಸಬೇಕೆಂದು ನಾನು

ಮಾತನಾಡುತ್ತಿಲ್ಲ. ಆದರೆ ನಿಜವಾಗಿಯೂ ನೀನು ಮಾಡಿದ್ದು ಸರಿ ಎಂದು ನಿನಗೆನಿಸುತ್ತಿದೆಯೆ ? "

" ನಾನು ಮಾಡಿದ್ದು ಯಾಕೆ ಸರಿಯಾದದ್ದಲ್ಲ ? "

" ನೀನು ಆನಂದ ಬಂದಾಗ ಯಾಕೆ ಆತನನ್ನು ಹಾಗೆ ಕಳಿಸಿದೆ ಅದನ್ನು ಹೇಳು "

" ಅವರ ಜೊತೆಯಲ್ಲಿ ಹೋಗಿ ಮತ್ತೆ ಅದೇ ನರಕವನ್ನು ಸೇರಲು ನನಗೆ ಮನಸ್ಸಾಗಲಿಲ್ಲ—ಈಗಲೂ ಇಲ್ಲ ! "

" ಅದೇ ನರಕವನ್ನು ಎಂದು ಯಾಕೆ ತಿಳಿಯಬೇಕು ? ತಾನಾಗಿಯೇ ನಿನ್ನನ್ನು ಕರೆಯಬಂದು ಎಲ್ಲವನ್ನೂ ಸರಿಪಡಿಸುವಾ ಎಂದು ಹೇಳುತ್ತಿದ್ದವ ರನ್ನು—"

" ಅದು ವಿಶ್ವಾಸದ ಪ್ರಶ್ನೆಯಾಗಿದೆ ನನಗೆ—ನನ್ನ ಹಿಂದಿನ ಅನುಭವದ ಮೇಲಿಂದ—ವಿಶ್ವಾಸ ಹುಟ್ಟುವುದು ಸಾಧ್ಯವಿಲ್ಲ "

" ಈ ಒಂದು ಸಲವಾದರೂ ವಿಶ್ವಾಸವಿಟ್ಟು ನೋಡಬೇಕಾಗಿತ್ತು "

" ಆಯಿತು ಇಷ್ಟೆಲ್ಲ ಅವಮಾನ ಸಹಿಸಿ—ಹೊರದೂಡಿಸಿಕೊಂಡು —ಮತ್ತೆ ಅದೇ ಬಾಗಿಲಿಗೆ ನಾನು ಹೋಗಬೇಕಿದ್ದರೆ ಏನು ಮಾಡಿದ ಹಾಗೆ ಆಯಿತು ? "

" ಏನಾದರೂ ಮಾಡಲೇಬೇಕೆಂಬ ಈ ಹಟ ಎಂಥದು ? ಏನು ಮಾಡ ಬೇಕಾಗಿದೆ ನಿನಗೆ ? ಗಂಡನೊಡನೆ ಸುಖವಾಗಿ ಸಂಸಾರ ಮಾಡಿಕೊಂಡು ಇದ್ದರೆ ಸಾಲದೆ ? "

" ನಾನು ಇದಕ್ಕೆ ಅಲ್ಲ ಎಂದು ಹೇಳುತ್ತೇನೆಯೆ ? "

" ಅಲ್ಲ ಎಂದು ಹೇಳುವುದಿಲ್ಲ ಸಂದರ್ಭ ಬಂದಾಗ ಮಾತ್ರ—"

" ಇವರೊಡನೆ ಅದು ಸಾಧ್ಯವಾಗಬಹುದು ಎಂದು ನಿಮಗೆನಿಸಿದ್ದರೆ ಅದೊಂದು ಭ್ರಮೆ ! "

" ಭ್ರಮೆ ಯಾಕೆ ? ಆನಂದನ ಮಟ್ಟಿಗೆ ನನಗೆ ಯಾವ ತಪ್ಪೂ ಕಾಣು ವುದಿಲ್ಲ."

" ನಿಮಗೆ ಹೇಗೆ ಕಾಣಬೇಕು ? ಅವರ ಜೊತೆಯಲ್ಲಿ ಇದ್ದ ನನಗೆ ತಿಳಿದದ್ದು ನಿಮಗೆ ಹೇಗೆ ಗೊತ್ತಾಗಬೇಕು ? "

" ಏನು, ನಿನಗೆ ಗೊತ್ತಾದದ್ದು ? "

" ಮನುಷ್ಯ ಎಂದಮೇಲೆ ಅವನಿಗೊಂದು 'ವ್ಯಕ್ತಿತ್ವ' ಎಂಬುದು ಇರದಿದ್ದರೆ—"

ವಸಂತ ಅರ್ಧ ನಿಮಿಷ ಸುಮ್ಮನಾದ ಆಮೇಲೆ ಹೇಳಿದ

" ಇದು ನೋಡು, ಮೆತ್ತಗಾಗಿ ಇದ್ದರೆ 'ವ್ಯಕ್ತಿತ್ವ' ಇಲ್ಲ ಎನ್ನುತ್ತೀ ಬಿರುಸಾಗಿ ಇದ್ದರೆ ತಮ್ಮ ಹೊರತು ಬೇರೆ ಯಾರೂ ಕಾಣುವುದಿಲ್ಲ ಎನ್ನುತ್ತೀ ! ಹೀಗಾದರೆ ನಡೆಯುವುದು ಹೇಗೆ ? ನೀನು ಹೇಳಿದಹಾಗೆ ಆತ ಕೇಳಲು ಒಪ್ಪಿದರೆ ಅವನ ವಿಷಯಕ್ಕೆ ನಿನಗೆ ತಿರಸ್ಕಾರ—ಆತ ಹೇಳಿದಂತೆ ನೀನು ಕೇಳುವಹಾಗಿಲ್ಲ —ನಿನ್ನ ವ್ಯಕ್ತಿತ್ವಕ್ಕೆ ಅವಮಾನ ! ಇದಕ್ಕೆ ಯಾವ ಉಪಾಯ ? "

" ಉಪಾಯ ! ಉಪಾಯ ! "

ಮೋಹಿನಿ ಕನವರಿಸಿದಂತೆ ಉಸಿರಿದಳು ವಸಂತನ ಮಾತು ಮಾತೂ ಆಕೆಯ ಹೃದಯವನ್ನು ಇರಿದಿತ್ತು. ಕೊನೆಗೆ ನಿಧಾನವಾಗಿ ತನ್ನಷ್ಟಕ್ಕೆ ಎಂಬಂತೆ ಅಂದಳು

" ಈ ಮದುವೆಯನ್ನು ನಾನು ಒಪ್ಪಲೇಬಾರದಾಗಿತ್ತು. ಅದೇ ನನ್ನ ದುರ್ದೈವ—"

" ಅದೆಲ್ಲ ಆಗಿಹೋದ ಮಾತು. ಆ ಯೋಚನೆಯಿಂದ ಈಗ ಏನಾಗ ಬೇಕಾಗಿದೆ ? ದುರ್ದೈವವೆ ಇರಲಿ, ಎಂಥ ದೈವವೇ ಇರಲಿ, ಪರಿಸ್ಥಿತಿಗೆ ಹೊಂದಿಕೊಂಡು ಹೋಗದಿದ್ದರೆ—"

" ಹೌದು, ನಿಜ ಆದರೆ ಪರಿಸ್ಥಿತಿಯನ್ನು ತನಗೆ ಬೇಕಾದಂತೆ ಬದಲಾ ಯಿಸಿಕೊಳ್ಳುವ ಸಾಮರ್ಥ್ಯವನ್ನು ಪಡೆಯಬೇಕು—"

" ಹುಚ್ಚು ಹಂಬಲ ಅದು. ಮನುಷ್ಯನಾದವನಿಗೆ ಅದೊಂದು ಆಸೆ ಮಾತ್ರ. ವಿಶೇಷವಾಗಿ ನಮ್ಮ ನಿಮ್ಮ ಹಾಗೆ ಸಾಮಾನ್ಯವಾಗಿ ಹುಟ್ಟಿ, ಸಾಮಾನ್ಯವಾದ ಪರಿಸ್ಥಿತಿಯಲ್ಲಿ ಬದುಕನ್ನು ನಡೆಯಿಸಬೇಕಾದವರಿಗಂತೂ ಅಸಾಧ್ಯವಾದ ಮಾತೇ ಅದು."

ವಸಂತನ ಮನಸ್ಸನ್ನು ಮುರಿಯಲಾಗದಕ್ಕೆಂಬಂತೆ ಮೋಹಿನಿ ಕೇಳಿದಳು —ದನಿಯಲ್ಲಿ ಅಸಹಾಯತೆ ಇತ್ತು.

" ಹಾಗಾದರೆ ನನಗೆ ಏನು ಮಾಡು ಎನ್ನುತ್ತೀರಿ ? "

" ಪುಣೆಯಿಂದ ನೀನು ಬರೆದ ಕಾಗದದಲ್ಲಿ ಏನೆಂದು ಬರೆದಿದ್ದೆ ? ಜ್ಞಾಪಕ ಇದೆಯೆ ? "

" ಏನು ಬರೆದಿದ್ದೆ ? "

" ಎಲ್ಲಕ್ಕೂ ಮಿಗಿಲಾಗಿ ನೀನು ಬಯಸುತ್ತಿದ್ದುದು ಆನಂದನ ಮಡದಿಯಾಗುವುದು ಎಂದೇ ಅಲ್ಲವೆ ? "

" ಹೌದು, ಬರೆದಿದ್ದೆ. ಆದರೆ ' ಆಗಬೇಕಿತ್ತು ' ಎಂದು ಬರೆದಿದ್ದೆ "

" ಈಗೇನಾಯಿತು ? "

" ಈಗೇನಾಯಿತೆ ? ಏನಾಗುವುದು ಉಳಿದಿದೆ ? "

" ಉಳಿಸಿಕೊಂಡರೆ ಎಲ್ಲವೂ ಉಳಿಯಬಹುದು, ಕೈಬಿಟ್ಟರೆ ಎಲ್ಲವೂ ಹೋಗಬಹುದು "

" ನನಗೆ ನಿಮ್ಮ ಮಾತೇ ಅರ್ಥವಾಗುವುದಿಲ್ಲ—"

" ನನಗೂ ನಿನ್ನ ಮನಸ್ಸೇ ಅರ್ಥವಾಗುವುದಿಲ್ಲ ! "

ವಸಂತ ಸುಮ್ಮನಾದ. ಮೋಹಿನಿಗೆ ದುಃಖವಾಯಿತು ಕಣ್ಣೀರು ಚಿಮ್ಮಿತು ಇದುವರೆಗೆ ಪ್ರತಿಯೊಂದು ಸಂದರ್ಭದಲ್ಲಿ ವಸಂತ ತೋರುತ್ತಿದ್ದ ಸಹಾನುಭೂತಿ ಎಲ್ಲಿ ಹೋಯಿತು ? ಆ ಒಂದು ಸಹಾನುಭೂತಿಯೇ ತನಗೆ ಇದುವರೆಗೆ ಭರವಸೆಯಾಗಿ ಆತ್ಮವಿಶ್ವಾಸದ ಗೋಪುರವನ್ನು ಕಟ್ಟಿತ್ತು ಆದರೆ ಆ ಕ್ಷಣಕ್ಕೆ ಆ ಗೋಪುರದ ತಳಪಾಯವೇ ಬುಡಮೇಲಾಗಿ ನಿಂತು ಭೂಕಂಪವೊಂದು ಅಕಸ್ಮಾತ್ತಾಗಿ ಬಂದು ಭವ್ಯವಾದ ಅರಮನೆಯನ್ನು ಮಾಯವಾಗಿಸಿ ಅದರ ತಳಪಾಯದಲ್ಲಿಯ ಭೀಕರವಾಗಿ ಬಾಯಿ ತೆರೆದು ನಿಂತ ಬಿರುಕು ಬೋಳುಗಳನ್ನು ತೋರಿಸುತ್ತಿರುವಂತೆ ಭಾಸವಾಯಿತು. ಇದುವರೆಗೆ ತಾನು ವಸಂತನನ್ನು ತಪ್ಪಾಗಿಯೇ ತಿಳಿದುಕೊಂಡೆನೆ ? ಇಷ್ಟು ಕಠಿಣ ಹೃದಯದವನೆ ಆತ ? ಎಂದು ಮುಂತಾಗಿ ಯೋಚಿಸಿದಳಲ್ಲದೆ ಆತ ಯಾಕೆ ಹಾಗೆ ಮಾತನಾಡುತ್ತಿರಬಹುದೆಂದಾಗಲಿ, ಆತನ ವಾದದಲ್ಲಿ ತಥ್ಯಾಂಶವಿರಬಹುದೆಂದಾಗಲಿ ಆಕೆಗೆ ತೋರಲೇ ಇಲ್ಲ. ಆದರೆ ವಸಂತನ ಸಹಾನುಭೂತಿ ಇಲ್ಲದೆ ತನ್ನ ಬಾಳು ಈಗ ಇದ್ದುದಕ್ಕಿಂತ ಬರಿದಾಗಿ, ತಾನು ಯಾವುದಕ್ಕಾಗಿ ಹಟ ತೊಟ್ಟೆನೊ ಅದೇ ಇಲ್ಲದಾಗುವಂತಾದರೆ ಎಂಬ ಹೆದರಿಕೆ ಆಕೆಯನ್ನು ಇನ್ನೂ ವಿಹ್ವಲಳನ್ನಾಗಿ ಮಾಡಿತು. ಹಾಗೆಂದೇ ಹೇಳಿದಳು—ಕರುಣವಾಗಿ :

" ನಿಮ್ಮ ಸಹಾನುಭೂತಿಯಿಲ್ಲದೆ ನಾನು ಏನನ್ನೂ ಮಾಡಲಾರೆ! ಆ ಒಂದು ಆಶ್ರಯದಿಂದ—ಅದರ ಬಲದ ಮೇಲೆಯೆ ನಾನು ಬದುಕಿದ್ದೇನೆ. ಇಲ್ಲದಿದ್ದರೆ ಆ ರಾತ್ರಿಯೆ ನಾನು ಗಾಡಿಯಿಂದ ಹಾರಿಕೊಂಡು ಬದುಕನ್ನು ನೀಗುತ್ತಿದ್ದೆ ಆ ಬಲದ ಆಸೆಯಿಂದಲೇ ನಾನು ನಿಮಗೆ ಒಂದಲ್ಲದೆ ಎರಡು ಕಾಗದಗಳನ್ನು ಬರೆದೆ—"

" ನನ್ನ ಸಹಾನುಭೂತಿಯಿಂದ ಏನಾಗಬೇಕು, ಮೋಹಿನಿ ? "

" ಏನು ಬೇಕಾದುದೂ ಆಗಬಹುದು ಅದರ ಉತ್ತೇಜನದಿಂದಲೇ ನಾನು ನನ್ನ ಮನೆಯನ್ನು ಕಟ್ಟಬಲ್ಲೆ , ಕಟ್ಟಬೇಕೆಂದಿದ್ದೇನೆ—"

ಮೋಹಿನಿ ಈ ಮಾತನ್ನು ಯಾವ ಅರ್ಥದಲ್ಲಿ ಹೇಳಿದಳೊ! ವಸಂತ ಮಾತ್ರ ಹಿಂತೆಗೆದ. ತಟ್ಟನೆ ಮನಸ್ಸು ನೂರಾರು ಮೈಲಿಗಳಾಚೆ, ಬಹುತರವಾಗಿ —ತನ್ನನ್ನೇ ಕುರಿತು ಯೋಚಿಸುತ್ತಿರಬಹುದಾದ ಶಕುಂತಲೆಯೆಡೆಗೆ ಹಾರಿತು ಎದುರಿನ ಗೋಡೆಯ ಮೇಲಿನ ಚಿತ್ರವನ್ನು ಮತ್ತೆ ನೆಟ್ಟನೆ ನೋಡಿದ ಆಕೆ ಯಾವ ಅರ್ಥದಲ್ಲಿಯೂ ಹೇಳಿರಲಿ, ತನಗೆ ಹೇಳಬೇಕಾದ ವಿಷಯ ಸ್ಪಷ್ಟವಾಗಿದ್ದಿತಾದ್ದರಿಂದ ಹೇಳಿದ

" ನನ್ನ ಸಹಾನುಭೂತಿ ಯಾವಾಗಲೂ ಇದೆ. ಆದರೆ—"

" ಅಷ್ಟಿದ್ದರೆ ಸಾಕು ನನಗೆ. ಇನ್ನೇನೂ ಬೇಕಿಲ್ಲ—"

" ಸಾಲದು, ಮೋಹಿನಿ ಖಂಡಿತವಾಗಿ ಸಾಲದು! ನೀನು ಮನೆಯನ್ನು ಕಟ್ಟುವುದೇ ಆದರೆ ಒಬ್ಬಳಾಗಿಯೆ ನಿಂತು ಕಟ್ಟಲಾರೆ. ನೀನು ಕಟ್ಟಬಹುದಾದ ಮನೆ ಆನಂದನನ್ನು ಕೂಡಿಯೇ ಕಟ್ಟಬೇಕು. ಅದೇ ನಿಜವಾದದ್ದು. ಅದೇ ಮನೆ. ಅದೇ ನಿನ್ನ ' ಕನಸಿನ ಮನೆ ' ಎಂದು ನೀನೇ ಹೇಳಿರುವಿ."

" ಹೇಳಿದೆ, ನಿಜ. ಆದರೆ ಆ ' ಕನಸಿನ ಮನೆ ' ಮುರಿದುಹೋಗಿದೆ. ಆನಂದನೇ ಅದನ್ನು ಮುರಿದು ನೆಲಸಮ ಮಾಡಿದ್ದಾನೆ. ಆದ್ದರಿಂದ ಇನ್ನು ನನ್ನ ಮನೆಯನ್ನು ನಾನೇ ಕಟ್ಟಬೇಕಾಗಿದೆ."

" ನನಗೆ ವಿಶ್ವಾಸವಿಲ್ಲ! "

" ನನಗೆ ಇದೆ! "

" ಆನಂದನನ್ನು ನೀನು ಕೂಡಿದರೆ ಮಾತ್ರ ಅದು ಸಾಧ್ಯ! "

" ಯಾಕೆ ಮತ್ತೆ ಮತ್ತೆ ಅದನ್ನೇ ಹೇಳುತ್ತೀರಿ, ನನಗೆ ? ಅಯ್ಯೊ!

ಆ ಮಾತು ಬೇಡ—"

" ಯಾಕೆ ? ಯಾಕೆ ಕೂಡಬೇಕೆ ? "

" ಹೌದು, ಯಾಕೆ ಕೂಡಬೇಕು ? ಕುತ್ತಿಗೆ ಹಿಡಿತು ತಳ್ಳಿದವರನ್ನು—"

" ಮದುವೆಯಾದ ತಪ್ಪಿಗೆ! "

" ಒಂದು ತಪ್ಪಿಗೆ ಇಡೀ ಬದುಕನ್ನೇ ಬಲಿಯಾಗಿ ಕೊಡಬೇಕೆನ್ನುತ್ತೀರಾ ? "

" ಹಾಗೆ ತಿಳಿದುಕೊಳ್ಳುವುದೇ ತಪ್ಪು ! ಮದುವೆಯೆಂದರೆ ಬರೀ ಕೊಡುವುದೂ ಅಲ್ಲ, ಕೊಳ್ಳುವುದೂ ಅಲ್ಲ ಇಬ್ಬರಿಂದಲೂ ಎರಡೂ ನಡೆಯಬೇಕಾಗುತ್ತದೆ "

" ತತ್ವದ ಮಾತು ಅದು—"

ವಾದವನ್ನು ಮುಂದಕ್ಕೆ ಬೆಳೆಸುವುದರಲ್ಲಿ ವಸಂತನಿಗೆ ಯಾವ ಪ್ರಯೋಜನವೂ ಕಾಣಲಿಲ್ಲ ನಡೆದ ಯಾವ ಘಟನೆಯಿಂದಲೂ ಮೋಹಿನಿಯ ಹಟ ಮಣಿದಿರಲಿಲ್ಲ ತನ್ನ ಹಟವನ್ನು ಆಕೆ ಬಿಡುವ ಹಾಗೆಯೂ ಕಾಣಲಿಲ್ಲ. ಹಟ ? ಹೌದು ಹಟವಲ್ಲದೆ ಬೇರೆ ಯಾವುದೂ ಆಕೆಯಲ್ಲಿ ಇದ್ದ ಹಾಗೆ ಕಾಣಲಿಲ್ಲ ಆ ಹಟದಲ್ಲಿ ಆಕೆಗ ವಿಶ್ವಾಸವಿದ್ದಿತು, ತನಗೆ ಇರಲಿಲ್ಲ ಇರಲಿಲ್ಲವೆಂಬುದನ್ನು ಹೇಳಿಯೂ ಪ್ರಯೋಜನ ಕಾಣಲಿಲ್ಲ. ಆದರೂ ಆಕೆಯನ್ನು ಮನವೊಲಿಸಲಾಗದಿದ್ದರೂ ಅಸಮಾಧಾನಪಡಿಸುವುದೇತಕ್ಕೆ ಎಂದುಕೊಂಡು ಕೇಳಿದ

" ಹಾಗಾದರೆ ನೀನು ಮಾಡಬೇಕೆನ್ನುವುದಾದರೂ ಏನು ? "

" ಏನನ್ನೂ ಮಾಡಬೇಕೆನ್ನುವುದಿಲ್ಲ. ನನ್ನ ಮಟ್ಟಿಗೆ ನಾನು—ಯಾರ ಹಂಗೂ ಇಲ್ಲದೆ ಬದುಕಬೇಕು ಎಂಬ ತೀರ ಸಾಮಾನ್ಯವಾದ ಬಯಕೆಯನ್ನಿಟ್ಟುಕೊಂಡಿದ್ದೇನೆ."

" ಸಾಮಾನ್ಯವೆನಿಸಬಹುದು· ಆದರೆ ಸಾಧಿಸುವುದು ಬಹಳ ಕಷ್ಟ ! "

" ಅಷ್ಟು ನನಗೆ ಗೊತ್ತಿಲ್ಲವೆ ? ಆದರೆ ಅದರಲ್ಲಿದ್ದ ಸುಖ ಬೇರೆ ಎಲ್ಲಿಯೂ ಇಲ್ಲ ! "

ವಸಂತ ನಿರೀಕ್ಷಿಸಿದಂತೆ ಮೋಹಿನಿಯ ಮುಖದಲ್ಲಿ ಗೆಲುವು ಮೂಡಿತು. ವಸಂತ ಮತ್ತೆ ವಸಂತನಾದ ! ಸಹಾನುಭೂತಿಯ ಮೂರ್ತಿಯಾದ. ಆತನ

ಮಾತಿನಲ್ಲಿ ಮತ್ತೆ ಭರವಸೆ ಮೂಡಿತು ವಸಂತನಿಗೆ ಇದು ತಿಳಿಯದಿರಲಿಲ್ಲ. ಅವನೆಂದ .

" ಆ ಮಾತನ್ನು ನಾನು ಒಪ್ಪುತ್ತೇನೆ ಆದರೆ ಅಷ್ಟರಿಂದ ಬದುಕು ಕೊನೆಯ ವರೆಗೂ ಸುಖದ್ದಾದೀತು ಎಂದು ನನಗೆ ತೋರುವುದಿಲ್ಲ."

" ಹೌದೆ ? ಯಾಕಾಗಬಾರದು ? "

" ಯಾಕಾಗಬಾರದು ಎಂಬ ಪ್ರಶ್ನೆ ನಿರರ್ಥಕ ಆಗಬಹುದೆ ಆಗುತ್ತದೆಯೆ ಎಂಬುದು ಮುಖ್ಯ ! "

" ಹಟ ಹಿಡಿದರೆ ಆಗುತ್ತದೆ ! "

" ಹಟ ಹಿಡಿದರೆ ಹಟ ಸಾಧಿಸಬಹುದು ಆದರ ಸುಖದ ಭರವಸೆಯನ್ನು ಹೇಳಲಾರೆ."

" ಹಟ ಸಾಧಿಸಿದ್ದೇ ಸುಖ ! " ಮೋಹಿನಿ ನಕ್ಕು ಹೇಳಿದಳು.

" ಅಷ್ಟು ಸುಖ ಬದುಕಿಗೆ ಸಾಲದು—"

" ಇನ್ನೇನು ಬೇಕು ? "

" ನಾನೇಕೆ ಹೇಳಲಿ ? ಇಂದಿಲ್ಲ ನಾಳೆ ತಾನಾಗಿಯೇ ತಿಳಿಯುತ್ತದೆ ! ಏನಿದ್ದರೂ ನೀನು ಹೆಂಗಸು ಎಂಬುದನ್ನು ಮಾತ್ರ ಮರೆಯಬೇಡ—"

" ಹೆಂಗಸು ಎಂದಮಾತ್ರಕ್ಕೆ ಮನೆಯ ಕೆಲಸ, ಮಕ್ಕಳ ಆರೈಕೆ ಇದರಲ್ಲಿಯೇ ಸುಖವನ್ನು ಕಾಣಬೇಕು, ಎಂದಲ್ಲವೆ ನಿಮ್ಮ ಅಭಿಪ್ರಾಯ ? "

" ಮಡದಿಯಾದವಳಿಗೆ ಆ ಎರಡು ಕೆಲಸಗಳೂ ಇವೆ. ಆದರೆ ಅಷ್ಟು ಮಾತ್ರವೇ ಇಲ್ಲ. ಆಕೆ ಮನೆಗೆ ಯಜಮಾನಿ. ಆಕೆಯಿಂದಲೆ ಮನೆ ನಿಲ್ಲಬೇಕು. ಮನೆ ಎಂದರೆ ಆಕೆ ! "

" ಹೌದು. ಆಕೆಯ ಮೇಲೆ ಮನೆ ನಿಲ್ಲುತ್ತದೆ, ಅಲ್ಲವೆ ? ಆಕೆಯ ಮೇಲೆ ಮನೆ ನಿಲ್ಲುತ್ತದೆ, ಕುಸಿದೂ ಬೀಳುತ್ತದೆ ! ಆಕೆಯನ್ನು ಕೊಂದು, ಜೀವ ಹಿಂಡಿ, ಕೆಳಕ್ಕೆ ತಳ್ಳಿ ಎಲ್ಲರೂ ಆಕೆಯನ್ನು ತುಳಿದು ನಿಂತು ಸುಖಪಡುತ್ತಾರೆ ! ಮಕ್ಕಳೂ ಅಷ್ಟೇ, ಗಂಡನೂ ಅಷ್ಟೇ, ಉಳಿದವರೂ ಅಷ್ಟೇ ! "

ವಸಂತನಿಗೆ ಆಕೆಯ ಆವೇಶದಿಂದ ನೋವಾಗಲಿಲ್ಲ , ನಗು ಬಂದಿತು. ಭಾವನೆ ಬುದ್ಧಿಯನ್ನು ಹೇಗೆ ತಳ್ಳಿ ತಾನೇತಾನಾಗಿ ನಿಲ್ಲಬಹುದು ಎಂದೂ ಆತನಿಗೆ ಅನಿಸಿರಬೇಕು. ಅವನೆಂದ :

" ಸರಿ ಭಾರಿಯಾಯಿತು ಈ ಹಟ ಆದರೆ—"

" ಆದರೆ—ಎನ್ನುವುದಕ್ಕೆ ನನ್ನಲ್ಲಿ ಆಸ್ಪದವೇ ಇಲ್ಲ ಈ ಹಟ ಇಲ್ಲದಿದ್ದರೆ ನಾನು ಎಂದಿಗೋ ಮಣ್ಣುಪಾಲಾಗುತ್ತಿದ್ದೆ—ಅದೂ ಒಂದು ಗಂಡಸಿನ ಕೃಪೆಯಿಂದ! "

ವಸಂತ ನಕ್ಕ—ಅದೇ ನಗೆಯನ್ನು—ಅದೇ ಹಟಕ್ಕಾಗಿ. ಮೋಹಿನಿ ಕೇಳಿದಳು

" ಯಾಕೆ? ನಗು ಬರುತ್ತಿದೆಯಲ್ಲನೆ ನನ್ನ ಮಾತಿಗೆ?"

" ಮಾತಿಗಲ್ಲ ಹಟಕ್ಕೆ—"

" ಈಗ ನಕ್ಕವರು ಒಂದು ದಿನ ನೀವಾಗಿಯೇ ನನ್ನನ್ನು ಅಭಿನಂದಿಸ ಬಹುದು! "

" ಅಭಿನಂದಿಸುವಂತಾದರೆ ಸಂತೋಷದಿಂದ ಅಭಿನಂದಿಸುವೆ! "

" ಆದರೂ ಅಭಿನಂದಿಸುವಂತಾದರೆ ಎನ್ನುವ ಮಾತನ್ನು ಬಿಡುವುದಿಲ್ಲ, ಅಲ್ಲವೆ?"

" ಅದು ನನ್ನ ಮಾತಾಯಿತು ಅದರಿಂದ ನಿನಗೇನಾಗಬೇಕು?"

" ಏನಾಗದಿದ್ದರೂ ನಿಮಗೆ ಭರವಸೆಯಿಲ್ಲ ಎಂದಾಯಿತು "

" ನಿನಗೆ ಭರವಸೆಯಿದ್ದರೆ ಸಾಕಲ್ಲ! ನನಗೆ ಸಂತೋಷ."

ಸಂತೋಷವೆಂದು ಬಾಯಿಂದ ಮಾತ್ರ ಹೇಳಿದ—ಆಕೆಯನ್ನು ನೋಯಿಸ ಲಿಕ್ಕಾಗದೆ. ಆದರೆ ಅದೇ ಮಾತು ಮೋಹಿನಿಗೆ ನಿಜವಾಗಿಯೂ ಸಂತೋಷ ವನ್ನುಂಟುಮಾಡಿತು ಆ ಒಂದು ಮಾತಿನಿಂದ ಇತ್ತೀಚೆಗೆ ಅನುದಿನವೂ ಬೆಳೆಯುತ್ತಿದ್ದ ದುಗುಡ ಮಾಯವಾಯಿತು. ಭವಿಷ್ಯದಲ್ಲಿ ಮತ್ತೆ ಭರವಸೆ ಬೆಳೆಯಿತು. ವಸಂತ! ಎಷ್ಟಾದರೂ ಆತ ವಸಂತ! ಎಂದುಕೊಂಡಳು. ಕಣ್ಣಿನಲ್ಲಿಯೇ ತನ್ನ ಕೃತಜ್ಞತೆಯನ್ನು ಸೂಚಿಸಿದಳು—ವಸಂತನಿಗೆ ಇದು ತಿಳಿಯ ದಿರಲಿಲ್ಲ. ಕೈಯಲ್ಲಿಯ ಪುಸ್ತಕದ ಹಾಳೆಗಳನ್ನು ಸುಮ್ಮನೆ ತಿರುವಿಹಾಕಿದ.

" ಚಹ ಮಾಡಲೆ?" ಎಂದಳು ಮೋಹಿನಿ.

" ಅಂತೂ ನೆನಪಾಯಿತು ಕೊನೆಗೆ—" ಎಂದು ವಸಂತ ನಗೆಯಾಡಿದ.

" ಯಾವಾಗಲೊ ಆಗಬಹುದಿತ್ತು. ನೀವೇ ಪ್ರಾರಂಭಮಾಡಿದಿರಿ— ಜಗಳವನ್ನು! "

" ಜಗಳವೆ ? "

" ಅಲ್ಲದೇನು ? ಒಂದು ರೀತಿಯಿಂದ ಒಳ್ಳೆಯದೇ ಆಯಿತು. ಜಗಳದಿಂದ ಮನಸ್ಸು ತಿಳಿಯಾಗುತ್ತದೆ, ತಿಳಿಯುತ್ತದೆ " ನಿಜವಾಗಿಯೂ ಹೌದು ಎಂದ ವಸಂತ—ತನ್ನಷ್ಟಕ್ಕೆ ಮೋಹಿನಿಯ ಮನಸ್ಸು ಆತನಿಗೆ ಸ್ಪಷ್ಟವಾಗಿ ತಿಳಿಯಿತು. ಪೂರ್ತಿಯಾಗಿ ಅರ್ಥವಾಗಲಿಲ್ಲ ಮಾತ್ರ ಆ ಅರ್ಥವನ್ನು ಕೈಯಲ್ಲಿಯ ಪುಸ್ತಕದಲ್ಲಿ ಕಾಣುವವನಂತೆ ಮತ್ತೆ ಹಾಳೆಗಳನ್ನು ಮಗುಚಿದ.

" ಯಾವ ಪುಸ್ತಕ ಅದು ? "

" ಏನೋ ಓದಲೆಂದು ತಂದೆ—ರೈಲಿನಲ್ಲಿ "

" ಯಾವುದು ? "

" ನಿನಗೆ ಒಳ್ಳೆ ಮೆಚ್ಚಿಗೆಯಾಗಬಹುದು—ಓದಿದರೆ ? "

" ಕೊಡಿರಿ ಹಾಗಾದರೆ, ನೋಡುವಾ. ಕಾದಂಬರಿಯೆ ? "

" ಕಾದಂಬರಿಯಲ್ಲ, ನಾಟಕ ! "

" ನಾಟಕ ! " ಎಂದು ಮೋಹಿನಿ ಮೂಗು ಮುರಿದಳು.

" ಅಷ್ಟೇನೂ ಮೂಗು ಮುರಿಯಬೇಕಿಲ್ಲ, ಜಗದ್ವಿಖ್ಯಾತ ನಾಟಕ ಅದು ! "

" ಯಾವುದು ಹೇಳಬಾರದೆ ? "

" ಇಬ್ಸೆನ್‌ನ ' ಸೂತ್ರದ ಬೊಂಬೆ ' "

" ಹೆಸರು ಕೇಳಿದ ಹಾಗಿದೆ—"

" ಹಾಗೆ ಹೇಳಿದರೆ ನಿನ್ನ ಡಿಗ್ರಿ ಕಸಿದುಕೊಂಡಾರು ! "

" ನಾನಿನ್ನೂ ತೆಗೆದುಕೊಂಡೇ ಇಲ್ಲ ! "

" ಇದನ್ನು ಓದಿದರೆ—"

" ಏನಾಗುತ್ತದೆ ? "

" ನಿನ್ನ ತಲೆ ಇನ್ನೂ ಕೆಡುತ್ತದೆ. ಅದಕ್ಕೇ ನಾನು ಕೊಡುವುದಿಲ್ಲ ! "

" ಕೊಡುವುದಿಲ್ಲವೆ ? ಯಾಕೂ ? "

ಎಂದವಳೇ ವಸಂತನ ಕೈಯಿಂದ ಪುಸ್ತಕವನ್ನು ಕಸಿದುಕೊಂಡೇ ಬಿಟ್ಟಳು. ಪುಟಗಳನ್ನು ತಿರುವಿಹಾಕತೊಡಗಿದಳು. ವಸಂತ ನಸುನಗುತ್ತ ಕೇಳಿದ :

" ಅಂತೂ ಚಹ ಮಾಡಿ ಕುಡಿದಹಾಗಾಯಿತಲ್ಲ ? "

" ನನಗೆ ಕೇಳಿದರೆ, ಹೇಗಾದರೂ ಹೊರಗೆ ಹೋಗುವುದೇ ಇದೆ. ಅಲ್ಲಿಯೆ

ಎಲ್ಲಿಯಾದರೂ. ”

" ಅದೇ ಅದೇ ನನಗೆ ಗೊತ್ತಿಲ್ಲವೆ? ಅಂಗಡಿಯ ಚಹ ಅಂದರೆ ಪ್ರೀತಿ ಬಹಳ ಎಂದು ಕಾಣುತ್ತದೆ."

" ಪ್ರೀತಿಗಿಂತ ಅನುಕೂಲ ಹೆಚ್ಚು, ಇನ್ನೇನೂ ಇಲ್ಲ! ”

" ಹೌದು ಅನುಕೂಲಕ್ಕೆಯೇ ಪ್ರೀತಿಮಾಡುವ ಈ ಕಾಲದಲ್ಲಿ ಅದೇನು ಹೆಚ್ಚಲ್ಲ! ” ಎಂದು ವಸಂತ ಗಟ್ಟಿಯಾಗಿ ನಕ್ಕ

" ಏನು ಹಾಗೆಂದರೆ? ಏನು ಹೇಳಬಾರದೆ?”

" ಏನೂ ಇಲ್ಲ, ಮಹಾರಾಯಿತಿ ಹೊರಡುವುದಿದ್ದರೆ ಬೇಗನೆ ಹೊರಟು ಬಿಡು. ಆಗಲೆ ಕತ್ತಲಾಗುತ್ತ ಬಂತು ಅಂತೂ ನಿನ್ನ ಶಾಲೆಯ ಭಾಷಣಕ್ಕೆ ಹೋದಂತಾಯಿತಲ್ಲ?”

" ಇಲ್ಲಿಯೇ ಆಯಿತಲ್ಲ, ರಾಯರ ಉದ್ದಾಮ ಭಾಷಣ! ”

" ಭಾಷಣ ಆಯಿತು, ಪರಿಣಾಮ ಮಾತ್ರ ಆಗಲಿಲ್ಲ! ”

" ಭಾಷಣ ಮಾಡುವವರು ಪರಿಣಾಮದ ಕಡೆಗೆ ಲಕ್ಷ್ಯ ಕೊಡಬಾರದು, ತಿಳಿಯಿತೆ?”

" ತಿಳಿಯಿತು. ಸಂಪೂರ್ಣವಾಗಿ ತಿಳಿಯಿತು—ನಿಷ್ಪ್ರಯೋಜಕವಾಗಿ ಮಾತನಾಡಬಾರದು ಎಂದು ”

" ಯಾಕೆ, ನಿಮಗೆ ಅಸಮಾಧಾನವಾಯಿತೆ, ನಾನು ಹಾಗೆ ಹೇಳಿದೆನೆಂದು?”

" ಈಗ ಅಸಮಾಧಾನವಾದರೂ ನನ್ನ ಆಸೆ ಇನ್ನೂ ಪೂರ್ತಿಯಾಗಿ ಕಳೆಯಲಿಲ್ಲ! ”

" ನಿಮ್ಮ ಮಾತನ್ನು ನಾನು ಒಪ್ಪಬಹುದು ಎಂದು ಆಸೆ ಇದೆಯೆ?”

" ಖಂಡಿತವಾಗಿಯೂ ಇದೆ ”

" ಹುಚ್ಚು ನಿಮಗೆ, ಹಾಗಾದರೆ ”

" ನೋಡುವಾ."

" ಹೊರಡೋಣವೆ ಹಾಗಿದ್ದರೆ?”

" ಹೊರಡುವ ಮನಸ್ಸಿದ್ದರೆ ಹೊರಡಬಹುದು! ”

" ಮಾತು ತಿರುಗಿಸುವುದರಲ್ಲಿ ಒಳ್ಳೆ ಜಾಣರಲ್ಲವೆ ನೀವು?”

"ತಲೆ ತಿರುಗಿಸುವುದರಲ್ಲಿ ನೀನು ಇದ್ದಷ್ಟೇ!"

"ನಿಮ್ಮ ಮಾತಿನಿಂದ ಮಾತ್ರ ನನ್ನ ತಲೆ ತಿರುಗಿತ್ತು—ಒಂದು ಕ್ಷಣ"

"ತಲೆ ತಿರುಗಿದರೂ ಅಭಿಪ್ರಾಯ ತಿರುಗಲಿಲ್ಲ!"

"ಯಾರ ವಿಷಯದಲ್ಲಿ? ನಿಮ್ಮ ವಿಷಯದಲ್ಲಿಯೆ?"

"ನನ್ನ ವಿಷಯ ಏನು ಬಂತು? ಆನಂದನ ವಿಷಯದಲ್ಲಿ!"

"ಆನಂದನ ವಿಷಯದಲ್ಲಿ! ಆ ಅಭಿಪ್ರಾಯವನ್ನು ಬ್ರಹ್ಮದೇವನೇ ತಿರುಗಿಸಬೇಕು!"

"ಆ ಬ್ರಹ್ಮನಿಗಾದರೂ ಸಾಧ್ಯವಿದ್ದ ಹಾಗೆ ಕಾಣುವುದಿಲ್ಲ—ನಿನ್ನ ಹಟ ನೋಡಿದರೆ!"

"ಇನ್ನು ಐದು ನಿಮಿಷಗಳಲ್ಲಿ ಹೊರಡುವೆ ಆಗಬಹುದೆ?"

ಎಂದು ಮೋಹಿನಿ ಒಳ್ಳೆ ಉತ್ಸಾಹದಿಂದ ಮತ್ತೊಮ್ಮೆ ವೇಷಭೂಷೆಗೆ ತೊಡಗಿದಳು ವಸಂತನಿಗೆ ಆಕೆಯನ್ನು ನೋಡಿ—ಆಕೆ ಮಾತನಾಡಿದ, ಆಡುತ್ತಿದ್ದ ರೀತಿಯನ್ನು ನೆನೆದು ಅನಿಸಿತು: 'ಏನು ವಿಚಿತ್ರ ಸ್ವಭಾವ? ಎಲ್ಲ ರೀತಿಯಿಂದಲೂ ಇಷ್ಟು ಸರಳವಾಗಿ, ಇಷ್ಟು ನೇರವಾಗಿ ನಡೆದುಕೊಳ್ಳುವ ಈಕೆ ಆನಂದನ ಬಗೆಯಲ್ಲಿ ಹೀಗೇಕೆ ನಡೆದುಕೊಳ್ಳುತ್ತಾಳೆ? ತನ್ನನ್ನು ಕಂಡರೆ ಇಷ್ಟು ಆದರ ಯಾಕೆ? ತನ್ನ ಸಹಾನುಭೂತಿಯಿದ್ದರೆ ಬೇಕಾದುದನ್ನು ಮಾಡಬಲ್ಲೆ ಎಂದಿದ್ದಳು. ಯಾವ ಅರ್ಥದಿಂದ ಹಾಗೆ ಮಾತನಾಡಿದ್ದಳು? ಏನಿದ್ದರೂ ತನಗೆ ಹೇಳಬೇಕಾದುದನ್ನು ಹೇಳಿಯಾಗಿತ್ತು ಆಕೆಯ ಹಟ ಮಣಿಯಲಾರದೆಂದು ತಿಳಿದಾಗ ಮಾತ್ರ ಸುಮ್ಮನೆ ಅಸಮಾಧಾನ ಬೇಡವೆಂದು, ಆಕೆಗೆ ಸರಿಹೋಗುವಂತೆ ಮಾತನಾಡಿದ್ದು ಸರಿಯೆ? ಆನಂದನೊಡನೆ ಆಕೆ ಕೂಡಿಕೊಂಡಿರಬೇಕು ಎಂಬ ತನ್ನ ಪ್ರಯತ್ನದ ಫಲವಾಗಿಯೆ ಈಕೆಯ ಪರಿಚಯ ಬೆಳೆದದ್ದು. ಅದು ಅಸಾಧ್ಯವಿಲ್ಲವೆಂದು ಈಕೆ ಸ್ಪಷ್ಟವಾಗಿ ಹೇಳುತ್ತಿದ್ದಾಗ ಈ ಪರಿಚಯ ಇನ್ನು ಮುಂದೆ ಯಾತಕ್ಕೆ? ಅಲ್ಲದೆ, ಶಕುಂತಲೆ? ಈಕಯ ಕೂಡ ಈ ಪರಿಚಯವನ್ನು ಹೀಗೆಯೆ ಉಳಿಯಗೊಟ್ಟರೆ ಅದು ಶಕುಂತಲೆಗೆ ಅನ್ಯಾಯವಲ್ಲವೆ? ಅದೆಂಥ ಅನ್ಯಾಯ? ಏನೋ ಒಂದು ಬಗೆಯ ಸೌಹಾರ್ದ ತನ್ನಿಂದ ಈಕೆಗೆ ಸಿಕ್ಕುತ್ತದೆ. ಯಾರಿಂದಲೂ ಸಹಾನುಭೂತಿ ಇಲ್ಲದ ಒಂದು ಏಕಾಕಿಯಾದ ಜೀವ ತನ್ನ ಸೌಹಾರ್ದದ ಮಾತಿನಿಂದ ಭರವಸೆಯನ್ನು ಪಡೆದು ಸುಖವಾಗಿರ

ಬಹುದಾದರೆ ಅಷ್ಟು ಮಾತನ್ನು—ಅದರಿಂದ ಒದಗಬಹುದಾದ ಸಮಾಧಾನವನ್ನು—ಯಾಕೆ ತಡೆಹಿಡಿಯಬೇಕು ? ರಾಯಚೂರಿನಲ್ಲಿ ಶಕುಂತಲೆಯೊಡನೆ ಕಳೆದ ಹದಿನೈದು ಇಪ್ಪತ್ತು ದಿನಗಳನಂತರ ಮೋಹಿನಿಯ ಅಸ್ಪಷ್ಟ ಮೋಹ ಸ್ಪಷ್ಟವಾಗಿ ಕಡಿಮೆಯಾಗಿತ್ತೆಂಬುದನ್ನು ವಸಂತ ಚೆನ್ನಾಗಿಯೇ ತಿಳಿದಿದ್ದ. ಶಕುಂತಲೆ-ಮೋಹಿನಿಯರಲ್ಲಿದ್ದ ರೂಪಸಾಮ್ಯ ಈ ವಿಷಯದಲ್ಲಿ ತುಂಬಾ ಸಹಾಯಕವಾಗಿತ್ತು ಆದ್ದರಿಂದ ಮೋಹಿನಿಯ ಸಹವಾಸದಲ್ಲಿ ಯಾವ ಅಪಾಯವೂ ವಸಂತನಿಗೆ ಎಷ್ಟು ಯೋಚಿಸಿದರೂ ಕಾಣಲಿಲ್ಲ ಮೋಹಿನಿ ಹೊರಡಲು ಸಿದ್ಧಳಾಗಿದ್ದಳು ಮುಂದೆ ಬಂದು ನಿಂತಿದ್ದರೂ ಕಿಟಕಿಯಾಚೆ ನೋಡುತ್ತ ಯೋಚನೆಗಳಲ್ಲಿ ಮುಳುಗಿದ ಆತನನ್ನು ನೋಡಿ ಕೇಳಿದಳು

" ಏನೋ ಸಮಾಧಿಯಲ್ಲಿ ಮುಳುಗಿದ ಹಾಗಿದೆಯಲ್ಲ ? "

" ಸಮಾಧಿಯಲ್ಲಿ ಅಲ್ಲ, ಸಮಸ್ಯೆಯಲ್ಲಿ ! "

" ಏನು ಸಮಸ್ಯೆ ? "

" ತಮ್ಮದೇ ಇನ್ನೇನು ಇರುತ್ತದೆ ಬೇರೆ ? "

" ನಿಮಗೆ ಸಿಕ್ಕಿದ್ದರೆ ' ಇವರು ' ? "

" ನಾನೇ ಹೋಗಬೇಕೆಂದಿದ್ದೇನೆ, ನಾಳೆ ನಾಡಿದ್ದು ! "

" ಯಾಕೊ ? "

" ಅದು ಈಗ ಯಾಕೆ ? ಆಮೇಲೆ ನೋಡುವಾ."

" ಎಲ್ಲಿಗೆ ಈಗ ಹೋಗುವುದು ? " ಎಂದು ಕೇಳಿದಳು ' ಎಲ್ಲಿಗಾದರೂ ಹೋಗಬಹುದು ಕೇಳಬೇಕೆಂದು ಕೇಳುತ್ತಿದ್ದೇನೆ ಸುಮ್ಮನೆ ' ಎನ್ನುವ ಅರ್ಥವಿದ್ದಿತು ಆ ಕೇಳುವ ರೀತಿಯಲ್ಲಿ

" ಎಲ್ಲಿಗೂ ಇಲ್ಲ ಚಹ ಕುಡಿಯಲಿಕ್ಕೆ ! "

" ಚಹ ಕುಡಿದೇ ಸ್ವಾತಂತ್ರ್ಯೋತ್ಸವ ನಡೆಸಬೇಕೆನ್ನುತ್ತೀರಾ ? "

" ——— "

ಮಾತು ನಡೆದೇ ಇತ್ತು ದಾದರ್ ನಿಲ್ದಾಣದ ವರೆಗೆ ಬಂದಾಗ ಗಂಟೆ ಏಳೂವರೆಯಾಗಿ ಹೋಗಿತ್ತು. ಮೋಹಿನಿ ಕೇಳಿದಳು

" ಫೋರ್ಟಿನಲ್ಲಿ ಭಾರಿ ಇಲ್ಯುಮಿನೇಶನ್ ಮಾಡಿದ್ದಾರಂತೆ—ನಿಮ್ಮ ಆಫೀಸು, ಅದು ಇದು. ಅಲ್ಲಿಯ ವರೆಗೆ ಹೋಗಿ ನೋಡಿ ಸುತ್ತಾಡಿಕೊಂಡು

ಬರೋಣವೆ ?"

"ಇನ್ನು ಮೇಲೆಯೆ ?"

"ದೀಪ ನೋಡುವುದು ರಾತ್ರಿಯಾದಮೇಲೆಯೇ !"

"ಆದರೆ ಬರಲಿಕ್ಕೆ ವಿಪರೀತ ತಡವಾಗಿ ಬಿಡುತ್ತದೆ. ಅಲ್ಲದೆ, ದೀಪ ಏನು ನೋಡುವುದು ?"

"ದೀಪ ಅಲ್ಲ ನಾವು ನೋಡುವುದು—ದೀಪೋತ್ಸವ !"

"ಬೇಡ. ನನಗೆ ತೀರಾ ಬೇಸರವಾಗಿದೆ. ಇನ್ನೂ ಬೋರಿವಲಿ ಕಾಣ ಬೇಕು ನಾನು." ಹೀಗೆಂದು ನಿಲ್ದಾಣದ ಹತ್ತಿರದ ಇರಾಣಿ ಅಂಗಡಿಯೊಂದನ್ನು ಸೇರಿದರು. ವಸಂತ ಕೇಳಿದ

"ನಿನ್ನ ಊಟ ? ಹೊ ! ಅಡಿಗೆಯ ಕಾರ್ಯಕ್ರಮ ಎಲ್ಲಿಗೆ ಬಂದಿತು ?"

"ಎಲ್ಲಿಗೇನು ? ಅದಿಗೆಯಾಗುತ್ತಿದೆಯಲ್ಲ !"

"ಆದರೆ ಕೋಣೆಯಲ್ಲಿ ಯಾವುದೂ ಕಾಣಲೇ ಇಲ್ಲ"

"ಅಡಿಗೆ ಆಚೆಯ ಕೋಣೆಯಲ್ಲಿ ! ಆದರೆ ಮಾಡುವವಳು ನಾನಲ್ಲ ! ಆಪಟೆಯವರ ಅಡಿಗೆಯವಳು ಮಾಡುತ್ತಾಳೆ. ಊಟ ನನ್ನ ಕೋಣೆಗೆ ಬರುತ್ತದೆ !"

"ಸರಿ—ನೀನೇ ಮಾಡುವವಳಿದ್ದೆಯಲ್ಲವೆ ?"

"ಅಡಿಗೆ ಮಾಡುವುದೇನು ದೊಡ್ಡ ಮಾತು ? ನನ್ನಂಥವರು ಅಡಿಗೆಯಲ್ಲಿ ಹೊತ್ತನ್ನೇನು ಕಳೆಯುವುದು ಎಂದು ಈ ವ್ಯವಸ್ಥೆಯಾಗಿದೆ"ಎಂದು ಗಟ್ಟಿಯಾಗಿ ನಕ್ಕಳು.

ವಸಂತ ಹೊರಡುವುದರಲ್ಲಿದ್ದ ಹೊರಡುವುದೆಂದು ಸುಮ್ಮನೆ ಏನಾದ ರೊಂದು ಮಾತೆಂದು ಕೇಳಿದ

"ಮತ್ತಿನ್ನೇನು ಸಮಾಚಾರ ?"

"ಏನು ಸಮಾಚಾರ ? ಎಲ್ಲವನ್ನೂ ಹೇಳಿದೆ. ನೀವು ಮಾತ್ರ ಯಾವು ದನ್ನೂ ಹೇಳಲಿಲ್ಲ"

"ನಾನೇನು ಹೇಳುವುದು ? ಮುಂಬಯಿ ತೀರ ಬೇಸರವೆನಿಸತೊಡಗಿದೆ, ಅದರಲ್ಲಿಯೂ ಈಗ ಒಂದು ತಿಂಗಳು ಸುಖವಾಗಿ ಇದ್ದು ಬಂದನಂತರ."

"ಬೇನೆಯ ಮನೆಯಲ್ಲಿಯೂ ಸುಖವಾಗಿ ಇದ್ದಿರಾ ?"

ವಸಂತನಿಗೆ ಮಾತಿನಲ್ಲಿ ಸಿಕ್ಕಂತಾಯಿತು. ಸುಖವಾಗಿ ಎಂಬ ಮಾತು ತನಗೆ ತಿಳಿಯದಲೆ ಹೊರಬಿದ್ದಿತ್ತು. ಇದ್ದ ಮಾತೇ ಅದು ತನ್ನ ಮದುವೆ ಗೊತ್ತಾದುದನ್ನೂ, ತಾನು ರಾಯಚೂರಿನಲ್ಲಿ ಇದ್ದ ಬಗೆಯನ್ನೂ ಎಲ್ಲವನ್ನೂ ನೇರವಾಗಿ ಹೇಳಿಬಿಟ್ಟಿದ್ದರೆ ಇಂಥ ಪೇಚುಗಳು ಬರುವಂತಿರಲಿಲ್ಲ ಯಾಕೆ ಹೇಳಲಿಲ್ಲ? ಹೇಳಿಬಿಡಬಹುದಾಗಿತ್ತು ಆದರೆ ಇನ್ನು ಮೇಲೆ ಹೇಳುವುದು ಸಾಧ್ಯವಿರಲಿಲ್ಲ ಪ್ರಸಂಗ ಬಂದಾಗ ಹೇಳಿದರಾಯಿತೆಂದು ಸುಮ್ಮನಾದ ಆದರೆ ಈಗ ಮಾತನ್ನು ತಪ್ಪಿಸಿಕೊಳ್ಳಬೇಕಿತ್ತು. ಅವನೆಂದ

" ಹುಂ ಏನಿದ್ದರೂ ಮನೆಯಲ್ಲಿ ಇರುವದು ಬೇರೆಯೆ ಯಾರೂ ಇಲ್ಲದೆ ಒಬ್ಬರೇ ಇರುವುದು ಬೇರೆಯೆ—" ಎಂದು ಮಾತು ತೇಲಿಸಿದ

ಮೋಹಿನಿ ವಸಂತನ ಮುಖವನ್ನು ತೀಕ್ಷ್ಣವಾಗಿ ನೋಡಿದಳು. ' ಒಬ್ಬಂಟಿಗನಾಗಿ ಇರುವುದು ಬೇಸರವೆ ನಿಮಗೆ? ನಾನಿಲ್ಲವೆ? ' ಎಂದು ಕೇಳುವಂತಿತ್ತು ಆ ನೋಟ ಆದರೆ ಶಕುಂತಲೆಯತ್ತ ಓಡಿದ ವಸಂತನ ಮನಸ್ಸು ಅಂಥ ಯಾವ ಅರ್ಥವನ್ನೂ ಗ್ರಹಿಸುವಂತಿರಲಿಲ್ಲ

" ಇನ್ನು ಯಾವಾಗ ಕಾಣಬಹುದು, ರಾಯರನ್ನು ? ಮತ್ತೆ ಒಂದು ತಿಂಗಳೆ? "

" ಇನ್ನೆಲ್ಲಿ ಹೋಗುತ್ತೇನೆ? ಬೇಕಾದಾಗ—"

' ಒಂದು ತಿಂಗಳು ' ಎಂಬ ಮಾತಿನಲ್ಲಿಯ ಮೂದಲಿಕೆಯನ್ನು ತಪ್ಪಿಸಲೆಂದು ಆತ ಹಾಗೆ ಹೇಳಿದ ' ಬೇಕಾದಾಗ ' ಎಂದು ಆದರೆ ಮೋಹಿನಿಗೆ ಮಾತ್ರ ಆ ಒಂದು ಮಾತಿನಿಂದ ಹಿಡಿಸಲಾರದಷ್ಟು ಸಂತೋಷವಾಯಿತು. ಆ ಸಂತೋಷದಲ್ಲಿಯೆ ಕೊನೆಗೆ ಹಿಂದಿರುಗಿದಳು. ವಸಂತ ಬೋರಿವಲಿಯನ್ನು ಸೇರಿದ

೯

ಆಯತ ವೇಳೆಗೆ ವಸಂತ ಬಂದಿದ್ದರಿಂದ ತನಗೆ ಶಾಲೆಯಲ್ಲಿಯ ಉತ್ಸವದಲ್ಲಿ ಯಾವ ಭಾಗವನ್ನೂ ವಹಿಸಲಾಗಲಿಲ್ಲವೆಂಬ ಅಳುಕು ಮೋಹಿನಿಯ ಮನಸ್ಸಿನಲ್ಲಿ ಇದ್ದೇ ಇದ್ದಿತು. ಆದರೆ ವಸಂತ ಬಂದು ಮಾತನಾಡಿದ ಸುಖದಲ್ಲಿ ಅದೆಲ್ಲವನ್ನೂ ಮರೆತಿದ್ದಳಲ್ಲದೆ ಆ ವಿಷಯದಲ್ಲಿ ಮುಖ್ಯಾಧ್ಯಾಪಿಕೆ ಏನೆನ್ನಬಹುದೆಂಬುದನ್ನೂ ನೆನೆದಿರಲಿಲ್ಲ ಮೂರನೆಯ ದಿನ ಶಾಲೆಗೆ ಹೋಗುವಾಗ ಆ ಯೋಚನೆ ಮತ್ತೆ ತಲೆದೋರಿತು ಏನಾದರೊಂದು ನೆವ ಹೇಳಿದರಾಯಿತು, ಎಂದು ಸಮಾಧಾನ ತಂದುಕೊಂಡಳು ನಿರೀಕ್ಷಿಸಿದಂತೆ—ಆಗಲೆ ಸಹಾಧ್ಯಾಪಿಕೆಯರು ಸೂಚನೆ ಕೊಟ್ಟಿದ್ದರು—ಮಧ್ಯಾಹ್ನದ ಬಿಡುವಿನಲ್ಲಿ ಮುಖ್ಯಾಧ್ಯಾಪಿಕೆಯಿಂದ ಕರೆ ಬಂದಿತು ಮೋಹಿನಿ ಐದು ನಿಮಿಷಗಳಲ್ಲಿ ಆಕೆಯ ಕೋಣೆಯಲ್ಲಿದ್ದಳು ಮುಖ್ಯಾಧ್ಯಾಪಿಕೆ ಬಿಗುವಿನಲ್ಲಿದ್ದುದು ಸ್ಪಷ್ಟವಾಗಿಯೆ ಇದ್ದಿತು. ಮೋಹಿನಿಗೆ ಕುಳಿತುಕೊಳ್ಳಲೂ ಹೇಳಲಿಲ್ಲ

"ಮೊನ್ನೆ ದಿನ ಸಾಯಂಕಾಲ ನೀವು ಬರಲೇ ಇಲ್ಲ?"

"ಹೌದು. ಬರಲಾಗಲಿಲ್ಲ—"

"ಎಲ್ಲರೂ ಬರಲೇಬೇಕೆಂದು ನೋಟೀಸ್ ಬಂದಿತ್ತಲ್ಲವೆ?"

"ಬಂದಿತ್ತು. ಆದರೆ ನನಗೆ ಮಧ್ಯಾಹ್ನ ವಿಪರೀತ ತಲೆನೋವು ಬಂದಿತು."

"ಹುಂ ನಿಮಗೆ ಶಾಲೆಯ ಕೆಲಸವೆಂದರೆ ಯಾವಾಗಲೂ ತಲೆನೋವೇ ಬರುತ್ತದೆ—"

ಈ ಮಾತನ್ನು ಆಕೆ ಹೇಳಬೇಕಿರಲಿಲ್ಲ ಎಂದೆನಿಸಿತು, ಮೋಹಿನಿಗೆ ಕೊಂಚ ಸಿಟ್ಟೂ ಬಂದಿತು ಆದರೆ ಏನನ್ನೂ ಮಾಡುವ ಹಾಗಿರಲಿಲ್ಲ

"ನನಗೆ ಇಂಥದು ಸರಿಬೀಳುವುದಿಲ್ಲ ಶಾಲೆಯ ಕೆಲಸ ನಿಮ್ಮದು ಎಂದು ತಿಳಿದುಕೊಂಡು ಕೆಲಸ ಮಾಡಬೇಕಾಗುತ್ತದೆ. ಕೂಲಿಯವರ ಹಾಗೆ ನಿರ್ದಿಷ್ಟ ಕೆಲಸಗಳನ್ನು ಮಾಡಿದರೆ ನಡೆಯುವುದಿಲ್ಲ—"

"ನಾನು ಯಾವ ಕೆಲಸಗಳನ್ನೂ ತಪ್ಪಿಸಿಲ್ಲ—"

"ಕೆಲಸಗಳನ್ನು ತಪ್ಪಿಸಿಲ್ಲ ಎನ್ನುವುದು ಯಾವ ದೊಡ್ಡ ಮಾತೂ ಅಲ್ಲ.

ಮಾಡಿದ್ದನ್ನು ಎಷ್ಟು ಸರಿಯಾಗಿ ಮಾಡಿದ್ದೀರಿ, ಯಾವ ಆಸ್ಥೆಯಿಂದ ಮಾಡಿದ್ದೀರಿ—ಎನ್ನುವುದು ಮುಖ್ಯ "

ಮೋಹಿನಿಗೆ ಈ ಉಪದೇಶ ಅನಗತ್ಯವೆನಿಸಿತು, ತಾನು ಮಾಡಿದ ಯಾವ ಕೆಲಸದಲ್ಲಿಯೂ ಆಕೆ ನಿಜವಾಗಿಯೂ ಅನಾಸ್ಥೆ ತೋರಿಸಿರದ್ದರಿಂದ.

" ಆಸ್ಥೆಯಿರದಿದ್ದರೆ ನಿಮ್ಮಂಥವರು ಈ ಕೆಲಸಕ್ಕೆಯೇ ಬರಬಾರದು—"

" ಅಂಥದೇನಾಗಿದೆ ಈಗ ? "

" ಏನಾಗಿದೆ ಎನ್ನುತ್ತೀರಾ ? ಸ್ವಾತಂತ್ರ್ಯೋತ್ಸವದಂಥ ಉತ್ಸವ ಕೂಡ ನಿಮಗೆ ಯಾವ ಮಹತ್ವದ್ದೂ ಎನಿಸಲಿಲ್ಲ, ಶಾಲೆಗೆ ಸರಕಾರದ ಉಪಮಂತ್ರಿಗಳು ಬಂದದ್ದು ನಿಮಗೆ ಏನೂ ವಿಶೇಷವೆನಿಸಲಿಲ್ಲ ಇಂದು ನಿಮಗೆ ಹೀಗೆ ಎನಿಸಿದರೆ ನಿಮ್ಮ ಕೈಯಲ್ಲಿಯ ವಿದ್ಯಾರ್ಥಿಗಳಿಗೆ ಏನೆನಿಸಬೇಕು ! ನಿಮ್ಮನ್ನು ನೋಡಿಕೊಂಡೇ ಅವರು ಕಲಿಯುವುದು ಎಂಬುದನ್ನು ನೀವು ಮರೆಯಬಾರದು—"

" ನನಗೆ ಸ್ವಸ್ಥವಿರಲಿಲ್ಲ—"

" ಸಾಕು. ನನಗೆ ಪ್ರತಿಯಾಗಿ ಮಾತು ಹೇಳಬೇಡಿರಿ. ನಿಮಗೆ ಯಾವಾಗಲೂ ಒಂದು ಏನಾದರೂ ಇದ್ದೇ ಇರುತ್ತದೆ. ಒಂದು ಒಂದೂವರೆ ತಿಂಗಳಲ್ಲಿ ಮೂರು ಸಾರೆ ರಜೆ ಬೇಡಿದ್ದೀರಿ—ಬೇಡಿದ್ದೀರಿ ಎನ್ನುವುದಕ್ಕಿಂತ ತೆಗೆದುಕೊಂಡಿದ್ದೀರಿ !—"

ಮೋಹಿನಿಗೆ ತೀರ ತಡೆಯದಾಯಿತು

" ಮೈಯಲ್ಲಿ ಸರಿಯಿಲ್ಲದಿದ್ದರೆ ಏನು ಮಾಡುವುದು ? ನಾನೇನು ಬೇಕೆಂತಲೆ ಹಾಗೆ ಮಾಡಿದೆನೆ ? "

" ಅದಾವುದೂ ನನಗೆ ತಿಳಿಯದು ನನಗೆ ತಿಳಿಯುವುದು ಶಾಲೆಯ ಕೆಲಸ ಒಂದೇ ಇದು ಬರೀ ಕೆಲಸದ ಪ್ರಶ್ನೆಯಾಗಿರದೆ ಶಿಸ್ತಿನ ಪ್ರಶ್ನೆಯಾಗಿದೆ—ಇಂಥ ನಡತೆ ನನಗೆ ಸರ್ವಥಾ ಮಾನ್ಯವಿಲ್ಲ ! "

ಎಂದು ಎದುರಿನ ಕಾಗದಗಳನ್ನು ಪರಿಶೀಲಿಸತೊಡಗಿದಳು ಮೋಹಿನಿ ನಿಂತೇ ಇದ್ದಳು. ಹೇಳದೆಯೆ ಹೊರಟುಹೋದರೆ ಅದಕ್ಕೊಂದು ವ್ಯಾಖ್ಯಾನ ಸಿದ್ಧವಾಗಿಯೆ ಇರುತ್ತಿತ್ತು. ಆದರೆ ' ಹೊರಡಲಾ ? ' ಎಂದು ಕೇಳುವುದಕ್ಕೂ ಮನಸ್ಸಾಗದೆ ನಿಂತಲ್ಲಿಯೇ ನಿಂತಳು—ತೀರ ಅವಮಾನವೆನಿಸಿತು. ಆದರೆ

ಉಪಾಯವಿರಲಿಲ್ಲ. ಕೊನೆಗೆ ಆಕಾಶವಾಣಿಯಾಯಿತು :

" ನೀವು ಹೊರಡಬಹುದು ! " ಎಂದು.

ಮೋಹಿನಿ ನಿಧಾನವಾಗಿ ಕೋಣೆಯೊಳಗಿನಿಂದ ಕಾಲೆಳೆದಳು ರೋಷ ಭೂಗರ್ಭದಲ್ಲಿಯ ಅಗ್ನಿರಸದಂತೆ ಪುಟಿದೇಳುತ್ತಿತ್ತು.

ಮೋಹಿನಿ ಅಧ್ಯಾಪಿಕೆಯರ ಕೋಣೆಗೆ ಬಂದು ಸ್ತಬ್ಧಳಾಗಿ ಕುಳಿತಳು. ಆಕೆಯ ಮುಖವನ್ನು ನೋಡಿದವರೆಲ್ಲರಿಗೂ ತಿಳಿದಿತ್ತು—ಏನಾದರೂ ' ಪೂಜೆ ' ನಡೆದಿರಬೇಕೆಂದು ಕೆಲವೇ ದಿನಗಳಲ್ಲಿ ಮೋಹಿನಿಯ ಗೆಳೆತನಕ್ಕೆ ಪಾತ್ರಳಾದ ವಿಮಲಾ ಮಾತ್ರ ಸಮೀಪಕ್ಕೆ ಬಂದು ಕೇಳಿದಳು

" ಏನಾದರೂ ಅಂದಳೆ ? "

" ಅನ್ನದೆಯೆ ಇರುತ್ತಾಳೆಯೆ ? "

" ಆಕೆಗಂತೂ ಒಂದು ಎಳೆ ಸಿಕ್ಕರೆ ಸಾಕು ಯಾವಾಗಲೂ ಹೀಗೆಯೆ "

" ಆದರೆ ಎಷ್ಟು ಮಾತನಾಡುವುದು ? ರಜೆ ಇದ್ದಿತಲ್ಲವೆ ಅಂದು ರಜೆಯ ದಿನ ಬರಲೇಬೇಕೆಂಬ ಕಟ್ಟು ಯಾಕೆ ? ರಜೆಯನ್ನು ಯಾತಕ್ಕೆ ಕೊಡಬೇಕು ಹೀಗಿದ್ದರೆ ? "

" ಇದನ್ನೆಲ್ಲ ಯಾರು ಕೇಳಬೇಕು ಆಕೆಯನ್ನು ? ಎಷ್ಟಾದರೂ ಮುಖ್ಯಸ್ಥಳು ಆಕೆ ಆಕೆ ಹೇಳಿದ ಹಾಗೆ ನಡೆಯಬೇಕಾಗುತ್ತದೆ. ಅಲ್ಲದೆ ವಿಪರೀತ ಸಿಡುಕಿನ ಸ್ವಭಾವ ಆಕೆಯದು ಕೆಲಸ ಕಾಯ್ದುಕೊಳ್ಳಬೇಕಾದರೆ ಆಕೆ ಹೇಳಿದ ಹಾಗೆಯೆ ನಡೆಯಬೇಕು ಎರಡು ವರ್ಷದ ಹಿಂದೆ ಇಬ್ಬರ ವಿಚಾರದಲ್ಲಿ ಇಂಥದೇ ಸಣ್ಣ ಪುಟ್ಟ ಮಾತುಗಳನ್ನು ಮನಸ್ಸಿನಲ್ಲಿ ಇಟ್ಟುಕೊಂಡು ವರದಿ ಮಾಡಿದಳು."

" ಮುಂದೆ ? "

" ಮುಂದೇನು ? ವರ್ಷ ಮುಗಿಯುವ ಹೊತ್ತಿಗೆ ನೋಟೀಸು. ರಜೆ ಮುಗಿಯುವಷ್ಟಕ್ಕೆ ಅಪ್ಪಣೆ ! "

" ತೀರ ಕ್ರೂರವಾಯಿತು."

" ಅದಕ್ಕೇ ನಾವೆಲ್ಲ ಯಾಕೆ ಸುಮ್ಮನೆ ಎಂದು ಆಕೆಯ ಗೊಡವೆಗೇ ಹೋಗುವುದಿಲ್ಲ ಆಕೆ ಹೇಳಿದಷ್ಟು ಚಾಚೂ ತಪ್ಪದೆ ಮಾಡಿಬಿಡುತ್ತೇವೆ. ಆಕೆ ಹೇಳಿದ್ದು ಸರಿ ಎಂದಲ್ಲ, ಮಾಡದಿದ್ದರೆ ಕೆಲಸಕ್ಕೆ ದಾಳಿ ಬರುತ್ತದೆ

ಎಂಬುದಕ್ಕಾಗಿ—"

ವಿಮಲೆಯ ವ್ಯವಹಾರಬುದ್ಧಿಯ ಉಪದೇಶ ಮೋಹಿನಿಯ ಮನಸ್ಸಿನ ಮೇಲೆ ಪರಿಣಾಮವನ್ನು ಮಾಡಿತೊ ಇಲ್ಲವೊ ಆದರೆ ಆಕೆಯ ಸಹಾನುಭೂತಿಯ ಮಾತುಗಳು ಮಾತ್ರ ಆಕೆಗೆ ಬೇಕಾದ ಸಮಾಧಾನವನ್ನು ಒದಗಿಸಿದವು ಸಿಟ್ಟು ಮಾತ್ರ ಕಡಿಮೆಯಾಗಲಿಲ್ಲ, ಆ ಕ್ಷಣದ ಅವಮಾನ ಮನಸ್ಸಿನಿಂದ ಮರೆಯಾಗಲಿಲ್ಲ ಇಡೀ ದಿವಸ ಮನಸ್ಸು ಮಧ್ಯಾಹ್ನದ ಸನ್ನಿವೇಶವನ್ನೇ ನೆನೆಯುತ್ತಿದ್ದಿತು ಇವರು ಕೊಡುವ ನೂರಿಪ್ಪತ್ತು ರೂಪಾಯಿಗಳಿಗೆ ಇಂಥ ದಾಸ್ಯವೆ? ಆದರೆ ಅದರ ಹೊರತು ಬೇರೆಯಾದ ಮಾರ್ಗವಿರಲಿಲ್ಲ ಎಂಥ ಅಸಹಾಯತೆ ಇದು? ಯಾವ ಕೆಲಸವನ್ನೂ ತಪ್ಪಿಸಿರಲಿಲ್ಲ ಆಕೆ ಆಪಾದಿಸಿದ ಹಾಗೆ ಎರಡು ಮೂರು ಸಲ ಮನೆಯಿಂದ ರಜೆಗಾಗಿ ಬರೆದದ್ದು ನಿಜ ಆದರೆ ಏನಾಯಿತು? ಮನಃಸ್ಥಿತಿಯೇ ಹಾಗಿದ್ದಿತು. ಶಾಲೆಗೆ ಹೋಗುವ ಮನಸ್ಸಿರಲಿಲ್ಲ. ಅಲ್ಲದೆ ಆಕಸ್ಮಿಕವಾಗಿ ರಜೆಯನ್ನು ಪಡೆಯುವುದು ನಿಯಮಗಳಿಗೆ ವಿರುದ್ಧವಾಗಿರಲಿಲ್ಲವಲ್ಲ! ಎಂದಮೇಲೆ ಈಕೆ ಹೀಗೇಕೆ ಮಾತನಾಡಬೇಕು? ಅಧಿಕಾರವಿದ್ದ ಮಾತ್ರಕ್ಕೆ ಹೀಗೆ ಅದನ್ನು ಉಪಯೋಗಿಸುವುದೆ? ಮೋಹಿನಿಯ ಅಭಿಮಾನ ಕೆರಳಿತು—ಆದರೆ ಪರಿಸ್ಥಿತಿಯ ಪಂಜರದಲ್ಲಿ ಸಿಲುಕಿದ ಪಕ್ಷಿಗೆ ಅಭಿಮಾನ ಸಲ್ಲದು ಎಂಬುದನ್ನು ಆಕೆ ಒಪ್ಪುವಂತಿರಲಿಲ್ಲ ತನ್ನ ಬಗ್ಗೆ ಅಭಿಮಾನವನ್ನು ಬಿಟ್ಟು ಬದುಕಿದ ಬಾಳು ಬಾಳೇ ಅಲ್ಲ ಎಂದು ಬಗೆದವಳಿಗೆ ಅಭಿಮಾನಕ್ಕೆ ಏಟು ಕೊಡುವ—ಅದನ್ನು ಮುರಿಯುವ—ಯಾವ ಅಂಶವೂ ವಿಪರೀತವಾಗಿಯೇ ತೋರಿದರೆ ಆಶ್ಚರ್ಯವಿರಲಿಲ್ಲ ಆ ಕ್ಷಣಕ್ಕೆ ಮೋಹಿನಿಗೆ ಒಂದು ಮಾತು ಮನದಟ್ಟಾಯಿತು ಈಕೆ ಮುಖ್ಯಾಧ್ಯಾಪಿಕೆಯಿರುವನಕ ಈ ಅಭಿಮಾನಕ್ಕೆ ಆಸ್ಪದವಿರಲಿಲ್ಲ ಎಂದು. ಇಂಥ ಪರಿಸ್ಥಿತಿಗೆ ಬಾಗಬೇಕೆ? ಇದು ನಿಜವಾಗಿಯೂ ಪರಿಸ್ಥಿತಿಯಲ್ಲ, ಒಂದು ವ್ಯಕ್ತಿಯ ದುರಭಿಮಾನದ ದಬ್ಬಾಳಿಕೆ ಎಂದೇ ತೋರಿತು ಆಕಗೆ. ಆದರೆ ತಾನು ಒಪ್ಪಿಕೊಂಡ ಕೆಲಸವನ್ನು ಮಾಡುವುದೇ ಆದರೆ—ಬೇರೆ ಮಾರ್ಗವೇ ಇರಲಿಲ್ಲ!—ಇನ್ನು ಮುಂದೆ ಎಲ್ಲ ಕೆಲಸವನ್ನೂ ಸರಿಯಾಗಿ, ಎಂದರೆ ನಿಯಮಕ್ಕೆ ಸರಿಯಾಗಿ, ಮಾಡತಕ್ಕದ್ದು. ಈಕೆಗೆ ಮಾತನಾಡಲು ಆಸ್ಪದವನ್ನೇ ಕೊಡತಕ್ಕದ್ದಲ್ಲ ಎಂದು ನಿರ್ಧರಿಸಿಕೊಂಡಳು. ಆದರೆ ಮನಸ್ಸು ಮಾತ್ರ ಬೇಸರಪಡತೊಡಗಿತು. ಬೇರೆ ದಾರಿಗಳನ್ನು ಯೋಚಿಸ

ತೊಡಗಿತು

ದಿನಗಳು ಉರುಳುತ್ತಲೇ ಇದ್ದವು—ಯಾಂತ್ರಿಕವಾಗಿ ಕೆಲಸದಲ್ಲಿಯ ಆಸ್ಥೆಯ ವಿಚಾರವಾಗಿ ಇನ್ನೂ ಒಂದೆರಡು ನಲ ಮುಖ್ಯಾಧ್ಯಾಪಿಕೆಯ ಬಿರು ನುಡಿಯ ಉಪದೇಶದ ಭಾಷಣಗಳನ್ನು ಕೇಳಬೇಕಾಗಿ ಬಂದಿತ್ತು. ಹೀಗೆ ನಡೆದಾಗಲೆಲ್ಲ ಮೋಹಿನಿ ತನ್ನನ್ನೇ ಕೇಳಿಕೊಳ್ಳುತ್ತಿದ್ದಳು ಆಸ್ಥೆ ಆದರಗಳು ಹುಟ್ಟಬೇಕಾದರೆ ತಾನಾಗಿಯೇ ಹುಟ್ಟಬೇಕಲ್ಲವೆ? ಒತ್ತಾಯದಿಂದ ಸಾಧ್ಯವೆ? ಎಲ್ಲ ಕೆಲಸಗಳನ್ನೂ ಒಂದೂ ತಪ್ಪದೆ ತಾನು ಮಾಡುತ್ತಿದ್ದ ವಿಶ್ವಾಸ ತನ್ನ ಮಟ್ಟಿಗಾದರೂ ಇತ್ತು. ಹೀಗಿದ್ದರೂ ತನ್ನ ಮುಖ್ಯಸ್ಥೆ ಹೇಳುವ ಹಾಗೆ ಆ ಕೆಲಸ ತನ್ನದು ಎನ್ನುವ ಭಾವನೆ ಮಾತ್ರ ಹುಟ್ಟುತ್ತಿರಲಿಲ್ಲವೆಂಬುದೂ ನಿಜ. ದುಡ್ಡಿಗಾಗಿ ದುಡಿಯುವುದು, ಪ್ರಾಮಾಣಿಕವಾಗಿ ದುಡಿಯುವುದು—ಇಷ್ಟು ಮಾತ್ರ ಮೋಹಿನಿಗೆ ಅರ್ಥವಾಗುತ್ತಿತ್ತು. ಇಷ್ಟು ಪ್ರಾಮಾಣಿಕತೆ ಸಾಲದು ಎಂದು ಮುಖ್ಯಾಧ್ಯಾಪಿಕೆಯ ಅಭಿಪ್ರಾಯ ಆದರೆ ಹೃದಯದಲ್ಲಿ ಇಲ್ಲದ್ದನ್ನು ಹೊರಗಿನಿಂದ ಹೇಗೆ ತರುವುದು? ಎಂದು ಮೋಹಿನಿ ಸುಮ್ಮನಾಗಿಬಿಡು ತ್ತಿದ್ದಳು. ಹೀಗಾಗಿ ಮೊದಲ ತಿಂಗಳಲ್ಲಿ ಗಳಿಸಿದ ಸಾಮಾನ್ಯವಾದ ಅಭಿಪ್ರಾಯ ನಿಧಾನವಾಗಿ ಇಲ್ಲದಾಗತೊಡಗಿತ್ತು. ಮುಖ್ಯಾಧ್ಯಾಪಿಕೆಯ ಸಂಶಯಿತ ದೃಷ್ಟಿ ತನ್ನ ಮೇಲಿದೆ ಎಂಬುದು ತಿಳಿದಾಗಿನಿಂದಂತೂ ಆಕೆಯ ಬಗ್ಗೆ ಮೋಹಿನಿಯ ಸಿಡುಕು ಇನ್ನೂ ಬೆಳೆಯಿತಲ್ಲದೆ ತನ್ನ ಅಭಿಮಾನದ ಪ್ರಶ್ನೆ ಬಂದಾಗ ಮಣಿಯಲು ಒಪ್ಪಲಾಗದ ಮನಃಸ್ಥಿತಿಯೇ ಆಕೆಯಲ್ಲಿ ಬೆಳೆಯತೊಡಗಿತು ಯಾವ ಮಾತೇ ಇರಲಿ, ನಿಯಮಕ್ಕೆ ಸರಿಯಾಗಿಲ್ಲದ್ದನ್ನು ತಪ್ಪಿಸಿ ತನ್ನ ಕೆಲಸವನ್ನು ನಿರ್ವಿಕಾರ ವಾಗಿ ನಿರ್ವಹಿಸತೊಡಗಿದ್ದಳು. ಹೀಗಾಗಿ, ಕ್ರಮವಾಗಿ ಕೆಲಸದ ವಿಷಯದಲ್ಲಿ ಮೊದಲು ಇದ್ದ ಪ್ರೀತಿಯೂ ಕಡಿಮೆಯಾಯಿತು. ಯಾವ ವಿಷಯದಲ್ಲಿ ಮಾತಿಗೆ ಆಸ್ಪದವನ್ನೇ ಕೊಡುತ್ತಿರದ್ದರಿಂದ ಮುಖ್ಯಸ್ಥಳಿಂದ ಯಾವ ಮಾತೂ ಬರುವಂತಿರಲಿಲ್ಲ. ಆದರೆ ಈ ಕೆಲಸ ಕೊನೆಯ ವರೆಗೆ ನಿಲ್ಲತಕ್ಕದ್ದಲ್ಲವೆಂಬ ಭೀತಿ ಮಾತ್ರ ಆಗೀಗ ಕಂಗೆಡಿಸುತ್ತಿತ್ತು. ಮುಖ್ಯಸ್ಥಳಿಗೆ, ತನ್ನ ದೂರದ ಸಂಬಂಧಿಕಳೊಬ್ಬಳನ್ನು ಕೆಲಸಕ್ಕೆ ಸೇರಿಸಿಕೊಳ್ಳಬೇಕಾಗಿದೆಯೆಂದೂ, ಅದಕ್ಕಾಗಿ ಏನಾದರೊಂದು ನೆಪ ಹೂಡಿ ಯಾರನ್ನಾದರೂ ಆಕೆ ಕಡಿಮೆಮಾಡ ಬಹುದೆಂದೂ ವಿಮಲೆ ಹೇಳಿದ ಮಾತು ಮೋಹಿನಿಯ ಭೀತಿಯನ್ನು ಇನ್ನೂ

ಬಲಪಡಿಸುತ್ತಿತ್ತು

ಇಂಥ ಮನಃಸ್ಥಿತಿಯಲ್ಲಿದ್ದಾಗಲೆಲ್ಲ ಮೋಹಿನಿ ವಸಂತನನ್ನು ಹುಡುಕಿಕೊಂಡು ಹೋಗುತ್ತಿದ್ದಳು ಆ ದಿವಸ ಬಂದುಹೋದನಂತರ ಮೂರು ನಾಲ್ಕು ಬಾರಿ ವಸಂತನಿಗೆ ಬರಹೇಳಿದ್ದರೂ ವಸಂತ ತಾನಾಗಿಯೇ ಆಕೆಯ ಕೋಣೆಗೆ ಹೋಗಿರಲಿಲ್ಲ ಈ ಎರಡು ತಿಂಗಳಲ್ಲಿ ಮೂರು ನಾಲ್ಕು ಬಾರಿ ಮೋಹಿನಿಯೇ ಆತನನ್ನು ಸಂಧಿಸಿ ತನ್ನ ತೊಂದರೆಗಳನ್ನು ತಿಳಿಸಿದ್ದಳು. ವಸಂತನ ಉಪದೇಶ ಆಕೆಗೆ ಸರಿಯಾಗಿ ಕಾಣುತ್ತಿದ್ದಿಲ್ಲ.

"ಕೆಲಸವನ್ನು ಒಪ್ಪಿದಮೇಲೆ ಅದನ್ನು ಸರಿಯಾಗಿ ಮಾಡಬೇಡವೆ ?"

"ಸರಿಯಾಗಿ ಎಂದರೇನು ? ಸರಿಯಾಗಿಯೇ ಮಾಡುತ್ತಿದ್ದೇನೆ."

"ಹಾಗಾದರೆ ಯಾಕೆ ಈ ತಕರಾರು ?"

"ನಾನೇನೋ ಕೆಲಸವನ್ನು ಮನಸ್ಸಿಟ್ಟು ಮಾಡುವುದಿಲ್ಲವಂತೆ—ಆಸ್ಥೆ ಇಲ್ಲವಂತೆ !"

"ಅದು ಆಕೆಗೆ ಗೊತ್ತು, ನಾನೇನು ಹೇಳಲಿ ?"

"ಕೊಟ್ಟ ದುಡ್ಡಿಗೆ ಒಪ್ಪಿದ ಕೆಲಸ. ಆಸ್ಥೆಯೇನು ಬಂತು ಮಣ್ಣು ? ಈಗ ನೀವೆಲ್ಲ ಆಫೀಸಿನಲ್ಲಿ ಕೆಲಸ ಮಾಡುತ್ತೀರಿ—ನಿಮ್ಮ ಮನೆಯ ಕೆಲಸ ಎಂದು ತಿಳಿದು, ನಿಮ್ಮ ಸ್ವಂತಹದ ಕೆಲಸ ಎಂದು ತಿಳಿವೇ ಮಾಡುತ್ತೀರಾ ?"

"ಬಹುಮಟ್ಟಿಗೆ ಹೌದು ಇನ್ನೂ ಒಂದು ನಮ್ಮ ಕೆಲಸಕ್ಕೂ ನಿನ್ನ ಕೆಲಸಕ್ಕೂ ವ್ಯತ್ಯಾಸವಿದೆ ಮಕ್ಕಳಿಗೆ ಪಾಠ ಹೇಳುವ ಕೆಲಸವನ್ನು ಕೂಲಿಯ ಕೆಲಸದಂತೆ ನಿರ್ವಹಿಸಿದರೆ ಸಾಲದು. ಮನಮುಟ್ಟಿ ಮಾಡಿದರೆಯೆ ಮಾಡಿದ ಪಾಠ ಮಕ್ಕಳ ಮನಸ್ಸನ್ನು ಮುಟ್ಟಬಹುದು."

"ಹಾಗಿದ್ದರೆ ನಾನು ಈ ಕೆಲಸವನ್ನೇ ಮಾಡಬಾರದಾಯಿತು."

"ಯಾಕೆ ? ಆ ಕೆಲಸದಲ್ಲಿ ಮನಸ್ಸು ಸೇರುವುದಿಲ್ಲವೆ ?"

ಮೋಹಿನಿಗೆ ಉತ್ತರ ಹೇಳುವುದು ಕಷ್ಟವಾಗಿತ್ತು. ಮನಸ್ಸು ಸೇರುವುದಿಲ್ಲ ಎಂದು ಸ್ಪಷ್ಟವಾಗಿ ಗೊತ್ತಿದ್ದರೂ, ಯಾಕೆ ಎಂದು ಕೇಳಿದರೆ ಏನು ಉತ್ತರ ? ಆ ಉತ್ತರ ಮಾತ್ರ ಮೋಹಿನಿಯ ಮನಸ್ಸಿಗೆ ಸ್ಪಷ್ಟವಾಗಿ ಹೊಳೆದಿರಲಿಲ್ಲ. ಅಸ್ಪಷ್ಟವಾಗಿ ನೂರು ಬಯಕೆಗಳು ಮನಸ್ಸಿನೆದುರು ನುಸುಳಿಹೋಗುತ್ತಿದ್ದವು. ಮನಸ್ಸನ್ನು ವ್ಯಗ್ರಗೊಳಿಸುತ್ತಿದ್ದವು. ಆದರೆ ಏನೆಂದು ಕೇಳಿದರೆ

ಹೇಳಲು ಸಾಧ್ಯವಾಗುತ್ತಿರಲಿಲ್ಲ. ಏನು ಎಂದು ಕೇಳುವವರೂ ಇರಲಿಲ್ಲ.

ಹನ್ನೊಂದು ಗಂಟೆಯಿಂದ ಐದರ ವರೆಗೆ ಶಾಲೆಯಲ್ಲಿ ದುಡಿಯುತ್ತಿದ್ದಳು. ತಿಂಗಳ ಕೊನೆಯಲ್ಲಿ ಕೈಗೆ ಸಂಬಳವೂ ಸಿಕ್ಕುತ್ತಿತ್ತು. ಬೇಕಾದ ಬಟ್ಟೆಬರೆ, ತಿನಿಸು ಉಣಿಸು, ಪ್ರಸಾಧನ, ಗೆಳತಿಯ ಮಾತುಕತೆ, ಹರಟೆ, ಯಾವುದಿದ್ದರೂ ಮೋಹಿನಿಗೆ ಮನಸ್ಸಿನಲ್ಲಿ ಗೆಲುವಿರಲಿಲ್ಲ ಈ ಎರಡು ತಿಂಗಳಲ್ಲಿ ಮನಸ್ಸಿನ ಒಳಗಿನ—ತೀರ ಒಳಗಿನ—ಏಕಾಂತ ಯೋಚನೆಗೀಡುಮಾಡುತ್ತಿತ್ತು ಏನು ಮಾಡಿದ ಹಾಗಾಯಿತು ? ಎಂದೆನಿಸುತ್ತಿತ್ತು. ಆನಂದನ ಯೋಚನೆ ಮೂಡಿದಾಗ ಮನಸ್ಸು ಖತಿಗೊಳ್ಳುತ್ತಿತ್ತು—ಹಿಂದಿನ ಸ್ಮೃತಿಗಳಿಂದ ವಸಂತನನ್ನು ನೆನೆದಾಗ ಅವೆಲ್ಲವೂ ಮಾಯವಾಗಿ ಬಾಯಿಗೆ ಬಾರದ ಬಯಕೆಗಳು ಅಂತರಂಗದಲ್ಲಿ ಬಣ್ಣಗೊಳ್ಳುತ್ತಿದ್ದವು ಆ ಜುಹುವಿನ ಕನಸು! ಅದೇಕೋ ಇತ್ತೀಚೆ ಮೋಹಿನಿಯ ಕಣ್ಣೆದುರು ಹತ್ತಾರು ಬಾರಿಯಾದರೂ ಸುಳಿದು ಹೋಗಿರಬೇಕು ಅಂಥ ಕನಸು ಕೂಡ ತನ್ನ ಬದುಕಿಗೆ ಇಲ್ಲವೆ ? ಎಂದು ಎಷ್ಟೋ ಬಾರಿ ಮೊರೆಯಿಟ್ಟದ್ದಿತು, ಆಕೆಯ ಹೃದಯ ಆದರೆ ಏನೂ ಮಾಡುವ ಹಾಗಿರಲಿಲ್ಲ ದಿನದಿನಕ್ಕ ಒಳಗಿನ ಈ ಮೊರೆತ ಸ್ಪಷ್ಟವಾಗುತ್ತ ನಡೆಯಿತು ಮನಸ್ಸು ಹೆಚ್ಚುಹೆಚ್ಚಾಗಿ ವಸಂತನತ್ತ ಓಡತೊಡಗಿತು ತನ್ನ ಯಾವ ಕಷ್ಟವೇ ಆಗಲಿ, ನಷ್ಟವೇ ಆಗಲಿ, ಸಾಮಾನ್ಯವಾದ ಯಾವ ನಲಿವೇ ಆಗಲಿ, ವಸಂತನಿಗೆ ಹೇಳಬೇಕು, ಆತನೆದುರು ಎಲ್ಲವನ್ನೂ ಹೇಳಬೇಕು—ಹಂಬಲಿಸತೊಡಗಿತು. ಆದರೆ ಬೇಡಿದಾಗ ಸಿಕ್ಕುವ ವಸ್ತು ವಸಂತನಾಗಿರಲಿಲ್ಲ ಇತ್ತೀಚೆಗಂತೂ ಆತನನ್ನು ಕಾಣುವುದೇ ಕಷ್ಟವಾಗಿತ್ತು. ಆತ ದಾದರಿನಲ್ಲಿ ಸಾಯಂಕಾಲ ಊಟ ಮಾಡುವುದನ್ನೂ ನಿಲ್ಲಿಸಿದ್ದ ! ಆದ್ದರಿಂದ ಆತನನ್ನು ಕಾಣಬೇಕಾದರೆ ಆತನ ಆಫೀಸು ಬಿಡುವ ವೇಳೆಗೆ ಫೋರ್ಟಿಗೆ ಹೋಗಬೇಕು. ಇದು ಸಾಧ್ಯವಾಗಬೇಕಾದರೆ ನಾಲ್ಕು ಗಂಟೆಗೆ ಶಾಲೆಯಿಂದ ಹೊರಡಬೇಕು. ಇದಕ್ಕಾಗಿ ಪ್ರತಿಯೊಂದು ಸಲ ಒಂದೊಂದು ತರಹದ ನೆಪ ಹೂಡಬೇಕು

# ೧೭

ಅಕ್ಟೋಬರ್ ತಿಂಗಳ ಎರಡನೆಯ ವಾರವಾಗಿರಬಹುದು. ಬಿಸಿಲ ಬೇಗೆಯಲ್ಲಿ ಮುಂಬಯಿಯ ಹೃದಯ ಮೋಹಿನಿಯ ಹೃದಯದಲ್ಲಿಯ ಒಳಕುದಿಯಲ್ಲಿ ಬೆಂದಂತೆ ಬೆಂದುಹೋಗಿತ್ತು. ತನ್ನ ಬದುಕಿನ ಏಕಾಂತವನ್ನು ನೆನೆದಾಗ ತಿಳಿಯದಲೆ ಕಣ್ಣಲ್ಲಿ ಚಿಮ್ಮುತ್ತಿದ್ದ ನೀರು ಅಕ್ಟೋಬರ್ ತಿಂಗಳ ಬೆವರಿನಷ್ಟು ಸ್ವಾಭಾವಿಕವಾಗಿ ನಿರರ್ಗಳವಾಗಿ ಉಕ್ಕಿಬರುತ್ತಿತ್ತು. ಒಂದು ಸಾಯಂಕಾಲ ಮೋಹಿನಿ ವಸಂತನನ್ನು ಆತನ ಆಫೀಸಿನಲ್ಲಿಯೇ ಸಂಧಿಸಿದಳು. ಆಕೆಯ ಮುಖ ಬಾಡಿಹೋಗಿತ್ತು.

"ಅದೇನು ಮೋಹಿನಿ, ಹೀಗಿದ್ದೀ? ಮೈಯಲ್ಲಿ ಸ್ವಸ್ಥವಾಗಿಲ್ಲವೆ?"

"ಏನೊ—"

"ಯಾಕೆ? ಏನು ಸಮಾಚಾರ?"

"ಸಮಾಚಾರ ಏನೂ ಇಲ್ಲ"

"ಹಾಗಾದರೆ ಹೀಗೇಕೆ ಇದ್ದೀ?"

"ಹೀಗೆಂದರೆ ಹೇಗೆ? ಸರಿಯಾಗಿಯೇ ಇದ್ದೇನೆ"

"ಸರಿ. ಈ ಕಡೆ ಎಲ್ಲಾದರೂ ಕೆಲಸವಿದ್ದಿತೆ?"

"ಇಲ್ಲವಲ್ಲ. ನಿಮ್ಮ ಕಡೆಗೆಯೆ ಬಂದಿದ್ದೆ."

"ಏನು ವಿಶೇಷ?"

"ವಿಶೇಷ ಏನೂ ಇಲ್ಲ. ಬಹಳ ಬೇಸರವಾಯಿತು, ಬಂದೆ."

"ಶಾಲೆ?"

"ಕೊನೆಯ ಎರಡು ಗಂಟೆ ರಜೆ ಹೇಳಿ ಬಂದೆ."

"ಮತ್ತೆ ರಜೆ!"

"ಏನು ಮಾಡಲಿ? ಮನಸ್ಸೇ ನಿಲ್ಲಲಿಲ್ಲ"

ವಸಂತ ಸುಮ್ಮನಾದ. ಇತ್ತೀಚಿನ ಮೂರು ನಾಲ್ಕು ಸಂದರ್ಭಗಳಲ್ಲಿ ಇಂಥ ಮಾತುಗಳನ್ನು ಆತ ಆಕೆಯ ಬಾಯಿಂದ ಕೇಳಿದ್ದ. ಕೆಲಮಟ್ಟಿಗೆ ಅದರ ಅರ್ಥವನ್ನು ತಿಳಿದವನಾಗಿದ್ದ. ಆದರೆ ತಾನೇನು ಮಾಡಬಹುದು? ಸಹಾನುಭೂತಿಯ ಮೇಲು ಮಾತುಗಳನ್ನು ಹೇಳಿ ಕಳಿಸಿದ್ದ. ಆದರೆ ಮೋಹಿನಿಯ

ಹೃದಯದಲ್ಲಿ ಯಾವ ಬಯಕೆಗಳು ಮೂಡತೊಡಗಿದ್ದವು ಎಂಬುದು ಆತನಿಗೆ ಸ್ಪಷ್ಟವಾಗಿ ತಿಳಿದಿರಲಿಲ್ಲ ಮೋಹಿನಿ ತನ್ನ ಏಕಾಂತವನ್ನು, ತನ್ನ 'ಬೇಸರ' ವನ್ನು ಕುರಿತು ಮಾತನಾಡಿದಾಗ ಅದರ ಅರ್ಥ ಆತನಿಗೆ ತಿಳಿಯುತ್ತಿತ್ತು ಆದರೆ ಆ ಏಕಾಂತವನ್ನು, ಆ ಬೇಸರವನ್ನು ತಾನು ಕಳೆಯಬೇಕು ಎಂದು ಆಕೆಯಲ್ಲಿ ಬಲಿಯುತ್ತಿದ್ದ ಬಯಕೆ ಮಾತ್ರ ಆತನಿಗೆ ಅರ್ಥವಾಗಿರಲಿಲ್ಲ ಮೋಹಿನಿಯನ್ನು ಕಂಡಾಗಲೆಲ್ಲ ವಸಂತನ ಮನಸ್ಸು ಶಕುಂತಲೆಯ ಕಡೆಗೆ ಓಡುತ್ತಿತ್ತೆಂಬುದೇ ಇದಕ್ಕೆ ಮುಖ್ಯವಾದ ಕಾರಣವಾಗಿತ್ತು ಮೋಹಿನಿ ಕೇಳಿದಳು

"ಎಲ್ಲಿಗೆ ಹೋಗೋಣ ?"

"ಎಲ್ಲಿಗೆ ಹೋಗುವುದು ? ಹೋಗಲೇಬೇಕೆ ?"

"ಯಾಕೆ ? ಅಷ್ಟು ಬೇಸರವೆ ?"

"ಅಲ್ಲವೆ ? ಯಾವಾಗ ಬೆಳಿಗ್ಗೆ ಹತ್ತೂವರೆಗೆ ಬಂದವ ಇದುವರೆಗೆ ಕೆಲಸ ದಲ್ಲಿಯೇ ಇದ್ದೆ"

"ಈಗ ನಾನು ಬಂದಿದ್ದೇನೆ !—" ಎಂದು ಮೋಹಿನಿ ನಗೆಯೊಂದನ್ನು ಬೀರಿದಳು.

'ನಾನು ಬಂದರೆ ನಿಮ್ಮ ಬೇಸರ ಕಳೆಯಬೇಕು. ಅಲ್ಲವೆ ?' ಎಂದರ್ಥ ಆ ನಗೆಯದು ಆದರೆ ವಸಂತನಿಗೆ ಆ ಅರ್ಥ ಹೊಳೆಯಲಿಲ್ಲವೆಂದೇ ಕೇಳಿದ

"ನೀನು ಬಂದರೇನಾಯಿತು ? ಬಂದು ಮತ್ತೆ ಎಲ್ಲಿಯಾದರೂ ಹೋಗುವ ಎನ್ನುತ್ತಿದ್ದೀ"

"ಬೇಸರ ಹೋಗಲೆಂದೇ ನಾನು ಹಾಗೆ ಹೇಳುವುದು !"

"ಮನೆಗೆ ಹೋಗಿ ಹಾಯಾಗಿ ಮಲಗಿದರೆ ಬೇಸರ ತಾನಾಗಿಯೇ ಕಳೆಯುತ್ತದೆ !"

ಇನ್ನೂ ಒಂದು ಮಾತನ್ನು ತನ್ನ ಮಟ್ಟಿಗಾದರೂ ಸೇರಿಸಬಹುದಾಗಿತ್ತು. 'ಮನೆಗೆ ಹೋಗಿ ಹಾಯಾಗಿ ಮಲಗಿ ಮನಸ್ಸನ್ನು ಶಕುಂತಲೆಯೆಡೆಗೆ ಓಡಿಸಿ ದರೆ ಬೇಸರ ಕಳೆಯುತ್ತದೆ' ಎಂದು ಆತ ಮೋಹಿನಿಗೆ ಹೇಗೆ ಹೇಳಿಯಾನು ? ಆದರೆ ಆತ ಮಾತ್ರ ಇತ್ತೀಚೆಗೆ ತನ್ನ ಬೇಸರವನ್ನು ಹಾಗೆಯೇ ಕಳೆಯುತ್ತಿದ್ದ.

"ಮನೆಗೆ ಹೋದರೆ ಬೇಸರ ಬೆಳೆಯುತ್ತದೆ—ಕೋಣೆಯ ನಾಲ್ಕು ಮೂಲೆಗಳಿಂದಲೂ ನುಗ್ಗಿಬಂದು ನುಂಗಿಬಿಡುತ್ತದೆ !"

" ಎಲ್ಲಿಗೆ ಹೋಗುವುದು ಹಾಗಾದರೆ ? "

" ಮಲಬಾರ್ ಹಿಲ್ಸ್‌ಗೆ ಹೋಗೋಣವೆ ? "

" ಅಷ್ಟು ದೂರ ? ನನ್ನಿಂದಾಗದು ನಿಜವಾಗಿಯೂ ನನಗೆ ತುಂಬ ದಣಿವಾಗಿದೆ "

" ಹಾಗಾದರೆ ಎಲ್ಲಿ ? "

" ಚರ್ನಿರೋಡ್ ಗಾರ್ಡನ್ಸ್‌ನಲ್ಲಿ ಕೂಡೋಣವೆ ? "

" ಏನಿದೆ ಅಲ್ಲಿ ? "

" ಎಲ್ಲಿ ಏನಿದೆ, ಹಾಗಿದ್ದರೆ ? "

' ನೀವಿದ್ದರೆ ಎಲ್ಲಿ ಬೇಕಾದಲ್ಲಿ ಎಲ್ಲವೂ ಇವೆ ' ಎಂಬುದನ್ನು ಹೇಳಲಾರದ್ದಕ್ಕೆ ಮೋಹಿನಿ ಹಾಗೆ ಹೇಳಿದ್ದಳು.

" ಇಷ್ಟೇಕೆ ನಿರುತ್ಸಾಹ ಬಂದಿದೆ ನಿನಗೆ ? ಆಗಿದೆಯಾದರೂ ಏನು ? "

" ಏನೂ ಆಗಿಲ್ಲ ಎಲ್ಲವೂ ಬೇಡವಾಗಿದೆ—"

" ನಾನು ಕೂಡ ? "

ವಸಂತ ಆ ಮಾತನ್ನು ಚೇಷ್ಟೆಗೆಂದು ಆಡಿದ. ಆದರೆ ದಿನದಿನವೂ ಬೆಳೆಯುತ್ತಿದ್ದ ಆಕೆಯ ಹೃದಯದ ಬಯಕೆಗೆ ಆ ಒಂದು ಮಾತಿನಿಂದ ಎಲ್ಲಿಲ್ಲದ ಬಲ ಸಿಕ್ಕಿತು. ಆ ಕ್ಷಣಕ್ಕೆ ಮನಸ್ಸಿನಲ್ಲಿ ಕವಿದ ಮೋಡಗಳೆಲ್ಲವೂ ಸರಿದವು. ಒಳ್ಳೆ ಗೆಲುವಿನಿಂದ ಹೇಳಿದಳು :

" ನೀವು ? ನೀವು ಎಂದಾದರೂ ಬೇಡವಾಗುವುದು ಸಾಧ್ಯವೆ ? ಸಾಧ್ಯವೇ ಇಲ್ಲ ! ಎಂದೆಂದಿಗೂ ಸಾಧ್ಯವಿಲ್ಲ ! "

ಆಕೆ ಹೇಳಿದ ಉತ್ತರದಲ್ಲಿಯ ಆವೇಶವನ್ನು, ಉತ್ಸಾಹವನ್ನು ನೆನೆದಾಗ ಮಾತ್ರ ವಸಂತನಿಗೆ ತೋರಿತು—ಆ ಮಾತನ್ನು ತಾನು ಆಡಬಾರದಾಗಿತ್ತೆಂದು. ವಸಂತ ಸುಮ್ಮನಾದ. ಚರ್ನಿರೋಡ್ ನಿಲ್ದಾಣದಲ್ಲಿಳಿದಾಗ ಕೇಳಿದ .

" ಗಾರ್ಡನ್ಸ್‌ನಲ್ಲಿ ಕುಳಿತುಬಿಡುವುದೆ ? ಅದಕ್ಕಿಂತ ನಾಲ್ಕು ಹೆಜ್ಜೆ ಹೋದರೆ ಹೊಟ್ಟೆಗೆ ಏನಾದರೂ ಸಿಕ್ಕಬಹುದು ತಿನ್ನಲಿಕ್ಕೆ."

" ಏನು, ಚೌಪಾಟಿಯ ' ಭೇಲ್ ' ತಿನ್ನಬೇಕೆ ? "

" ಭೇಲ್ ಯಾತಕ್ಕೆ ? ಉತ್ತಮ ಹೋಟಲ್‌ಗಳಿರುವಾಗ ? "

ಹೀಗೆಂದು ದಾರಿಯುದ್ದಕ್ಕೂ ಮಾತನಾಡುತ್ತ ಚೌಪಾಟಿಯ ಎದುರಿನ

ಒಂದು ಒಳ್ಳೆಯ ರೆಸ್ಟೋರೆಂಟ್ ಸೇರಿದರು. ವಸಂತನ ಮುಖದಲ್ಲಿ ದಣಿವಿತ್ತು. ಮೋಹಿನಿಯ ಮುಖದಲ್ಲಿಯ ದಣಿವು ಯಾವಾಗಲೋ ಮಾಯವಾಗಿತ್ತು. ಫ್ಯಾಮಿಲಿ ರೂಮಿನಲ್ಲಿ ಮೋಹಿನಿ ವಸಂತನಿಗೆ ಇದಿರಾಗಿ ಕೂಡದೆ ಆತನ ಬದಿಯಲ್ಲಿಯ ಕುರ್ಚಿಯಲ್ಲಿ ಕುಳಿತಳಲ್ಲದೆ ಮಾತುಮಾತಿಗೆ ವಸಂತನ ಸಮೀಪಕ್ಕೆ ಸರಿಯುತ್ತಿದ್ದಂತಿತ್ತು ಒಂದೊಂದು ಮಾತನ್ನು ಆಡುವಾಗಲೂ ಮುಖ ಕೆಂಪೇರುತ್ತಿತ್ತು ಮಾತುಗಳನ್ನೇನೋ ನೇರವಾಗಿ ಆಡುತ್ತಿದ್ದಳು ಆದರೆ ಒಳಗಡೆಯಲ್ಲಿ ಬೇರೆಯಾದ ಯಾವುದೊ ಒಂದು ಭಾವನೆಯ ತುಮುಲ ನಡೆದಿರ ಬೇಕೆಂಬುದು ಸ್ಪಷ್ಟವಾಗಿತ್ತು ಆದರೆ ವಸಂತನ ಲಕ್ಷ್ಯ ಆ ಕಡೆಗೆ ಇರಲಿಲ್ಲ ಆಕೆಯ ಕಪೋಲಗಳು ಕೆಂಪಾಗಿದ್ದರೆ, ಕಣ್ಣುಗಳಲ್ಲಿ ಬೇರೆಯಾದ ಮ್ಲಾನತೆ ಯಾಗಲಿ ಹೊಳಪಾಗಲಿ ಕಾಣಿಸಿಕೊಂಡರೆ ಅವೆಲ್ಲ ಮೋಹಿನಿಯ ರೂಪಕ್ಕೆ ಸಹಜವಾದ ಆವಿಷ್ಕಾರಗಳು, ಆಕೆಯ ಯೌವನದ ಪ್ರತೀಕಗಳು ಎಂಬುದನ್ನು ಹತ್ತಾರು ಬಾರಿ ನೋಡಿದ ವಸಂತನಿಗೆ ಅನಿಸಿರಬೇಕು ಅಲ್ಲದೆ ಆತನ ಮನಸ್ಸೇ ಬೇರೆಯಾದ ದಿಕ್ಕನ್ನು ಕಂಡುಕೊಂಡಿತ್ತು ಆದರೂ ಇಂದು ಮೋಹಿನಿ ಬೇರೆ ಏನನ್ನೋ ಯೋಚಿಸುತ್ತಿದ್ದಾಳೆ ಎಂಬುದು ವಸಂತನಿಗೆ ಅಂಥ ಮನಃಸ್ಥಿತಿಯಲ್ಲಿ ನಿಧಾನವಾಗಿಯಾದರೂ ತಿಳಿಯದಿರಲಿಲ್ಲ. ಕೊನೆಗೆ ಕೇಳಿದ

" ಇಂದು ನಿನಗೆ ಏನೋ ಆಗಿದೆ ಏನನ್ನೋ ನನ್ನಿಂದ ಬಚ್ಚಿಡು ತ್ತಿದ್ದೀ—"

ಮೋಹಿನಿಗೆ ಮಾತಿಲ್ಲದಾಯಿತು ಮನಸ್ಸಿನಲ್ಲಂದುಕೊಂಡಳು 'ಏನಾ ಗುವುದು ? ಹೊಸದಾವುದೂ ಇಲ್ಲ ಬಾಯಿಂದ ಹೇಗೆ ಹೇಳಲಿ ?' ಎಂದು. ಆಕೆ ಸುಮ್ಮನಾಗಿಯೆ ಉಳಿದದ್ದರಿಂದ ವಸಂತನಿಗೆ ಸ್ವಭಾವಗತವಾದ ಸಹಾನು ಭೂತಿಯ ಮೂಲಕ ತಡೆಯದಾಗಿ ಕೇಳಿದ.

" ಯಾಕೆ ? ಏನಾಗಿದೆ ? ಈ ಪರಿಯಾಗಿ ಧಾವಿಸಿ ಬಂದಂತೆ ಬಂದಿರುವಿ ಎಂದಮೇಲೆ ? "

" ಏನಾಗುತ್ತದೆ ? ಆಗಲೆ ಹೇಳಿದೆನಲ್ಲ ತಡೆಯಲಾಗಲಿಲ್ಲ, ಬಂದೆ."

" ಏನು ತಡೆಯಲಾಗಲಿಲ್ಲ—ಅದನ್ನೇ ಹೇಳಬಾರದೆ ? "

ವಸಂತ ಹೀಗೆ ನೇರವಾಗಿ ಯಾಕೆ ಪ್ರಶ್ನೆಯನ್ನು ಕೇಳಬೇಕು ? ಹಿಂದೆ ಹೀಗೆಂದೂ ಕೇಳಿರಲಿಲ್ಲ. ಒಂದು ಮಾತಿನಿಂದೇಕೆ—ಮಾತಿನ ರೀತಿಯಿಂದ,

ದನಿಯಿಂದ—ಬೇಕಾದುದನ್ನು ಗ್ರಹಿಸಬಲ್ಲ ವಸಂತ ಹೀಗೇಕೆ ದೂರ ದೂರ ದಿಂದೆಂಬಂತೆ ಮಾತನಾಡುತ್ತಿದ್ದಾನೆ?

"ಬರಬೇಕು ಎಂಬ ಆಸೆಯನ್ನು!"

"ಅಷ್ಟು ಪ್ರಬಲವಾಗಿತ್ತೆ?"

"ಅದನ್ನು ಬಾಯಿಂದ ಹೇಳಬೇಕೆ?"

"ಇಲ್ಲದಿದ್ದರೆ ನನಗೆ ಹೇಗೆ ತಿಳಿಯಬೇಕು?"

"ಎಲ್ಲವೂ ತಿಳಿಯುತ್ತಿತ್ತು ಈಗಲೇ ತಿಳಿಯದಾಗಿದೆ. ಜಾಣರಾಗಿದ್ದೀರಿ!"

ಎಂದು ಮೋಹಿನಿ ನಸುನಕ್ಕು ಆತನ ಕೈ ಕೊಡವಿದಳು ಸಾಯಂಕಾಲ ಆಕೆ ಬಂದಾಗಿನಿಂದ, ಆಕೆಯ ಮುಖವನ್ನೂ ಮಾತಿನ ರೀತಿಯನ್ನೂ ನೆನೆದಾಗಲೆ ಏನೋ ಒಂದು ಬಗೆಯ ಆತಂಕ ಮನಸ್ಸಿನಲ್ಲಿ ಮೂಡಿದ್ದು ವಸಂತನಿಗೆ ಸ್ಪಷ್ಟ ವಾಯಿತು ಮೋಹಿನಿ ಮತ್ತೆ ಅದೇ ಹಳೆಯ ದಾರಿಯನ್ನೇ ತುಳಿಯುತ್ತಿದ್ದಾಳೆಂಬುದು ನಿಚ್ಚಳವಾಯಿತು. ಕೊನೆಗೆ ಹೇಳಿದ

"ಈಗಲೂ ತಿಳಿಯುತ್ತದೆ ಆದರೆ—"

"ಆದರೆ ಏನು?"

"ನೀನೇ ಹೇಳಿದೆಯಲ್ಲ, ಜಾಣನಾಗಿದ್ದೇನೆ ಎಂದು!"

ಎಂದು ನಕ್ಕ ಆದರೆ ಮೋಹಿನಿ ಸುಮ್ಮನಾಗಿಯೇ ಇದ್ದಳು. ತನ್ನ ಮಾತು ಆಕೆಗೆ ಸರಿಬೀಳಲಿಲ್ಲವೆಂಬುದನ್ನು ತಿಳಿದು ವಸಂತ ಕೇಳಿದ:

"ಯಾಕೆ, ಸುಮ್ಮನಾದೆ?"

"ಹಾಗೆ ಹೇಳಿದರೆ ಏನು ಮಾತನಾಡುವುದು?"

"ಆಡಬೇಕಾದದ್ದನ್ನು—"

"ಆಡಿ ಪ್ರಯೋಜನವಿರದಿದ್ದರೆ ಯಾತಕ್ಕೆ ಆಡಬೇಕು?" ಎಂದು ನಸುನಕ್ಕಳು

"ಆಡಿದರೆ ಪ್ರಯೋಜನವಿದ್ದೇ ಇರುತ್ತದೆ!"

"ಹೌದೆ?"

ಎಂದು ಮತ್ತೆ ಆತನ ಕೈ ತಡವಿದಳು ವಸಂತ ಕೇಳಿದ—ಬೇಕೆಂತಲೆ:

"ನನ್ನ ಹತ್ತಿರ ಮಾತನಾಡಿದರೆ ನಿನಗೆ ಬಹಳ ಸಂತೋಷವೆ?"

"ಬರೀ ಮಾತೇಕೆ? ನೀವು ಒಂದು ಮಾತನ್ನು ಆಡದಿದ್ದರೂ ನೀವು ಹತ್ತಿರವಿದ್ದರೆ ಸಾಕು."

"ಹಾಗಿದ್ದರೆ ನಾನು ಇನ್ನುಮೇಲೆ ಸುಮ್ಮನಾಗಿಯೇ ಇರುತ್ತೇನೆ!"

"ನೀವು ಇರಬಹುದು ನಾನೊಂದು ಕೇಳಬೇಕಲ್ಲ!"

ಮಾತು ನಡೆದೇ ಇತ್ತು. ಮಾತಿಗೊಂದು ಮಾತು ಎಂಬ ರೀತಿಯಲ್ಲಿ—ಮಾತನಾಡಬೇಕು ಎಂಬ ಮೋಹಿನಿಯ ಚಪಲಕ್ಕಾಗಿ! ವಸಂತ ಮಾತನಾಡುತ್ತಿದ್ದಾಗ ಆಕೆ ಆತನನ್ನು ನೋಡುವ ಬಗೆ, ಆತನಲ್ಲಿ ಆಕೆ ನೂರು ಬಗೆಯಲ್ಲಿ ತೋರುತ್ತಿದ್ದ ಆಸಕ್ತಿ—ಆಕೆಯ ಹೃದಯ ಮಾರುಹೋದ ಬಗೆಯನ್ನು ತಿಳಿಸುತ್ತಿದ್ದವು. ಅರ್ಧ ಗಂಟೆಯಾಯಿತು, ಮುಕ್ಕಾಲು ಗಂಟೆಯಾಯಿತು ವಸಂತ ಕೇಳಿದ:

"ಇಂದು ರಾತ್ರಿ ಇಲ್ಲಿಯೇ ವಸತಿ ಏನು? ಈ ರೂಮಿಗಾಗಿ ಜನ ಕಾಯುತ್ತಿದ್ದಾರು ಹೊರಗಡೆ."

"ಹೋಟಲಿನವರಕಿಂತ ನಿಮ್ಮ ಅವಸರವೇ ಹೆಚ್ಚಾಗಿದೆಯಲ್ಲ!"

"ಹೋಟಲಿನವನಿಗೆ ಇದೇ ಮನೆ. ನಮ್ಮ ಮನೆ—?"

"ಏನು, ಮನೆಯಲ್ಲಿ ಯಾರಾದರೂ ಕಾಯುತ್ತಿರುವ ಹಾಗೆ ಇಷ್ಟು ಅವಸರ?"

ವಸಂತ ಹೇಳಬಹುದಾಗಿತ್ತು: 'ಹೌದು. ಆ ದಿನಗಳೂ ಇನ್ನು ದೂರವಿಲ್ಲ' ಎಂದು. ತಾನು ಮದುವೆ ಗೊತ್ತಾದುದನ್ನು ಹೇಳಿದ್ದರೆ ಈ ಪ್ರಸಂಗ ಸ್ವಲ್ಪದರಲ್ಲಿ ದೂರವಾಗಬಹುದಿತ್ತು ಎಂದು ಮರುಕ್ಷಣನೆಂದುಕೊಂಡ. ಇನ್ನೊಂದು ಸಂದರ್ಭ ಬಂದಾಗ ಹೇಳಿಬಿಡುವುದು ಎಂದುಕೊಂಡು ಸುಮ್ಮನಾದ. ಹೋಟಲಿನಿಂದ ಹೊರಬೀಳುವಾಗ ವಸಂತ ಹೇಳಿದ:

"ನನ್ನ ನಿನ್ನ ಸಂಬಂಧದ ಬಗ್ಗೆ ಆ ಕಾಗದದಲ್ಲಿ ಏನು ಬರೆದಿದ್ದೆ, ಜ್ಞಾಪಕವಿದೆಯೆ?"

"ಇದೆ!"

"ಇದ್ದ ಹಾಗಿಲ್ಲ—"

"ಅದನ್ನು ಆಗ ಬರೆದೆ—ಆಗಿನ ಮನಃಸ್ಥಿತಿಯಲ್ಲಿ! ಈಗ ಬೇರೆ"

"ಆಗ ಸರಿಯಲ್ಲ ಎನಿಸಿದ್ದು ಈಗ ಸರಿ ಎನಿಸುತ್ತದೆಯೆ ನಿನಗೆ?"

" ಸರಿಯೊ ಅಲ್ಲವೊ ಅನಿವಾರ್ಯವೆನಿಸುತ್ತದೆ ಅದಕ್ಕೆಯೆ ನಾನು ತಡೆಯಲಾಗಲಿಲ್ಲ ಎಂದೆ."

" ಒಂದು ಮಾತನ್ನು ನಾನು ಹೇಳಿದರೆ ನೀನು ಕೋಪಿಸಿಕೊಳ್ಳಬಾರದು. ಸರಿಯೊ ಅಲ್ಲವೊ ಎಂದುಬಿಟ್ಟರೆ ಆಗದು ನೀನು ಪೂರ್ತಿಯಾಗಿ ಯೋಚಿಸ ಬೇಕು—"

" ಯೋಚನೆಗೆ ನಿಲುಕದ ವಿಷಯ ಇದು ನಾನು ಯೋಚನೆ ಮಾಡಿಲ್ಲ ಅನ್ನುತ್ತೀರಾ ? ಇದು ಹೀಗೆ ಯಾಕೆ ಎಂಬುದನ್ನೂ ನಾನು ಹೇಳಲಾರೆ "

" ನಿನ್ನ ಹಿತದ ದೃಷ್ಟಿಯಿಂದ—"

" ಇದರಲ್ಲಿ ನನ್ನ ಹಿತವಿಲ್ಲವೆ ? ನನಗೆ ಯಾವುದಿದ್ದರೂ ನಿಮ್ಮ ಸಹವಾಸ ವಿಲ್ಲದೆ ಎಲ್ಲವೂ ಶೂನ್ಯವೆನಿಸುತ್ತಿದೆ! ಇಷ್ಟು ಹೇಳದ ನನಗೆ ಸಮಾಧಾನ ವಿರಲಿಲ್ಲ ಹೇಳಿದೆ—"

ಮುಂದೆ ಮೋಹಿನಿ ಮಾತನಾಡಲಿಲ್ಲ ಆಡಬೇಕಾದದ್ದೂ ಇರಲಿಲ್ಲ ವಸಂತನೂ ಸುಮ್ಮನಾದ ಇದನ್ನು ತಡೆಯಲೇಬೇಕೆನಿಸಿತು ಆದರೆ ಹೇಗೆ ತಡೆಯುವುದು ? ಒಂದು ಹೊಡೆತ ಎರಡು ತುಂಡು ಎಂಬ ರೀತಿ ಎಂದಿಗೂ ವಸಂತನದಾಗಿರಲಿಲ್ಲ. ಹತ್ತಾರು ರೀತಿಯಿಂದ ತಿಳಿಸಿ ಹೇಳಬೇಕೆನ್ನುವುದು ಅವನ ರೀತಿ ಅಲ್ಲದೆ, ಅದರಲ್ಲಿಯೂ ಯಾವ ಮಾತಿನಿಂದಲೂ ಆಕೆಯನ್ನು ನೋಯಿಸಲಾರದವನಾಗಿದ್ದ ಒಂದು ಕಾಲಕ್ಕೆ ಇಂಥ ಆಸೆ ತನ್ನಿಂದಲೇ ಆಕೆ ಯಲ್ಲಿ ಮೂಡಿತ್ತು ಇಂದು ಮತ್ತೆ ತಲೆಯೆತ್ತಿದೆ. ಇದು ಒಂದು ದೃಷ್ಟಿಯಿಂದ ಅನಿವಾರ್ಯವೆನಿಸಿದರೂ ತನ್ನ ಪರಿಸ್ಥಿತಿಯಲ್ಲಿ ಅದಕ್ಕೆ ಯಾವ ಆಸ್ಪದವೂ ಸಾಧ್ಯವಿರಲಿಲ್ಲ ಮೋಹಿನಿ ಆ ಕಾಗದದಲ್ಲಿ ಹೇಳಿದ್ದೇ ನಿಜವಾದ ವಿಷಯ. ' ಎಳೆತನದಲ್ಲಿ ಅಗಲಿದೆವು ' ಎಂದಿರಲಿಲ್ಲವೆ ? ಅನಿವಾರ್ಯವಾಗಬಹುದೆಂದು ಆಕೆ ಆಗ ಎಣಿಸಿದ್ದು ಈಗ ನಿಜವಾಗುತ್ತಲಿದೆ. ಆದರೆ ಅದು ಆಕೆಯ ಮಟ್ಟಿಗೆ. ಇದರಿಂದ ಈಕೆಯನ್ನು ಹಿಂದಿರುಗಿಸಲೇಬೇಕು. ಆದರೆ ಹೇಗೆ ? ಹೃದಯದ ಮೇಲಿನ ಶಸ್ತ್ರಕ್ರಿಯೆಯಂಥ ಕೆಲಸ ಇದು ಎಂದುಕೊಂಡ. ಆದರೆ ಮೆತ್ತಗಾಗಿ ಮಾತನಾಡಿ ಮನವೊಲಿಸಿ ತಿಳಿಸಿ ಹೇಳುವ ಹೊರತು ಬೇರೆ ದಾರಿಯೆ ಆತನಿಗೆ ಕಾಣಲಿಲ್ಲ ಕೊನೆಗೆ ಹೇಳಿದ

" ಇದು ನೋಡು ಮೋಹಿನಿ ಯಾವುದೊ ಒಂದು ಹಟದಿಂದ ಬದುಕನ್ನು

ನಡೆಯಿಸುತ್ತಿರುವೆ. ಆ ಹಟ ಸರಿಯಾದುದಲ್ಲ ಎಂದೂ ಹೇಳಿದ್ದೇನೆ. ಅದು ಹೇಗೂ ಇರಲಿ. ಆ ಹಟವನ್ನೇ ನೀನು ಸಾಧಿಸಬೇಕಿದ್ದರೆ ನೀನು ಹೀಗೆ ಭಾವನಾವಶಳಾದರೆ ಆಗದು ಸರ್ವಥಾ ಆಗದು—"

" ಇದು ನನ್ನ ಕೈಯಲ್ಲಿಯ ಮಾತೆ ? "

" ನೀನು ತಡೆಹಿಡಿಯಲೇಬೇಕು. ಇನ್ನೂ ಹತ್ತು ಬಾರಿ ಯೋಚಿಸು. ಇದರ ಇತ್ಯರ್ಥವೇನು, ಪರಿಣಾಮುಗಳೇನು ? ಸುಮ್ಮನೆ ತಲೆಯಲ್ಲಿ ಏನಾದರೊಂದು ತುಂಬಿಕೊಂಡು ಒದ್ದಾಡಿದರೆ ಏನು ಮಾಡಿದ ಹಾಗಾಯಿತು ? "

ಮೋಹಿನಿ ಸುಮ್ಮನಾದಳು—ಸಮಾಧಾನದಿಂದಲ್ಲ, ಸಂಕಟದಿಂದ ಈ ರೀತಿಯ ಮಾತುಗಳನ್ನು ಆಕೆ ವಸಂತನಿಂದ ಅಪೇಕ್ಷಿಸಿರಲೇ ಇಲ್ಲ. ಆದರೆ ಈ ಸಲ ನಾಲ್ಕು ತಿಂಗಳ ಹಿಂದೆ ದಾದರಿನಲ್ಲಿ ಕಂಡ ದಿನದಿಂದಲೂ ಆತ ಬೇರೆಯೇ ಆಗಿದ್ದಾನೆ. ಮೊದಲಿನ ವಸಂತನೇ ಅಲ್ಲ ಎಂಬ ವಿಚಾರ ಆಕೆಯ ಹೃದಯವನ್ನು ಗೋಳಿಗೀಡುಮಾಡಿತು ' ಇನ್ನೂ ಯೋಚಿಸು ' ಎಂದು ವಸಂತ ರೈಲು ದಾದರಿಗೆ ಬರುವಷ್ಟರಲ್ಲಿ ಹತ್ತಾರು ಬಾರಿ ಹೇಳಿದ. ' ಯೋಚಿಸಬಹುದು ' ಎಂದುಕೊಂಡು ರೈಲಿನಿಂದ ಇಳಿದು ಕೋಣೆಯ ಕಡೆಗೆ ಹೊರಟಳು. ಯೋಚನೆ ಎಲ್ಲಿಗೆ ನಿಲುಕಬೇಕು ? ವಸಂತ ಎಷ್ಟು ಬೇರೆಯಾದರೇನಾಯಿತು ? ತನ್ನ ಕೈಬಿಡಲಿಲ್ಲ ! ' ಯೋಚಿಸು ' ಎಂದಲ್ಲವೆ ಆತ ಹೇಳಿದ್ದು ? ಆದರೆ ಯೋಚಿಸಬೇಕಾದ ವಿಷಯವೆ ? ಭಾವನೆ ಈ ರೀತಿ ಕಾಡ ಹೊನಲಾಗಿ ಹರಿಯುತ್ತಿದ್ದಾಗ ಯೋಚನೆಗೆ ಎಲ್ಲಿಯ ಅವಕಾಶ ? ಆ ಕ್ಷಣಕ್ಕೆ ಮೋಹಿನಿಯ ಯೋಚನೆ ಬಗೆಹರಿದು ಹೋಗಿತ್ತು.

## ೧೧

ನಾಲ್ಕಾರು ದಿನಗಳಲ್ಲಿ ದೀಪಾವಳಿಗಾಗಿ ಶಾಲೆಗೆ ಬಿಡುವಾಗಲಿತ್ತು. ಸುಮಾರು ಮೂರು ವಾರ ಯಾವ ಕೆಲಸವೂ ಇಲ್ಲ ಮುಖ್ಯವಾಗಿ ಮೋಹಿನಿಗೆ ಸಮಾಧಾನವೆನಿಸಿದ ವಿಷಯವೆಂದರೆ ಆ ಮೂರು ವಾರಗಳ ಮಟ್ಟಿಗಾದರೂ ಮುಖ್ಯಾಧ್ಯಾಪಿಕೆಯ ಕಿರುಕುಳದಿಂದ ದೂರವಾಗಿರಬಹುದು ಎಂಬುದು. ಇತ್ತೀಚೆಗಂತೂ ಎಷ್ಟೋ ಸಲ ಈ ಕೆಲಸವನ್ನು ಬಿಟ್ಟುಬಿಡಬಾರದೇಕೆ ಎಂದು ಯೋಚಿಸುವ ಮಟ್ಟಿಗೆ ಬೇಸರವೆನಿಸಿತ್ತು. ಆದರೆ ಕೆಲಸವನ್ನು ಬಿಟ್ಟು ಹೋಗುವುದೆಲ್ಲಿಗೆ ? ಮಾಡುವುದೇನು ? ಕಳೆದ ಹದಿನೈದು ದಿನಗಳಲ್ಲಿ ಒಂದೆರಡು ಸಾರೆ ವಿಮಲಾ ಒಂದೆರಡು ಎಚ್ಚರದ ಮಾತುಗಳನ್ನು ಹೇಳಿದ್ದಳು ಬಿಡುವು ಸಮಾಪಿಸಿದಾಗ ಕೆಲಸದ ವಿಷಯದಲ್ಲಿ ವಿಶೇಷವಾಗಿ ಎಚ್ಚರವಾಗಿರಬೇಕು ಎಂದು. ಆದರೆ ಬೇಸರ ಬೆಳೆದ ಹಾಗೆ ಕಳೆದ ಹದಿನೈದು ದಿವಸಗಳಲ್ಲಿ ಮೋಹಿನಿ ಅಕಸ್ಮಾತ್ತಾಗಿ ಎರಡು ಮೂರು ದಿನ ರಜೆ ಪಡೆದು ಮುಖ್ಯಾಧ್ಯಾಪಿಕೆಯ ವಿಶ್ವಾಸವನ್ನು ಪೂರ್ತಿಯಾಗಿ ಕಳೆದುಕೊಂಡಹಾಗಿತ್ತು. 'ಏನಾದದ್ದು ಆಗಲಿ. ನಾನು ಏನು ಮಾಡಿದರೇನು ?' ಎಂದು ಎಷ್ಟೋ ಸಲ ವಿಷಣ್ಣಳಾಗುತ್ತಿದ್ದಳು. ಬಿಡುವಾದಮೇಲೆ ಏನು ಮಾಡುವುದೆಂಬುದೊಂದು ಸಮಸ್ಯೆಯೇ ಆಗಿತ್ತು. ಪುಣೆಗೆ ಹೋಗುವ ಮನಸ್ಸಿರಲಿಲ್ಲ ಇತ್ತೀಚೆ ತಾಯಿಯಿಂದ ಯಾವ ಕಾಗದವೂ ಬಂದಿರಲಿಲ್ಲ. ಆನಂದ ಬಂದುಹೋದ ಸಮಾಚಾರವನ್ನು ತಾನು ತಿಳಿಸಿರದಿದ್ದರೂ ಆಕೆಗೆ ನಡೆದುದೆಲ್ಲವೂ ಹೇಗೆ ತಿಳಿದಿತ್ತೋ ! ಸಂತಾಪದ ಕಾಗದ ಬಂದದ್ದೇ ಕೊನೆಯ ಕಾಗದ ಅದೂ ಒಂದೂವರೆ ತಿಂಗಳ ಮೊದಲು ತಾನು ಅಲ್ಲಿಗೆ ಹೋದರೆ ಮನಸ್ತಾಪವಲ್ಲದೆ ಬೇರೆ ಏನೂ ಸಾಧ್ಯವಿರಲಿಲ್ಲ ಹೀಗೆಂದೇ ಏನು ಮಾಡದಿದ್ದರೂ ಸರಿ, ಹಾಯಾಗಿ ಕೋಣೆಯಲ್ಲಿದ್ದುಕೊಂಡು ಏನಾದರೂ ಓದಿ ಹೊತ್ತು ಸಾಗಿಸಬಹುದೆಂದುಕೊಂಡು ಬಿಡುವಾದರೂ ಮುಂಬಯಿಯಲ್ಲಿಯೆ ಉಳಿಯತಕ್ಕದ್ದೆಂದು ನಿರ್ಧರಿಸಿದ್ದಳು.

ಆದರೆ ಮರುದಿನ ಸಾಯಂಕಾಲ ಆಕೆಯ ನಿರ್ಧಾರ ಬುಡಮೇಲಾಗಿತ್ತು.

ಮೋಹಿನಿ ಅದೇ ಶಾಲೆಯಿಂದ ಬಂದು ಸಾಯಂಕಾಲ ಏನು ಮಾಡುವುದು ಎಂಬ ಯೋಚನೆಯಲ್ಲಿದ್ದಾಗಲೆ ಅನುರಾಧೆ ಹೆಚ್ಚುಕಡಿಮೆ ಓಡುತ್ತಲೆ

ಕೋಣೆಯಲ್ಲಿ ಬಂದಿದ್ದಳು ಆತುರ–ಸಂತೋಷಗಳು ಆಕೆಯ ಮುಖದಲ್ಲಿ ಕುಣಿಯುತ್ತಿದ್ದವು. ಆ ಆತುರ–ಸಂತೋಷಗಳಿಗೆ ಕಾರಣವಾದ ಸಮಾಚಾರವನ್ನು ಮೋಹಿನಿಗೆ ಯಾವಾಗ ಹೇಳಿಯೇನೊ ಎಂಬ ಅವಸರದಿಂದಲೇ ಆಕೆ ಮನೆಗೆ ಆ ಹೊತ್ತಿನಲ್ಲಿ ಬಂದಂತಿತ್ತು. ಮೋಹಿನಿ ಕೇಳಿದಳು :

"ಏನೆ, ಏನು ಸಮಾಚಾರ ? ಭಾರಿ ಉತ್ಸಾಹದಲ್ಲಿದ್ದ ಹಾಗಿದೆಯಲ್ಲ ?"

"ಏನು ಸಮಾಚಾರ ಎಂದೇನು ಕೇಳುತ್ತೀ ? ಮೊದಲು ಅಭಿನಂದನೆ ಹೇಳು—"

"ಯಾರಿಗೆ ಅಭಿನಂದನೆ ?"

"ಯಾರಿಗೆ ಅಂದರೆ ? ಇನ್ನೊಬ್ಬರಿಗಾದರೆ ನಾನೇಕೆ ಕುಣಿಯುತ್ತಿದ್ದೆ ?"

"ಏನು ? ಅಭಿನಂದನೆ ಯಾಕೆ ?"

"ಮುಂದಿನ ಪಿಕ್ಚರ್‌ನಲ್ಲಿ ನನಗೆ ಪಾರ್ಟು !"

"ಹೌದೆ! ಯಾವ ಪಿಕ್ಚರು ?"

"ಶಾಕುಂತಲ !"

"ನೀನು ಶಕುಂತಲೆಯೆ ?"

ಮೋಹಿನಿಯ ದನಿಯಲ್ಲಿ 'ನೀನು ಶಕುಂತಲೆಯಾದರೆ ಮುಗಿದೇ ಹೋಯಿತು !' ಎಂಬ ಭಾವವಿದ್ದುದು ಅನುರಾಧೆಗೆ ತನ್ನ ಉತ್ಸಾಹದಲ್ಲಿ ಹೊಳೆಯುವಂತಿರಲಿಲ್ಲ.

"ಸರಿ. ಒಮ್ಮೆಲೆ ಮುಗಿಲಿಗೆ ಜಿಗಿಯಬೇಕೆನ್ನುತ್ತೀ !"

"ಹಾಗಾದರೇನು ಕಣ್ವನ ಪಾರ್ಟೆ ?" ಎಂದು ನಕ್ಕಳು ಗಟ್ಟಿಯಾಗಿ

"ಕಣ್ವನ ಪಾರ್ಟು ನೀನು ಮಾಡುವಿಯಂತೆ! ನಾನು ಪ್ರಿಯಂವದೆ।"

"ಹಾಗಿದ್ದರೆ ಅನಸೂಯೆ ಯಾರು ?"

"ಇನ್ನೂ ನಿಶ್ಚಯವಾಗಲಿಲ್ಲ. ರಂಗನಾಥನ್ ಇನ್ನೂ ಹುಡುಕುತ್ತಿದ್ದಾರೆ" ಯಾರೂ ಸಿಕ್ಕದಿದ್ದರೆ ನಿನ್ನನ್ನೇ ಕೇಳಬಹುದು ಎಂದು ಕಾಣುತ್ತದೆ."

"ನನ್ನನ್ನೆ ?"

"ಹೌದು. ಯಾಕೆ ? ಹಾಗೇಕೆ ಗಾಬರಿಯಾಗಿ ಬಾಯಿ ತೆರೆಯುತ್ತೀ ? ಇಂಥ ಚಾನ್ಸ್ ಸಿಗುವುದೇ ಅದರೆ ಎಂದಿಗೂ ಬಿಡಬಾರದು."

"ಫಿಲ್ಮಿನಲ್ಲಿ ಕೆಲಸ ಮಾಡುವುದೆಂದರೆ ನಿನಗೆ ಬಹಳ ಉತ್ಸಾಹವೆಂದು

ಕಾಣುತ್ತದೆ ! "

" ಉತ್ಸಾಹ ಎಂದೇನು ಕೇಳುತ್ತೀ ? ಇಷ್ಟು ದಿನ ಕಾಡಿ ಕಾಡಿ ಇಷ್ಟು ಸಾಧಿಸಿದೆ "

" ಬೇಡ ಎನ್ನುತ್ತಿದ್ದರೆ ನಿಮ್ಮ ಯಜಮಾನರು ? ನೀನು ಚಿತ್ರದಲ್ಲಿ ಕೆಲಸ ಮಾಡುವುದು ಅವರಿಗೆ ಇಷ್ಟವಿರಲಿಕ್ಕಿಲ್ಲ ! "

" ಅದೇನೂ ಇಲ್ಲ ನನ್ನಿಂದ ಅಷ್ಟು ಆಗುವುದಿಲ್ಲ ಎಂದು ಅಭಿಪ್ರಾಯ. ಈಗ ನೋಡು, ಹೇಗೆ ಮಾಡಿ ತೋರಿಸುತ್ತೇನೆ ! ಅಂದರೆ ಮುಂದಿನ ಸಲ ತಾವಾಗಿಯೆ—"

" ಅಂತೂ ಭಾರಿಯಾಯಿತು ಬಿಡು "

" ನೀನೇನು ಮಾಡುವಿ ? ನಿನ್ನನ್ನು ಕೇಳಿದ್ದೇ ಆದರೆ "

" ಯಾರು ನನ್ನನ್ನು ಕೇಳುವವರು ? "

" ಯಾರು ಹೇಳು ? "

" ನನಗೇನು ಗೊತ್ತೆ ? ಎಲ್ಲ ಸಮಾಚಾರ ತಂದವಳು ನೀನೇ ನಾನೇನು ಹೇಳಲಿ ? "

" ನೀನು ಕೆಲಸ ಮಾಡಬೇಕು ಎಂದು ಯಾರಿಗೆನಿಸುತ್ತಿರಬಹುದು ? ಅದನ್ನಾದರೂ ಹೇಳು."

" ನನಗೆ ಹೇಗೆ ತಿಳಿಯಬೇಕು ? ನೀನೇ ಹೇಳಿದೆಯಾ ನನ್ನ ಹೆಸರನ್ನು ? "

" ಸರಿ. ಬೆಕ್ಕು ಕಣ್ಣು ಮುಚ್ಚಿಕೊಂಡು ಹಾಲು ಕುಡಿದ ಸಮಾಚಾರ ಇದು ! "

" ಅಂದರೆ ? "

" ಸಾಕು ಮಾಡೆ, ಈ ಸೋಗನ್ನೆಲ್ಲ ! "

" ಸೋಗು ಏನು ಬಂತು ? ನಾನು ಸ್ಟುಡಿಯೋಕ್ಕೆ ಹೋಗಿ ಬಂದು ಎರಡು ವಾರವಾದರೂ ಆಗಿರಬೇಕು. ನನಗೆ ಹೇಗೆ ತಿಳಿಯಬೇಕು ? "

" ನಿನ್ನ ಹೆಸರನ್ನು ರಂಗನಾಥನ್‌ರೇ ಹೇಳಿದರು ? "

" ನನ್ನನ್ನು ಒಂದು ಮಾತನ್ನೂ ಕೇಳದೆ ? "

" ಇನ್ನುಮೇಲೆ ಕೇಳಬಹುದು ! "

" ನನಗೆ ಸಾಧ್ಯವಿಲ್ಲ, ತಾಯಿ ! "

" ನಿನಗೆ ಸಾಧ್ಯವಿಲ್ಲ ಎಂದರೆ ಅವರು ಕೇಳುತ್ತಾರೆಯೆ ? "

" ಅಂದರೆ ನಾನು ಕೆಲಸ ಮಾಡಬೇಕು ಎಂದು ಅವರು ನಿಶ್ಚಯ ಮಾಡಿದ ಹಾಗೆಯೇ ಹೇಳುತ್ತೀಯಲ್ಲ ? "

" ನನಗಂತೂ ಹಾಗೆ ತೋರಿತು—ಅವರ ಮಾತಿನಮೇಲಿಂದ."

" ನೋಡುವಾ, ಈಗ ಯಾಕೆ ? ಬೇಕಾದವರು ಚಿತ್ರಗಳಲ್ಲಿ ಕೆಲಸ ಮಾಡ ಬಹುದೆ ? "

" ಅಂದರೆ ನನ್ನಿಂದ ಆಗುವುದಿಲ್ಲ ಎನ್ನುತ್ತೀಯಾ ? "

" ನಿನ್ನ ಮಾತನ್ನಲ್ಲ ನಾನು ಹೇಳಿದ್ದು— ನನ್ನ ಮಾತನ್ನು !"

" ನೀನು ಬೇಕಾದ ಹಾಗೆ ಮಾಡು, ನನಗಂತೂ "

" ಸ್ವರ್ಗ ಸಿಕ್ಕ ಹಾಗಾಗಿದೆ, ಅಲ್ಲವೆ ? "

" ಯಾಕೆ ಈ ಚೇಷ್ಟೆ ? ಕೆಲಸ ನೋಡಿದ ಮೇಲೆ ಹೇಳುವಿಯಂತೆ. ಅದು ಹೋಗಲಿ, ಊರಿಗೆ ಹೋಗುವ ವಿಚಾರ ಏನಾಯಿತು ನಿನ್ನದು ? "

" ಹೋಗಬಾರದು ಎಂದಿದ್ದೇನೆ."

" ಹಾಗಾದರೆ "

" ಯಾಕೆ ? ಏನು ತೊಂದರೆ ? "

" ತೊಂದರೆ ಏನೂ ಇಲ್ಲ ನಾನು ಹಬ್ಬಕ್ಕೆ ಬರಲೇಬೇಕೆಂದು ತಂದೆಯವರಿಂದ ಕಾಗದ ಬಂದಿದೆ. ಅಲ್ಲದೆ, ಮುಂದೆ ಚಿತ್ರಪಟ ಕೆಲಸ ಪ್ರಾರಂಭವಾಯಿತೆಂದರೆ ನಾಲ್ಕಾರು ತಿಂಗಳು ಎಲ್ಲಿಯೂ ಹೋಗಲಾಗುವುದಿಲ್ಲ."

" ಅದಕ್ಕೆ ನೀನು ಹೊರಡುವುದನ್ನು ಗೊತ್ತುಮಾಡಿದ್ದೀಯಾ ? ನಿಮ್ಮ ಯಜಮಾನರು ? "

" ಅವರೆಲ್ಲಿ ಬರುತ್ತಾರೆ ? ಅದಕ್ಕೆಯೆ ಕೇಳಿದೆ, ನೀನು ಹೇಗೆ ಎಂದು "

" ನೀನು ಹೋಗುವುದಾದರೆ ನಾನು ಇಲ್ಲಿ ಒಬ್ಬಳೇ ಇರಬೇಕಾಯಿತು ! "

ಒಬ್ಬಳೇ ಇರುವ ಹೆದರಿಕೆ ಇರಲಿಲ್ಲ. ಆದರೆ- ತಾನು ಊರಲ್ಲಿಲ್ಲದಾಗ ಮೋಹಿನಿ ಅಲ್ಲಿರುವುದು ಆಕೆಗೆ ಸಮ್ಮತವಿದ್ದ ಹಾಗೆ ಕಾಣಲಿಲ್ಲ. ಅದನ್ನು ಸ್ಪಷ್ಟವಾಗಿ ಹೇಳುವುದಾದರೂ ಹೇಗೆ ? ಅಂತೆಯೆ ಸೂಚಿಸಿದಳು, ತನ್ನ ನೇರವಾದ ಅಭಿಪ್ರಾಯವನ್ನು :

" ಮೂರು ವಾರ ರಜೆಯನ್ನು ಇಟ್ಟುಕೊಂಡು ಇಲ್ಲಿದ್ದೇನು ಮಾಡುತ್ತೀ ?

ಹೋಗಿ ಬಂದುಬಿಡು."

"ನೀನು ಹೋಗುವುದೇ ಆದರೆ ನಾನೂ ಯೋಚಿಸಬೇಕಾಯಿತು."

"ಯೋಚನೆ ಊರಿಗೆ ಹೋದಮೇಲೆ ಮಾಡು" ಎಂದು ನಕ್ಕಳು.

"ನೀನು ಹೊರಡುವುದು ಯಾವಾಗ ?"

"ನೋಡಬೇಕು. ಇಂದು ಇವರು ಬಂದಮೇಲೆ ಅದೆಲ್ಲ ನಿರ್ಣಯ ಬರುವ ಶನಿವಾರ ಹೊರಟರೂ ಹೊರಟೇಬಿಟ್ಟೆ"

"ನಮ್ಮ ಶಾಲೆಗೂ ಶನಿವಾರದಿಂದೇ ಬಿಡುವಾಗುತ್ತದೆ"

"ಸರಿಯಾಯಿತಲ್ಲ ಮತ್ತೆ ನೀನೂ ಅಂದೇ ಹೊರಟುಬಿಡು ಹಾಗಿದ್ದರೆ."

ಮೋಹಿನಿಗಾಗಿ ನಿರ್ಣಯವನ್ನು ಅನುರಾಧೆಯೇ ಹೇಳಿಬಿಟ್ಟಿದ್ದರಿಂದ ಯೋಚನೆಗೆ ಅವಕಾಶವೇ ಉಳಿಯಲಿಲ್ಲ. ಹೋಗುವ ಮನಸ್ಸಿಲ್ಲದೆ ಹೊರಡಲೇಬೇಕಾಯಿತು. ಹೊರಡಲೇಬೇಕೆಂದಮೇಲೆ ನೂರು ಯೋಚನೆಗಳು—ಹೊರಡುವ ಮುನ್ನ ವಸಂತನನ್ನು ಕಾಣುವುದು ಎಂದು ? ಹೋದಮೇಲೆ ತಾಯಿಯನ್ನು ಕಾಣುವುದು ಹೇಗೆ ? ಶಾಲೆ ಮತ್ತೆ ಪ್ರಾರಂಭವಾಗುವ ಹೊತ್ತಿಗೆ ಅನುರಾಧೆ ಬರದಿದ್ದರೆ ?—

## ೧೨

ಈ ಯೋಚನೆ ಮೋಹಿನಿ ಪುಣೆಗೆ ಹೋಗಿ ಎರಡು ವಾರವಾದರೂ ಬಗೆ ಹರಿಯಲಿಲ್ಲ. ತಾನು ಮುಂಬಯಿಗೆ ಮರಳಿ ಬರುವ ದಿನವನ್ನು ನಿಶ್ಚಿತವಾಗಿ ಕಾಗದ ಬರೆದು ತಿಳಿಸುವೆನೆಂದು ಹೇಳಿದ ಅನುರಾಧೆ ಎಲ್ಲವನ್ನೂ ಮರೆತಂತೆ ಕಾಣುತ್ತಿತ್ತು. ಬೇಕಾದಾಗ ಬರಲಿ, ತಾನಂತೂ ಶಾಲೆ ಪ್ರಾರಂಭವಾಗುವ ದಿನ ಮರಳಿ ಹೋಗಲೇಬೇಕು ಹೀಗೆಂದು ಮೋಹಿನಿ ಸುಮ್ಮನಾದಳು ಅನುರಾಧೆ ಇರದಿದ್ದರೂ ಆಪಟೆ ಇದ್ದೇ ಇರುವರಲ್ಲ! ಅವರು ಮನೆಯಲ್ಲಿರುವುದೂ ಅಷ್ಟರಲ್ಲಿಯೆ! ಇದ್ದರೂ ಏನು! ಅನುರಾಧೆ ಆ ವಿಷಯದಲ್ಲಿ ಏನೇನು ತಿಳಿದುಕೊಂಡಿದ್ದಳೊ ಯಾರು ಬಲ್ಲರು? ಆಕೆ ಏನು ತಿಳಿದುಕೊಂಡಿದ್ದರೂ ಅದು ಆಕೆಯ ಸ್ವಭಾವಕ್ಕೆ ಸರಿಯಾದ ಮಾತು ಗಂಡು ಹೆಣ್ಣುಗಳ ಸಂಬಂಧದ ವಿಷಯದಲ್ಲಿ ಆಕೆಯ ಅಭಿಪ್ರಾಯಗಳು ಬಹಳ ಹಗುರಾಗಿರಬೇಕು ಅಂತೆಯೆ ಅಲ್ಲವೆ ಆಕೆ ತನ್ನನ್ನು ಊರಿಗೆ ಹೊರಡಿಸಿದ್ದು ? ಅಥವಾ—ಏನಿದ್ದರೂ ಇರಲಿ. ಈ ಒಂದು ಯೋಚನೆಯಲ್ಲದೆ ಮೋಹಿನಿಗೆ ನೂರು ಬಗೆಯ ವ್ಯಥೆಗಳು. ಬಂದಾಗಿನಿಂದ ತಾಯಿ ಸಿಡುಕಿನಲ್ಲಿಯೇ ಇರುತ್ತಿದ್ದಳು. ತಾನು ತನ್ನ ಮಟ್ಟಿಗೆ ಸ್ವತಂತ್ರಳಾಗಿ ಇದ್ದದ್ದು ಆಕೆಗೆ ಸರಿಯೆನಿಸುತ್ತಿರಲಿಲ್ಲ ವಿಶೇಷವಾಗಿ ಆನಂದ ಬಾಗಿಲವರೆಗೆ ಬಂದು ಬೇಡಿದ್ದರೂ ಆತನನ್ನು ತಿರುಗಿ ಕಳಿಸಿದ್ದಂತೂ ಆಕೆಯನ್ನು ತುಂಬಾ ರೇಗಿಸಿತ್ತು. ಊರಿಂದ ಬಂದ ಮರುದಿನವೇ ತಾಯಿ ಮಗಳ ನಡುವೆ ಮಾತು ನಡೆದಿತ್ತು. ಮೋಹಿನಿ ಕೊನೆಯಾಗಿ ಹೇಳಿದ್ದಳು. "ನೀನು ಎಷ್ಟು ಹೇಳಿದರೂ ಸರಿ. ಆ ಮಾತು ಎಂದೊ ಮುಗಿದು ಹೋಗಿದೆ ಮುಗಿದು ಹೋಗಿದೆ ಎಂದರೆ ಮುಗಿದೇ ಹೋಗಿದೆ" ಎಂದು. ತಾಯಿಗೆ ತುಂಬಾ ನಿರಾಶೆಯಾಗಿತ್ತು. ಇತ್ತೀಚೆಗೆ ಆಕೆ ಯಾವ ಮಾತುಗಳನ್ನೂ ಆಡುತ್ತಿರಲಿಲ್ಲ ಹೀಗಾಗಿ ಹಬ್ಬಕ್ಕಾಗಿ ಸಿಕ್ಕ ಬಿಡುವು ತಾಯಿಯೊಡನೆ ಅಜ್ಜನೊಡನೆ ಸೆಣಸಾಟ ನಡಸುವುದರಲ್ಲಿಯೇ ಕಳೆಯುವಂತಾಗಿತ್ತು ಇನ್ನು ಮುಂದಿನ ರಜೆಯಲ್ಲಿ ಬರಕೂಡದು ಎನ್ನುವ ಮಟ್ಟಿಗೆ ಬೇಸರವೆನಿಸಿತ್ತು. ಆದರೆ ಉಪಾಯವಿರಲಿಲ್ಲ. ಉಪಾಯವೇನು ಎಂದು ಚಿಂತಿಸಿದಾಗಲೆಲ್ಲ ವಸಂತನ ನೆನಹು ನೂರ್ಮಡಿಯಾಗಿ ತೂರಿ ಬರುತ್ತಿತ್ತು. ವಸಂತ! ಆ ಒಂದು ಹೆಸರಿನಲ್ಲಿ ಜಗತ್ತನ್ನೇ ಮರೆಯುವಂತಾಗು

ತ್ತಿತ್ತು. ಮನೆಯಲ್ಲಿಯ ಸೆಣಸಾಟ ತುಂಬಿದ ವಾತಾವರಣದಿಂದ ಮನಸ್ಸಿಗೆ ಬೇಸರವೆನಿಸಿದಾಗಲೆಲ್ಲ ಆ ಒಂದು ಹೆಸರಿನಿಂದ—ಅದರ ಸ್ಮರಣೆಮಾತ್ರದಿಂದ ಕಣ್ಣೆದುರು ಕಟ್ಟುತ್ತಿದ್ದ ಕನಸಿನ ರಾಜ್ಯದ ಮೂಲಕ ಮೋಹಿನಿ ಎಲ್ಲವನ್ನೂ ಮರೆಯುತ್ತಿದ್ದಳು. ಇದರ ಪರಿಣಾಮವೆಂದರೆ ರಜೆ ಮುಗಿಯುವ ಹೊತ್ತಿಗೆ ವಸಂತನನ್ನು ಯಾವಾಗ ಕಣ್ಣಾರೆ ಕಂಡೇನೆಂಬ ಆತುರ ಮೋಹಿನಿಯ ಹೃದಯದಲ್ಲಿ ಮುಗಿಲೆತ್ತರ ನಿಂತಿತ್ತು. ಈ ಆತುರ ಬೆಳೆದ ಹಾಗೆ ವಸಂತನ ಬಗೆಯಲ್ಲಿ ಮೋಹಿನಿಯ ಆಸೆಗಳು ಹೆಚ್ಚಾಗಿ ಸ್ಪಷ್ಟವಾಗತೊಡಗಿದ್ದವು ಆಕೆಯ ಅಂತರಂಗದಲ್ಲಿ ವಸಂತ ಸಹಾನುಭೂತಿ ತೋರುವ ಗೆಳೆಯನಾಗಿ ಮಾತ್ರ ಉಳಿದಿರಲಿಲ್ಲ ಅದೇ ಅಂತರಂಗದಲ್ಲಿ ಹುದುಗಿ ನಿಂತು ಮೇಲಕ್ಕೇಳಬಯಸುತ್ತಿದ್ದ ಸಾವಿರ ಸುಪ್ತ ಆಸೆಗಳ ಪ್ರತೀಕವಾಗಿದ್ದ. ವಸಂತ ತನಗೆ ಸಹಾನುಭೂತಿಯನ್ನೇಕೆ, ತನ್ನ ಪ್ರತಿಯೊಂದು ಆಸೆಯನ್ನೂ ಪೂರೈಸಬೇಕು, ತಾನು ಬದುಕಿನಲ್ಲಿ ಸುಖವಾಗಿರುವುದೇ ಇದ್ದರೆ ಆ ಸುಖ ವಸಂತನಿಂದಲೇ ಸಾಧ್ಯವೆನ್ನುವ ಮಟ್ಟಿಗೆ ಆಸೆ ಉಕ್ಕಿ ಆಕೆಯ ಅಂತರಂಗವನ್ನು ವ್ಯಾಪಿಸಿತ್ತು ಆದರೆ ವಸಂತ ಏನೆನ್ನುವ ? ಏನೆಂದಿದ್ದ ? 'ಇನ್ನೂ ಯೋಚಿಸು' ಎಂದು ಹೇಳಿದ್ದನಲ್ಲವೆ ? ಯೋಚಿಸುವುದೇನು ? ಎಲ್ಲ ಯೋಚನೆಗಳನ್ನೂ ಮಣಿಸಿ, ಮೀರಿ, ಎಲ್ಲ ತಡೆಗಳನ್ನು ಬದಿಗಿರಿಸಿ ಒಲವು ಮುಂದೋಡುತ್ತಿರುವಾಗ ಯೋಚಿಸುವುದೇನು ?

ಮೋಹಿನಿಯ ಮಟ್ಟಿಗೆ ಯೋಚನೆ ಕೊನೆಗಂಡಿದ್ದರೂ ವಸಂತ ಮಾತ್ರ ತೀವ್ರ ಯೋಚನೆಗೊಳಗಾಗಿದ್ದ. ದೀಪಾವಳಿಗೆಂದು ಏಳು ದಿನದ ರಜೆಯನ್ನು ಪಡೆದು ರಾಯಚೂರಿಗೆ ಹೋಗಿದ್ದರೂ ಆ ದಿನ ಸಾಯಂಕಾಲ ಮೋಹಿನಿ ಸ್ಪಷ್ಟವಾಗಿ ಹೇಳಿದ ವಿಚಾರ ಆತನನ್ನು ಅಲ್ಲಿಯ ವರೆಗೂ ಬೆನ್ನಟ್ಟಿತ್ತು. ತನ್ನದೇ ತಪ್ಪು. ಮೊದಲ ಸಲ ರಾಯಚೂರಿನಿಂದ ಹೋದಾಗ ತನ್ನ ಮದುವೆ ಗೊತ್ತಾಗಿದೆ ಎಂದು ಹೇಳಿಬಿಟ್ಟಿದ್ದರೆ ಮುಂದೆ ಮೋಹಿನಿ ತನ್ನ ಮಟ್ಟಿಗೆ ಏನನ್ನು ತಿಳಿದುಕೊಂಡಿದ್ದರೂ ಅಂಥ ಯಾವ ಮಾತಿಗೂ ಅವಕಾಶ ಉಳಿಯುತ್ತಿರಲಿಲ್ಲ ಅಲ್ಲದೆ ತಾನಾದರೂ ಏನು ಮಾಡುವುದು ಸಾಧ್ಯವಿದೆ ? ಈಗಂತೂ ಮದುವೆ ಗೊತ್ತಾಗಿ ಹೋಗಿದೆ. ಒಂದು ವೇಳೆ ಮದುವೆ ಗೊತ್ತಾಗಿರದಿದ್ದರೂ ಏನು ಸಾಧ್ಯವಿದ್ದಿತು ? ಮೋಹಿನಿ ತನ್ನನ್ನು ಪೂರ್ತಿಯಾಗಿ ಒಲಿದುಬಂದರೂ ಆಕೆ ಆನಂದನ ಹೆಂಡತಿ —ಆ ಮಾತು ಅಪರಿಹಾರ್ಯವಾಗಿದ್ದಿತು ಆಕೆ ಆನಂದನಿಗೆ ಯಾವ ಉತ್ತರ

ವನ್ನು ಹೇಳಿದ್ದರೂ ತಾನು ಆತನ ಮದುವೆಯಾದ ಹೆಂಡತಿ ಎಂಬ ಮಾತನ್ನು ಅಲ್ಲಗಳೆಯಲಾರಳು. ಹೀಗಿದ್ದಾಗ ಆಕೆಯ ಒಲವು ಸರಿಯಾದದ್ದೂ ಅಲ್ಲ; ಅದಕ್ಕೆ ಅವಕಾಶವೂ ಇಲ್ಲ, ಸಮರ್ಥನೆಯೂ ಇಲ್ಲ, ಮುಂದೆ ಯಾವ ದಾರಿಯೂ ಇಲ್ಲ. ಎಂದಮೇಲೆ ಅದನ್ನು ಬಗೆಹರಿಯಿಸುವುದು ಹೇಗೆ? ಆದರೆ ಇದನ್ನೆಲ್ಲ ತಾನೇಕೆ ಚಿಂತಿಸಬೇಕು? ಮನಸ್ತಾಪ ಮಾಡಿಕೊಳ್ಳಬೇಕು? ಆಕೆಗೆ ತಿಳಿಯಬೇಡವೆ? ಒಂದು ಕಾಲಕ್ಕೆ ತಾನೂ ಒಲಿದು ಆಕೆಯಲ್ಲಿ ಆಸೆಯನ್ನು ಉಕ್ಕಿಸಿರಲಿಲ್ಲವೆ? ಅದು ಅಷ್ಟಕ್ಕೇ ಮುಗಿಯಿತು, ಮುಗಿಯಬಹುದು ಎಂದು ತಿಳಿದ ತನ್ನ ಮಟ್ಟಿಗೆ ಮುಗಿಸಲೂ ಯತ್ನಿಸಿದ ಅದಕ್ಕೆ ಅನುಕೂಲವಾಗುವಂತೆ ಮದುವೆಯೂ ಗೊತ್ತಾಯಿತು ಆದರೆ ಆಕೆಗೆ? ಇಂದು ಅದೇ ಆಸೆ ಆಕೆಯಲ್ಲಿ ಅನಿವಾರ್ಯವಾಗುತ್ತಿರುವಂತಿತ್ತು ಇನ್ನೊಮ್ಮೆ ಆಕೆ ಭೆಟ್ಟಿಯಾದರೆ ಎಲ್ಲವನ್ನೂ ಆಕೆಗೆ ತಿಳಿಹೇಳಬೇಕು—ತನ್ನ ಮದುವೆ ಗೊತ್ತಾದುದನ್ನು ಕೂಡ. ಅದರ ಹೊರತು ಬೇರೆಯಾದ ದಾರಿ ಕಾಣಲೇ ಇಲ್ಲ ಇಂಥ ಯೋಚನೆಗಳಲ್ಲಿ ಸಿಲುಕಿ ವಿಮನಸ್ಕನಾದಾಗ ಮೋಹನರಾಯರು ವಸಂತನನ್ನು ಪೀಡಿಸುತ್ತಿದ್ದರು —ಚೇಷ್ಟೆಗಾಗಿ :

" ಏನು ವಸಂತಾ, ಬಹಳ ಯೋಚನೆಗೊಳಗಾಗಿದ್ದೀಯಲ್ಲ? ಮದುವೆಯಾಗುತ್ತದೆ—ಇನ್ನೇನು ಅದು ಬಹಳ ದಿನ ಉಳಿಯಲಿಲ್ಲ. ಡಿಸೆಂಬರಿನಲ್ಲಿ ಮುಹೂರ್ತ ನೋಡುತ್ತಿದ್ದಾರಂತೆ?"

" ಅದಕ್ಕಾಗಿ ನಾನು ತಲೆ ಹಿಡಿದುಕೊಂಡು ಕೂತಿದ್ದೇನೆಯೆ ಭಾವಯ್ಯ?"

" ಅಲ್ಲವೆ? ನಿನ್ನದಾದರೂ ಏನು ತಪ್ಪು? ಮದುವೆ ಗೊತ್ತಾಗಿ ಮೂರು ತಿಂಗಳು ಕಾಯಬೇಕಾಗಿ ಬಂದರೆ ಯಾರಿಗಾದರೂ ನಿನ್ನ ಹಾಗೆನಿಸುವುದು ಸ್ವಾಭಾವಿಕವೇ!"

" ಈಗ ನಾನು ಏನು ಮಾಡಿದೆ ಅಂಥಾದ್ದು?"

" ಏನು ಮಾಡಿದೆಯಾ? ನಿನ್ನ ಮುಖ ನೋಡಿಕೋ. ಕನ್ನಡಿ ಉತ್ತರ ಹೇಳುತ್ತದೆ!"

" ಸರಿ. ಮದುವೆಗೆ ಒಪ್ಪಿದವರೆಲ್ಲರೂ ಇಷ್ಟು ಅನ್ನಿಸಿಕೊಳ್ಳಲೇಬೇಕೆಂದು ಕಾಣುತ್ತದೆ!"

ಇಂಥ ಮಾತು ದಿನಕ್ಕೊಂದು ಬಾರಿಯಾದರೂ ನಡೆಯುತ್ತಲೇ ಇದ್ದಿತು.

ಭಾವನಿಂದಲ್ಲದಿದ್ದರೆ, ಅಕ್ಕನಿಂದ. ಎರಡು ಮೂರು ಸಲ ಸಾಯಂಕಾಲ ಶಕುಂತಲೆಯೊಡನೆ ತಿರುಗಾಡಲು ಹೋಗಿದ್ದ ಆಗ ಮಾತ್ರ ಎಲ್ಲ ಯೋಚನೆಗಳು ದೂರವಾಗುತ್ತಿದ್ದವು ಮನಸ್ಸು ಶಕುಂತಲೆಯ ಮುಗ್ಧ ಸೌಂದರ್ಯದಲ್ಲಿ, ಮುಂಬರುವ ಸುಖದ ಕನಸುಗಳಲ್ಲಿ ಲೀನವಾಗಿ ಹೋಗುತ್ತಿತ್ತು ನಿಜವಾಗಿ ಎಷ್ಟು ದಿನ ಕಾಯಬೇಕು ಎಂದೆನಿಸುತ್ತಿತ್ತು. ಹೀಗೆಂದೇ ಶಕುಂತಲೆಯನ್ನು ಒಂದು ಸಲ ಕೇಳಿದ್ದ :

" ನಿಮ್ಮ ಮನೆಯವರು ಭಾರಿ ಸಂಪ್ರದಾಯವಂತರು ಎಂದು ಕಾಣುತ್ತದೆ "

" ಯಾಕೆ ? "

" ಅಲ್ಲವೆ ? ಇದೇನು ಚಾತುರ್ಮಾಸ, ಅದು ಇದು, ಎಂದು ಮದುವೆಯನ್ನು ಮುಂದೆ ತಳ್ಳುತ್ತಿದ್ದಾರೆ ! "

" ಯಾಕೆ ? ಅಷ್ಟು ಆತುರವೆ ? " ಎಂದು ಶಕುಂತಲೆ ಮೃದುವಾಗಿ ನಕ್ಕಿದ್ದಳು.

" ನಿನಗಿಲ್ಲವೇನೊ ? ಅಂ—? "

" ಮದುವೆ ಆಗಿಯೇ ಆಗುತ್ತದೆ ಎಂದಮೇಲೆ—"

" ಇನ್ನು ಮೂರು ವರ್ಷಗಳ ಮೇಲೆ ಆದರೆ ? "

" ಮೂರು ವರ್ಷ ಬಿಡುತ್ತಾರೆಯೆ ? "

" ಯಾರಿಗೆ ಗೊತ್ತು ? "

" ಅಷ್ಟೇನೂ ಗಾಬರಿಯಾಗುವುದು ಬೇಡ. ಬಹಳವಾದರೆ ಇನ್ನು ಒಂದೂವರೆ ತಿಂಗಳು ! "

" ನನಗೆ ಗಾಬರಿ ಎಂದು ಹೇಳುತ್ತೀಯ ನಿನಗೇನೂ ಅನಿಸುವುದೇ ಇಲ್ಲವೆ ? "

" ಏನೆನಿಸಬೇಕು ? "

" ಅದನ್ನೂ ನಾನೇ ಹೇಳಬೇಕು. ಅಲ್ಲವೆ ? "

" ನನಗೇನೆನಿಸುತ್ತದೆ ಎಂಬುದು ನಿಮಗೆ ತಿಳಿದಿರಬೇಕು ! "

" ತಿಳಿದಿಲ್ಲ ಅಂತೆಯೇ ಕೇಳಿದೆ."

" ಈಗ ಹೇಳುವುದಿಲ್ಲ. ಮುಂಬಯಿಗೆ ಬಂದಮೇಲೆ ಹೇಳುವೆ."

" ಈಗಲೆ ಹೇಳಿದರೆ ಏನಾಗುತ್ತದೆ ? "

" ಈಗಲೆ ಕೇಳಿದರೆ ಬಹಳ ಸಂತೋಷವೆ ? "

" ಹೌದು ! "

" ಹಾಗಿದ್ದರೆ ಆಮೇಲೆಯೆ ಹೇಳುವೆ."

" ಯಾಕೊ ! "

" ಆಮೇಲೆ ಹೇಳಿದರೆ ಈಗಿನಕಿಂತಲೂ ಸಂತೋಷ ನೂರ್ಮಡಿಯಾಗುತ್ತದೆ ! "

" ನನ್ನ ಆತುರವೆಂದರೆ ನಿನಗೆ ಬಹಳ ಸಂತೋಷ. ಹೌದೆ ? "

" ನನ್ನ ಆತುರ ಎಂದರೆ ನಿಮುಗಲ್ಲವೇನೊ ! "

ಮಾತುಮಾತಿನಲ್ಲಿ ವಸಂತ-ಶಕುಂತಲೆಯರ ಮನಸ್ಸುಗಳು ಸಂತೋಷವನ್ನು ಪಡೆಯುತ್ತಿದ್ದವು, ಒಬ್ಬರೊಬ್ಬರ ಹತ್ತಿರ ಸರಿಯುತ್ತಿದ್ದವು ಇಂಥ ಸಂದರ್ಭಗಳಲ್ಲಿ ಮೋಹಿನಿಯಾಗಲಿ, ಆಕೆಯ ಸಮಸ್ಯೆಯಾಗಲಿ ವಸಂತನ ಮನಸ್ಸನ್ನು ಮುಟ್ಟುವುದು ಹೇಗೆ ಸಾಧ್ಯ ? ಹೀಗಾಗಿ, ವಸಂತ ಮುಂಬಯಿಗೆ ಮರಳಿ ಬರುವಾಗ ಆತನ ಮನಸ್ಸು ಶಕುಂತಲೆಯ ಮಾತುಕತೆಗಳಿಂದ ತುಂಬಿತ್ತಲ್ಲದೆ ಮೋಹಿನಿಯ ಸಮಸ್ಯೆಗಳಿಂದಲ್ಲ !

ಆದರೆ ಆನಂದನ ಮನಸ್ಸು ಯಾವುದರಿಂದ ಗೆಲುವಾಗಬೇಕು ? ಆತನ ನಿರಾಶೆ ಹೇಗೆ ದೂರವಾಗಬೇಕು ? ಹಾಗೆ ನೋಡಿದರೆ ಆತನ ನಿರಾಶೆ ಮೋಹಿನಿಯ ಕೋಣೆಯಿಂದ ಹೊರಬೀಳುವಾಗಲೆ ಮಾಯವಾಗಿತ್ತು ನಿರಾಶೆಯ ಬದಲು ಆತನ ಹೃದಯದಲ್ಲಿ ತಲೆಯೆತ್ತಿದ್ದು ಮೊದಲು ರೋಷ, ಆಮೇಲೆ ಒಂದು ಬಗೆಯ ಅಸಹಾಯತೆ, ನಿರುತ್ಸಾಹ, ತಾನಾಗಿಯೆ ಎಲ್ಲವನ್ನೂ ಹೇಳಿ ಸರಿಪಡಿಸಿಕೊಳ್ಳುವಂತೆ ಅನುನಯ ತೋರಿದರೆ ಮೋಹಿನಿ ಒಂದು ವೇಳೆ ಒಪ್ಪಬಹುದು ಎಂಬ ಆಸೆಯನ್ನಿಟ್ಟುಕೊಂಡೇ ಆನಂದ ಆ ದಿನ ಸಾವಟಿಗೆಗಳನ್ನೇರಿದ್ದ ಆದರೆ ಬಾಗಿಲಲ್ಲಿಯೇ ಆತನಿಗೆ ಮುನ್ಸೂಚನೆ ದೊರಕಿತ್ತು ಕೊನೆಯ ಮಾತುಗಳಲ್ಲಿಯ ಆಕೆಯ ನಿರ್ಧಾರವನ್ನು ನೆನೆದಾಗ ಆನಂದನಿಗೆ ತಾನು ಬಂದು ಈ ರೀತಿ ತನ್ನ ಅವಮಾನವನ್ನು ಮಾಡಿಕೊಳ್ಳಬಾರದಾಗಿತ್ತು ಎಂದು ತೋರಿತ್ತು. ಆದರೆ ಆ ಅವಮಾನದ ವಿಚಾರವೂ ಬೇಗನೆ ಮರೆಯಾಗಿತ್ತು ಮೋಹಿನಿಯ ಬಗೆಯಲ್ಲಿಯ ತನ್ನ ಮೋಹ ಹೇಗೂ ಇರಲಿ, ತಾನು ತನ್ನ

ಕರ್ತವ್ಯವನ್ನು ಮಾಡಬೇಕಿತ್ತು, ಮಾಡಿದ. ವಸಂತನಿಂದ ಆ ರಾತ್ರಿ ಎಲ್ಲ ಸಮಾಚಾರ ತಿಳಿದ ಬಳಿಕ— ಭಾಸ್ಕರನ ಕಪಟ ಬಯಲಾದ ಬಳಿಕ— ತಾನು ಆಕೆಯನ್ನು ಕಾಣುವುದು ಅಗತ್ಯವಿದ್ದಿತೆಂದೇ ಅಲ್ಲವೆ ತಾನು ಹೋದದ್ದು? ಆದರೆ ಅಲ್ಲಿ ಹೋಗಿಬಂದನಂತರದಿಂದ ಆತನ ವೃತ್ತಿಯೇ ಬದಲಾಯಿತು. ಮೋಹಿನಿಯ ಬಗೆಯಲ್ಲಿಯ ಮೋಹವೂ ಕಡಿಮೆಯಾಯಿತು ಇದಕ್ಕೆ ಪ್ರತಿಯಾಗಿ 'ಇಂಥವಳನ್ನು ಕಟ್ಟಿಕೊಂಡು ಮಾಡುವುದಾದರೂ ಏನು? ಅದರಲ್ಲಿ ಯಾವ ಸುಖಸಮಾಧಾನವಿದೆ?' ಎಂದು ಕೇಳಿಕೊಳ್ಳುತ್ತಿದ್ದ 'ಇಂಥವಳು' ಎಂದಾಗ ಆ ಮಾತಿನ ಅರ್ಥವೇನು ಎಂದು ಆತ ಯೋಚಿಸಿ—ತನ್ನ ಮನಸ್ಸನ್ನೇ ಬಿಡಿಸಿ ನೋಡಿದ್ದರೆ ಏನೇನನ್ನು ಆತ ಕಾಣುತ್ತಿದ್ದನೊ! ಆಕೆಯ ಹಟ ಆನಂದನ ಮನಸ್ಸನ್ನು ಬೇರೆಡೆಗೆ ಓಡಿಸಿತ್ತು ತಾನಾಗಿಯೇ ಹೇಳಿದಮೇಲೂ ಹಿಂದೆ ನಡೆದ ಅನ್ಯಾಯವನ್ನು ಆಕೆ ಮರೆಯಬಾರದೇಕೆ? ಮರೆಯಬೇಕು ಆಕೆಯ ಬದಲು ಇನ್ನಾರಾದರೂ ಇದ್ದರೆ ಮರೆಯಬಹುದಿತ್ತು ಪತಿಯೇ ಪಾದಾಕ್ರಾಂತನಾದರೂ ಮುನಿಸನ್ನು ಮರೆಂಪದ ಮಡದಿ ಇರಬಹುದು ಎಂಬುದು ಆನಂದನಿಗೆ ಅರ್ಥವಾಗಲಿಲ್ಲ. ಈಕೆಯ ದಾರಿಗಳೇ ಬೇರೆ. ಆ ದಾರಿಗಳು ತನಗೆ ಸರಿಬೀಳತಕ್ಕವುಗಳಲ್ಲ ಆ ದಾರಿಗಳು 'ನೀತಿಪರ'ವಾಗಿರಬಹುದೆಂದೂ ಆನಂದನಿಗೆ ತೋರಲಿಲ್ಲ. ಇದೆಲ್ಲದರಿಂದ ಮನಸ್ಸು ರೊಚ್ಚಿಗೇಳುತ್ತಿತ್ತು. ಆದರೆ ಏನು ಮಾಡುವ ಹಾಗಿದ್ದ? ಆಕೆಯನ್ನು ಕಂಡು ಎರಡೂವರೆ ತಿಂಗಳ ಮೇಲಾಗಿತ್ತು ಆಕೆಯನ್ನು ಕುರಿತು ಮನೆಯಲ್ಲಿ ಮಾತನ್ನೂ ಆಡುವ ಹಾಗಿಲ್ಲ. ತನ್ನ ಸಂದರ್ಶನದ ಇತಿಶ್ರೀಯನ್ನು ಅಕ್ಕನೆದುರು ಹೇಳಿದಾಗ ಆಕೆ ಹೇಳಿದ್ದಳು

"ನೀನು ಹೋಗಲೇಬಾರದಾಗಿತ್ತು. ದಾರಿಗೆಟ್ಟವಳು! ಆಕೆಗೆ ಮನೆಯನ್ನು ನಂಬಿಕೊಂಡು ಇರಬೇಕಾಗಿದ್ದರೆ ಆಕೆ ಹೀಗೆ ಹೋಗುತ್ತಲೂ ಇರಲಿಲ್ಲ, ಹೀಗೆ ಇರುತ್ತಲೂ ಇರಲಿಲ್ಲ ನಮ್ಮಲ್ಲಿದ್ದಾಗಲೇ ಬೇಕಾದ ಹಾಗೆ ತಿರುಗುವವಳಿಗೆ ಈಗಂತೂ ಯಾರೂ ಕೈಹಿಡಿದು ಕೇಳುವವರೇ ಇಲ್ಲ!" ಎಂದು ಆದರೆ ಆನಂದನ ಲಕ್ಷ್ಯ ಇಂಥ ಮಾತುಗಳ ಕಡೆಗೆ ಹರಿಯುತ್ತಲೇ ಇರಲಿಲ್ಲ ಈ ಸಮಸ್ಯೆಯನ್ನು ಕುರಿತು ಯೋಚಿಸಿದಾಗ ಆತನಿಗೆ ನಿರುತ್ಸಾಹವೆನಿಸುವುದಕ್ಕೆ ಬೇರೆಯಾದ ಕಾರಣವಿದ್ದಿತು: ಮೋಹಿನಿಯಂತೂ ತಿರುಗಿ ಬರುವ ಹಾಗಿಲ್ಲ. ಆಕೆ ಬಾರದ ಹೊರತು, ಆಕೆಯಿಂದ ಕಾನೂನಿಗೆ ಸರಿಯಾಗಿ ಬಿಡುಗಡೆಯಾಗದ

ಹೊರತು, ತನಗೆ ಬೇರೆ ದಾರಿಯೇ ಇರಲಿಲ್ಲ! ಒಂದೇ ಹಗ್ಗದಿಂದ ಇಬ್ಬರ ಕುತ್ತಿಗೆಗಳನ್ನು ಹಿಡಿದು ಕಟ್ಟಿದ ಹಾಗಿತ್ತು ಪರಿಸ್ಥಿತಿ. ಸಮೀಪ ಬರುವ ಹಾಗಿಲ್ಲ, ದೂರ ಸರಿದರೆ ಉರುಳು ಬಿಗಿಯುತ್ತದೆ. ಇದರಿಂದ ಬಿಡುಗಡೆ ಹೇಗೆ? ಇದನ್ನು ನೆನೆದಾಗ ಆನಂದನ ಕಣ್ಣೆದುರು ದೀಪಾವಳಿಯ ದೀಪಗಳೆಲ್ಲವೂ ನಂದಿಹೋಗಿ ಸುತ್ತಲೆಲ್ಲವೂ ನಿರುತ್ಸಾಹದ ಕತ್ತಲೆಯೇ ಕವಿಯುತ್ತಿತ್ತು.

ಆದರೆ ಮುಂಬಯಿಯ ತುಂಬ ತುಳುಕಾಡುವ ದೀಪಾವಳಿಯ ದೀಪಗಳ ಪ್ರಕಾಶದಂತೆ ಆಪಟೆಯ ಮನಸ್ಸಿನಲ್ಲಿ ಶಾಕುಂತಲ ಚಿತ್ರದ ಬಗೆಯಲ್ಲಿ ಉತ್ಸಾಹ ತುಳುಕಾಡುತ್ತಿದ್ದಿತು. ರಂಗನಾಥನ್ ಆದರೂ ಹಾಗೆಯೆ ಆ ಚಿತ್ರ ಪಟದ ದಿಗ್ದರ್ಶನವನ್ನು ಪೂರ್ತಿಯಾಗಿ ಆ ಪಟೆನಿಗೆ ಬಿಟ್ಟುಕೊಟ್ಟಿದ್ದರಿಂದ ತಾನು ಬೇರೆಯಾದ ಚಿತ್ರವೊಂದರ ಏರ್ಪಾಡುಗಳನ್ನು ಮಾಡುತ್ತಿದ್ದ ಹಬ್ಬದ ದಿನಗಳ ಉತ್ಸಾಹದಿಂದಲೆ ಇಬ್ಬರೂ ತಮ್ಮ ತಮ್ಮ ಕೆಲಸಗಳ ಪೂರ್ವ ಸಿದ್ಧತೆಗಳನ್ನು ನಡೆಸಿದ್ದರು. ದಿನ ನಿತ್ಯವೂ ಒಂದಿಲ್ಲೊಂದು ವಿಷಯವನ್ನು ಕುರಿತು ಚರ್ಚೆ ನಡೆಯುತ್ತಲೇ ಇದ್ದಿತು.

" ಹಾಗಿದ್ದರೆ ನಾವು ಇನ್ನು ಒಂದೆರಡು ವಾರಗಳಲ್ಲಿ ಕೆಲಸವನ್ನು ಯಾಕೆ ಪ್ರಾರಂಭಿಸಬಾರದು ? " ಎಂದು ಆಪಟೆ. ರಂಗನಾಥನ್ ಹೇಳಿದ .

" ಅದು ಹೇಗೆ ಸಾಧ್ಯ ? ರಾಮಕುಮಾರ್ ನಮ್ಮಲ್ಲಿಗೆ ಬರುವುದಕ್ಕೆ ಇನ್ನೂ ಒಂದು ತಿಂಗಳು "

" ಹೌದಲ್ಲವೆ ? ಅಷ್ಟರಲ್ಲಿ ನಾವು ಉಳಿದ ಒಂದೆರಡು ಪಾತ್ರಗಳ ಯೋಜನೆಯನ್ನೂ ಮಾಡಬೇಕು "

" ಮತ್ತೆ ಯಾವ ಪಾತ್ರ ? "

" ಅನಸೂಯಾ ? ನಾವು ಹಾಗೆಯೇ ಇಟ್ಟಿದ್ದೇವಲ್ಲವೆ ? "

" ಅದೇಕೆ ? ನಿಮ್ಮ ಮಿಸೆಸ್ ಕೇಳಲಿಲ್ಲವೆ ಅವರ ಫ್ರೆಂಡನ್ನ ? "

" ಕೇಳಿದಳು ಆದರೆ ಆಕೆ ಅಷ್ಟೊಂದು ಉತ್ಸಾಹ ತೋರಿಸಲಿಲ್ಲವೆಂದು ಕಾಣುತ್ತದೆ."

" ಹೌದೆ ? ಅವರು ಒಪ್ಪಿದರೆಂದೇ ನಾನು ಸುಮ್ಮನಾಗಿದ್ದೆ ಅವರು ಇಲ್ಲಿಗೆ ಬಂದರೆ ನಾನಾಗಿಯೇ ಒಂದು ಮಾತನ್ನು ಹೇಳುತ್ತಿದ್ದೆ—"

" ನೋಡಬಹುದು ಇನ್ನೂ ಪ್ರಯತ್ನ ಮಾಡಿ. ಮುಂದಿನ ವಾರ ಶಾಲೆ

ಪ್ರಾರಂಭವಾಗುತ್ತದೆ. ಬಂದೇ ಬರುತ್ತಾಳೆ."

"ಹೌದು. ಪ್ರಯತ್ನ ಮಾಡಲೇಬೇಕು. ಇಂದಿಲ್ಲ ನಾಳೆ ಆಕೆ ನಿಜ ವಾಗಿಯೂ ಒಳ್ಳೆ ಕೆಲಸ ಮಾಡಬಹುದಾಗಿದೆ"

"ಸರಿ. ಆದರೆ ಮಾಡಲಿಕ್ಕೊಂದು ಒಪ್ಪಬೇಕಲ್ಲ ಮೊದಲು—"

"ಒಪ್ಪಬಹುದು, ನೋಡೋಣ. ಊರಿಂದ ಬಂದ ಕೂಡಲೆ ಕರೆದು ಕೊಂಡು ಬನ್ನಿ ಒಮ್ಮೆ—"

"ಕೊನೆಯ ಆ ಎರಡು ಹಾಡುಗಳದ್ದೇನಾಯಿತು ?"

"ಬರಬಹುದು ಇಷ್ಟರಲ್ಲಿಯೇ ಮೊನ್ನೆಯಲ್ಲವೆ ನಾವು ಅವರಿಗೆ ಕಾಗದ ಒರೆದದ್ದು ?"

"ಏನಿದ್ದರೂ ನಾವು ಡಿಸೆಂಬರ್ ಒಂದಕ್ಕಾದರೂ ಕೆಲಸ ಪ್ರಾರಂಭಿಸಲೇ ಬೇಕು."

"ಡಿಸೆಂಬರ್ ಒಂದಕ್ಕೆ ಖಂಡಿತವಾಗಿಯೂ ಮಾಡಬಹುದು"

'ಮೋಹಿನಿ ಇಂದಿಲ್ಲ ನಾಳೆ ಒಳ್ಳೆ ಕೆಲಸ ಮಾಡಬಹುದು' ಎಂದು ರಂಗನಾಥನ್ ವ್ಯಕ್ತಮಾಡಿದ ಅಭಿಪ್ರಾಯ ಆಪಟೆನಿಗೆ ಆಶ್ಚರ್ಯವನ್ನುಂಟು ಮಾಡಲಿಲ್ಲ ಅನುರಾಧೆ ಆಗಲೆ ಒಂದನ್ನು ಒಂಬತ್ತು ಮಾಡಿ ಹೇಳಿಯೂ ಇರಬೇಕು. ಅಲ್ಲದೆ ಮೋಹಿನಿ ಸ್ಟುಡಿಯೋಕ್ಕೆ ಬಂದಾಗ ರಂಗನಾಥನ್ ಆಕೆಗೆ ಇತ್ತೀಚೆಗೆ ವಿಶೇಷವಾಗಿ ತೋರುತ್ತಿದ್ದ ಆದರ—ಒಂದೊಂದು ಸಲ ಸಲಿಗೆ ಕೂಡ—ಆಪಟೆನ ಮನಸ್ಸಿನಲ್ಲಿ ಏನೇನೊ ಯೋಚನೆಗಳನ್ನು ಹೂಡಿದ್ದವು ಆದರೆ ಅದೆಲ್ಲಕ್ಕೂ ತನಗೂ ಯಾವ ಸಂಬಂಧ ಎಂದುಕೊಂಡು ಸುಮ್ಮನಾಗಿದ್ದ ಎಷ್ಟಾದರೂ ರಂಗನಾಥನ್ ಮುಖ್ಯಸ್ಥ, ಆತನ ವಿಚಾರದಲ್ಲಿ ಏನನ್ನೂ ಮಾತ ನಾಡದಿರುವುದೇ ಕ್ಷೇಮವೆಂದು ಸುಮ್ಮನಾಗಿಯೇ ಇದ್ದ. ಒಂದು ಮಾತು ಮಾತ್ರ ಕಳೆದ ಒಂದು ತಿಂಗಳಲ್ಲಿ ಸ್ಪಷ್ಟವಾಗಿತ್ತು. ಅದೆಂದರೆ ರಂಗನಾಥನ್ ಮೋಹಿನಿಯನ್ನು ಕುರಿತು ಹೆಚ್ಚಾಗಿ ಯೋಚಿಸುತ್ತಿದ್ದ ಎಂಬುದು. ಆಕೆಯನ್ನು ಕುರಿತಾದ ಆತನ ಯೋಚನೆಗಳು ಕೇವಲ ವ್ಯಾವಹಾರಿಕವಾಗಿದ್ದುವೊ ಅಥವಾ ವೈಯಕ್ತಿಕವಾಗಿದ್ದುವೊ ಎಂಬುದು ಸದ್ಯಕ್ಕಂತೂ ಆತನ ಹೊರತು ಬೇರೆಯವ ರಿಗೆ ತಿಳಿಯುವುದು ಸಾಧ್ಯವಿರಲಿಲ್ಲ ಏನಾದರೂ ಮೋಹಿನಿ ಯಾವುದಾದ ರೊಂದು ಭೂಮಿಕೆಯಲ್ಲಿ ಕೆಲಸ ಮಾಡಬೇಕು ಎಂಬ ಆತುರ ರಂಗನಾಥನ್‌ನಲ್ಲಿ

ಸ್ಪಷ್ಟವಾಗಿದ್ದಿತು. ಆಕೆ ಊರಲ್ಲಿದ್ದರೆ ಆಕೆಯ ಕೋಣೆಯ ವರೆಗೆ ಹೋಗಿ ಆಕೆಯನ್ನು ಮನವೊಲಿಸುವ ಮಟ್ಟಿಗೂ ಆತ ಮುಂದುವರಿಯಬಹುದಿತ್ತು. ಇದನ್ನು ಆಪಟೆ ತಿಳಿದವನಾಗಿದ್ದ ಕಳೆದ ವರ್ಷ ನಡೆದ ಇಂಥದೇ ಒಂದು ಪ್ರಸಂಗವನ್ನು ನೆನೆದಾಗ ಆತನಿಗೆನಿಸಿತ್ತು. ಮೋಹಿನಿ ಪಾತ್ರವಹಿಸಲು ಸಿದ್ಧಳಾಗುವುದೇ ಆದರೆ ಅದು ಅಷ್ಟಕ್ಕೇ ನಿಲ್ಲಲಾರದು ಬೇರೆಯಾದ ಕತೆ ನಿಸ್ಸಂದೇಹವಾಗಿ ಬೆಳೆಯುವುದು. ಮೋಹಿನಿ ತಮ್ಮ ಹತ್ತಿರ ಇರುವಾಗ ಇಂಥ ಸಂದರ್ಭ ಬೆಳೆಯುವುದು ಬೇಡವೆಂದೇ ಆಕೆ ಚಿತ್ರಪಟದಲ್ಲಿ ಭಾಗವಹಿಸುವ ವಿಷಯದಲ್ಲಿ ಆಪಟೆ ಅಷ್ಟೊಂದು ಉತ್ಸಾಹ ತೋರಿಸಿರಲಿಲ್ಲ

ಮೋಹಿನಿಯ ಒಳಕುದಿಯಾಗಲಿ, ವಸಂತನ ಸಮಸ್ಯೆಯಾಗಲಿ, ಆಪಟೆ ರಂಗನಾಥನ್‌ರವರ ಕೆಲಸಗಳ ಒತ್ತಡವಾಗಲಿ, ಯಾವುದೂ ಇಲ್ಲದೆ ಹಬ್ಬದ ದಿನಗಳನ್ನು ನಿಜವಾಗಿಯೂ ಹಬ್ಬ ಮಾಡಿ ಕಳೆದವಳೆಂದರೆ ಅನುರಾಧೆಯೊಬ್ಬಳೇ ಆಹಾರವಿಹಾರಗಳ ಹೊರತು ಯಾವುದೊಂದನ್ನೂ ತಿಳಿಯದ ಆಕೆ ದಿನಬೆಳಗೂ ಆಟಪಾಟಗಳಲ್ಲಿಯೇ ನಲಿಯುತ್ತಿದ್ದಳು. ಸಾಲದ್ದಕ್ಕೆ ಕೆಲವೇ ದಿನಗಳಲ್ಲಿ ಚಿತ್ರಪಟವೊಂದರಲ್ಲಿ ಕೆಲಸಮಾಡತಕ್ಕವಳು. ಆ ಸಮಾಚಾರವನ್ನು ಬಣ್ಣ ಬಳಿದು ಎಷ್ಟು ಜನಗಳಿಗೆ ಎಷ್ಟು ಸಲ ಹೇಳಿದ್ದಳೊ! ತಾನಿರುವುದು ಹದಿನೈದು-ಇಪ್ಪತ್ತು ದಿನಗಳ ಮಟ್ಟಿಗಾದರೂ ಬ್ಯಾಡ್‌ಮಿಂಟನ್ ಇಲ್ಲದೆ ಬದುಕಿರುವುದೇ ಸಾಧ್ಯವಿಲ್ಲವೆಂಬಂತೆ ಮನೆಯ ಹಿತ್ತಲಲ್ಲಿಯೆ ಆಟದ ಏರ್ಪಾಡುಗಳನ್ನು ಮಾಡಿ ಸುತ್ತಲಿನ ಕಾಲೇಜ ತರುಣತರುಣಿಯರನ್ನೆಲ್ಲ ಕಲೆಹಾಕಿದ್ದಳು ತಾನು ಆಡುವುದಕ್ಕಿಂತ ತಾನು ಆಡುತ್ತಿರುವುದನ್ನು ಉಳಿದವರು ನೋಡುತ್ತಿರಬೇಕೆಂಬುದೇ ಆಕೆಯ ಮುಖ್ಯ ಉದ್ದೇಶವಿದ್ದಹಾಗಿತ್ತು. ಹೀಗೆಂದೇ ಹೊತ್ತಿಗೊಂದು ತರಹದಂತೆ ಹತ್ತು ತರಹದ ಪತ್ತಲಗಳನ್ನುಟ್ಟು ಬಣ್ಣದ ಬೊಂಬೆಯಾಗಿ ಮೆರೆದಳು. ಬೆಳಿಗ್ಗೆ ಬಿಸಿಲೇತಕ್ಕೆ ಒಲಿಯಬೇಕು, ಸಂಜೆ ಕತ್ತಲೇಕಾಗಬೇಕು—ಆಟಕ್ಕೆ ತಡೆಯನ್ನುಂಟು ಮಾಡುವಂತೆ ? ಎಂದು ಆಕೆ ಸೃಷ್ಟಿನಿಯಮಗಳನ್ನೇ ಆಪಾದಿಸುವ ಮನಸ್ಸ್ಥಿತಿಯಲ್ಲಿದ್ದಳು. ಹದಿನೈದು ದಿನಗಳು ಸರಿದು ತಾನಿನ್ನು ಹೊರಡುವ ದಿನಗಳು ಸಮೀಪಿಸಿದ್ದು ಆಕೆಗೆ ಜ್ಞಾಪಕದಲ್ಲಿಯೇ ಇರಲಿಲ್ಲ. ಆಕೆ ಚಿತ್ರಪಟದಲ್ಲಿ ಕೆಲಸ ಮಾಡುವ ಸಂದರ್ಭವನ್ನು ಮುನ್ನೋಡುವುದಿರದಿದ್ದರೆ ಆಕೆಗೆ ಮುಂಬಯಿಯಾಗಲಿ, ಅಲ್ಲಿದ್ದ ತನ್ನ ಪತಿಯಾಗಲಿ, ನೆನಪಿಗೇ

ಬರುತ್ತಿರಲಿಲ್ಲವೇನೊ ! ಹಗಲು ರಾತ್ರಿಗಳು ಗಂಟೆಗಳ ಹಾಗೆ ಉರುಳಿದ್ದವು

ಮೋಹಿನಿಗೆ ಮಾತ್ರ ಹಗಲುರಾತ್ರಿಗಳು ಸರಿಯುವುದೇ ಕಷ್ಟವಾಗಿತ್ತು ಒಂದಿಲ್ಲೊಂದು ಕಾರಣಕ್ಕಾಗಿ ಮನೆಯಲ್ಲಿ ಮನಸ್ತಾಪ ನಡೆಯುತ್ತಲೇ ಇತ್ತು. ತಾಯಿ, ಅಜ್ಜ ಒಂದು ಕಡೆ, ತಾನು ಇನ್ನೊಂದು ಕಡೆ. ಹೀಗಾಗಿ ಶಾಲೆ ಯಾವಾಗ ಪ್ರಾರಂಭವಾದೀತೆಂದು ದಾರಿಕಾಯುತ್ತಿದ್ದಳು. ಕಳೆದ ಹದಿನೈದು ದಿನಗಳಲ್ಲಿಯ ಮನಸ್ತಾಪವನ್ನು ನೆನೆದಾಗಲೆಲ್ಲ ಆಕೆಗೆನಿಸುತ್ತಿತ್ತು ತಾನು ತೀರ ಏಕಾಕಿಯಾದಂತಾಯಿತು, ತನ್ನನ್ನು ಕೇಳುವವರು ಯಾರೂ ಇಲ್ಲ, ತನ್ನ ಮಟ್ಟಿಗೆ ತಾನು ಇರಬೇಕೆಂದು ಹಟ ಹಿಡಿದ ತನ್ನ ಮೇಲೆ ಜಗತ್ತು ತನ್ನಿಂದ ಎಲ್ಲರನ್ನೂ ಕಿತ್ತುಕೊಂಡು ಸೇಡು ತೀರಿಸಿಕೊಳ್ಳುತ್ತಿದೆ ಎಂದು ತೋರಿತು— 'ನೋಡುವಾ, ನಿನ್ನ ಆತ್ಮವಿಶ್ವಾಸವಾದರೂ ಯಾವ ನೀರಿನದು !' ಎಂದು. ಹಾಗೆ ನೋಡಿದರೆ ಮೋಹಿನಿ ಎಷ್ಟು ವಿಮನಸ್ಕಳಾದರೂ ಆಕೆಯ ಆತ್ಮವಿಶ್ವಾಸ ಕುಂದಿರಲಿಲ್ಲ ತಾನು ತನ್ನಮಟ್ಟಿಗೆ ಇರಲಾರೆನೆಂಬ ಅವಿಶ್ವಾಸವೂ ಮೂಡಿರ ಲಿಲ್ಲ ಆದರೆ ಒಳ್ಳೆಯದಾದ ಒಂದು ಮಾತಿನಿಂದ ತನ್ನನ್ನು ಕರೆಯುವವರು ಯಾರೂ ಇಲ್ಲವೆ ? ಎಂದು ಕೇಳುವಂತಾದಳು ತಾನು ಹಟದಿಂದ ಬದುಕ ಬಹುದು. ಆದರೆ ವಸಂತ ಹೇಳಿದ್ದೇ ನಿಜವೆಂದು ತೋರತೊಡಗಿತ್ತು. 'ಹಟ ಗೆಲ್ಲಬಹುದು, ಆದರೆ ಅದರಲ್ಲಿ ಸುಖವಿಲ್ಲ' ಎಂದಿರಲಿಲ್ಲವೆ ? ಹಾಗಾದರೆ ಏನು ಬೇಕು ? ತನಗೆ ಏನಾದರೂ ಕೊರತೆಯಿದ್ದರೆ ಆ ಕೊರತೆ ವಸಂತನ ಸಹವಾಸ ದಲ್ಲಿ ಮರೆಯಾಗುತ್ತಿದ್ದಿತು. ವಸಂತನನ್ನು ನೆನೆದಾಗ ಎದೆಯಲ್ಲಿಯ ಎಲ್ಲ ದುಗು ಡವೂ ಮಾಯವಾಗುತ್ತಿದ್ದಿತು. ಅವನಿಲ್ಲದಾಗ ಬಿಸಿಲುಗಾಲದಲ್ಲಿ ಬಿಸುಸುಯ್ಯುವ ಬರಡು ಬಯಲಿನಂತಿದ್ದ ಅಂತರಂಗ ಆತನೊಡನೆ ಇದ್ದಾಗ, ಆತನ ದನಿಯನ್ನು ಕೇಳಿದಾಗ, ಶ್ರಾವಣದ ಹಚ್ಚ ಹಸಿರಾಗಿ ಹಬ್ಬಿ ನಿಲ್ಲುತ್ತಿತ್ತು ಹೀಗೆಲ್ಲ ಯೋಚಿಸಿ ಈ ಮಾತನ್ನೇ ಕುರಿತು ವಸಂತನನ್ನು ಮಾತನಾಡಿಸಬೇಕು ಎಂದು ಕೊಂಡಳು. ಆದರೆ ಆತನೇನೆನ್ನುವನೊ !—

ಇನ್ನು ಮೂರು ದಿನಗಳಲ್ಲಿ ಮೋಹಿನಿ ಮುಂಬಯಿಗೆ ಬರಬೇಕು. ಅಂದು ಸಾಯಂಕಾಲ ಅನುರಾಧೆಯಿಂದ, ವಿಮಲೆಯಿಂದ ಕಾಗದ ಬಂದುವು. ಶಾಲೆ ಪ್ರಾರಂಭವಾದ ಮರುದಿನ ಸಾಯಂಕಾಲ ಅನುರಾಧೆ ಬರುವೆನೆಂದು ತಿಳಿಸಿ ದ್ದಳು. ಆದರೆ ವಿಮಲೆಯ ಕಾಗದ ಮಾತ್ರ ಮೋಹಿನಿಯನ್ನು ಧೃತಿಗೆಡಿಸಿತು.

ತಾನು ಮೊದಲೇ ಎಣಿಸಿದ ಹಾಗೆ ತಮ್ಮಿಬ್ಬರಿಗೂ ಶಾಲೆಯಲ್ಲಿ ಉಳಿಗಾಲವಿಲ್ಲ ವೆಂದೂ ಬಹುತರವಾಗಿ ಮೊದಲ ದಿನವೇ ತಮ್ಮಿಬ್ಬರಿಗೂ ನೋಟೀಸಾಗಲಿ, ಮನೆಗೆ ಹೋಗಲು 'ಅಪ್ಪಣೆ'ಯೆ ಆಗಲಿ ದೊರಕಬಹುದಾಗಿದೆಯೆಂದೂ ಬರೆದಿದ್ದಳು ಒಂದು ದೃಷ್ಟಿಯಿಂದ ಮೋಹಿನಿಗೆ ಈ ಸಮಾಚಾರ ಅನಿರೀಕ್ಷಿತವಾ ಗಿರಲಿಲ್ಲ. ರಜೆಗೆ ಮೊದಲಿನ ವಾರದಲ್ಲಿ ಒಂದು ಸಲ ಮುಖ್ಯಾಧ್ಯಾಪಿಕೆ ಅಷ್ಟನ್ನು ಸೂಚಿಸಿದ್ದಳೆಂದು ಮೋಹಿನಿಗೆ ಈಗ ಒಂದು ಸಂದರ್ಭ ಅರ್ಥವಾಯಿತು. ಆದರೆ ಹೇಗಿದ್ದರೂ ವರ್ಷದ ಕೊನೆಯ ವರೆಗೆ ನಡೆಯಬಹುದು, ಮುಂದಿನ ಮಾತು ಮುಂದೆ ಎಂದುಕೊಂಡು ಆ ಅನಿಷ್ಟ ಸೂಚನೆಯನ್ನು ಮನಸ್ಸಿನಿಂದ ಮುಂದೂಡಿ ದ್ದಳು. ಈಗ ಆ ಅನಿಷ್ಟ ಬಾಗಿಲಿಗೇ ಬಂದಂತಾಯಿತು ಹಾಗಿದ್ದರೆ ಮುಂದೆ? ವಿಮಲೆ ಸೂಚಿಸಿದ ಹಾಗೆ ಶಾಲೆಗೆ ಹೋದ ದಿನವೇ ತನಗೆ ಅರ್ಧಚಂದ್ರ ದೊರಕಿದರೆ ಮುಂಬಯಿಗೆ ಹೋಗಿಯಾದರೂ ಏನು? ಆ ಒಂದು ವಿಚಾರ ವಜ್ರಾಘಾತ ದಿಂದೆಂಬಂತೆ ತನ್ನ ಮುಂದಿನ ಒದುಕನ್ನೇ ಕಡಿದೊಗೆದಂತೆ ಭಾಸವಾಯಿತು ಆದರೆ ಪುಣೆಯಲ್ಲಿ ಉಳಿದರೆ ಯಾವುದೂ ಸಾಧ್ಯವಿಲ್ಲ, ಮುಂಬಯಿಯಲ್ಲಾದರೆ ಬೇರೆಯಾಗಿ ಒಂದಿಲ್ಲ ಒಂದು ಕೆಲಸವನ್ನು ಹುಡುಕಿಕೊಳ್ಳಬಹುದು ತಿಂಗಳೊಪ್ಪತ್ತು ಕೆಲಸವಿಲ್ಲದೆಯೂ ಇರಬಹುದು ಹೋದ ಕೂಡಲೆ ವಸಂತ ನನ್ನು ಕಂಡರೆ ಏನಾದರೊಂದು ಕೆಲಸವನ್ನು ಆತ ಹುಡುಕಿಯೂ ಕೊಡ ಬಹುದು. ಹೀಗೆಂದು ಮನಸ್ಸು ಇನ್ನೂ ಹೆಚ್ಚಾಗಿ ವಸಂತನೆಡೆಗೆ ಧಾವಿಸಿತು ಆತನಲ್ಲದೆ ತನಗೆ ಯಾರೂ ಇಲ್ಲವೆನ್ನುವ ಮಟ್ಟಿಗೆ ಮನಸ್ಸು ಆತನಿಂದ ಸೂರೆ ಗೊಂಡಿತು.

## ೧೩

ಶಾಲೆಗೆ ಬಂದು ಹಾಜರಾದ ದಿನ ವಿಮಲೆ ಬರೆದ ಸಮಾಚಾರ ಹಾರು ಸುದ್ದಿಯಾಗಿರದೆ ತಥ್ಯಾಂಶವೇ ಆಗಿದ್ದಿತೆಂದು ಇನ್ನೂ ಒಬ್ಬಿಬ್ಬರ ಬಾಯಿಂದ ತಿಳಿದಾಗ ಮೋಹಿನಿ ಮುಖ್ಯಾಧ್ಯಾಪಿಕೆಯ ಮೇಲೆ ಕಿಡಿಕಿಡಿಯಾದಳು. ಮೊದಲ ದಿನವಾದ್ದರಿಂದ ವಿಶೇಷ ಕೆಲಸವೂ ಇರಲಿಲ್ಲ ನಡುಬಿಸಿಲುಗಾಲದಲ್ಲಿ ಮೋಡಗಳು ಕರಾಳವಾಗಿ ಕವಿದು ನಿಂತಾಗ ಸಿಡಿಲು ಯಾವ ಕ್ಷಣಕ್ಕೂ ಬೀಳಬಹುದೆಂಬ ಕಾತರದಲ್ಲಿ ಸಂತಪ್ತವಾದ ನೆಲ ಆಘಾತವನ್ನೇ ಮುನ್ನೋಡುತ್ತಿರುವಂತೆ ಮೋಹಿನಿಯ ಮನಸ್ಸು ಮುಖ್ಯಾಧ್ಯಾಪಿಕೆಯ ಕರೆಯನ್ನು ನಿರೀಕ್ಷಿಸುತ್ತಲೇ ಇದ್ದಿತು ಶಾಲೆ ಬಿಡುವ ಹೊತ್ತಾದರೂ ಕರೆ ಬರಲಿಲ್ಲ ಹಾಗಾದರೆ ಎಲ್ಲವೂ ಸುಳ್ಳು, ಎಂದುಕೊಂಡಳು ಆದರೆ ಮುಂದೆ ಐದು ನಿಮಿಷಗಳಲ್ಲಿಯೇ ಕರೆ ಬಂದಿತು ಮೋಹಿನಿ ಸಿದ್ಧಳಾಗಿಯೇ ಇದ್ದುದರಿಂದ ಯಾವ ಹದರಿಕಯೂ ಇರಲಿಲ್ಲ ಅವಕ್ಕೆ ಬದಲಾಗಿ ಪ್ರಸಂಗ ಬಂದರೆ ಆಕೆಗೆ ಒಂದೆರಡು 'ಒಳ್ಳೆಯ ಮಾತುಗಳನ್ನು' ಹೇಳಿಯೇ ಬಿಡಬೇಕೆಂಬ ನಿರ್ಧಾರದಿಂದಲೇ ಮುಖ್ಯಾಧ್ಯಾಪಿಕೆಯ ಕೋಣೆಯಲ್ಲಿ ಕಾಲಿಟ್ಟಳು ಆ ಕ್ಷಣಕ್ಕೆ ಮುಖ್ಯಾಧ್ಯಾಪಿಕೆ ಸೌಜನ್ಯದ ಸುಕುಮಾರ ಮೂರ್ತಿಯೇ ಆಗಿದ್ದಳು. ಮೋಹಿನಿಗೆ ಕುರ್ಚಿಯಲ್ಲಿ ಕೂಡ ಹೇಳಿದರೂ ಮೋಹಿನಿ ನಿಂತೇ ಇದ್ದಳು ಹೇಳಬೇಕಾದ ಸಮಾಚಾರವನ್ನು ಹೇಗೆ ಮೊದಲುಮಾಡಬೇಕೆಂಬುದು ಮುಖ್ಯಾಧ್ಯಾಪಿಕೆಗೆ ಬಗೆಹರಿಯದಾಗಿತ್ತು. ಕೊನೆಗೆಂದಳು .

" ನಿಮಗೆ ಒಂದಿಷ್ಟು ಅಹಿತವಾದ ಸಮಾಚಾರವನ್ನು ಹೇಳಬೇಕಾಗಿದೆ —ನಾನು."

ಮೋಹಿನಿ ಸುಮ್ಮನಾಗಿಯೇ ಉಳಿದಳು.

" ವ್ಯವಸ್ಥಾಪಕ ಮಂಡಲದವರು ತಮ್ಮ ಮೊನ್ನಿನ ವಿಶೇಷ ಸಭೆಯಲ್ಲಿ ನಿರ್ಣಯಿಸಿದ್ದಾರೆ—"

ಮೋಹಿನಿ ಬಾಯಿ ಬಿಚ್ಚಲಿಲ್ಲ

" ಕೆಲವೊಂದು ಜಾಗಗಳನ್ನು ಕಡಿಮೆ ಮಾಡಬೇಕು—ಎಂದು. ನಿಮ್ಮ ಜಾಗವನ್ನು ಬರುವ ತಿಂಗಳಿಂದ ಕಡಿಮೆ ಮಾಡಿದ್ದಾರೆ. ಅದಕ್ಕಾಗಿ ನಿಮಗೆ

ಸೂಚನೆ ಹೇಳಬೇಕಾಗಿದೆ—"

ಮೋಹಿನಿಗೆ ಇದು ಯಾವುದೂ ಅನಿರೀಕ್ಷಿತವಾಗಿರದ್ದರಿಂದ ಸ್ತಬ್ಧಳಾಗಿ ನಿಂತು ಕೇಳುತ್ತಿದ್ದಳು ಆಕೆಯ ನಿರ್ವಿಕಾರವಾದ ಬಗೆ ಮುಖ್ಯಾಧ್ಯಾಪಿಕೆಗೆ ಸಂಕೋಚವನ್ನುಂಟುಮಾಡುತ್ತಿತ್ತು.

" ಒಂದು ತಿಂಗಳ ಮುನ್ಸೂಚನೆಯ ಬದಲು ಒಂದು ತಿಂಗಳ ಸಂಬಳ ವನ್ನು ಕೊಡಮಾಡಿದೆಯಾದ್ದರಿಂದ ನಾಳಿನಿಂದ ನೀವು ಕೆಲಸಕ್ಕೆ ಬರಬೇಕಾದ ಅಗತ್ಯವಿಲ್ಲ—"

ಎಂದು ಸುಮ್ಮನಾದಳು ಹೇಳಬೇಕಾದುದನ್ನು ಕೊನೆಗೊಮ್ಮೆ ಹೇಳಿ ಯಾಯಿತು ಎಂದು ಸಮಾಧಾನವಾಗಿರಬೇಕು ಆಕೆಗೆ. ಮೋಹಿನಿಗೆ ಇನ್ನು ಮುಂದೆ ತಾನು ಮಾತನಾಡಬಹುದೆನಿಸಿ ಕೇಳಿದಳು .

" ಇದಕ್ಕೆ ಕಾರಣವನ್ನು ಕೇಳಬಹುದೆ ? "

ಪ್ರಶ್ನೆಯಲ್ಲಿ ತಡೆಹಿಡಿದ ಉದ್ವೇಗ, ಸಿಡುಕು, ತಿರಸ್ಕಾರಗಳು ಮುನ್ನುಗ್ಗಿ ಬರುತ್ತಿದ್ದವು.

" ನೀವು ಕೆಲಸ ಹಿಡಿದಾಗಲೆ ' ತಾತ್ಕಾಲಿಕವಾಗಿ ' ಎಂದು ಹೇಳಲಾಗಿ ತ್ತಲ್ಲವೆ ? "

" ಹಾಗೇನೂ ಹೇಳಿದ್ದ ಹಾಗಿಲ್ಲ "

" ಜಾಹೀರಾತಿನಲ್ಲಿಯೆ ಹಾಗೆ ಇದ್ದಿತು—"

" ಆದರೆ ಬಹುತರವಾಗಿ ಕಾಯಂ ಆಗಲೂಬಹುದು ಎಂದೂ ಇತ್ತು "

" ' ಬಹುತರವಾಗಿ ' ಎಂದಿದ್ದಿತಲ್ಲವೆ ? "

ನಿಯಮಬದ್ಧವಾದ ಈ ಮಾತು ಎಲ್ಲಿಗೂ ನಿಲುಕಲಾರದೆನಿಸಿರಬೇಕು ಮೋಹಿನಿಗೆ. ಇನ್ನುಮುಂದೆ ಕೆಲಸವೇ ಇಲ್ಲವೆಂದಮೇಲೆ ಈಕೆಯ ಹೆದರಿಕೆ ಯಾಕೆ ಎಂದುಕೊಂಡಿರಬೇಕು. ಮೋಹಿನಿಯೆಂದಳು :

" ಕೆಲಸಕ್ಕೆ ನಾನು ಬೇಡವಾಗಿದ್ದರೆ ಹಾಗೆ ಮೊದಲಿಗೇ ಹೇಳಿಬಿಡಬಹು ದಿತ್ತು ! "

" ನಾನು ಹೇಳಬೇಕಾಗಿರಲಿಲ್ಲ ನೀವು ಈ ವಿಷಯವನ್ನೆತ್ತಿದ್ದೀರಿ ಎಂದು ಹೇಳಬೇಕಾಗಿದೆ. ಕೆಲಸಕ್ಕೆ ಬರುವ ಮೊದಲು ನೀವೇ ಯೋಚಿಸ ಬೇಕಾಗಿತ್ತು—ನಿಮಗೆ ಈ ಕೆಲಸ ಬೇಕೊ ಅಥವಾ—"

" ಕೆಲಸ ಬೇಡ ಎಂದು ಬಂದಿದ್ದೆನೆ ನಾನು ? "

" ಸಂಬಳ ಬೇಕು ಎಂದು ಬಂದಿದ್ದಿರಿ—"

" ಸಂಬಳವಿಲ್ಲದೆ ಕೆಲಸ ಮಾಡಲು ನಾನು ಬಂದಿದ್ದಿಲ್ಲ, ನಿಜ."

" ಕೆಲಸ ಮಾಡಲು ಬಂದಿದ್ದಿಲ್ಲ ಎಂಬುದೂ ನಿಜ—"

" ಕೆಲಸ ಮಾಡಲಿಲ್ಲವೆ ನಾನು ? ಯಾವ ವಿಷಯದಲ್ಲಿಯಾದರೂ ತಪ್ಪು ತೋರಿಸಿಕೊಟ್ಟಿದ್ದೀರಾ ? "

" ಯಾವ ವಿಷಯದಲ್ಲಿಯೂ ತಪ್ಪು ತೋರಿಸಿಕೊಡಬೇಕಾದದ್ದೇ ಇಲ್ಲ ಆಸ್ಥೆಯಿಲ್ಲದೆ ಕೆಲಸ ಮಾಡುವವರು ನಮಗೆ ಇಲ್ಲಿ ಬೇಕಾಗಿಲ್ಲ "

" ' ಆಸ್ಥೆಯಿಲ್ಲದೆ ' ಎಂದು ನೀವು ಹೇಳಿದರೆ ಆಯಿತೆ ? "

" ಇದೆ ಎಂದು ನೀವು ಬಾಯಿಂದ ಹೇಳಿದರೂ ಆಗದು ! "

" ಅದೇ ! ನಾವು ಬೇಡವಾದರೆ ಆಸ್ಥೆ ಇಲ್ಲ ಎಂದು ಒಂದು ಮಾತು ಹೇಳಿದರೆ ಆಗುತ್ತದೆ ಹೇಳಿದ ನಿಮ್ಮ ಮಾತು ನಡೆಯುತ್ತದೆ. ನಮ್ಮ ಮಾತು ನಡೆಯುವುದಿಲ್ಲ—"

" ಹೌದು, ನನ್ನ ಮಾತು ನಡೆಯುತ್ತದೆ ಇಪ್ಪತ್ತೈದು ವರ್ಷ ದುಡಿದು ಅಷ್ಟು ನಂಬಿಕೆಯನ್ನು ಗಳಿಸಿದ್ದೇನೆ ನಿಮ್ಮ ಹಾಗೆ ಕೈ ಜಾಡಿಸಿಕೊಂಡು ಅಡ್ಡಾಡಿಲ್ಲ "

" ಈಗ ನೀವು ಯಾವ ಮಾತನ್ನು ಹೇಳಿದರೂ ಆದೀತು. ಆದರೆ ಇಂಥ ಅನ್ಯಾಯ ಮಾಡಿ ನಮ್ಮಂಥವರ ಗೋಳನ್ನು ಕಟ್ಟಿಕೊಂಡು ಯಾವ ಸ್ವಾರ್ಥವನ್ನು ಸಾಧಿಸಬೇಕೆನ್ನುತ್ತೀರೊ—"

" ಇದು ನೋಡಿರಿ, ಇದೆಲ್ಲ ಸಲ್ಲದ ಮಾತು. ಇಂಥ ಮಾತು ನನಗೆ ಬೇಕಾಗಿಲ್ಲ ವ್ಯವಸ್ಥಾಪಕಮಂಡಲದವರು ಹೇಳಿದ್ದನ್ನು ನಿಮಗೆ ತಿಳಿಸುತ್ತಿದ್ದೇನೆ ಅಷ್ಟು ಕೆಲಸ ನನ್ನದು ತಿಳಿಯಿತೆ ? "

" ನಿಮ್ಮ ವ್ಯವಸ್ಥಾಪಕಮಂಡಲದವರಿಗೆ ಕನಸು ಬೀಳಲಿಲ್ಲವಷ್ಟೆ—ನನ್ನ ವಿಷಯದಲ್ಲಿ ! ಮೊದಲು ಬೇಕಾದ ಹಾಗೆ ವರದಿ ಮಾಡಿದ್ದೀರಿ—' ಈಗ ತಿಳಿಸುವುದಷ್ಟೇ ನನ್ನ ಕೆಲಸ ' ಎಂದು ಒಳ್ಳೆಯತನ ಪಡೆಯಬೇಕೆನ್ನುತ್ತಿದ್ದೀರಿ—"

" ಸಾಕು ಈ ಕಾಗದವನ್ನು ತೆಗೆದುಕೊಂಡು ರುಜು ಹಾಕಿರಿ. ಹೆಚ್ಚಿಗೆ ಯಾಕೆ ಮಾತು ? ಅದೆಲ್ಲ ನನಗೆ ಬೇಕಾಗಿಲ್ಲ."

ಮೋಹಿನಿ ಸಂತಾಪದಿಂದ ಉರಿಯುತ್ತಿದ್ದಳು. ಆದರೆ ಯಾವ ಮಾತನ್ನೂ ಆಡಿ ಪ್ರಯೋಜನ ಕಾಣಲಿಲ್ಲ. ಬಿಡುಗಡೆಯ ಕಾಗದವನ್ನು ತೆಗೆದುಕೊಂಡು ಅದು ತನಗೆ ಸಿಕ್ಕ ಬಗ್ಗೆ ರುಜು ಹಾಕಿ ಬಿರಬಿರನೆ ಕೋಣೆಯ ಹೊರಕ್ಕೆ ಬಂದಳು.

ಅಲ್ಲಿಂದ ಬಂದವಳು ಅಧ್ಯಾಪಿಕೆಯರ ಕೋಣೆಯಲ್ಲಿ ತಾನು ವಾಡಿಕೆಯಾಗಿ ಕುಳಿತುಕೊಳ್ಳುತ್ತಿದ್ದ ಕುರ್ಚಿಯಲ್ಲಿ ಕುಸಿದಳು. ಸುತ್ತಲು ಯಾರೂ ಇರಲಿಲ್ಲ ಒಬ್ಬೊಬ್ಬರಾಗಿ ಸಹೋದ್ಯೋಗಿಗಳು ಅವಸರವಾಗಿ ಬಂದು ಮತ್ತೆ ಹೋದರು ತನ್ನನ್ನಾಗಲಿ, ತನ್ನ ಮನಃಸ್ಥಿತಿಯನ್ನಾಗಲಿ ಗಮನಿಸಿ ವಿಚಾರಿಸಲು ಇಡೀ ಪ್ರಪಂಚದಲ್ಲಿ ಯಾರೂ ಇಲ್ಲವೆನ್ನುವಂತಾಯಿತು ಮೋಹಿನಿಗೆ ಶಾಲೆ ಯಾವಾಗಲೋ ಮುಗಿದುಹೋಗಿದ್ದರಿಂದ ಕೋಣೆಗೆ ಬೀಗ ಹಾಕಲು ಜವಾನ ಹೊರಗಡೆಯಲ್ಲಿ ಕಾಯುತ್ತಿದ್ದಂತಿತ್ತು ಆದರೆ ಮೋಹಿನಿಗೆ ಯಾವುದರ ಪರಿವೆಯೂ ಇರಲಿಲ್ಲ ಮನಸ್ಸು ಒಂದು ಕ್ಷಣ ರೊಚ್ಚಿಗೆದ್ದು ಸಿಡಿಯುವಂತಾಗಿದ್ದರೂ ಕುರ್ಚಿಯಲ್ಲಿ ಬಂದು ಕುಳಿತಾಗ ಅದು ಪೂರ್ತಿಯಾಗಿ ಬಧಿರವಾಗಿತ್ತು ತನ್ನನ್ನು ಸುತ್ತುಗಟ್ಟಿದ ಪರಿಸ್ಥಿಯನ್ನು ವಿಂಗಡಿಸಿ ಅದರ ಆಗುಹೋಗುಗಳನ್ನು ವಿವೇಚಿಸುವ—ಅಥವಾ ಯೋಚಿಸಬೇಕಾಗಿದೆ ಎನ್ನುವ—ಯೋಚನೆ ಕೂಡ ಆಕೆಗೆ ಹೊಳೆಯುವಂತಿರಲಿಲ್ಲ ಹಾಗೆ ನೋಡಿದರೆ ನಡೆದುದರಲ್ಲಿ ಒಂದು ದೃಷ್ಟಿಯಿಂದ ಅನಿರೀಕ್ಷಿತವಾದದ್ದು ಯಾವುದೂ ಇರಲಿಲ್ಲ. ಅಂದು ಬೆಳಿಗ್ಗೆ ಶಾಲೆಗೆ ಬಂದಾಗಲೇ ಎದೆ ಕುದಿಯುತ್ತಿದ್ದಿತು. ಇಡೀ ರಜೆಯಲ್ಲಿ—ವಿಮಲೆಯ ಮಾತಿನಿಂದಾಗಿ—ಇಂಥ ಸನ್ನಿವೇಶ ಒದಗಿಬರಬಹುದು ಎಂಬ ಅಸ್ಪಷ್ಟವಾದ ಭೀತಿ ಮನಸ್ಸಿನ ಹಿನ್ನೆಲೆಯಿಂದ ಬಹಳ ದೂರವಾಗಿರಲಿಲ್ಲ. ಆದರೂ ಕತ್ತಲೆಯಲ್ಲಿ ದಾರಿಯನ್ನು ಹುಡುಕಿಕೊಂಡು ಮುಂದೆ ಸಾಗುತ್ತಿದ್ದಾಗ ಬೆನ್ನ ಮೇಲೆ ಬಲವಾಗಿ ಎಲ್ಲಿಂದಲೊ ಬಿದ್ದ ಏಟಿನಿಂದಾಗಿ ದಿಙ್ಮೂಢನಾದವನ ಮನಃಸ್ಥಿತಿಯಾಗಿತ್ತು ಮೋಹಿನಿಯದು. ಕಾರ್ಮುಗಿಲುಗಳಿಂದ ಬಾನು ಬಿಗಿದುನಿಂತಾಗ ಸಿಡಿಲು ಬೀಳಬಹುದೆಂಬ ನಿರೀಕ್ಷೆ ಇದ್ದಾಗಲೂ ನೆಲ ಸೀಳುವಂತೆ ಸಿಡಿಲು ಬಿದ್ದಾಗ ಮಾತ್ರ ನೋಡಿದ ಕಣ್ಣು ಗ್ರಹಿಸಿದ ಬುದ್ಧಿ ಎರಡೂ ಬಧಿರವಾಗಿಬಿಡುವುದಿಲ್ಲವೆ? ಅಲ್ಲಿಂದ ಆಕೆ ಯಾವಾಗ ಎದ್ದಳೊ, ದಾರಿ ಹೇಗೆ ತಪ್ಪಲಿಲ್ಲವೊ! ಅಂತೂ ಕೋಣೆಯಲ್ಲಿ ಬಂದು ಹಾಸಿಗೆಯ ಮೇಲೆ ಮೈಚೆಲ್ಲಿದಾಗಲೆ ಮೋಹಿನಿಗೆ

ಎಚ್ಚರವಾದಂತಾಯಿತು. ನಡೆದುದೇನು, ಅದರ ಪರಿಣಾಮಗಳು ಯಾವವು, ತಾನು ಇನ್ನು ಮಾಡಬೇಕಾದುದು ಏನು ಎಂದು ಮುಂತಾಗಿ ಯೋಚಿಸು ವಂತಾಯಿತು.

ಆದರೆ ನಡುರಾತ್ರಿ ಮೀರಿದರೂ ಮೋಹಿನಿಯ ಯೋಚನೆ ಮಾತ್ರ ಬಗೆ ಹರಿಯಲಿಲ್ಲ ಹೇಗೆ ಬಗೆಹರಿಯಬೇಕು ? ಒಳ್ಳೆ ಪ್ರಯಾಸದಿಂದ ಸಿಕ್ಕ ಕೆಲಸವೂ ಕೈಬಿಟ್ಟಿತು ತಿರುಗಿ ಊರಿಗೆ ಹೋಗಲು ಮನಸ್ಸಿಲ್ಲ ಹೋದರೆ ಏನು ಮಾಡಿದ ಹಾಗಾಯಿತು ? ಅಲ್ಲದೆ, ಹೋಗಿಯಾದರೂ ಏನು ? ಹಾಗಿದ್ದರೆ ಮುಂದೆ ಮುಂಬಯಿಯಲ್ಲಿ ಇರುವುದಾದರೂ ಹೇಗೆ ? ಕೈಯಲ್ಲಿ ಇದ್ದ ದುಡ್ಡಿನ ಭರವಸೆ ಎಷ್ಟು ದಿನದ್ದು ? ಹತ್ತಾರು ದಾರಿಗಳಲ್ಲಿ ಮನಸ್ಸು ಓಡಿತು ಒಂದು ಕ್ಷಣ ಮಾತ್ರ ಆನಂದನೆಡೆಗೆ ಓಡಿತಾದರೂ ಅಲ್ಲಿ ಯಾವ ಆಸೆಯೂ ಕಾಣಲಿಲ್ಲ. ವಸಂತ ಮಾತ್ರ ಮನಸ್ಸಿನ ಎಲ್ಲ ಮೂಲೆಗಳಲ್ಲಿಯೂ ಕಾಣುತ್ತಿದ್ದ. ಆತನೇ ದಾರಿ ತೋರಿಸಬಹುದು ಒಂದು ವೇಳೆ ಅಲ್ಲಿಯೇ ತನ್ನ ಆಫೀಸಿನಲ್ಲಿ ಯಾವು ದಾದರೊಂದು ಕೆಲಸವನ್ನು ಕೊಡಿಸಬಹುದು ಈ ಯೋಚನೆ ಸುಳಿದಾಗ ನಿರಾಶೆ ಮಾಯವಾಗಿ 'ಏನಾದರೊಂದು ದಾರಿಯನ್ನು ಹುಡುಕಿಕೊಂಡು ಇರಬಹುದು, ಈ ಕೆಲಸ ಇಲ್ಲವಾದರೆ ಏನಾಯಿತು ?' ಎಂದು ಕೇಳಿಕೊಳ್ಳು ವಳು. ಆದರೆ ವಸಂತ ಮೊದಲಿನಂತಿರಲಿಲ್ಲ. ಈಗ ತಿಂಗಳಿಂದ ಆತನನ್ನು ನೋಡಿಯೂ ಇಲ್ಲ ಪುಣೆಯಿಂದ ತಾನು ಹೊರಡುವ ಮುನ್ನ ಬರೆದ ಕಾಗದಕ್ಕೆ ಉತ್ತರವೂ ಬಂದಿರಲಿಲ್ಲ ಏನಿದ್ದರೂ ವಸಂತ ತನ್ನ ಕೈಬಿಡಲಾರನೆಂಬ ಭರವಸೆ ಯೊಂದೇ ತನಗೆ ಉಳಿದ ಕೈದೀವಿಗೆ. ಹಾಗಿದ್ದರೆ ಮರುದಿನವೇ ವಸಂತನನ್ನು ಕಾಣುವುದು, ಎಂದುಕೊಂಡು ಆ ಸನ್ನಿವೇಶವನ್ನು ನೆನೆದಳು. ವಸಂತ!— ವಸಂತ!—ಹೇಳ ಹೆಸರಿಲ್ಲದ ಒಲುಮೆ ಬಯಕೆಗಳು ಆ ಒಂದು ಹೆಸರಿನಲ್ಲಿ ಮೋಹಿನಿಗಾಗಿ ರೂಪುಗೊಂಡಿದ್ದವು ಏನಿದ್ದರೂ—ಏನಾದರೂ—ನೀನೇ ನನಗೆ ಎಲ್ಲವೂ ಎಂದೇ ಕೊನೆಯಾಗಿ ಹೇಳಿಬಿಡುವುದು ಆಮೇಲೆ ? ಆಮೇಲೆ ? ನಡುರಾತ್ರಿಯಾಗಿರದಿದ್ದರೆ ಮೋಹಿನಿ ಆಗಿಂದಾಗಲೆ ಎದ್ದು ವಸಂತನತ್ತ ಧಾವಿಸಬಹುದಾಗಿತ್ತು ಬೆಳಗಿನ ಮೊದಲನೆಯ ಲೋಕಲ್‌ನಿಂದ ಬೋರಿವಲಿಗೆ ಹೋದರೆ ?—ಬೇಡ. ಬೋರಿವಲಿಗೆ ಹೋಗುವುದಾದರೆ ಬೇರೊಂದು ಸಂದರ್ಭ ದಲ್ಲಿಯೇ ಹೋಗುವುದು ! ವಸಂತ ಕೈಹಿಡಿದು ಕರೆದುಕೊಂಡು ಹೋದಾಗಲೆ

ಬೋರಿವಲಿಗೆ ಮತ್ತೆ ಹೋಗುವುದು !—ಮೋಹಿನಿಯ ಮನಸ್ಸು ನೂರು ಬಯಕೆಗಳನ್ನು ಕಟ್ಟಿತು. ತನ್ನ ಸುತ್ತಲಿನ ಕಷ್ಟಗಳನ್ನೆಲ್ಲ ಮರೆಯಿತು. ಆತನೊಬ್ಬ ಇರುವಾಗ ತನಗೆ ಯಾವ ಕಷ್ಟ, ಯಾವ ಕೊರತೆ ಎಂದುಕೊಂಡು, ನರಳುತ್ತಿದ್ದವಳು ನಲಿಯುವಂತಾದಳು. ವ ಸ ಂ ತಾ—ಎಂದು ನೂರು ಬಾರಿ ಹೃದಯಾಂತರಾಳದಿಂದ ಕರೆದಳು. ನೂರು ವಿನ್ಯಾಸಗಳಲ್ಲಿ ಆತನ ಮೂರ್ತಿಯನ್ನೇ ಕಣ್ಣೆದುರು ನಿಲ್ಲಿಸಿದಳು—ಆಚೆಯ ಬಾಗಿಲ ಸದ್ದಾಯಿತು ಆಪಟಿ ಬಂದಿರಬೇಕು ಸ್ಟುಡಿಯೋದಿಂದ. ಅನುರಾಧೆ ಮರುದಿನ ಬರುತ್ತೇನೆಂದು ಬರೆದವಳು ತಾನು ಬರುವುದನ್ನು ಮತ್ತೆ ಮೂರು ದಿನ ಮುಂದೂಡಿದಳೇಕೆ ? ಬಾರದಿರಲಿ ಆಕೆ ಬರದಿದ್ದರೆ ತನಗೆ ಏನಾಗಬೇಕು ? ಆದರೂ ಆಕೆಯ ಕೂಡ ಮಾತನಾಡಿದರೆ ಮನಸ್ಸಿನ ದು ಗು ಡ ಸರಿಯುತ್ತದೆ ಅನುರಾಧೆಯೊಡನೆ ಮನಸ್ಸು ರಂಗನಾಥನ್ ಕಡೆಗೆ ಓಡಿತು ತಾನು ಅಲ್ಲಿಯವರೆಗೆ ಹೋಗಿ ಆತನನ್ನು ನೋಡಿಕೊಂಡು ಬರಬಾರದೇಕೆ ? ಮುಂಬರುವ ಚಿತ್ರದಲ್ಲಿ ತಾನು ಪಾತ್ರವಹಿಸಬೇಕೆಂದು ಆತನ ಆಸೆಯಿದೆ ಎಂದು ಅನುರಾಧೆ ಹೇಳಿದ್ದಳಲ್ಲವೆ ? ಅದು ಹೇಗಿದ್ದರೂ ವಸಂತನಿಂದಲ್ಲದಿದ್ದರೆ ರಂಗನಾಥನ್‌ನ ಸಹಾಯದಿಂದಾದರೂ ಎಲ್ಲಿಯಾದರೊಂದು ಕೆಲಸ ಸಿಕ್ಕುವುದೇನೂ ಕಷ್ಟವಲ್ಲವೆಂಬ ಯೋಚನೆಯಿಂದ ಮೋಹಿನಿಯ ಕು ಸಿ ಯು ತ್ತಿ ದ್ದ ಆತ್ಮವಿಶ್ವಾಸ ಬಹುಮಟ್ಟಿಗೆ ಬಲಿಯುವಂತಾಯಿತು.

ಮರುದಿನ ಮಧ್ಯಾಹ್ನ ಮೋಹಿನಿ ವಸಂತನನ್ನು ಕಾಣಬೇಕೆಂದು ಆಫೀಸಿಗೆ ಹೋದರೆ ವಸಂತ ಸಿಕ್ಕಲೇ ಇಲ್ಲ ಅಂದು ಶನಿವಾರವಾದ್ದರಿಂದ ಆತ ಹೊರಟುಹೋಗಿದ್ದ. ಭಾನುವಾರವಂತೂ ಆತ ಸಿಕ್ಕುವ ಹಾಗಿಲ್ಲ ಎರಡು ದಿವಸಗಳನ್ನು ಹೇಗೋ ನೂಕಿ ಸೋಮವಾರ ಹೋದರೆ ಅಂದು ಆತ ರಜೆ ಪಡೆದು ಬಂದಿರಲಿಲ್ಲ ಮೋಹಿನಿಗೆ ತೀರ ಬೇಸರವೆನಿಸಿತು ಅದೇಕೋ ವಸಂತ ತನ್ನಿಂದ ದೂರವಾಗುತ್ತಿದ್ದಾನೆಂದು ತೋರಿತು. ಆತನ ಮಾತುಗಳಿಂದ ಕೂಡ ಅಷ್ಟನ್ನು ತಿಳಿಯಬಹುದಾಗಿದ್ದವಳಿಗೆ ಅದೊಂದು ಬೇಡವಾದ ಸತ್ಯದಂತೆ ಬೆನ್ನ ಹಿಂದೆಯೇ ಇರುತ್ತಿತ್ತು. ಆತನನ್ನು ಕಾಣಬೇಕೆಂದಿದ್ದ–ಇಷ್ಟೊಂದು ಆತುರದಿಂದ ಮೂರು ದಿನಗಳಿಂದಲೂ ಆತನನ್ನೇ ಎದುರು ನೋಡುತ್ತಿದ್ದ–ತನಗೆ ಆತ ಸಿಕ್ಕದೆ ಇರುವುದಾದರೂ ಆ ಕಟುವಾದ ಸತ್ಯವನ್ನೇ ಎತ್ತಿ ಹೇಳುತ್ತಿರುವಂತೆನಿಸಿತು

ಮೋಹಿನಿಗೆ. ಎಷ್ಟು ಬಗೆಯಿಂದ ಮನಸ್ಸಿಗೆ ಸಮಾಧಾನ ಹೇಳಿಕೊಂಡರೂ ವಸಂತನನ್ನು ಕಾಣದ ಹೊರತು, ಆತನೆದುರು ತನ್ನ ಮನಸ್ಸಿನ ಮೊರೆತವನ್ನು ತೋಡಿಕೊಳ್ಳದ ಹೊರತು ನೆಮ್ಮದಿಯೆನಿಸುವುದು ಸಾಧ್ಯವಾಗಿ ಕಾಣಲಿಲ್ಲ. ಹೋದ ದಾರಿಯಿಂದ ಹಿಂದಿರುಗುತ್ತಿದ್ದಳು ಸುತ್ತಲೂ ಹಬ್ಬಿದ ಪ್ರಪಂಚ ಆಕೆಯ ಪ್ರಜ್ಞೆಯನ್ನು ತಟ್ಟುತ್ತಲೇ ಇರಲಿಲ್ಲವೆಂಬಂತಿತ್ತು

## ೧೪

ಹಾಗೆ ನೋಡಿದರೆ ಈ ಮೂರು ನಾಲ್ಕು ದಿನಗಳಲ್ಲಿ—ಇನ್ನೂ ಎರಡು ಮೂರು ದಿನ—ಮೋಹಿನಿ ವಸಂತನನ್ನು ಸಂಧಿಸುವುದು ಸಾಧ್ಯವೇ ಇರಲಿಲ್ಲವೆಂಬುದು ಆಕೆಗೆ ಹೇಗೆ ತಿಳಿಯಬೇಕು? ಮದುವೆಯ ಸ್ಥಳಕಾಲಾದಿಗಳ ನಿಷ್ಕರ್ಷೆ ಪತ್ರವ್ಯವಹಾರವನ್ನು ಮೀರಿ ನಿಂತಿದ್ದಿತಾದ್ದರಿಂದ ಎಲ್ಲವನ್ನೂ ಸಮಕ್ಷಮದಲ್ಲಿಯೆ ಗೊತ್ತುಮಾಡಿಕೊಂಡು ಹೋದರಾಯಿತೆಂದು ಜನಾರ್ದನರಾಯರು ಮೋಹನರಾಯರೊಡನೆ ಮುಂಬಯಿಗೆ ಬಂದಾಗಿನಿಂದ ವಸಂತನಿಗೆ—ಆಗಲೆ ಹೆಚ್ಚಾಗಿ ರಜೆ ಪಡೆದು ರಜೆ ಮತ್ತೆ ಬೇಡದಂತಾಗಿದ್ದರಿಂದ—ಒಂದೆಡೆ ಆಫೀಸಿನ ಕೆಲಸ, ಇನ್ನೊಂದೆಡೆ ಅತಿಥಿಗಳ ಉಪಚಾರ ಹೀಗಾಗಿ ಒಂದು ಗಂಟೆಯ ಬಿಡುವೂ ಸಿಕ್ಕದಂತಾಗಿತ್ತು. ಎಲ್ಲ ಅನುಕೂಲ–ಅನಾನುಕೂಲಗಳನ್ನು ಎಣಿಸಿ ಮದುವೆ ಡಿಸೆಂಬರ್ ಕೊನೆಯ ವಾರದಲ್ಲಿ ಎಂದು ಗೊತ್ತಾಯಿತು. ಜನಾರ್ದನರಾಯರು ಮುಹೂರ್ತಗಳ ಪಟ್ಟಿಯನ್ನೇ ಮಾಡಿಕೊಂಡು ಬಂದಿದ್ದರು. ಆದರೆ ಮದುವೆಯನ್ನು ನೆರವೇರಿಸುವುದು ಮುಂಬಯಿಯಲ್ಲಿಯೆ ಅಥವಾ ರಾಯಚೂರಿನಲ್ಲಿಯೆ ಎಂಬುದು ಮೂರು ರಾತ್ರಿಗಳ ಚರ್ಚೆಗೂ ಮಣಿಯದ ವಿಷಯವಾಗಿತ್ತು. ಇದ್ದ ಊರು, ಗೊತ್ತಿನ ಜನ, ನೂರಾರು ಅನುಕೂಲಗಳೊಂದಿಗೆ ಒಳ್ಳೆ ವಿಜೃಂಭಣೆಯಿಂದ ತಮ್ಮ ಮನೆಯೆದುರಿನಲ್ಲಿ 'ರಿವಾಜಿ'ಗೆ ಸರಿಯಾಗಿ ಮದುವೆ ನಡೆಯಬೇಕು ಎಂಬುದು ಜನಾರ್ದನರಾಯರಿಗೆ ಸಂಪ್ರದಾಯಸಹಜವಾದ ವಿಚಾರ. ಆದರೆ ಅದೆಲ್ಲವೂ ವಸಂತನಿಗೆ ಬೇಡವಾಗಿತ್ತು. ಅಕ್ಕನ ಹೊರತಾಗಿ ತನಗಿದ್ದ ಬಳಗವೆಂದರೆ ತನ್ನ ಹತ್ತಾರು ಗೆಳೆಯರು ಮಾತ್ರ. ಅವರೆಲ್ಲರು ಮುಂಬಯಿಯಿಂದ ರಾಯಚೂರಿಗೆ ಬರುವುದು ಅಸಾಧ್ಯ. ಅದರ ಬದಲಾಗಿ ಅಕ್ಕ, ಅಕ್ಕನ ಗಂಡ ಮೋಹನರಾಯ, ಅವರ ಮಕ್ಕಳು ಇಷ್ಟೇ ಜನ ತೀರ ಹತ್ತಿರದವರು. ಅವರು ಮುಂಬಯಿಗೆ ಬರುವುದೇನೂ ಪ್ರಯಾಸವಲ್ಲ. ಎಲ್ಲಿಯಾದರೊಂದು 'ಮಂಗಲ ಕಾರ್ಯಾಲಯ'ವನ್ನು ಗೊತ್ತುಮಾಡಿ ಇಪ್ಪತ್ತುನಾಲ್ಕು ಗಂಟೆಗಳಲ್ಲಿ ಎಲ್ಲ ಕಾರ್ಯಕ್ರಮವನ್ನು ಮುಗಿಯಿಸಿಬಿಡುವುದೇ ಸರಿಯಾದದ್ದೆಂದು ವಸಂತನ ವಾದ. ಮೋಹನರಾಯರ ಒಲವೂ ಜನಾರ್ದನರಾಯರ ಕಡೆಗೆಯೇ ಇದ್ದುದರಿಂದ

ಹಟ ಹಿಡಿಯದಿದ್ದರೆ ವಸಂತನ ಮಾತು ನಡೆಯುವಂತಿರಲಿಲ್ಲ ಹೀಗಾಗಿ ಹತ್ತಾರು ಯುಕ್ತಿವಾದ ಹೂಡಿದ. ರಜೆ ಸಿಕ್ಕುವುದು ಕಷ್ಟವೆಂದು ಹೇಳಿದ, ಕಷ್ಟದ ಕಾಲದಲ್ಲಿ ಸುಮ್ಮನೆ ಊರ ಜನರಿಗೆ ಊಟ ಹಾಕಿದರೆ ಯಾತಕ್ಕೆ ಬಂತು ಎಂದ, ಕಾಲಕ್ಕೆ ತಕ್ಕಂತೆ ಎಲ್ಲ 'ರೀತಿ ರಿವಾಜುಗಳು' ಬದಲಾಗಬೇಕು, ಮದುವೆಯಲ್ಲಿ ಯಾವುದು ಮುಖ್ಯ ಅದು ಮಾತ್ರ ನಡೆಯಬೇಕು ಎಂದು ವಾದಿಸಿದ "ಮದುವೆ ಮುಂಬಯಿಯಲ್ಲಾದರೆ ಅದೊಂದು ನೆವದಿಂದ ಅಕ್ಕ ಮುಂಬಯಿಯನ್ನಾದರೂ ನೋಡಿಯಾಳು" ಎಂದು ಮೋಹನರಾಯರನ್ನು ಕೆಣಕಿದ "ನೀನು ಮನೆ ಹೂಡಿದೆಯೆಂದರೆ ಆಕೆ ಬರುವುದು ಯಾವ ದೊಡ್ಡ ಮಾತು? ಆಕೆಗೊಂದು ತವರಾಯಿತು" ಎಂದು ಮೋಹನರಾಯರು. "ಅದೆಲ್ಲ ಆಮೇಲಿನ ಮಾತು ಮದುವೆ ಇಲ್ಲಿಯೇ ಗೆಳೆಯರನ್ನು ಬಿಟ್ಟು ನಾನು ಬಾಸಿಗ ಕಟ್ಟಿದರೆ ಇಲ್ಲಿ ನಾನು ಮನೆ ಮಾಡಿಕೊಂಡಿರುವುದೆ ಕಷ್ಟವಾದೀತು" ಎಂದು ಮುಂತಾಗಿ ಹತ್ತಾರು ಬಗೆಯಲ್ಲಿ ಹಟ ಹಿಡಿದು ಕೊನೆಗೆ ಮದುವೆ ಮುಂಬಯಿಯಲ್ಲಿಯೇ ಎಂದು ಸಾಧಿಸಿದ. ನಿರುಪಾಯರಾಗಿ ಜನಾರ್ದನ ರಾಯರು ಕೊನೆಗೆ ಒಪ್ಪಿದರು.

ಊರಿಗೆ ಹೊರಡುವ ದಿನ ಮುಂಜಾನೆ ಜನಾರ್ದನರಾಯರಿಲ್ಲದ್ದನ್ನು ನೋಡಿ ಮೋಹನರಾಯರು ವಸಂತನೊಡನೆ ಆಪ್ತಾಲೋಚನೆಗೆ ತೊಡಗಿದ್ದರು :

"ಸುಮ್ಮನೆ ಹಟ ಹಿಡಿದೆ, ವಸಂತಾ ಅಲ್ಲಿಯೇ ಆಗಿದ್ದರೆ ಚೆನ್ನಾಗಿತ್ತು"

"ಯಾಕೆ? ಇಲ್ಲಿಯಾದರೇನು ಕಡಿಮೆಯಾಗಬೇಕಾಗಿದೆ?"

"ಎಷ್ಟಾದರೂ ಇಲ್ಲಿ ನಡೆಯುವುದೆಲ್ಲ 'ಮಾಮೂಲಿ'ಯಾಗಿ ಅಲ್ಲಿಯ ವೈಭವ ಇಲ್ಲಿ ಹೇಗೆ ಸಾಧ್ಯವಾಗಬೇಕು? ನಿನ್ನ ಅಕ್ಕನಿಗೆ ಕೂಡ ಇದರಿಂದ ತುಂಬ ನಿರಾಶೆಯಾಗುತ್ತದೆ"

"ಸರಿ ಮತ್ತೆ ಯಾಕೆ ಅದೇ ಮಾತು? ಮೂರು ದಿನ ತಲೆ ಕೆಡಿಸಿ ಕೊಂಡಾಯಿತಲ್ಲ"

"ಹಾಗಿದ್ದರೆ ಇನ್ನು ಮತ್ತೆ ಯಾರಾದರೂ ಬಂದು ಮುಂದಿನ ವ್ಯವಸ್ಥೆ ಗಳಿಗೆ ನಿಲ್ಲಬೇಕಾಯಿತು ಇಲ್ಲದಿದ್ದರೆ ಇಲ್ಲಿಯ ಜವಾಬುದಾರಿ ಹೆಚ್ಚಾಗಿ ನಿನ್ನ ಮೇಲೆಯೇ ಬಿದ್ದಂತಾಗುತ್ತದೆ"

"ಏನು ಜವಾಬುದಾರಿ? ದುಡ್ಡೊಂದಿದ್ದರೆ ಮುಂಬಯಿಯಲ್ಲಿ ಯಾವು

ದಕ್ಕೊ ತೊಂದರೆಯಿಲ್ಲ. ಎಲ್ಲವೂ ಬಾಗಿಲಲ್ಲಿಯೇ ಬಂದು ಬೀಳುತ್ತದೆ."

"ಹುಂ. ದುಡ್ಡಿಂದ ಮಾತಿಗೆ ಮರೆತೇ ಇದ್ದೆ ನಿನ್ನ ಬಟ್ಟೆಬರೆಗಳ ವಿಚಾರ ಏನಾಯಿತು ? ಜನಾರ್ದನರಾಯರು ಅದಕ್ಕಾಗಿ ಎಂದು ಐದುನೂರು ರೂಪಾಯಿ ಕೊಟ್ಟಿದ್ದಾರೆ—"

"ಐದುನೂರೆ ?"

"ಯಾಕೆ ? ಕಡಿಮೆಯಾಯಿತೆ ?"

"ಏನು ಹುಚ್ಚು, ಮಾವಯ್ಯ ? ನನಗೆ ಐದುನೂರು ರೂಪಾಯಿಯ ಬಟ್ಟೆ ಎಂದರೆ ?"

"ಮದುವೆಗಾಗಿ ಬಟ್ಟೆ ಹೊಲಿಸಿಕೊಳ್ಳದಿದ್ದರೆ ಮುದುಕನಾದ ಮೇಲೆ ಹೊಲಿಸಿಕೊಳ್ಳುತ್ತೀಯಾ ? ಸಂಧಿ ಸಿಕ್ಕಾಗ ಸಾಧಿಸಿಕೊ—"

"ಅಂತೂ ಗಾದೆಮಾತು ಚೆನ್ನಾಗಿದೆ—"

"ಅಲ್ಲದೆ ಮದುಮಗಳಿಗೂ ಬೇಕಾದ ಬಟ್ಟೆ ತೆಗೆದುಕೊಂಡಿದ್ದರೆ ಚೆನ್ನಾಗಿತ್ತು ಎನ್ನುತ್ತಿದ್ದರು"

"ಉಡುವವರು ನೋಡದೆ ನಾವು ಕೊಂಡರೆ—"

ಎಂದು ವಸಂತ ತಡೆದ. ಜನಾರ್ದನರಾಯರ ಜೊತೆಯಲ್ಲಿ ಶಕುಂತಲೆಯೂ ಬಂದಿದ್ದರೆ ?—ಎಂಬ ವಿಚಾರ ಹತ್ತನೆಯ ಬಾರಿ ವಸಂತನ ಮನಸ್ಸಿನಲ್ಲಿ ಸುಳಿಯಿತು ಬಂದಿದ್ದರೆ ಬಟ್ಟೆಬರೆಗಳನ್ನು ಇಬ್ಬರೂ ಸೇರಿಯೇ 'ಪಾಸು' ಮಾಡ ಬಹುದಾಗಿತ್ತು ಅಲ್ಲವೆ ?—ಮನಸ್ಸು ತಟ್ಟನೆ ಮಲಬಾರ್‌ಹಿಲ್‌ನ್ನೇರಿತು ! ಮೋಹನರಾಯರಿಗೆ ವಸಂತನ ಈ ವಿಚಾರ ತಿಳಿಯದಿರುವುದು ಸಾಧ್ಯವಿರಲಿಲ್ಲ. ಅವರೆಂದರು :

"ಉಡುವವರೇನು ನೋಡುವುದು ? ಉಟ್ಟಿದ್ದನ್ನು ನೋಡುವವರ ದೃಷ್ಟಿಯೇ ಮುಖ್ಯ ! ಅವರು ಒಪ್ಪಿದರಾಯಿತು—"

"ಇದು ನಿಮ್ಮ ಅಭಿಪ್ರಾಯ !"

"ನಿನ್ನದಲ್ಲವೇನೊ ! ನಮ್ಮಿಬ್ಬರದೂ ಹಾಗಿರಲಿ, ಶಕುಂತಲೆಯೇ ಹಾಗೆ ಹೇಳಿದಳಂತೆ !"

ವಸಂತನಿಗೆ ಸಂತೋಷವಾಯಿತು. 'ಇಷ್ಟು ಆತ್ಮೀಯವಾದ ವಿಶ್ವಾಸವೆ ?' ಎಂದುಕೊಂಡ ಶಕುಂತಲೆಯ ಆಕೃತಿಯನ್ನು ನೆನೆದು ಆಕೆಗೆ

ಯಾವ ಬಣ್ಣದ ಬಟ್ಟೆ ಸರಿಹೋಗಬಹುದು, ಯಾವುಯಾವುದನ್ನು ಕೊಳ್ಳು ವುದು, ಯಾವುದರಿಂದ ಆಕೆ ಹೇಗೆ ತನ್ನ ಕಣ್ಣು ಕೋರೈಸಬಹುದು, ಎಂಬ ಕನಸುಗಳಲ್ಲಿ ಮುಳುಗಿದ

ಅಂದು ಮಧ್ಯಾಹ್ನದ ರೈಲಿನಿಂದ ಜನಾರ್ದನರಾಯರು, ಮೋಹನ ರಾಯರು ಹೊರಟಾಗ ತನ್ನ ಬಟ್ಟೆಬರೆಗಳಿಗಲ್ಲದೆ ಅದಕ್ಕೆ ಇದಕ್ಕೆ, ಎಂದು ಮತ್ತೆ ಮುನ್ನೂರು ರೂಪಾಯಿ ವಸಂತನ ಕೈಸೇರಿದ್ದವು 'ಕಾರ್ಯಾಲಯ' ಸಿಕ್ಕ ಕೂಡಲೆ ತಂತಿ ಕಳಿಸುವೆನೆಂದು ಮಾತು ಕೊಟ್ಟು ಮುಗುಳುನಗೆಯಿಂದ ಇಬ್ಬರನ್ನೂ ಬೀಳ್ಕೊಟ್ಟು ಆಫೀಸಿಗೆ ಮರಳಿದ್ದ.

೧೫

ಆಫೀಸಿಗೆ ಬಂದು ಒತ್ತಡದ ಕೆಲಸದಲ್ಲಿ ತೊಡಗಿದರೂ ಮನಸ್ಸು ಉಲ್ಲಾಸದಲ್ಲಿಯೇ ಕುಣಿಯುತ್ತಿತ್ತು. ಕೆಲಸಗಳನ್ನು ಪೂರೈಸುತ್ತಿದ್ದ—ಸರಿಯಾಗಿಯೇ ಮನಸ್ಸು ಇಬ್ಬಗೆಯಾಗಿ ಕೆಲಸ ಮಾಡುತ್ತಿದ್ದುದನ್ನು ನೆನೆದು ಆತನಿಗೆ ಒಮ್ಮೊಮ್ಮೆ ವಿಚಿತ್ರವೆನಿಸುತ್ತಿತ್ತು ಆ ಉಲ್ಲಾಸಕ್ಕೆ ತನ್ನ ಬಲಗಡೆಯ ಜೇಬಿನಲ್ಲಿ ಭಾರವಾಗಿ ನಿಂತ ಎಂಟುನೂರು ರೂಪಾಯಿಗಳು ಮಾತ್ರ ಕಾರಣವಾಗಿರದೆ ಅದರಿಂದ ಮೊದಲಾಗಲಿದ್ದ ಸೌಖ್ಯದ ಸನ್ನಿವೇಶಗಳು ಒಂದೊಂದಾಗಿ ಕಣ್ಣ ಮುಂದೆ ನಿಲ್ಲುತ್ತಿದ್ದವು ಮದುವೆಯ ದಿನಕ್ಕೆ ಎಷ್ಟು ಉಳಿಯಿತು ? ಎದುರಿನ ಕ್ಯಾಲೆಂಡರ್ ನೋಡಿ ಲೆಕ್ಕ ಹಾಕಿದ ಅಷ್ಟರಲ್ಲಿ ಜನಾರ್ದನರಾಯರು ಮತ್ತೆ ಬರಬೇಕಲ್ಲವೆ ? ಹೌದು ಕಾರ್ಯಾಲಯವನ್ನು ಗೊತ್ತುಪಡಿಸಬೇಕು ದಾದರ್‌ನಲ್ಲಿಯೆ ಅಥವಾ ಗಿರಿಗಾಂವ್‌ನಲ್ಲಿ ? ಗಿರಿಗಾಂವ್ ಬೇಡ ಅಲ್ಲಿಯ ಹಾಲ್‌ಗಳು ಪ್ರಶಸ್ತವಾಗಿಲ್ಲ ಅಲ್ಲದೆ, ಸುತ್ತಲೂ ಎಂಥ ಗದ್ದಲ, ಗಜಿಬಿಜಿ ? ದಾದರ್‌ನಲ್ಲಿ ಆದರೆ ಎಲ್ಲವೂ ಅನುಕೂಲವಾದೀತು. ಕೂಡಲೆ ಯೋಚಿಸಿ ಗೊತ್ತುಮಾಡಿಬಿಡಬೇಕು. ತನಗೆ ಸೂಟ್ ಆಗಬೇಕು ಮನಸ್ಸು ಶಕುಂತಲೆಯತ್ತ ಓಡಿತು. ತನಗೆ ಎಂಥ ಬಟ್ಟೆಯಾದರೆ ಆಕೆಗೆ ಪ್ರೀತಿ ? ಆಕೆ ಇಲ್ಲಿಯೇ ಊರಲ್ಲಿದ್ದರೆ ಇಬ್ಬರೂ ಸೇರಿಯೆ ಬಟ್ಟೆಯನ್ನು ಆರಿಸಬಹುದಾಗಿತ್ತು ಬಹುದಾಗಿತ್ತು. ಅದು ಇದು 'ಬಹುದಾಗಿತ್ತು'ಗಳ ರಾಜ್ಯದಲ್ಲಿ ಬಲು ಹೊತ್ತು ವಿಹರಿಸಿದ ಸಂಜೆಗೆ ದಾದರ್‌ಗೆ ಹೋಗುವುದೆಂದುಕೊಂಡ ದಾದರ್‌ಗೆ ಹೋದರೆ ?—ಓ! ಮೋಹಿನಿ ಬಂದಿರಬಹುದೆ ? ನಾಲ್ಕಾರು ದಿನಗಳಿಂದ ಆಕೆ ತನಗಾಗಿ ಕಾಯುತ್ತಿದ್ದುದು ವಸಂತನಿಗೇನು ಗೊತ್ತು ? ಏನಿದ್ದರೂ ಅಲ್ಲಿಗೆ ಹೋದರೆ ವೇಳೆ ಕಳೆದುಹೋಗುತ್ತದೆ ಯಾವ ಕೆಲಸವೂ ಆಗುವುದಿಲ್ಲ ಮೂರು ನಾಲ್ಕು ದಿನಗಳಲ್ಲಿ ' ಹಾಲ್ 'ನ ವಿಚಾರ ತಿಳಿಸುತ್ತೇನೆಂದು ಮಾತು ಕೊಟ್ಟಿರಲಿಲ್ಲವೆ ?

ಇನ್ನೈದು ನಿಮಿಷಗಳಲ್ಲಿ ಹೊರಡುವುದೆಂದು ಕಾಗದಗಳನ್ನು ಸರಿಯಾಗಿ ಕಟ್ಟಿ ಇಡತೊಡಗಿದ ಎದುರಿನಲ್ಲಿ ಯಾರೋ ತನ್ನೆಡೆಗೆ ಬರುತ್ತಿರುವಂತೆ ಭಾಸವಾಯಿತು ಕತ್ತೆತ್ತಿ ನೋಡಿದ—ಮೋಹಿನಿ! ಒಂದರೆಕ್ಷಣ ಅದೇಕೋ ವಸಂತನಿಗೆ ಸಂಕೋಚವೆನಿಸಿತು ಆದರೆ ಒಳಹೃದಯದಲ್ಲಿ ಪುಟಿಯುತ್ತಿದ್ದ

ಉಲ್ಲಾಸ ಏನನ್ನೂ ಮರೆಯಿಸುವಷ್ಟು ಪ್ರಬಲವಾಗಿತ್ತು ತಾನು ಆಕೆಯನ್ನು ಕುರಿತು ಯೋಚಿಸಿ ಹತ್ತು ನಿಮಿಷವೂ ಆಗಿರಲಿಲ್ಲ. ಆಕೆಯೋ ಹೇಗೆ ಬಂದಳು ಎಂಬುದು ಮಾತ್ರ ವಸಂತನನ್ನು ತುಸು ದಿಗಿಲುಗೊಳಿಸಿತು

ಮೋಹಿನಿ ಒಂದನ್ನೂ ಆಡದೆ ಎದುರಿನ ಕುರ್ಚಿಯಲ್ಲಿ ಕುಳಿತಳು ಮುಖ ಬಾಡಿದಂತಿತ್ತು ಬಿಸಿಲಲ್ಲಿ ಬಂದವಳಾದ್ದರಿಂದ ಹಾಗಿರಬಹುದು ಎಂದುಕೊಂಡು ಸುಮ್ಮನಾದ ಯಾವುದೂ ಅನಿರೀಕ್ಷಿತವಾಗಿರದಂತೆ ವಸಂತ ಕೇಳಿದ .

" ಹುಂ—ಮತ್ತೇನು ? "

ಮೋಹಿನಿ ತುಟಿ ಬಿಚ್ಚಲಿಲ್ಲ ಆಕೆಯ ಮೌನವೂ ವಸಂತನಿಗೆ ಮೋಜೆನಿಸಿತು ಆ ಮೌನದಿಂದಲೇ ಹೊರಬರುತ್ತಿದ್ದ ಆತ್ಮೀಯತೆ ವಸಂತನಿಗೆ ಗೋಚರಿಸದಿರಲಿಲ್ಲ ಅವನೆಂದ .

" ಯಾಕೆ ? ಏನೋ ಬಹಳ ಸಿಟ್ಟು ಬಂದಿದೆ ಎಂದು ಕಾಣುತ್ತದೆ—"

" ಇರಬಹುದು ! "

" ಹೌದೇ ? ಹಾಗಿದ್ದರೆ—" ಎಂದು ವಸಂತ ನಸುನಕ್ಕು ಅರ್ಧಕ್ಕೆಯೆ ತಡೆದ " ಏನು ಹಾಗಿದ್ದರೆ—" ಎಂದು ಮೋಹಿನಿ ಕೇಳಬಹುದೆಂದಿದ್ದ ವಸಂತನನ್ನು ಮೋಹಿನಿ ಮಾತನಾಡದಿದ್ದುದು ಈಗ ಮಾತ್ರ ಯೋಚನೆಗೆಳೆಯಿತು ಆದರ ಅದರಿಂದ ಒಳಗಿನ ಉಲ್ಲಾಸ ಮಾತ್ರ ಇನ್ನೂ ತಗ್ಗಲಿಲ್ಲ ಮುಖದ ಮೇಲಿನ ನಗೆ ಬಾಡಲಿಲ್ಲ. ಒಂದೆರಡು ನಿಮಿಷ ತಡೆದು ಮೋಹಿನಿ ಹೇಳಿದಳು :

" ಸುಖವಾಗಿದ್ದವರಿಗೆ ಅದೆಲ್ಲ ಯಾಕೆ ? "

" ಅಂದರೆ ? ಯಾರವರು ಸುಖವಾಗಿದ್ದವರು ? "

" ಇದ್ದವರಿಗೇ ಗೊತ್ತು—"

ವಸಂತ ಹೊರಡಲನುವಾದ. " ಹೊರಡೋಣವೆ ? " ಎಂದು ಕೇಳಿಯೂ ಆಯಿತು. ಆದರೆ ಕುಳಿತ ಕುರ್ಚಿಯಿಂದ ಏಳಲು ಸಾಮರ್ಥ್ಯವಿಲ್ಲದ ಹಾಗೆ ಕುಸಿದಿದ್ದ ಆಕೆಗೆ ಏಳಲು ಮನಸ್ಸು ಇರಲಿಲ್ಲವೆಂಬಂತೆ ತೋರಿತು. " ಯಾಕೆ ? ಬಹಳ ಬೇಸರವಾಗಿದೆಯೆ ? ಇಲ್ಲಿ ಕುಳಿತರೆ ಬೇಸರ ಬೆಳೆಯುತ್ತದೆ—ಕಳೆಯುವುದಿಲ್ಲ. ನಡೆ, ಏಳು—" ಎಂದು ಹೇಳಿದಾಗ ಮೋಹಿನಿ ನಿರುಪಾಯಳಾಗಿ ಎದ್ದಳು. ಪಾವಟಿಗೆಗಳನ್ನು ಇಳಿಯುತ್ತಿದ್ದಾಗ ವಸಂತ ಕೇಳಿದ :

" ಅದೇನು ? ಹೀಗಿದ್ದೀ ? "

" ತಮ್ಮನ್ನು ಕಾಣುವುದೂ ಇಷ್ಟು ಪ್ರಯಾಸವಾಗತೊಡಗಿದರೆ—"

" ಯಾಕೆ ? ಈಗೊಮ್ಮೆ ಬಂದಿದ್ದಿಯಾ ? "

" ಒಮ್ಮೆಯೆ ? ಎರಡು ಮೂರು ಸಲವಾಯಿತು. ಶನಿವಾರ ಬಂದಿದ್ದೆ ಮತ್ತೆ ಸೋಮವಾರ "

" ಹೌದೆ ? ಆದರೆ ಶನಿವಾರ ನಾನು ಇದ್ದೆನಲ್ಲ—"

" ಆಗಲೇ ಹೊರಟುಹೋಗಿದ್ದಿರಿ ಎಂದು ಗೊತ್ತಾಯಿತು "

ಹದಿನೈದು ನಿಮಿಷ ಮುಂಚಿತವಾಗಿ ಮೋಹಿನಿಯ ಆಕೃತಿ ಮನಸ್ಸಿನಲ್ಲಿ ಮೂಡಿದಾಗ ತನ್ನ ಮದುವೆಯ ಸಮಾಚಾರವನ್ನು ಆಕೆಗೆ ಹೇಳಬೇಕು—ಆದರೆ ಹೇಗೆ ?—ಆಕೆ ಏನೆಂದುಕೊಳ್ಳುತ್ತಾಳೆ ? ಮೊದಲು ಬಾರಿಯೇ ಹೇಳಿಬಿಟ್ಟಿದ್ದರೆ ಆಮೇಲಿನ ಒಂದೆರಡು ಸನ್ನಿವೇಶಗಳೂ ದೂರವಾಗಬಹುದಿತ್ತು, ಎಂದಲ್ಲ ಯೋಚಿಸಿದವನಿಗೆ ಈಗಲಾದರೂ ಹೇಳಬೇಕು, ತಾನು ಆಕೆಗೆ ಈಗ ಎರಡು ಮೂರು ದಿನ ಸಿಕ್ಕದಿದ್ದುದಕ್ಕೆ ಕಾರಣವನ್ನು ಹೇಳಿಬಿಟ್ಟರೆ ಎಲ್ಲವೂ ತಾನಾಗಿಯೆ ಬಗೆಹರಿಯುತ್ತದ ಎಂಬ ವಿಚಾರವಲ್ಲಿ ಸಿಲುಕಿಕೊಂಡಿದ್ದ ವಸಂತನಿಗೆ ಆಕೆಯ ಮಾತಿನ ಕಡೆಗೆ ಲಕ್ಷ್ಯವಿದ್ದಂತಿರಲಿಲ್ಲ ಆ ಅಲಕ್ಷ್ಯದಲ್ಲಿ ಆಕೆಯ ಮನಃಸ್ಥಿತಿ ಆತನಿಗೆ ತಿಳಿಯುವುದು ಸಾಧ್ಯವಿರಲಿಲ್ಲ ತನ್ನ ಪ್ರಶ್ನೆ ಯಾವ ಬಾಗಿಲನ್ನು ತೆರೆಯಬಹುದು ಎಂಬ ಯೋಚನೆಯಿಲ್ಲದೆ ಕೊನೆಗೆ ಮೋಹಿನಿಯೆ ಕೇಳಿದಳು .

" ನಿನ್ನೆ ಯಾಕೆ ರಜೆ ? ಮೈಯಲ್ಲಿ ಸ್ವಸ್ಥವಿರಲಿಲ್ಲವೆ ? "

ಮೈಯಲ್ಲಿ ಸ್ವಸ್ಥವಿರಲಿಲ್ಲವೆ ? ಏನೆಂದು ಹೇಳುವುದು ? ನೇರವಾಗಿ ಹೇಳಿಬಿಡಲೆ ? ಒಂದರೆನಿಮಿಷ ಹಿಂಜರಿದ ಆದರೆ ಬೇರೆ ದಾರಿಯೆ ಕಾಣಲಿಲ್ಲ ಬೇರೆಯಾಗಿ ಏನಾದರೊಂದು ಸುಳ್ಳು ಕತೆಯನ್ನು ಹೇಳಬಹುದಾಗಿತ್ತು. ಆದರೆ ನಿಜವಾದುದನ್ನು ಹೇಳಲೇಬೇಕು ಎಂದು ಹೇಳಿದ .

" ಈಗ ಮೂರು ನಾಲ್ಕು ದಿನಗಳಿಂದ ಮನೆಯಲ್ಲಿ ಅತಿಥಿಗಳು—"

" ಅತಿಥಿಗಳೆ ? ಯಾರು ಬಂದಿದ್ದರು ? "

" ನನ್ನ ಅಕ್ಕನ ಗಂಡ—"

" ಮತ್ತೆ ?—"

ವಸಂತನಿಗೆ ಮತ್ತೆ ಅನುಮಾನ. ಏನೆಂದು ಹೇಳುವುದು ? ಕೊನೆಗೆ ಉಸಿರಿದ :

" ಮತ್ತೆ—ನನ್ನ ಭಾವೀ ಮಾವಂದಿರು ! "

ಮೋಹಿನಿಯ ಹೆಜ್ಜೆ ತಡೆಯಿತು ಒಂದು ಬಾರಿ ವಸಂತನ ಮುಖವನ್ನು ನೋಡಿದಳು ಆತನ ಮುಖದಲ್ಲಿಯ ನಸುನಗೆ ಮಾಯವಾಗಿತ್ತು ಆದರೆ ಗೆಲುವಿಲ್ಲದಿರಲಿಲ್ಲ. ಮೋಹಿನಿ ಹೆಜ್ಜೆಗಳನ್ನು ಸರಿಗೂಡಿಸಿದಳು. ಆದರೆ ಬಾಯಿಗೆ ಮಾತು ಬರಲಿಲ್ಲ ಹೇಳಹೆಸರಿಲ್ಲದ ಯಾವುದೋ ಒಂದು ನಿರಾಶೆ ಆಕೆಯ ಕತ್ತನ್ನು ಹಿಸುಕುತ್ತಿರುವಂತಿತ್ತು ವಸಂತ ಆಕೆಯ ಮುಖವನ್ನೇ ದಿಟ್ಟಿಸುತ್ತಿದ್ದ ಇದನ್ನು ತಿಳಿದ ಆಕೆ ಮುಖವನ್ನು ಬೇರೆಡೆಗೆ ತಿರುಗಿಸುತ್ತಿದ್ದಳು ತಾನು ಮಾತನಾಡದೆ ಆಕೆ ಆಡುವುದು ಸಾಧ್ಯವಿರಲಿಲ್ಲವೆಂಬುದನ್ನು ತಿಳಿದು ಕೊನೆಗೆ ವಸಂತನೆಂದ .

" ಯಾಕೆ, ಮೋಹಿನಿ, ಸುಮ್ಮನಾದೆ ? "

" . . "

" ಮಾತನಾಡುವುದಿಲ್ಲವೆ ?—"

" ಏನು ಮಾತನಾಡಲಿ ? "

ಆ ಒಂದು ಮಾತಿನಲ್ಲಿ ಮೋಹಿನಿಯ ಎದೆಯ ಮಿಡಿತವೆಲ್ಲವೂ ಒಮ್ಮೆನೆ ಯಾಗಿ ಬಂದು ಸಿಂತಹಾಗಿತ್ತು ಆಕೆಯ ದನಿ ಆಗ ವಸಂತನೆಂದುಕೊಂಡ ' ನಾನೇನು ಮಾಡುವ ಹಾಗಿದ್ದೇನೆ ? ಇಲ್ಲದ ಆಸೆಯನ್ನು ಆಕೆ ಬೆಳಸಿಕೊಂಡಿದ್ದರೆ ಅದು ಆಕೆಯದೇ ತಪ್ಪು.' ಆದರೆ ಮೋಹಿನಿಯ ಮನಸ್ಸು ಮಾತ್ರ ಈ ತಪ್ಪು ಒಪ್ಪುಗಳ ವಿಚಾರಗಳನ್ನು ಎಲ್ಲಿಯೋ ಬಿಟ್ಟು ಬಹುದೂರ ಓಡಿತ್ತು. ನಿರಾಶೆಯ ಮಡುವಿನಲ್ಲಿ ಓದ್ದಾಡುತ್ತಿತ್ತು ವಸಂತ ಕೈಬಿಟ್ಟನೆಂದಲ್ಲ ಆತನ ಕೈಹಿಡಿಯುವ ಆಸೆ ಸ್ಪಷ್ಟವಾಗಿ ಆಕೆಯಲ್ಲಿ ಇದ್ದಿತೊ ಇಲ್ಲವೊ ! ಆದರೆ ಎಲ್ಲಕ್ಕಿಂತ ಹೆಚ್ಚಾಗಿ ಆತ ತನ್ನಿಂದ ದೂರವಾದ— ಇನ್ನೂ ದೂರ ಸರಿಯುತ್ತಾನೆ— ಆತ ದೂರ ಸರಿಯುವುದು ಅನಿವಾರ್ಯ ಎಂಬುದಕ್ಕಾಗಿ. ಈ ಅನಿವಾರ್ಯತೆ ಆಕೆಗೆ ನೋವನ್ನುಂಟುಮಾಡಿತು ವಸಂತನ ಸಹಾನುಭೂತಿಯ ಮಾತುಗಳಲ್ಲಿ ಆಕೆಗೆ ಎಂಥ ಭರವಸೆ ಕಾಣುತ್ತಿದ್ದಿತೊ ? ಅದಿಲ್ಲದಿದ್ದರೆ ತಾನು ಸ್ವತಂತ್ರಳಾಗಿ ಮುಂದರಿಯುವುದೇ ಸಾಧ್ಯವಿಲ್ಲವೆಂದು ತೋರಿತ್ತು. ಆತನ ಮಾತು ತನ್ನ ಹಟದ ಹಿನ್ನೆಲುಬಾಗಿದ್ದಂತಿತ್ತು. ಆತನ ಸಹವಾಸ ತನ್ನ ಬದುಕಿನ ಬರಡು ಬಯಲನ್ನು ಬೆಡಗಿನಿಂದ ತುಂಬಬಲ್ಲ ಸಾಮರ್ಥ್ಯವುಳ್ಳದ್ದಾಗಿತ್ತು. ಈ ಯಾವ

ಮಾತುಗಳನ್ನೂ ಆಕೆ ಸ್ಪಷ್ಟವಾಗಿ ಗ್ರಹಿಸಿದ್ದಳೊ ಇಲ್ಲವೊ. ಆದರೆ 'ಏನು ಮಾತನಾಡಲಿ?' ಎಂದು ಆಕೆ ಕೇಳಿದಾಗ ಆತನಿಲ್ಲದ ತನ್ನ ಬಾಳಿನ ಘೋರ ನೈರಾಶ್ಯ ಆ ಕ್ಷಣದಲ್ಲಿ ಮಾತಾಗಿ ಹೊರಬಿದ್ದ ಹಾಗಿತ್ತು. ಆದರೆ ಇದೆಲ್ಲ ಒಂದು ಕ್ಷಣ ಮಾತ್ರ. ಇದು ಸಲ್ಲದು, ಇದಾವುದೂ ಸಲ್ಲದು. ತಾನು ಮುಂಬಯಿಗೆ ಬರುವಾಗ ವಸಂತನನ್ನು ನೆನೆದು, ನೆಚ್ಚಿ ಬಂದಿರಲಿಲ್ಲವಲ್ಲ. ಆತನನ್ನೇ ನಂಬಿ ತಾನು ತನ್ನ ಬಾಳನ್ನು ಮುಂದರಿಸಬೇಕಾಗಿದ್ದರೆ ತನ್ನದೆಂತಹ ಸ್ವತಂತ್ರತೆ? ಕೊನೆಯ ವರೆಗೂ ತಾನು ಪರಾವಲಂಬಿಯೆ? ಹಾಗಿದ್ದರೆ ತನ್ನ ಬಾಳಿನ ಹಟಕ್ಕೆ ಯಾವ ಅರ್ಥವೂ ಇಲ್ಲ. ಹಟವನ್ನೇ ಬಿಡುವುದಾದರೆ ಆನಂದನನ್ನೇ ಮತ್ತೆ ಸೇರಿಬಿಡಬಹುದು. ಅಷ್ಟಾದರೆ ಯಾವ ಸಮಸ್ಯೆಯೆ ಇಲ್ಲ. ಇಂಥ ಇಬ್ಬಣದಲ್ಲಿ ಸಿಕ್ಕ ಮೋಹಿನಿಯ ಮನಸ್ಸು ಮಾತನ್ನು ಮರೆಯಿತು. ತನ್ನ ಬದುಕಿನ ಸಮಸ್ಯೆಯ ಎದುರು ಬಧಿರವಾಗಿ ನಿಂತಿತು. ಒಂದೆಡೆ ದೂರವಾದನೆಂಬ ಕಳವಳ, ಇನ್ನೊಂದೆಡೆ ಆತ ದೂರವಾದರೆ ಅದರಿಂದ ತನಗೇನು? ಯಾರೂ ಸಮೀಪವಿಲ್ಲದ ತನಗೆ ಯಾರು ದೂರವಾದರೇನು? ಎಂಬ ಅಭಿಮಾನ, ಆತ್ಮವಿಶ್ವಾಸ ಒಂದಕ್ಕೊಂದು ತಾಕಲಾಡಿ, ಕೊನೆಗೆ ಆತ್ಮವಿಶ್ವಾಸವೇ ತಲೆಯೆತ್ತಿ ನಿಂತಿತು— ಆದರೆ ಅದರ ಮುಖ ಬಲುಹೊತ್ತು ಜೇಡಿ, ಕಾಡಿ, ಅತ್ತು ಮಲಗಿ ಎಚ್ಚರವಾದ ಮಗುವಿನ ಮುಖದಂತಿದ್ದಿತು!

ಮೋಹಿನಿಯ ನೀರವತೆ ಕ್ಷಣಕ್ಷಣಕ್ಕೂ ವಸಂತನನ್ನು ನೋಯಿಸುತ್ತಿತ್ತು. ತನ್ನ ಮಾತು ಆಕೆಯ ಅಂತರಂಗವನ್ನು ಬಹುವಾಗಿ ಕದಡಿಸಿತ್ತೆಂಬುದನ್ನು ತಿಳಿದ ಆತ ಆಕೆಯನ್ನು ಇನ್ನು ಹೇಗೆ ಮಾತನಾಡಿಸುವುದೆಂದು ಯೋಚಿಸುತ್ತಲೆ ಹೆಜ್ಜೆ ಹಾಕುತ್ತಿದ್ದ. ಏನಿದ್ದರೂ ಮಾತನಾಡಿಸುವುದು ತನ್ನದೇ ಕರ್ತವ್ಯವೆಂದು ನಿಧಾನವಾಗಿ ತಡವರಿಸಿದ:

"ನಾನು ನಿನಗೆ ಈ ಮೊದಲೆ ಇದನ್ನು ಹೇಳಬೇಕಾಗಿದ್ದಿತು—"

"ಏನನ್ನು?"

"ನನಗೆ ಮದುವೆ ಗೊತ್ತಾಗಿದೆ ಎಂಬುದು."

"ಅದರಿಂದ ನಾನು ನೊಂದುಕೊಂಡೆ ಎಂದೆನಿಸುತ್ತಿದೆಯೆ ನಿಮಗೆ?"

ಬಾಯಿಂದ ಹಾಗೆ ಕೇಳಿದಳೇನೋ ನಿಜ. ಆದರೆ ಮಾತು ಎದೆಯಾಳದಿಂದ ಬಂದುದಾಗಿರಲಿಲ್ಲ.

" ನೊಂದುಕೊಂಡಿಲ್ಲವೆ ಹಾಗಿದ್ದರೆ ? "

" ಇಲ್ಲ—"

" ನಿಜವಾಗಿಯೂ ? "

" ಯಾಕೆ ನೊಂದುಕೊಳ್ಳಬೇಕು ? ಹಾಗೆ ನೋಡಿದರೆ ನನಗೆ ತುಂಬಾ ಸಂತೋಷ—"

" ಹೌದಲ್ಲವೆ ? ಹಾಗಿದ್ದರೆ ಸಂತೋಷವನ್ನು ವ್ಯಕ್ತಪಡಿಸುವ ರೀತಿ ನಿನ್ನದೇನೋ ಬೇರೆಯೆ ಆಗಿದೆ ! "

" ಯಾಕೆ ? ಏನಾಯಿತು ಈಗ ? "

" ಏನಾಯಿತೆ ? ಈಗ ಹತ್ತು ನಿಮಿಷಗಳಲ್ಲಿ ನೀನು ಎಷ್ಟು ಮಾತನಾಡಿದೆ, ನೆನೆದುಕೊ "

" ಅದೇ ? ಅದು ಬೇರೆ—"

" ಬೇರೆ ಏನು ? "

" ನಿಮ್ಮಕಿಂತಲೂ ಒಂದು ಸಂತೋಷದ ಸಮಾಚಾರವನ್ನು ನಾನೂ ಹೇಳಬಹುದಾಗಿದೆ ! "

" ಹೌದೆ, ಏನದು ? "

ಆನಂದ ಮತ್ತು ತನ್ನ ಬಗೆಯಲ್ಲಿ ಏನಾದರೂ ಹೇಳುತ್ತಿರಬಹುದೆ ಎಂದುಕೊಂಡ ವಸಂತ

" ನನ್ನ ಕೆಲಸ ಹೋಯಿತು ! "

" ಅಂದರೆ ? "

" ಅಂದರೆ ಏನು ? ಕೆಲಸ ಹೋಯಿತು ಎಂದರೆ ಕೆಲಸ ಇಲ್ಲ ! "

" ಇದು ಸಂತೋಷದ ಸಮಾಚಾರವೆ ? "

ವಸಂತನಿಗೆ ಮದುವೆ ಗೊತ್ತಾದ ಸಮಾಚಾರದಿಂದ ತನಗಾದ 'ಸಂತೋಷ' ತನ್ನ ಕೆಲಸ ಕಳೆದುದರಿಂದ ಆದ 'ಸಂತೋಷ'ದಿಂದ ಬೇರೆ ಆಗಿರಲಿಲ್ಲವೆಂಬುದನ್ನು ವಸಂತ ತಿಳಿದನೊ ಇಲ್ಲವೊ.

" ಅಲ್ಲವೆ ಮತ್ತೆ ? "

" ಯಾಕೆ ? "

" ಆನಂದನನ್ನು ಮತ್ತೆ ಮೊರೆಹೋಗಲಿಕ್ಕೆ ಅನುಕೂಲವಾಯಿತು—

ನಿಮ್ಮ ದೃಷ್ಟಿಯಿಂದ ! ”

ವಸಂತ ಸುಮ್ಮನಾದ—ಮಾತನಾಡಿ ಪ್ರಯೋಜನ ಕಾಣಲಿಲ್ಲವೆಂದು. ಮೋಹಿನಿಯೇ ಕೇಳಿದಳು

“ ಯಾಕೆ ಸುಮ್ಮನಾದಿರಿ ? ”

“ ನನಗೇನೂ ತಿಳಿಯುವುದಿಲ್ಲ ನೀನು ಹೀಗೆ ಮಾತನಾಡಿದರೆ. ನಾನೇನು ಹೇಳಲಿ ? ”

“ ಹಾಗಿದ್ದರೆ ನಾನು ಇಲ್ಲಿಯ ವರೆಗೆ ಬರಲೇಬಾರದಾಗಿತ್ತು ”

“ ಏನಾಯಿತು, ಹೀಗೆ ಒಮ್ಮಿಂದೊಮ್ಮೆ, ಕೆಲಸ ಕಳೆಯಲಿಕ್ಕೆ ? ”

“ ಯಾಕೇನು ? ಅವರಿಗೆ ಬೇಡವಾಯಿತು, ಬೇಡ ಎಂದು ಹೇಳಿದರು.”

“ ನಿಷ್ಕಾರಣವಾಗಿಯೆ ? ”

“ ಜಾಗ ಕಡಿಮೆ ಮಾಡಬೇಕಾಗಿದೆಯಂತೆ ಆದರೆ ಅದೆಲ್ಲ ಸುಳ್ಳು.”

“ ಹಾಗಿದ್ದರೆ ಮುಂದೆ ? ”

“ ನೀವೇ ಹೇಳಬೇಕು—”

ತನ್ನಿಂದ ದೂರವಾಗುತ್ತಿದ್ದ ವಸಂತನಿಗೆ ಹಾಗೆ ಹೇಳಿಯಾದರೂ ಏನು ಎಂದು ಮರುಕ್ಷಣ ಮೋಹಿನಿಗೆನಿಸಿತು ವಸಂತ ಯೋಚನೆಯಲ್ಲಿ ಮುಳುಗಿದ. ಏನಿದ್ದರೂ ಆಕೆ ಆನಂದನೆಡೆಗೆ ಹೋಗುವಂತಿಲ್ಲ ಮರಳಿ ಪುಣೆಗೂ ಹೋಗುವಂತಿಲ್ಲ ಏನಾದರೊಂದು ಕೆಲಸವನ್ನು ಆಕೆ ಹುಡುಕಿಕೊಂಡು ಇರತಕ್ಕವಳೇ ಆದ್ದರಿಂದ ತಾನೇನಾದರೂ ಈ ಬಗೆಯಲ್ಲಿ ಸಹಾಯ ಮಾಡಬಹುದೆ ಎಂದು ಯೋಚಿಸುತ್ತಿದ್ದು ಕೊನೆಗೆ ಕೇಳಿದ

“ ನಮ್ಮ ಆಫೀಸಿನಲ್ಲಿ ಇಲ್ಲಿ ಎಲ್ಲಾದರೂ ಒಂದು ಕೆಲಸ ಸಿಕ್ಕರೆ ಮಾಡುತ್ತೀಯಾ ? ”

“ ನಿಮ್ಮ ಆಫೀಸಿನಲ್ಲಿಯೆ ? ”

“ ಅಂದರೆ ಇಲ್ಲಿಯೇ ಎಲ್ಲಾದರೂ ಒಂದು ಇಲಾಖೆಯಲ್ಲಿ ! ”

“ ಎಂಥ ಕೆಲಸ ? ”

“ ಸಂಬಳ ಸಿಕ್ಕುವಂಥಾದ್ದು ! ”

“ ಅದಂತೂ ಆಯಿತಲ್ಲ. ಕೆಲಸ ಎಂಥದು ? ”

“ ಏನಾದರೊಂದು, ಗುಮಾಸ್ತಿಕೆ. ಇಲ್ಲಿ ಬೇರೆ ಏನು ಸಿಕ್ಕಬೇಕು ? ”

ಮೋಹಿನಿ ಸುಮ್ಮನಾದಳು. ಇಬ್ಬರೂ ಹೆಜ್ಜೆಹಾಕುತ್ತಲೆ ಇದ್ದರು ಮುನ್ನುಗ್ಗುವ ಜನಸಮುದಾಯದಾಚೆ ಚರ್ಚಗೇಟ್ ನಿಲ್ದಾಣ ಕಾಣುತ್ತಿತ್ತು ಆದರೆ ಇಬ್ಬರ ಲಕ್ಷ್ಯವೂ ಅತ್ತಕಡೆಗಿರಲಿಲ್ಲ ತಾವು ಹೋಗುವುದು ಅಲ್ಲಿಗೆ ಎಂದು ನಿಶ್ಚಯಿಸಿಕೊಂಡ ಹಾಗೆಯೆ ಕಾಲುಗಳು ತಾವಾಗಿಯೇ ದಾರಿಯನ್ನು ಹಿಡಿದಿದ್ದವು ಮೋಹಿನಿ ಅನುಮಾನಿಸುತ್ತೆಂಬಂತೆ ಹೇಳಿದಳು

" ಬೇಡ—"

" ಯಾಕೆ ? ಕೆಲಸ ಮಾಡುವುದೇ ಬೇಡವಾಗಿದೆಯೆ ? "

" ಕೆಲಸ ಹಿಡಿಯದೆ ಏನು ಮಾಡಲಿ ? ಆದರೆ ಇಲ್ಲಿ ಬೇಡ—"

ವಸಂತನಿಗೆ ನಿಜವಾಗಿಯೂ ಆಶ್ಚರ್ಯವೆನಿಸಿತು ಇಷ್ಟು ನಿರ್ವಿಕಾರವಾಗಿ ಮೋಹಿನಿ ತನ್ನಿಂದ ಹಿಮ್ಮೆಟ್ಟಬಹುದು ಎಂದು ಆತನಿಗೆನಿಸಿರಲಿಲ್ಲ ತನ್ನ ಆಫೀಸಿನಲ್ಲಿಯ ಯಾವ ಕಲಸವೂ ಬೇಡ ಎಂದು ಆಕೆ ಹೇಳುತ್ತಿರುವುದು ತನ್ನಿಂದ ಪೂರ್ತಿಯಾಗಿ ಕಡಿದುಕೊಂಡು ದೂರವಾಗಿರಬೇಕೆಂಬುದಕ್ಕೆ ಮುನ್ ಸೂಚನೆಯಾಗಿರಬಹುದೆ ? ಎಂದು ಕೇಳಿಕೊಂಡ ಒಂದು ಕ್ಷಣ ಮೋಹಿನಿಯ ಬಗೆಯಲ್ಲಿ ಎಲ್ಲಿಲ್ಲದ ಮರುಕವೆನಿಸಿತು ಆದರೆ ತಾನೇನು ಮಾಡುವ ಹಾಗಿದ್ದ ? ತಮ್ಮ ತಮ್ಮ ಬದುಕನ್ನು ತಾವೇ ತಮಗೆ ತಿಳಿದಂತೆ ನಡೆಯಿಸಬೇಕಲ್ಲವ ? ಆದರೂ ತಡೆಯಲಾಗದೆ ಕೇಳಿದ

" ಅದೇನು ? ಇಷ್ಟು ಖಡಾಖಂಡಿತವಾಗಿ ಹೇಳುತ್ತಿರುವೆಯಲ್ಲ ? "

" ಇನ್ನೆಲ್ಲಿಯೂ ಸಿಕ್ಕದಿದ್ದರೆ ಹೇಳುವೆ—"

" ಆದರೆ, ಯಾಕೆ ? ಇಲ್ಲಿ ಯಾಕೆ ಬೇಡ ? ಸಹಜವಾಗಿಯೇ ಸಿಕ್ಕ ಬಹುದು, ಸ್ವಲ್ಪ ಯತ್ನಮಾಡಿದರೆ—"

" ಯಾಕೆ, ಯಾಕೆ—"

ಮೋಹಿನಿ ತಡೆದಳು. ಚರ್ಚಗೇಟ್ ನಿಲ್ದಾಣದ ಬಾಗಿಲಿಗೆ ಬಂದಿದ್ದರು. ಜನಸಂದಣಿಯಲ್ಲಿ ಒಳಗಡೆ ಹೋಗುವುದೂ ಕಷ್ಟವಾಗಿತ್ತು. ಮೋಹಿನಿ ಹಿಂದುಳಿದಿದ್ದರಿಂದ ವಸಂತನೂ ತಡೆದ.

" ನೀವೆಲ್ಲಿಗೆ ಹೋಗುವವರು ಈಗ ? "

" ದಾದರ್‌ಗೆ ! "

" ಯಾಕೆ ಈ ಚೇಷ್ಟೆ—? "

" ನಿಜವಾಗಿಯೂ ದಾದರ್‌ಗೆ ಹೋಗಬೇಕು. ಆದರೆ—"

" ಯಾಕೆ ಅನುಮಾನ ? "

" ಅನುಮಾನವಲ್ಲ. ಇನ್ನೆಲ್ಲಿಯಾದರೂ ಹೋಗುವುದು ಬೇಡವೆ ? "

" ಯಾತಕ್ಕೆ ? "

ಮೋಹಿನಿಯ ನಿರ್ವಿಕಾರವಾದ ಮಾತಿನ ಬಗೆ ವಸಂತನನ್ನು ಒಂದು ಕ್ಷಣ ದಿಗಿಲುಗೊಳಿಸುತ್ತಿತ್ತಾದರೆ ಇನ್ನೊಂದು ಕ್ಷಣ ಹೆದರಿಸುತ್ತಿತ್ತು. ಆಕೆ ಮಾತನಾಡುತ್ತಿದ್ದ, ನಡೆದುಕೊಳ್ಳುತ್ತಿದ್ದ ರೀತಿಯನ್ನು ನೆನೆದರೆ ಆಕೆ ತನ್ನ ಎದೆಯಲ್ಲಿಯ ತೀವ್ರವಾದ ಭಾವನೆಗಳನ್ನು ಅದುಮಿ, ತಳ್ಳಿ, ಒತ್ತಿಹಿಡಿದು ಮಾತನಾಡುತ್ತಿದ್ದಳೆಂಬುದು ಸ್ಪಷ್ಟವಾಗಿದ್ದಿತು ಮುಖದ ಮೇಲಿನ, ಮಾತಿನಲ್ಲಿಯ ಶಾಂತತೆ ನಿಜವಾದ ಶಾಂತತೆಯಾಗಿರದೆ ಸುಪ್ತ ಜ್ವಾಲಾಮುಖಿಯ ಶಾಂತತೆಯಾಗಿತ್ತೆಂಬುದೂ ಆಕೆಯ ಕೆಂಪಡರಿದ ಕಪೋಲಗಳ ಮೇಲಿಂದ, ಅರೆದೆರೆದು ಮ್ಲಾನವಾಗಿ ಕಾಣುತ್ತಿದ್ದರೂ ಯಾವುದೊ ಒಂದು ತೀವ್ರವಾದ ಭಾವನಾವೇಗವನ್ನು ಸೂಸುವ ಕಣ್ಣುಗಳ ಮೇಲಿಂದ ತಿಳಿಯುವಂತಿತ್ತು ತನ್ನ ಒಂದು ಮಾತಿಗೆ ಹತ್ತು ಮಾತು ಹೇಳುತ್ತಿದ್ದ ಮೋಹಿನಿ ಇಂದು ಹತ್ತು ಮಾತಿಗೆ ಒಂದು ಉತ್ತರವನ್ನು ಹೇಳುತ್ತಿದ್ದಳೆಂಬುದು ವಸಂತನಿಗೆ ತಿಳಿಯದಿರಲಿಲ್ಲವಾದ್ದರಿಂದಲೆ ಆಕೆಯನ್ನು ಮುಕ್ತವಾಗಿ ಮಾತನಾಡಿಸಿ, ಆಕೆಯ ಮನಸ್ಸನ್ನು ನಿಜವಾಗಿಯೂ ಹಗುರುಗೊಳಿಸದ ಹೊರತು ಆತನಿಗೆ ಸಮಾಧಾನವಾಗುವುದು ಸಾಧ್ಯವಿರಲಿಲ್ಲ. ಅಂತೆಯೆ ಹೇಳಿದ .

" ಯಾತಕ್ಕೆಯೆ ? ಕೆಲಸವಿದೆ—"

" ಏನು ಕೆಲಸ ? "

" ನನಗೆ ಇಂದು ನಿನ್ನ ಕೂಡ ಬಹಳ ಮಾತನಾಡುವುದಿದೆ ! "

ವಸಂತ ನಿಜವಾಗಿಯೂ ತನಗೆನಿಸಿದ್ದನ್ನು ಹೇಳುತ್ತಿದ್ದ ಆದರೆ ಮೋಹಿನಿ ಮಿಸುಕಲಿಲ್ಲ, ಮಾತನಾಡಲಿಲ್ಲ. ಜನರ ಗದ್ದಲ ತುಸು ಸರಿಯುತ್ತಲೆ ಒಳಗೆ ಹೋಗಲೆಂದು ಮುಂದರಿದಳು. ವಸಂತ ಹಿಂದಿನಿಂದಲೆ ಹೊರಟ. ಮೋಹಿನಿ ನೇರವಾಗಿ ಬುಕಿಂಗ್ ಆಫೀಸ್ ಕಡೆಗೆ ಹೋದಳು. ಟಿಕೆಟ್‌ಗಾಗಿ ಕಾಯಬೇಕಾಗಿ ಆಚೆ ಕಡೆಗೆ ಮುಖ ತಿರುವಿ ನಿಂತಿದ್ದ ಆಕೆಯನ್ನು ನೆನೆದು ವಸಂತನಿಗೆ ವಿಚಿತ್ರವೆನಿಸಿತು. ಎಂದಿಗೊ, ಹೇಗೋ ಮೊದಲಾಗಿದ್ದ ಒಂದು ಬಗೆಯ

ಸಂಬಂಧ ಈ ದಿನ ಕಡಿದುಹೋಗುತ್ತಿದ್ದಹಾಗಿದೆ ಮೋಹಿನಿಯ ನಡೆ, ನುಡಿ ಅದನ್ನೇ ಹೇಳುತ್ತಿದ್ದಿತು ಈ ಸಂಬಂಧ ಮೊದಲಾದ ದಿನ ತಾವಿಬ್ಬರೂ ಮೊದಲು ಬಾರಿ ನಿಕಟವಾಗಿ ಕೂಡಿದ್ದು ಇದೇ ಚರ್ಚಗೇಟ್ ನಿಲ್ದಾಣದ ಬುಕಿಂಗ್ ಆಫೀಸ್ ಹತ್ತಿರವೆ ಅಲ್ಲವೆ? ಆ ದಿನ—ಆ ಮಾತಿಗೆ ಈಗ ಒಂಬತ್ತು ಹತ್ತು ತಿಂಗಳಾಗುತ್ತ ಬಂದಿತ್ತು—ಆಕೆಗಾಗಿ ಕಾದು ಕಾದು ಬೇಸರವೆನಿಸುತ್ತಿರುವಾಗಲೇ ಕೈಯಲ್ಲೊಂದು ಕ್ಯಾನ್‌ವಾಸ್ ಬ್ಯಾಗ್ ಹಿಡಿದುಕೊಂಡು ಜನರ ಗದ್ದಲಲ್ಲಿಂದ ಆತುರದಿಂದ, ಕಾತರದಿಂದ ಮುಂದಕ್ಕೆ ಬಂದಿದ್ದಳಲ್ಲವೆ? ಆ ಚಿತ್ರ ಅಚ್ಚೊತ್ತಿದಂತೆ ವಸಂತನ ಕಣ್ಣೆದುರು ನಿಂತಿತು ಆದರೆ ಇಂದು? ಈಗ ಕಿಟಕಿಯ ಕಡೆಗೆ ಮುಖ ತಿರುವಿ ನಿಂತಿದ್ದಾಳೆ ತನ್ನ ಕಡೆಗೆ ಆಕೆಯ ಮುಖವಿಲ್ಲ—ಬೆನ್ನು ಇದೆ ಆಕೆ ಟಿಕೆಟ್ ಪಡೆಯುತ್ತಿದ್ದಾಳೆ ಎಲ್ಲಿಯ ಟಿಕೆಟ್? ಬದುಕಿನಲ್ಲಿಯ—ಭವಿಷ್ಯದಲ್ಲಿಯ —ಯಾವ ನಿಲ್ದಾಣಕ್ಕೆ ಆಕೆ ಇಂದು ಟಿಕೆಟ್ ಪಡೆಯುತ್ತಿದ್ದಾಳೆ? ಮೋಹಿನಿ ಹಿಂದಿರುಗಿ ಬಂದಳು. ವಸಂತನೆಂದ :

"ದಾದರಿಗೇ ಹೋಗುವುದೆ?"

"ನೀವು ಹಾಗೇ ಹೇಳಿದಿರಲ್ಲ ಮತ್ತೆ?"

"ಹೌದು. ಆದರೆ ಮತ್ತೊಂದನ್ನೂ ಹೇಳಿದೆ"

"ಅದೊ ನೋಡಿರಿ ಲೋಕಲ್ ಬಂದಿತು ಕೂಡಲೆ ಓಡಿದರೆ ನಿಲ್ಲಲಾದರೂ ಜಾಗ ಸಿಕ್ಕಬಹುದು—" ಇಬ್ಬರೂ ಅವಸರವಸರವಾಗಿ ಓಡಿದರು. ಆದರೆ ಕಾಯುತ್ತಿದ್ದ ಜನ ಆಗಲೆ ಒಳಗಡೆ ನುಗ್ಗಿ ಜಾಗಗಳನ್ನು ಆಕ್ರಮಿಸಿಬಿಟ್ಟಿದ್ದರು ನಡುದಾರಿಯಲ್ಲಿ ನಿಲ್ಲಲು ಜಾಗ ಸಿಕ್ಕಿತು.

"ಆಚೆ ಬಾಗಿಲ ಹತ್ತಿರವೇ ನಿಲ್ಲುವುದು ಒಳ್ಳೆಯದು ಗ್ರಾಂಟ್ ರೋಡ್ ವರೆಗೆ ಇನ್ನೂ ಗದ್ದಲ ಬೆಳೆಯುತ್ತದೆ—"

ಆಚೆಯ ಬಾಗಿಲ ಕಡೆಗೆ ಸರಿದು ಒದಿಬದಿಯಾಗಿ ನಿಂತುಕೊಳ್ಳುವಷ್ಟರಲ್ಲಿ ಗಾಡಿ ಹೊರಟಿತು ಜನ ನುಗ್ಗುತ್ತಲೆ ಇದ್ದರು ಆಫೀಸುಗಳು ಬಿಡುವ ವೇಳೆಯಾದ್ದರಿಂದ ಇದಾವುದೂ ಹೊಸದಾಗಿರಲಿಲ್ಲ ಪ್ರತಿ ನಿಲ್ದಾಣಕ್ಕೆ ಬೆಳೆಯುತ್ತಿದ್ದ ಗದ್ದಲದಿಂದಾಗಿ ಮೋಹಿನಿ ವಸಂತನ ಮೈಗೆ ಅಂಟಿಕೊಂಡೇ ಇದ್ದಳು. ಮಾತನಾಡಲು ಮಾತ್ರ ಅವಕಾಶವಿರಲಿಲ್ಲ. ಎಷ್ಟು ಹತ್ತಿರವಾಗಿದ್ದವನು ಎಷ್ಟು ದೂರವಾಗುತ್ತಿರುವನಲ್ಲ ಎಂಬ ಒಂದೇ ಒಂದು ಭಾವನೆ ಮೋಹಿನಿಗೆ ಆ

ಭಾವನೆಯಿಂದಾಗಿ ಮೂಡಿದ ನಿರಾಶೆ ಆಕೆಯ ದಣಿದ ಮುಖದಲ್ಲಿ ಕಾಣದಿರಲಿಲ್ಲ. ಗಾಡಿ ಗ್ರ್ಯಾಂಟ್‌ರೋಡ್‌ನಿಂದ ದಾದರ್‌ವರೆಗೆ ನಿಲ್ಲದೆ ಹೋಯಿತಾದ್ದರಿಂದ ದಾದರ್ ತಲಪಲಿಕ್ಕೆ ವೇಳೆ ಹಿಡಿಯಲಿಲ್ಲ ಇಬ್ಬರೂ ಮಾತನಾಡಲಿಲ್ಲ. ಎರಡು ಮೂರು ಸಲ ಒಬ್ಬರನ್ನೊಬ್ಬರು ನೋಡಿದಾಗ ಮಾತ್ರ ಕೂಡಿದ ಕಣ್ಣಾ ನೋಟ ನಾಲಗೆಗೆ ನಿಲುಕದ್ದನ್ನು ವ್ಯಕ್ತವಾಗಿಸಿತ್ತು. ದಾದರ್ ನಿಲ್ದಾಣದಲ್ಲಿಯ ನೂಕಲಾಟದಿಂದ ಹೊರಬಂದು ರಾನಡೆ ರೋಡ್‌ಗುಂಟ ಸಾಗುತ್ತಿದ್ದಾಗ ವಸಂತ ಮತ್ತೆ ಹೇಳಿದ .

" ನನಗಿಂದು ನಿನ್ನ ಜೊತೆಯಲ್ಲಿ ಬಹಳ ಮಾತನಾಡಬೇಕಾಗಿದೆ—"

" ಯಾಕೆ ? "

" ಅದೇ ಗೊತ್ತಿಲ್ಲ ಆದರೇನು ? ನೀನು ಹೀಗೆ ಮೂಕ ದೆವ್ವ ಹಿಡಿದ ಹಾಗೆ ಸುಮ್ಮನಾಗಿಯೆ ಉಳಿದರೆ—"

ಮೋಹಿನಿ ಮಾತನಾಡಲಿಲ್ಲ. ಯಾವ ಚೇಷ್ಟೆಯ ಮಾತೂ ಆಕೆಯನ್ನು ಮಾತನಾಡಿಸುವಂತಿರಲಿಲ್ಲ.

" ನಾವಿಂದು ಚಹವನ್ನು ಕೂಡ ಕುಡಿಯಲಿಲ್ಲ—"

" ನನಗೆ ಬೇಕಾಗಿರಲೇ ಇಲ್ಲ."

" ನಿನಗೆ ಈ ದಿನ ಯಾವುದೂ ಬೇಕಾದ ಹಾಗೆ ಇಲ್ಲ."

' ನಿಜ ' ಎಂದುಕೊಂಡಳು ಮೋಹಿನಿ. ಹೌದು. ನನಗಿಂದು ಎಲ್ಲವೂ ಬೇಡವಾಗಿದೆ. ಹಾಗೆ ಹೇಳಿದರೆ ' ಯಾಕೆ ? ' ಎಂದು ಮಾತ್ರ ಕೇಳಬಾರದು ಎಂದೂ ಹೇಳಿಕೊಳ್ಳಬಹುದಾಗಿತ್ತು ಆಕೆ.

" ಚಹ ಬೇಡವಾಗಿದ್ದರೂ ಕುಳಿತುಕೊಳ್ಳಲಿಕ್ಕೆ ಒಂದು ಸ್ಥಳವಾದರೂ ಸಿಕ್ಕುತ್ತಿತ್ತು "

" ನಮಗೆ ಕುಳಿತು ಮಾತನಾಡಲಿಕ್ಕೆ ಚಹದ ಅಂಗಡಿಯ ಹೊರತು ಬೇರೆ ಜಾಗವೆ ಇಲ್ಲವೆ ? "

" ಅದೇಕೆ ? ಮನೆಯೆ ಇದೆಯಲ್ಲ ! "

" ಯಾರ ಮನೆ ? "

ಮೋಹಿನಿ ಪ್ರಶ್ನೆಯನ್ನು ಸಹಜವಾಗಿಯೆ ಕೇಳಿದಳು. ಆದರೆ ಕೇಳಿದ ನಂತರ ತನ್ನ ಮನೆ ಕೂಡ ಯಾರದೊ ಮನೆಯಾದಂತಾಗಿದೆ ಎಂಬ ಭಾವನೆ

ಆಕೆಯಲ್ಲಿ ಮೂಡಿತ್ತು. ಬದುಕಿನಲ್ಲಿ ಅಂಥ ಅನಾಸ್ಥೆ ಮೂಡಿದ ಕ್ಷಣ ಅದು!

"ನಿನ್ನ ಮನೆ ಇಲ್ಲವೆ?" ಎಂದ ವಸಂತ.

"ನನ್ನ ಮನೆ—"

ಎಂದು ಅರ್ಧಕ್ಕೆಯೆ ತಡೆದ ಮೋಹಿನಿ 'ನನಗೆ ಮನೆ ಇಲ್ಲ' ಎಂದು ಗದ್ಗದಿತವಾಗಿ ಹೇಳಿದಂತಿತ್ತು.

"ಮನೆ ಬೇಡವಾದರೆ ಸಮುದ್ರದ ಕಡೆಗಾದರೂ ಹೋಗುವ"

"ಹೋಗೋಣವೆ?"

"ಹೋಗಲೇ ಬೇಕು!"

ಎಂದು ವಸಂತ ಹೇಳಿದಾಗ ತಾನು ದಾದರ್‌ನಲ್ಲಿ ಮಾಡಬೇಕಾದ ಕೆಲಸಗಳೆಲ್ಲವನ್ನೂ ಮರೆತಿದ್ದ ಮೋಹಿನಿಯು ಎದೆಯ ಮೊರೆತದ ಹೊರತು ಆ ಕ್ಷಣಕ್ಕೆ ಆತನ ಪ್ರಜ್ಞೆ ಯಾವುದನ್ನೂ ಗ್ರಹಿಸುವುದು ಸಾಧ್ಯವಿರಲಿಲ್ಲ.

"ಹಾಗಿದ್ದರೆ ಏನಾದರೂ ತಿಂದುಕೊಂಡೇ ಹೋಗುವ" ಎಂದಳು ಮೋಹಿನಿ ಕೊನೆಗೆ.

"ಎಲ್ಲಿ?"

"ಎಲ್ಲಿ ಏನು—'ನಮ್ಮ ಹೋಟಲು' ಇದ್ದೇ ಇದೆಯಲ್ಲ!"

ಎಂದು ನಸುನಕ್ಕಳು ಅದು ಚಿರಪರಿಚಿತವಾದ ನಸುನಗೆ. ಇಡಿಯ ಮಧ್ಯಾಹ್ನ ಮೋಡ ಮುಸುಕಿ ಸೂರ್ಯಾಸ್ತದ ಸಮಯಕ್ಕೆ ಮುಗಿಲ ತೆರೆ ಸರಿದಾಗ ಕ್ಷಿತಿಜ ಒಂದು ಕ್ಷಣದ ಮಟ್ಟಿಗೆ ನಕ್ಕು ನಲಿಯುವಂತೆ ಮೋಹಿನಿಯ ಮುಖದಲ್ಲಿ ಯಾವುದೊ ಒಂದು ಸಂತೋಷ ಕಾಣಿಸಿಕೊಂಡಿತು.

"ಆ ಹೋಟಲು ಎಂದರೆ ನಿನಗೆ ಬಹಳ ಇಷ್ಟವೆಂದು ಕಾಣುತ್ತದೆ"

"ಅದು ಹೋಟಲೇ ಅಲ್ಲ"

"ಅಂದರೆ?"

"ಅದು ಕರ್ಮಭೂಮಿ!"

ಮೋಹಿನಿಯ ಮುಖ ಮುಚ್ಚಂಜೆಯ ಗಭೀರಶಾಂತತೆಯನ್ನು ತಾಳಿತು. ಆಸೆನಿರಾಶೆಗಳ ತಾಕಲಾಟ ಹಗಲು ರಾತ್ರಿಗಳ ಕಾದಾಟದಂತೆ ಮುಕ್ತಾಯಗೊಂಡು ನಿರ್ವಿಕಾರವಾಗಿ ಎಲ್ಲವನ್ನೂ ಎಣಿಕೆಹಾಕಿ, ಬಂದದ್ದು ಬರಲಿ, ಎಂಬ ಧೈರ್ಯದಿಂದ ಮುಚ್ಚಂಜೆ ರಾತ್ರಿಯನ್ನು ಮುನ್ನೋಡುತ್ತ ನಿಂತ ಹಾಗಿತ್ತು.

ಉಪಾಹಾರವನ್ನು ಮುಗಿಯಿಸಿ ಅವರಿಬ್ಬರು ಸಮುದ್ರತೀರದ ಮಳಲಿನಲ್ಲಿ ಎಲ್ಲರಿಂದ ದೂರವಾಗಿದ್ದ ಸ್ಥಳವೊಂದನ್ನು ಹುಡುಕಿಕೊಂಡು ಬಂದು ಕುಳಿತಾಗ ಅಂಥದೇ ಮುಚ್ಚಂಜೆ ಅವರಿಗಾಗಿ ಕಾಯುತ್ತಿತ್ತು. ವರಲಿ–ಮಾಹಿಮ್ ಭೂಶಿರಗಳು ಅಲ್ಲಲ್ಲಿ ಮಿನುಗುತ್ತಿದ್ದ ದೀಪಗಳಿಂದ ಮಾತ್ರ ನಿಚ್ಚಳವಾಗಿ ಕಾಣುತ್ತಿದ್ದವು. ಕುಳಿತು ಐದು ನಿಮಿಷಗಳಾದರೂ ಮೋಹಿನಿ ಮಾತನಾಡದಿದ್ದುದನ್ನು ನೋಡಿ ವಸಂತನೆಂದ .

" ಏನು ಯೋಚಿಸುತ್ತಿರುವೆ, ಮೋಹಿನಿ ? "

" ಏನೂ ಇಲ್ಲ—"

" ಏನೂ ಇಲ್ಲದೆ ಹಾಗೆ ಸುಮ್ಮನಾಗಿರಲಿಕ್ಕಾಗುತ್ತದೆಯೆ ? "

" ಏನಿಲ್ಲವೆಂದರೂ ಇನ್ನುಮುಂದೆ ಹೇಗೆ ಎಂದು—"

" ಮತ್ತೆ ಕೆಲಸ ಬೇಡ ಎಂದೆಯಲ್ಲ—"

" ಕೆಲಸ ಸಿಕ್ಕಬಹುದು. ಆದರೆ—"

" ಆದರೆ ಏನು ?—"

" ನಾನು ಆಡಿ ಹೇಳಬೇಕೆ ? "

" ನಿನಗೆ ಅಷ್ಟೊಂದು ನಿರಾಶೆ ಯಾಕೆನಿಸಬೇಕು ? "

" ಅದೆಲ್ಲ ಹೇಳಲಾಗದ ಮಾತು. ಸುಳ್ಳು ಸಮಾಧಾನ ಹೇಳಿಕೊಂಡರೆ ಯಾತಕ್ಕೆ ಬಂತು ? "

" ನಿನ್ನಿಂದ ನಾನು ಕೊನೆಯಾಗಿ ದೂರವಾಗಿಬಿಡುತ್ತೇನೆಯೆ ? "

" ಆಗಲೇಬೇಕು ! ಅನಿವಾರ್ಯ ಅದು ! "

" ನಿನ್ನನ್ನೆಂದಾದರೂ ನಾನು ಮರೆಯುವುದು ಸಾಧ್ಯವೆ, ಮೋಹಿನಿ ? "

" ನಾನೇನು ಹೇಳಲಿ ? "

" ನಾನು ಹೇಳಬಲ್ಲೆ—"

" ನೀವು ಹೇಳುವುದು ಬೇಡ "

" ಹಾಗಿದ್ದರೆ ಈ ನಿರಾಶೆ ಯಾತಕ್ಕೆ ? "

" ಎಂಥ ಮಾತು ? ನಿರಾಶೆ—"

ಮೋಹಿನಿಗೆ ಮುಂದೆ ಮಾತನಾಡಲಾಗಲಿಲ್ಲ. ಕಣ್ಣಲ್ಲಿ ನೀರು ಚಿಮ್ಮಿತು.

" ನೀನು ನಿರಾಶಳಾಗಬೇಡ, ಮೋಹಿನಿ, ನಿರಾಶಳಾಗಬೇಡ."

ಎಂದು ಆಕೆಯ ತಲೆಗೂದಲನ್ನು ಸವರಿದ. ಮೋಹಿನಿಗೆ ದುಃಖ ತಡೆಯಲಾರದಾಗಿ ಬಂದಿತು. "ಅಯ್ಯೋ" ಎಂದು ನರಳಿದಳು ವಸಂತನ ತೊಡೆಯಲ್ಲಿ ತಲೆಯನ್ನಿರಿಸಿ ಬಿಕ್ಕಿಬಿಕ್ಕಿ ಅತ್ತಳು.

"ಸುಮ್ಮನಾಗು, ಮೋಹಿನಿ. ಇದು ನೋಡು—"

"ಅಯ್ಯೋ. ನನಗೆ ಯಾರೂ ಇಲ್ಲ—ನನಗೆ ಇಂದು ಯಾರೂ ಇಲ್ಲದ ಹಾಗಾಯಿತು—"

ಮೋಹಿನಿ ಅಸಹಾಯಳಾಗಿ ಅತ್ತಳು ವಸಂತನಿಗೆ ಮಾತು ತೋಚಲಿಲ್ಲ. ಬೆನ್ನ ಮೇಲೆ ಕೈಯಾಡಿಸುತ್ತ ನಿಧಾನವಾಗಿ ಹೇಳಿದ

"ಹೀಗೆ ನೀನು ಧೈರ್ಯ ಬಿಟ್ಟರೆ ಹೇಗೆ ನೋಡು—"

"ಅಯ್ಯೋ—"

"ನೀನು ಧೈರ್ಯ ಬಿಡಬೇಡ ಎಲ್ಲವೂ ತಾನಾಗಿಯೆ ಸರಿಯಾಗುತ್ತದೆ"

"ಏನು ಸರಿಯಾಗುತ್ತದೆಯೊ—" ಎಂದು ಎದ್ದು ಕುಳಿತಳು

"ನೀನು ಯಾವುದಕ್ಕೂ ಚಿಂತಿಸಬೇಡ. ನನ್ನಿಂದ ನೀನು ಯಾವಾಗಲೂ ಏನು ಬೇಕಾದುದನ್ನು ಪಡೆಯಬಹುದು"

ಆಕೆಗಾಗಿ ಕನಿಕರದಿಂದ ಸೂರೆಹೋದ ಹೃದಯದಿಂದ ಮಾತು ಹೊರಬಂದಿತ್ತು ಆದರೆ ಮರುಕ್ಷಣದಲ್ಲಿ ತನಗಾಗಿ ಕಾದುನಿಂತ, ತನ್ನ ಎಲ್ಲವನ್ನೂ ಸೂರೆಮಾಡಬಲ್ಲ ಶಕುಂತಲೆಯ ಚಿತ್ರ ವಸಂತನ ಕಣ್ಣೆದುರು ಸುಳಿಯದಿರಲಿಲ್ಲ. ಮೋಹಿನಿ ಮುಖವನ್ನು ಸೆರಗಿನಿಂದ ಒರಸಿಕೊಳ್ಳುತ್ತಿದ್ದಳು. ನಿಧಾನವಾಗಿ ಆಕೆಯ ಹೃದಯದಲ್ಲಿ ಧೈರ್ಯ ಉದಯಿಸುತ್ತಿದ್ದ ಹಾಗಿತ್ತು.

"ನಿಮಗೆ ನಾನು ಸುಮ್ಮನೆ ತೊಂದರೆ ಮಾಡಿದೆ—" ಎಂದಳು ಕೊನೆಗೆ.

"ಅಂಥದೆಲ್ಲ ಮಾತು ಬೇಡ, ಮೋಹಿನಿ"

"ನೀವು ಸುಮ್ಮನೆ ನನ್ನ ಯೋಚನೆಯನ್ನು ಕಟ್ಟಿಕೊಂಡು—"

"ಆ ಮಾತು ಯಾಕೆ? ಮುಖ್ಯ ನೀನು ಸುಖವಾಗಿರಬೇಕು."

"ಆ ಆಸೆ ನನಗಿಲ್ಲವೆ?"

"ಅದರ ಜೊತೆಗೆ ಧೈರ್ಯವೂ ಬೇಕು."

"ಅದೇಕೊ ಇಂದು ಪೂರ್ತಿ ನಿರಾಶೆಯೆನಿಸಿತು"

"ನನ್ನ ಮಾತು ಕೇಳಿಯಾದಮೇಲೆಯೆ?"

" ಇಲ್ಲ. ಅದಕ್ಕೂ ಮೊದಲೆ—"

" ನಿರಾಶಳಾಗಬೇಕಾದದ್ದೆ ಇಲ್ಲ. ಧೈರ್ಯಬಿಟ್ಟರೆ ಧ್ಯೇಯ ಹೋಯಿತು."

" ಏನು ಮಾಡಲಿ ?—"

" ಒಂದು ಮಾತನ್ನು ನಿನಗೆ ಎಂದಿಗೋ ಹೇಳಿದ್ದೇನೆ, ಮೋಹಿನಿ. ಬರಿಯ ಸ್ವಾತಂತ್ರ್ಯ ಸಾಲದು ತನ್ನಮಟ್ಟಿಗೆ ಹೊಟ್ಟೆಹೊರೆದುಕೊಂಡಿರುವುದು ಯಾವ ದೊಡ್ಡ ಮಾತು ? ಅದರಿಂದ ಬಾಳು ಪೂರ್ತಿಯಾಗುವುದಿಲ್ಲ ಸುಖವೂ ಸಿಕ್ಕುವುದಿಲ್ಲ "

" ಆ ಇಲ್ಲದ್ದು ಪೇಟೆಯಲ್ಲಿ ಸಿಕ್ಕುವ ಸರಕಲ್ಲವಲ್ಲ ! "

" ಸರಿ ಆದರೂ—"

" ನಿಮ್ಮ ಸಹಾನುಭೂತಿ ನನಗೆ ಸಾಕು ! "

" ಆದರೆ ಅದರಿಂದ ಯಾವ ಪ್ರಯೋಜನವೂ ಇಲ್ಲ "

" ನಿಮಗೆ ಹಾಗೆನಿಸಬಹುದು. ನನಗೆ ಬೇರೆ ಏನೂ ಬೇಕಾಗಿಲ್ಲ."

" ನಿನ್ನ ಮನಸ್ಸನ್ನೇ ನೀನು ತಿಳಿದಿಲ್ಲ. ಇಂದಿಲ್ಲ ನಾಳೆ—"

" ಎಂದಿನದೊ ಯೋಚನೆಯನ್ನು ಕಟ್ಟಿಕೊಂಡು ಒದ್ದಾಡುವುದೇ ನನಗೆ ಬೇಡವಾಗಿದೆ. ಇಂದಿನ ಕಷ್ಟವೆ ಬೇಕಾದಷ್ಟಿದೆ. ನಾಳೆಗೆ ದೇವರಿದ್ದಾನೆ."

" ದೇವರೆ ! " ಎಂದು ವಸಂತ ನಕ್ಕ—ಮೋಹಿನಿಯನ್ನು ನಗಿಸಲೆಂದು.

" ದೇವರೆನ್ನಿ—ದೈವತವೆನ್ನಿ—ಬೇಕಾದ ಹೆಸರು ಕೊಡಿರಿ."

" ಅಂತೂ—"

" ಯೋಚನೆ ಮಾಡಿದಷ್ಟೂ ತೊಂದರೆ. ಅದು ಎಲ್ಲಿಗೂ ನಿಲುಕುವುದಿಲ್ಲ. ಈ ನಾಲ್ಕು ದಿನಗಳಲ್ಲಿ ಅಷ್ಟನ್ನು ಕಂಡುಕೊಂಡಿದ್ದೇನೆ. ಬದುಕನ್ನು ನಾವು ನಡಸುತ್ತೇವೆ ಎನ್ನುವುದು ಒಂದು ಒಣ ಹೆಮ್ಮೆ ಎಂದು ಕಾಣುತ್ತದೆ. ಬದುಕು ಸಾಗುತ್ತದೆ—ತನ್ನ ದಾರಿಯಲ್ಲಿ. ಇದೇ ನಿಜ."

" ಹೀಗೆ ಕೈಬಿಟ್ಟರೆ—"

" ಕೈಹಿಡಿಯುವ ಮಾತೇ ಇಲ್ಲ. ಬದುಕೇ ನಮ್ಮ ಕೈಹಿಡಿದಿರುತ್ತದೆ—ಬಿಗಿದಿರುತ್ತದೆ. ಬಿಗಿದ ಕೈ ಬೇರೆ ಏನನ್ನು ಹಿಡಿದೀತು ? "

" ಪರಿಸ್ಥಿತಿಯನ್ನೇ ಬದಲಾಯಿಸಬೇಕು—ಬದಲಾಯಿಸುವೆ—ಎಂದಿದ್ದೆಯಲ್ಲ ಹಿಂದೊಮ್ಮೆ ! "

" ಬದಲಾಯಿಸಬೇಕು, ಎಂದಿದ್ದೆ. ಆ ಆಸೆ ಯಾವಾಗಲೂ ಇದೆ. ಅದಿಲ್ಲದಿದ್ದರೆ ಬದುಕಬೇಕಾದದ್ದೇ ಇಲ್ಲ ! "

" ಹಾಗಿದ್ದರೆ ಸಿಕ್ಕಲಾರದ್ದನ್ನು ಹುಡುಕುವುದೇ ಬದುಕು ಎಂದಾಯಿತು " ಎಂದು ವಸಂತ ನಕ್ಕ.

" ಸಿಕ್ಕಲಾರದ್ದನ್ನಲ್ಲ ಸಿಕ್ಕಬಹುದಾದದ್ದನ್ನು. ಅದನ್ನು ಹುಡುಕುವುದರಲ್ಲಿ ಸಂತೋಷವಿದೆ. ಅದರಲ್ಲಿ ಮೈಮರೆಯುವುದೇ ಸುಖ. ನಾನು ತಿಳಿದುಕೊಂಡದ್ದಂತೂ ಇಷ್ಟು. ಇದರ ಹೊರತು ನನಗೆ ಬೇರೆ ಯಾವುದೂ ತೋಚುವುದಿಲ್ಲ."

ವಸಂತ ಸುಮ್ಮನಾದ ಆಗಲೆ ಕತ್ತಲಾಗಿ ಹೋಗಿತ್ತು. ಆಚೆ ಈಚಿನ ಜನಗಳು ನಿಧಾನವಾಗಿ ಹಿಂದಿರುಗುತ್ತಿದ್ದರು ದೂರದ ದೀಪಗಳು ನಿರಿನಿರಿಯಾಗಿ ಓಲಾಡುತ್ತಿದ್ದ ಸಾಗರದ ನೀರಿನಲ್ಲಿ ಉದ್ದುದ್ದವಾಗಿ ತೇಲಿಬರುತ್ತಿದ್ದಂತಿದ್ದವು ಅವನ್ನೇ ದಿಟ್ಟಿಸುತ್ತಿದ್ದ ಮೋಹಿನಿ ಕೇಳಿದಳು

" ಅದೆಲ್ಲ ಹೋಗಲಿ, ನಿಮಗೆ ಮದುವೆ ಯಾವಾಗ ? "

ಮನಸ್ಸಿನ ದುಗುಡ ಪೂರ್ತಿಯಾಗಿ ಮಾಯವಾದಂತೆನಿಸಿತು ವಸಂತನಿಗೆ.

" ಡಿಸೆಂಬರ್ ಕೊನೆಯ ವಾರ."

" ಅಂದರೆ ಇಡೀ ವಾರ ಮದುವೆಯೆ ? " ಎಂದು ಮೋಹಿನಿ ನಕ್ಕಳು.

" ದಿವಸವನ್ನು ನಾನೇ ಗೊತ್ತುಮಾಡಬೇಕಾಗಿದೆ. ಅದು ಇಲ್ಲಿ ಹಾಲ್ ಸಿಕ್ಕುವುದರ ಮೇಲೆ ಅವಲಂಬಿಸಿದೆ."

" ಅಂದರೆ, ಮದುವೆ ಇಲ್ಲಿಯೆ ? "

" ಯಾಕೆ ? ಇಲ್ಲಿ ಆಗಬಾರದಾಗಿತ್ತೆ ? "

" ಅದೇಕೆ ? ಒಳ್ಳೆಯದೇ ಆಯಿತು "

" ಒಳ್ಳೆಯದೇನು ? ನಮ್ಮ ಮಾವಂದಿರ ಮನಸ್ಸಿನಲ್ಲಿ ಹಾಗಿರಲಿಲ್ಲ."

" ನೀವೇ ಹಟ ಹಿಡಿದಿರಾ ? "

" ಹೌದು "

" ಯಾಕೆ ? "

" ಯಾಕೇನು ? ನಿಮ್ಮನ್ನೆಲ್ಲ ಇಲ್ಲಿ ಬಿಟ್ಟು ನಾನೊಬ್ಬನೆ ಎಲ್ಲಿಯಾದರೂ ಹೋಗಿ ಮದುವೆಯಾಗುವುದೆ ? "

" ಹಾಗಿದ್ದರೆ ನಾನು ಮದುವೆಗೆ ಬರಲೇಬೇಕಾಯಿತಲ್ಲ ! "

"ಬರುವುದಿಲ್ಲವೆ ?"

"ಬರದೆ ಇರುತ್ತೇನೆಯೆ ? ಇದೊಳ್ಳೆಯ ಮಾತು ! ಆದರೆ ಬಂದರೆ—"

"ಆದರೆ ಏನು ಬಂತು ಮತ್ತೆ ?"

"ನಿಮಗೆ ತೊಂದರೆಯೆನಿಸದಿದ್ದರೆ ಬರುತ್ತೇನೆ."

"ಅದೇ ಮಾತನ್ನು ನಾನು ನಿನಗೂ ಹೇಳಬಹುದು."

"ನನಗೆ ಹೇಳಬೇಕಾದದ್ದಿಲ್ಲ !"

"ಇಲ್ಲವೆ ?"

"ಖಂಡಿತವಾಗಿಯೂ ಇಲ್ಲ."

"ಹಾಗಿದ್ದರೆ ಬಂದೇಬರಬೇಕು"

"ಅವರ ಪರಿಚಯ ಮಾಡಿಕೊಡುತ್ತೀರಾ ?"

"ತಾನಾಗಿಯೇ ಆಗುತ್ತದೆ !"

"ನಾನು ಅವರನ್ನು ಮೊದಲಿಗೆಯೇ ನೋಡಿದ್ದರೆ—"

"ಏನು ಮಾಡುತ್ತಿದ್ದೆ ? ಇವರನ್ನು ಮಾಡಿಕೊಳ್ಳಬೇಡ ಎಂದು ಹೇಳುತ್ತಿದ್ದೆಯಾ ?"

"ಛೀ, ಎಂಥ ಮಾತು ? ನಾನು ಅಷ್ಟು ಸ್ವಾರ್ಥಿ ಅನ್ನುತ್ತೀರಾ ?"

"ಹಾಗಾದರೆ ಏನು ಮಾಡುತ್ತಿದ್ದೆ ?"

"ಏನೂ ಇಲ್ಲ ನೋಡುತ್ತಿದ್ದೆ. ಇನ್ನೇನು ?"

"ಅಷ್ಟನ್ನು ಯಾವಾಗಲೂ ಮಾಡಬಹುದು—"

"ಅಂದರೆ ಈಗ ಇಲ್ಲಿಯೇ ಇದ್ದಾರೆಯೆ ?"

"ಹುಂ—ಒಂದು ದೃಷ್ಟಿಯಿಂದ !"

"ಅಂದರೆ ?—"

"ಅಂದರೆ ಆಕೆಯನ್ನು ನೋಡಲು ನೀನು ಬಹಳ ದೂರ ಹೋಗಬೇಕಿಲ್ಲ !"

"ದಾವರಿನಲ್ಲಿ ಇದ್ದಾರೆಯೆ ?"

"ಇಲ್ಲ. ರಾಯಚೂರಿನಲ್ಲಿ !"

"ಹಾಗಿದ್ದರೇನು ನೋಡುತ್ತೇನೆ, ನನ್ನ ತಲೆ !"

"ನೀನು ಕನ್ನಡಿಯಲ್ಲಿ ಒಮ್ಮೆ ನೋಡಿದರೆ—ಆಕೆಯನ್ನು ನೋಡಿದಂತೆಯೆ ?"

" ಹೌದೆ ? "

" ಅಂತೆಯೆ ಒಪ್ಪಿದೆ ! "

ಎಷ್ಟೋ ಹೊತ್ತು ಮಾತನಾಡಿಯೇ ಆಡಿದರು. ಕೆಲಸ ಸಿಕ್ಕಲು ತೊಂದರೆ ಯಾದರೆ ಬೇಕಾದಾಗ ಬಂದು ಹೇಳಿದರೆ ತನ್ನಿಂದಾದ ಸಹಾಯದ ಆಶ್ವಾಸನ ವನ್ನು ವಸಂತ ಮತ್ತೆ ಮತ್ತೆ ಹೇಳಿದ ಮೋಹಿನಿಯನ್ನು ಬಲು ದಿನದಿಂದ ಕಾಡು ತ್ತಿದ್ದ ದುಗುಡ ವಸಂತನ ಸಹಾನುಭೂತಿಯ ಮಾತುಗಳಲ್ಲಿ ಮರೆಯಾಯಿತು. ಒಂದು ದೃಷ್ಟಿಯಿಂದ ವಸಂತ ದೂರವಾಗುತ್ತಿದ್ದರೂ ನಿಜವಾಗಿಯೂ ವಸಂತ ತನ್ನ ಹತ್ತಿರವೇ ಉಳಿದ ಎಂದು ತೋರಿತು. ಆತ ಮದುವೆಯಾದನಂತರ ತನಗೊಂದು ಮನೆಯಾಯಿತು ಎನ್ನುವ ಮಟ್ಟಿನ ಸಮಾಧಾನ ಮೋಹಿನಿಯ ಮನಸ್ಸನ್ನಾವರಿಸಿತು

" ಬರೀ ಮಾತಾಯಿತು. ಆದರೆ ನಿನ್ನ ಮುಂದಿನ ಯೋಚನೆಯನ್ನು ಹೇಳಲೇ ಇಲ್ಲವಲ್ಲ ! " ಎಂದ ವಸಂತ

" ಯಾವ ಯೋಚನೆಯೂ ಇಲ್ಲ—ಸದ್ಯಕ್ಕಂತೂ ನೋಡಬೇಕು."

" ಹಾಗಿದ್ದರೆ ಆವರೆಗೆ ನಮ್ಮಲ್ಲಿಯ ಕೆಲಸವನ್ನೇಕೆ ಒಪ್ಪಬಾರದು ? "

" ಅದಾದರೂ ನನಗಾಗಿ ಕಾದಿಟ್ಟ ಹಾಗೆ ಕೇಳುತ್ತೀರಲ್ಲ ? "

" ಅದೇನು, ಕಾದಿಟ್ಟ ಹಾಗೆಯೆ ಇದೆ. ನನ್ನ ಮಾತು ಅಷ್ಟೂ ನಡೆಯು ವುದಿಲ್ಲವೆ ? "

" ಆದರೂ ಈಗ ಬೇಡ. ಇನ್ನೊಂದು ಕಡೆಗೆ ಪ್ರಯತ್ನ ಮಾಡುತ್ತೇನೆ. ಅಲ್ಲಿ ಹೊಂದದಿದ್ದರೆ—"

" ಇನ್ನೊಂದು ಕಡೆ ಎಲ್ಲಿ ? "

" ಇಲ್ಲಿಯ ಶಾರದಾ ಸ್ಟುಡಿಯೋಸ್‌ನಲ್ಲಿ ? "

" ಅಂದರೆ ? ಚಿತ್ರದಲ್ಲಿ ಕೆಲಸ ಮಾಡುವುದೆ ? "

" ಯಾಕೆ ? ಮಾಡಬಾರದೆ ? "

" ಬಾರದು ಎಂದಲ್ಲ. ಆದರೆ—"

ತನ್ನ ಅನುಮಾನವನ್ನು ಹೇಳಿ ಆಕೆಯನ್ನು ಅಸಮಾಧಾನ ಪಡಿಸುವುದು ವಸಂತನಿಗೆ ಆ ಕ್ಷಣದಲ್ಲಿ ಎಷ್ಟುಮಾತ್ರವೂ ಬೇಡವಾಗಿತ್ತು.

" ಏನು ? "

" ಅಂದರೆ ಅಲ್ಲಿಯಾದರೂ ನಿನಗಾಗಿ ಕೆಲಸ ಕಾದಿದೆಯೆ ಎಂದೆ "

" ಹುಂ. ಕಾದಿಟ್ಟ ಹಾಗೆಯೆ ಇದೆ ಇದುವರೆಗೆ ನಾನೇ ಮುಂದೂಡಿದ್ದೆ. ಹಾಗೆ ನೋಡಿದರೆ ಪ್ರತ್ಯಕ್ಷವಾಗಿ ನನ್ನ ವರೆಗೆ ಸೂಚನೆ ಬಂದೇ ಇಲ್ಲ ಅದಕ್ಕೆಯೆ ಪ್ರಯತ್ನ ಎಂದದ್ದು "

" ನೋಡು, ಇನ್ನೊಂದು ಬಾರಿ ಯೋಚನೆ ಮಾಡು "

" ಯೋಚನೆ ಏನು ಬಂತು ? ಅಲ್ಲಿಯೂ ನನಗೆ ಗೊತ್ತಿನ ಜನರಿದ್ದಾರೆ "

ಎಂದು ತನ್ನ ಅನುರಾಧೆಯ ಸಂಬಂಧವನ್ನು, ಆವಟೆ ರಂಗನಾಥನ್‌ರ ಸಮಾಚಾರವನ್ನು ವಿವರವಾಗಿ ಹೇಳಿದಳು ಕೊನೆಗೆ ವಸಂತನೆಂದ

" ಅಂತೂ ನೀನು ಸ್ಟಾರ್ ಆಗುವವಳು ಎಂದಹಾಗಾಯಿತು ! "

" ಸ್ಟಾರ್ ಅಲ್ಲ, ಯಾವುದೂ ಅಲ್ಲ ಹೊಟ್ಟೆಗೊಂದು ಹಾದಿ, ಅಷ್ಟೆ ! "

" ಅಷ್ಟೆಯೆ ? "

" ಮತ್ತಿನ್ನೇನು ? "

" ನೋಡುವಾ. ಈಗ ಯಾಕೆ ? "

ಚಿತ್ರಪಟ ಪ್ರಪಂಚವನ್ನು ಆಕೆ ಸೇರುವುದರ ಬಗ್ಗೆ ವಸಂತ ಅಷ್ಟೊಂದು ಉತ್ಸಾಹ ತೋರುವಂತಿರಲಿಲ್ಲವಾದರೂ ಆಕೆ ಅಲ್ಲಿ ಪ್ರವೇಶಿಸಿದ್ದೇ ಆದರೆ ನಿಜವಾಗಿಯೂ ಆಕೆ ಸ್ಟಾರ್ ಆಗಬಹುದು ಎಂಬುದರಲ್ಲಿ ಆತನಿಗೆ ಸಂದೇಹವೂ ಇರಲಿಲ್ಲ. ಹಾಗೆಂದೇ ' ಈಗ ಯಾಕೆ ? ' ಎಂದು ಆತ ಹೇಳಿದ್ದು.

ಅಲ್ಲಿಂದ ಅವರಿಬ್ಬರೂ ಎದ್ದಾಗ ವೇಳೆ ಎಂಟೂವರೆಯಾಗಿ ಹೋಗಿತ್ತು. ಮಾತನಾಡುತ್ತಲೆ ಕೊಹಿನೂರ್ ಮಿಲ್ಸ್ ವರೆಗೆ ಬಂದರು. ಅಲ್ಲಿ ನಿಂತು ಮತ್ತೆ ಹತ್ತು ನಿಮಿಷ ಮಾತು ನಡೆಯಿತು ವೇಳೆಯಾಗುತ್ತಿದೆಯೆಂಬುದು ಇಬ್ಬರಿಗೂ ತಿಳಿದಿತ್ತು. ಆದರೆ ಇಬ್ಬರಿಗೂ ಅಗಲುವುದು ಬೇಡವಾದಂತಿತ್ತು. ಆಕೆಯ ಕೈಯನ್ನು ತನ್ನ ಕೈಯಲ್ಲಿ ಹಿಡಿದುಕೊಂಡೇ ಮೂರನೆಯ ಬಾರಿ ವಸಂತ ಕೇಳಿದ : " ನಾನಿನ್ನು ಹೊರಡಲಾ ? " ಎಂದು " ಹೊರಡುವಿರಂತೆ. ಏನಂಥ ಅವಸರ ? " ಎಂದು ಮೊದಲು ಬಾರಿ ಹೇಳಿದವಳು ಎರಡನೆಯ ಬಾರಿ " ಬೋರಿವಲಿಯಲ್ಲಿ ಶಕುಂತಲಾದೇವಿ ದುಷ್ಯಂತನಿಗಾಗಿ ಕಾದಿಲ್ಲವಷ್ಟೆ ! " ಎಂದಿದ್ದಳು. " ಹಾಗಾದರೆ ನೀನು ಹಂಸಪದಿಕೆ ಏನು ? " ಎಂದಿದ್ದ ವಸಂತ. " ಅಹುದೊ ಅಲ್ಲವೊ. ನನ್ನ ಹಾಡು ಕಿವಿಯಲ್ಲಿ ಉಳಿದರೆ ಸಾಕು ! ಆದರೆ ಹಾಡಿನಿಂದ

ಮನಸ್ಸಿಗೆ ನೋವಾಗುವುದು ಮಾತ್ರ ಬೇಡ!" ಏನೇನೋ ಮಾತು ನಡೆಯುತ್ತಿತ್ತು. ಕೊನೆಯಾಗಿ ವಸಂತನೆಂದ "ನಿಜವಾಗಿಯೂ ತೀರ ತಡವಾಯಿತು. ಈಗಲೆ ಒಂಬತ್ತು ಗಂಟೆ. ಹೊರಡುವೆ" ಎಂದು ಮತ್ತೆ ಮೂರು ಬಾರಿ ಗಟ್ಟಿಯಾಗಿ ಕೈಯನ್ನು ಅದುಮಿ ಸರಿದ. "ಹೊರಡುವೆಯಾ?" ಎಂದು ಕೇಳಿದ. "ನೀವು ಹೊರಡಿ" ಎಂದಳು. ವಸಂತ ಹೊರಟ. ಮೋಹಿನಿ ನಿಂತಲ್ಲಿಯೇ ನಿಂತಿದ್ದಳು ದೀಪದ ಕಂಬಕ್ಕೆ ಆತುಕೊಂಡು ವಸಂತನನ್ನೇ ನೋಡುತ್ತಿದ್ದಳು ಹಿಂದಿರುಗಿ ನೋಡಿದ ವಸಂತ ಕತ್ತಿನಿಂದಲೇ ಸನ್ನೆ ಮಾಡಿದ 'ಇನ್ನು ಹೋಗು' ಎಂದು ಮೋಹಿನಿ ನಿಧಾನವಾಗಿ ಚೇತರಿಸಿಕೊಂಡು ಕಾಲೆಳೆಯುತ್ತ ಕೋಣೆಯ ದಾರಿಯನ್ನು ಹಿಡಿದಳು.

## ೧೬

ದಾದರಿನಲ್ಲಿ ಮೋಹಿನಿಯನ್ನು ಬೀಳ್ಕೊಟ್ಟು ಬಂದಾಗಿನಿಂದ ವಸಂತನಿಗೆ ಒಂದು ದೃಷ್ಟಿಯಿಂದ ಸಮಾಧಾನವೆನಿಸಿತ್ತಾದರೂ ಇನ್ನೊಂದು ದೃಷ್ಟಿಯಿಂದ ಆತನ ಒಳಮನಸ್ಸು ಎಲ್ಲಿಯೋ ಅಳುಕುತ್ತಿತ್ತು. ದಾದರ್ ನಿಲ್ದಾಣದ ವರೆಗೆ ದಾರಿ ನಡೆಯುತ್ತಿದ್ದಾಗ, ಲೋಕಲ್ ಗಾಡಿಯನ್ನು ಹತ್ತಿ ಬೋರಿವಲಿಯನ್ನು ಸೇರುತ್ತಿರುವಾಗ, ಮನೆಗೆ ಬಂದು ಹಾಸಿಗೆ ಬಿಡಿಸಿ ಮಲಗಿದಾಗ, ಆತನ ಮನಸ್ಸು ಅಂದು ಸಾಯಂಕಾಲ ನಡೆದ ಸನ್ನಿವೇಶವನ್ನೇ ನೆನೆಯುತ್ತಿದ್ದಿತು. ತನ್ನ ಮದುವೆ ಗೊತ್ತಾದ ಸಮಾಚಾರವನ್ನು ಮೊದಲಿಗೆಯೇ ತಿಳಿಸಿದ್ದರೆ ಸಾಯಂಕಾಲದ ಉತ್ಕಟವಾದ ಸಂದರ್ಭವನ್ನು ತಪ್ಪಿಸಿ ಮೋಹಿನಿಗೆ ನೋವನ್ನುಂಟುಮಾಡದಿರಬಹುದಿತ್ತು ಎಂದು ತೋರಿತು. ಆದರೆ ಅದನ್ನೆಲ್ಲ ಇನ್ನು ಯೋಚಿಸಿ ಆಗಬೇಕಾದುದೇನು? ಇಂದು ಆಕೆಗೆ ಎಲ್ಲಿಯಾದರೂ ಕೆಲಸ ಮಾಡಬೇಕೆಂಬ ಆಸೆ–ಅಗತ್ಯಗಳಿದ್ದರೂ ಕೆಲಸವಿಲ್ಲ. ತನ್ನ ಆಫೀಸಿನಲ್ಲಿಯೆ ಎಲ್ಲಿಯಾದರೂ ಕೆಲಸ ಕೊಡಿಸುತ್ತೇನೆಂದರೆ ಬೇಡ ಎಂದು ಖಂಡಿತವಾಗಿ ಹೇಳಿದ್ದಳು ಯಾಕೆ? ಈ ಪ್ರಶ್ನೆ ವಸಂತನನ್ನು ಬಹಳ ಹೊತ್ತು ನೋಯಿಸಿತು ತನ್ನ ಮದುವೆಯ ಸಮಾಚಾರ ತಿಳಿದ ಕ್ಷಣಕ್ಕೆ ಆಕೆ ಧೃತಿಗೆಟ್ಟಿದ್ದಳು, ನೊಂದಿದ್ದಳು, ದಾರಿಗಾಣದಂತಿದ್ದಳು—ನಿಸ್ಸಂದೇಹವಾಗಿ. ಆದರೆ ನಿರುಪಾಯವಾಗಿಯೆಂದೆ ಆಕೆ ಎಲ್ಲವನ್ನೂ ಬಂದದ್ದು ಬರಲಿ ಎಂಬ ಮನೋವೃತ್ತಿಯನ್ನು ಸ್ವೀಕರಿಸಿ ನಿರ್ವಿಕಾರವಾಗಿ, ಶಾಂತವಾಗಿ ಮಾತನಾಡಿದ್ದಳಲ್ಲವೆ? ಬೀಳ್ಕೊಡುವಾಗ ನಕ್ಕು ಮಾತನಾಡಿದ್ದಳು. ಮದುವೆ ಮುಂಬಯಿಯಲ್ಲಿ ಎಂದಾಗ ಉತ್ಸಾಹವನ್ನೂ ತೋರಿದ್ದಳು. ಆದರೆ ಏನಿದ್ದರೂ ಆಕೆಗೆ ನೋವಾಗಿರಲಿಲ್ಲವೆಂದು ಹೇಳುವಂತಿರಲಿಲ್ಲ. ಹಾಗಾದರೆ ತಾನೇನು ಮಾಡಬೇಕು? ಏನು ಮಾಡಬಹುದು? ತಾನು ನಿಜವಾಗಿಯೂ ಒಂದಿಲ್ಲೊಂದು ಬಗೆಯಲ್ಲಿ ಮೋಹಿನಿಗೆ ಉಪಯೋಗವಾಗದ ಹೊರತು ಆಕೆಯ ಎದೆಯಲ್ಲಿ ಅಪರಿಹಾರ್ಯವಾಗಿ ಅಡಗಿ ಕೊರೆಯುತ್ತಿರಬಹುದಾದ ನೋವನ್ನು ನೀಗಿಸುವುದು ಸಾಧ್ಯವಿಲ್ಲವೆನಿಸಿತು. ಏನನ್ನು ಮಾಡಬಹುದು? ಆನಂದನನ್ನು ಮಾತನಾಡಿಸಕೂಡದೆಂದು ಎಷ್ಟೋ ಬಾರಿ ಆಕೆ ಹೇಳಿದ್ದಳು. ಆನಂದನೇ ಆಕೆಯ ಬಾಗಿಲ ವರೆಗೆ ಹೋಗಿದ್ದರೂ ಆತನನ್ನು

ಸ್ಪಷ್ಟವಾಗಿ, ನಿರ್ದಾಕ್ಷಿಣ್ಯವಾಗಿ ನಿರಾಕರಿಸಿದ್ದಳು ಎಂದಮೇಲೆ ಆನಂದನನ್ನು ಮಾತನಾಡಿಸುವುದರಲ್ಲಿ ಇನ್ನು ಯಾವ ಪ್ರಯೋಜನ ? ಆದರೆ ಎಷ್ಟು ಯೋಚಿಸಿದರೂ ಆನಂದ ಮೋಹಿನಿಯರು ಹಿಂದೆ ನಡೆದ ವಿರಸಗಳೆಲ್ಲವನ್ನು ಮರೆತು ಮತ್ತೆ ಹೊಂದಿಕೆಯಾಗಿ ಇರುವುದೇ ಒಂದು ಮಾರ್ಗ, ಬೇರೆ ಯಾವ ಮಾರ್ಗದಿಂದಲೂ ಇಬ್ಬರಿಗೂ ಸುಖ ಸಿಕ್ಕಲಾರದೆಂದುಕೊಂಡ ತನ್ನ ಸಕಲ ಸಾಮರ್ಥ್ಯವನ್ನೂ ಬಳಸಿ ಕೊನೆಯಾಗಿ ಯತ್ನಿಸುವುದು ಎಂದು ಸಮಾಧಾನ ತಂದುಕೊಂಡ ಎಷ್ಟೋ ದಿವಸ ಆನಂದ ಸಿಕ್ಕಿರಲಿಲ್ಲ ಆತ ತಾನಾಗಿಯೇ ತನ್ನೆಡೆಗೆ ಬರುತ್ತೇನೆಂದು ಹೇಳಿದವ ಯಾಕೆ ಬರಲಿಲ್ಲವೊ ! ಮೋಹಿನಿಯಿಂದ ನಿರಾಕರಿಸಲ್ಪಟ್ಟ ಮೇಲೆ ಬರಲು ಕಾರಣವೂ ಉಳಿದಿರಲಿಲ್ಲ ಆತ ಬರದಿದ್ದರೇನಾಯಿತು ? ತಾನಾಗಿಯೆ ಆತನನ್ನು ಮರುದಿನ ಮುಂಜಾನೆ ಏನಾದರೊಂದು ನೆಪ ಹೂಡಿಕೊಂಡು ಕಂಡರಾಯಿತು. ಆತನ ಮನಸ್ಸನ್ನಾದರೂ ತಿಳಿಯಲಾದೀತು. ಅಷ್ಟು ತಿಳಿದ ಮೇಲೆ ಮುಂದಿನ ಯೋಚನೆ ಹೀಗೆಂದು ಆನಂದನನ್ನು ಮಾತನಾಡಿಸುವುದೆ ಒಳ್ಳೆಯದೆಂದು ನಿರ್ಧರಿಸಿ ನಿದ್ರೆಹೋದ.

ಆನಂದನನ್ನು ಕಾಣಲೆಂದು ಬೆಳಗಿನ ಎಂಟು ಗಂಟೆಯ ಸುಮಾರಿಗೆ ಹೊರಟು ನಿಂತಾಗ ವಸಂತನೆಂದುಕೊಂಡ ಆನಂದ ಒಬ್ಬನಾಗಿಯೆ ಸಿಕ್ಕುವುದು ಹೇಗೆ ? ಆತನ ಅಕ್ಕನನ್ನಾಗಲಿ, ನಾರಾಯಣರಾಯರನ್ನಾಗಲಿ ಕಾಣುವುದು ಆತನಿಗೆ ಬೇಡವಾಗಿತ್ತು. ಹೇಗಿದ್ದರೂ ಹೆಚ್ಚಾದರೆ ಆನಂದನನ್ನು ಹೊರಗಿನಿಂದಲೆ ಕರೆದರಾಯಿತೆಂದು ಹೊರಬಿದ್ದವನಿಗೆ ಆ ಸಂದರ್ಭವೆ ಒದಗಲಿಲ್ಲ. ಹತ್ತಿಪ್ಪತ್ತು ಹಜ್ಜೆ ಹೋಗುವಷ್ಟರಲ್ಲಿಯ ಕೈಚೀಲವೊಂದನ್ನು ಹಿಡಿದುಕೊಂಡು ಆನಂದನೇ ಇದಿರಾಗಿ ಬಂದ " ಏನು ? ಬೆಳಗಿನಲ್ಲಿಯೆ ಎಲ್ಲಿಯೊ ಹೊರಟ ಹಾಗಿದೆಯಲ್ಲ ? " ಎಂದು ವಸಂತ ಮಾತಿಗೆ ಮೊದಲುಮಾಡಿದ ಬಾಯಿಂದ ಆ ಮಾತನ್ನು ಹೇಳಿದ್ದರೂ ನೇರವಾಗಿ ಮಾತಿಗೆ ಆತನನ್ನು ಹೇಗೆ ಎಳೆಯುವುದು ಎಂಬುದೆ ಆತನಿಗೆ ಮುಖ್ಯವಾದ ಯೋಚನೆಯಾಗಿತ್ತು.

" ಎಲ್ಲಿಯೂ ಇಲ್ಲ. ಇಲ್ಲಿಯೆ ಒಂದಿಷ್ಟು ಕಿರಾಣಿ ಅಂಗಡಿಯ ವರೆಗೆ ಹೋಗಿ ಬರಬೇಕಿತ್ತು. ನೀವು ? "

" ನೀವು ಕಿರಾಣಿಯ ಅಂಗಡಿಗಾದರೆ ನಾನು ವಾಶಿಂಗ್ ಕಂಪೆನಿಗೆ ! ಕೆಲಸವಿಲ್ಲದೆ ಬೆಳಗಿನ ಅವಸರದಲ್ಲಿ ಎಲ್ಲಿ ಹೊರಗೆ ಹೋಗಲಾಗುತ್ತದೆ ?

ಮೊನ್ನೆಯೇ ಬರಬೇಕಾಗಿದ್ದ ಬಟ್ಟೆ ಇಂದಿಗೂ ಬರಲಿಲ್ಲ—" ಎಂದು ಸುಮ್ಮನೆ ಕಾರಣವೊಂದನ್ನು ಮುಂದೂಡಿದ.

" ಅದೇನು ವಸಂತರಾವ್, ಈಗ ಬಹಳ ಅಪರೂಪವಾಗಿ ಬಿಟ್ಟಿದ್ದೀರಿ ಎಲ್ಲಿಯೂ ಕಾಣುವುದೆ ಇಲ್ಲವಲ್ಲ. ನಾನು ಎಷ್ಟೋ ಬಾರಿ ನೋಡಿದ್ದೇನೆ, ನೋಡಿದಾಗಲೆಲ್ಲ ನಿಮ್ಮ ಬಾಗಿಲಿಗೆ ಬೀಗ ! "

" ಸರಿ. ಬಂದವರ ಹಾಗೆಯೆ ಹೇಳುತ್ತೀರಿ ! " ಎಂದು ಸುಳ್ಳು ಸಲಿಗೆಯ ನಗೆಯೊಂದನ್ನು ಬೀರಿ ಮುಂದುವರಿದ. " ಬೆಳಗಿನ ಒಂಬತ್ತರಿಂದ ರಾತ್ರಿ ಒಂಬತ್ತರ ವರೆಗೆ ಬಾಗಿಲಿಗೆ ಬೀಗ ಇರುವುದೇನೋ ನಿಜ "

" ಅದನ್ನಲ್ಲ, ನಾನು ಹೇಳುವುದು. ನಡುವೆ ಎಷ್ಟೋ ದಿನ ಊರಲ್ಲಿಯೇ ಇದ್ದ ಹಾಗೆ ಕಾಣಲಿಲ್ಲ."

" ಆಚೆ ತಿಂಗಳು ಇರಲಿಲ್ಲ ಆದರೆ ನೀವೇ ಅದೇನೋ ನಮ್ಮ ಮೇಲೆ ಅವಕೃಪೆ ಮಾಡಿದ ಹಾಗಿದೆ ಒಂದು ಸಲವೂ ಬಂದಿಲ್ಲ ಬರುವುದಿಲ್ಲ, ಮಾತ ನಾಡುವುದಿಲ್ಲ."

" ಹುಂ—ಏನು ಮಾತನಾಡುವುದು ? ಸುಮ್ಮನೆ—"

ಎಂದು ಆನಂದ ಸುಮ್ಮನಾದ ಇಬ್ಬರೂ ನಿಧಾನವಾಗಿ ಹೆಜ್ಜೆಹಾಕು ತ್ತಲೇ ಇದ್ದರು. ಆ ಒಂದು ಮಾತಿನಿಂದ ವಸಂತ ಮೊದಲಿಗೆ ನಿರ್ಮಿಸಿದ ಸಲಿಗೆಯ ವಾತಾವರಣ ಕಳೆದಂತಾಯಿತು. ಇಬ್ಬರಿಗೂ ನಿಜವಾಗಿ ' ಏನು ಮಾತನಾಡುವುದು ? ' ಎನಿಸಿತು. ಆದರೆ ಏನಾದರೂ ಇಂದು ಆನಂದನನ್ನು ಮಾತನಾಡಿಸಿಯೆ ಬಿಡುವುದೆಂದುಕೊಂಡಿದ್ದ ವಸಂತ ಬೇರೆಯಾದ ದಾರಿ ಯನ್ನೆ ಹಿಡಿದು ಕೇಳಿದ :

" ಬರಲಿಲ್ಲ ಎಂದು ನಿಮಗೆ ಹೇಳುವ ನಾನಾದರೂ ನಿಮ್ಮ ಕಡೆಗೆ ಎಷ್ಟು ಸಲ ಬಂದಿದ್ದೇನೆ ? ಇಂದೇ ಏನೋ ಅಕಸ್ಮಾತ್ತಾಗಿ ಭೆಟ್ಟಿಯಾಯಿತು ಎಂದು ಈ ಮಾತು. ಬರಬೇಕೆಂದರೂ ಎಲ್ಲಿ ಬಿಡುವಾಗುತ್ತದೆ, ಹೇಳಿ. ಇದ್ದಬಿದ್ದ ಒಂದು ಭಾನುವಾರ ಹಾಗೂ ಹೀಗೂ ಕಳೆದು ಹೋಗುತ್ತದೆ "

ಎಂದು ಮತ್ತೆ ಕದಡಿದ ವಾತಾವರಣವನ್ನು ಮೆತ್ತಗಿನ ಮಾತುಗಳಿಂದ ಸರಿಪಡಿಸಲೆತ್ನಿಸಿದ. ಒಂದೆರಡು ನಿಮಿಷ ಇಬ್ಬರೂ ಮಾತನಾಡಲಿಲ್ಲ. ಆನಂದ ಹೋಗಬೇಕಿದ್ದ ಅಂಗಡಿ ಸಮೀಪದಲ್ಲಿಯೆ ಇದ್ದುದರಿಂದ ಐದು ನಿಮಿಷಗಳಲ್ಲಿ

ಅಲ್ಲಿಯ ಕೆಲಸವನ್ನು ಮುಗಿಸಿ ಹಿಂತಿರುಗುತ್ತಿರುವಾಗ ಆನಂದ ಕೇಳಿದ

" ನನ್ನ ಕೆಲಸವಾಯಿತು ನೀವು ವಾಶಿಂಗ್ ಕಂಪೆನಿಗೆ ಹೋಗಬೇಕು ಎಂದೆನ್ನಲಿಲ್ಲವೆ ? "

" ನಾಳೆಗೆ ಹೋದರೂ ಆಯಿತು. ಏನೊ, ಇಂದು ಸಿಕ್ಕಿದ್ದೀರಿ. ಈಗ ನಮ್ಮಲ್ಲಿಗೇ ಹೋಗೋಣ ಬನ್ನಿ "

" ವೇಳೆಯಾಗುವುದಿಲ್ಲವೆ ? "

" ಎಷ್ಟಾದೀತು ಮಹಾ ? ಬನ್ನಿ. ಚಹ ಮಾಡುತ್ತೇನೆ—"

" ಚಹವನ್ನೇ ಕುಡಿಯುವುದಾದರೆ ನಮ್ಮಲ್ಲಿಗೇ ಹೋಗುವಾ ಸುಮ್ಮನೆ ನೀವೇತಕ್ಕೆ ಕೈ ಸುಟ್ಟುಕೊಳ್ಳಬೇಕು ? "

ಮೊದಲಿಗೆ ತಪ್ಪಿಸಿದ ಸನ್ನಿವೇಶ ವಸಂತನೆದುರು ಮತ್ತೆ ನಿಂತಿತು. ನೇರವಾಗಿ ಏನಾದರೊಂದು ಕಾರಣವನ್ನು ಹೇಳಿ ಆನಂದನನ್ನು ಕರೆದೊಯ್ಯದ ಹೊರತು ಬೇರೆ ಮಾರ್ಗವೇ ಕಾಣಲಿಲ್ಲವಾದ್ದರಿಂದ ವಸಂತ ಹೇಳಿದ

" ಬೇಡ ನಮ್ಮಲ್ಲಿಗೇ ಹೋಗೋಣ ನಿಮ್ಮಲ್ಲಿಗೆ ಹೋದರೆ ಇನ್ನೂ ತಡವಾಗಿಬಿಡುತ್ತದೆ. ಅಲ್ಲದೆ, ಒಂದೆರಡು ವಿಷಯ ನಿಮ್ಮ ಕೂಡ ಮಾತನಾಡ ಬೇಕಾಗಿದೆ, ಅದಕ್ಕೆ ನಾನು ಹೇಳಿದ್ದು "

ಆನಂದನಿಗೆ ಒಂದು ಕ್ಷಣ ಕುತೂಹಲವೆನಿಸಿತು ಮರುಕ್ಷಣ ಸಂಕೋಚವೂ ಎನಿಸಿತು. ವಸಂತ ತನ್ನೊಡನೆ ಮಾತನಾಡಬೇಕಾದ ವಿಷಯ ಆತನ ಮನಸ್ಸಿನಿಂದ ದೂರವಾಗಿರಲಿಲ್ಲವೆಂದೊ, ಇನ್ನಾವ ಕಾರಣಕ್ಕಾಗಿಯೊ, ಆತ ಮಾತನಾಡಬೇಕಾದದ್ದು ಮೋಹಿನಿಯನ್ನು ಕುರಿತೇ ಇರಬೇಕೆಂದು ಮನದಟ್ಟಾಗಿಯೇ ವಸಂತನ ಹಿಂದಿನಿಂದ ನಡೆದ—ಮುಂದೆ ಯಾವ ಮಾತನ್ನೂ ಆಡದೆ. ಆನಂದನ ನೀರವತೆ ವಸಂತನಿಗೆ ಮಾತ್ರ ಅರೆಭರವಸೆಯನ್ನುಂಟು ಮಾಡಿತು. ಅಲ್ಲದೆ, ಕಳೆದ ನಾಲ್ಕೈದು ತಿಂಗಳಲ್ಲಿ ಮೋಹಿನಿ ತನ್ನನ್ನು ಸಂಧಿಸಿದ, ಮಾತನಾಡಿದ ಸಂದರ್ಭಗಳನ್ನು ಎಷ್ಟರ ಮಟ್ಟಿಗೆ ಹೇಳಬೇಕು, ಎಷ್ಟು ಹೇಳ ಬಹುದು ಎಂಬುದೂ ಒಂದು ಸಮಸ್ಯೆಯಾಗಿಯೇ ಮನಸ್ಸಿನೆದುರು ನಿಂತಿತು. ಆದರೆ ಮುನ್ನಾದಿನ ರಾತ್ರಿ ಅದನ್ನು ಕುರಿತು ಯೋಚಿಸಿದಾಗ ಅವರಿಬ್ಬರ ಹಿತ ಚಿಂತನೆಯ ದೃಷ್ಟಿಯಿಂದಲೆ ಆಗಲಿ, ತನ್ನ ಹಿತದ ದೃಷ್ಟಿಯಿಂದಲೆ ಆಗಲಿ ಆ ವಿಷಯದಲ್ಲಿ ಬಹುಮಟ್ಟಿಗೆ ಸುಳ್ಳು ಹೇಳುವುದಗತ್ಯ ಎಂದೇ ನಿರ್ಧರಿಸಿಕೊಂಡಿದ್ದ

ನಾದ್ದರಿಂದ ವಿಶೇಷವಾದ ಗೊಂದಲಕ್ಕೀಡಾಗದೆ ಹೇಳಬಹುದೆಂದುಕೊಂಡಿದ್ದ ವಿಷಯವನ್ನು ನೇರವಾಗಿ ಹೇಳಿಬಿಡಬೇಕೆಂದು ಹೇಳಿದ :

" ನಿನ್ನೆ ನಿಮ್ಮ ಮನೆಯವರು ಸಿಕ್ಕಿದ್ದರು—"

" ಹೌದೆ ?—"

ಇದಕ್ಕೂ ಹೆಚ್ಚಿನ ಕುತೂಹಲವನ್ನು ಆನಂದ ತೋರಿಸಬಹುದೆಂದಿದ್ದ ವಸಂತನಿಗೆ ನಿರಾಶೆಯಾಯಿತು. ಮುಂದೇನು ಹೇಳಬೇಕೆಂಬುದೂ ತಿಳಿಯದಾಗಿ ಸುಮ್ಮನಾದ. ಆನಂದನೇ ಅರೆನಿಮಿಷ ತಡೆದು ಕೇಳಿದ.

" ಎಲ್ಲಿ ? "

" ನನ್ನ ಆಫೀಸಿಗೇ ಬಂದಿದ್ದರು ಏನೋ ತುಂಬಾ ತೊಂದರೆಯಲ್ಲಿದ್ದ ಹಾಗೆ ಕಾಣುತ್ತದೆ "

" ಏನಂತೆ ? "

" ಅವರೇನೋ ದಾದರ್ ಗರ್ಲ್ಸ್ ಹೈಸ್ಕೂಲ್‌ನಲ್ಲಿ ಕೆಲಸ ಮಾಡುತ್ತಿದ್ದರಂತಲ್ಲ. ಅಲ್ಲಿಯ ಕೆಲಸದಿಂದ ಕಡಿಮೆ ಮಾಡಿದ್ದಾರಂತೆ—"

" ಅದಕ್ಕೆ ? ನೀವೇನಾದರೂ ಕೆಲಸ ಕೊಡಿಸಬೇಕು ಎಂದು ಕೇಳಿದಳೆ ? "

" ಹುಂ—ಇಲ್ಲ. ಅಂದರೆ ಅವರಿಗೆ ಮನಸ್ಸಿನಲ್ಲಿದ್ದುದು ಅಷ್ಟೇ ಎಂದು ಕಾಣುತ್ತಿತ್ತು. ಆದರೆ ನಾನೇನೋ ಅವರಿಗೆ ಎಲ್ಲವನ್ನೂ ಬೇರೆಯಾಗಿಯೇ ಹೇಳಿಕಳಿಸಿದೆ."

ಆನಂದ ಸುಮ್ಮನಾದ. ತಾನು ಹೇಳುತ್ತಿದ್ದ ಸುಳ್ಳುಗಳಿಂದಾಗಿ ಕತೆಯನ್ನು ಹೇಗೆ ಮುಂದುವರಿಸಿ ಆನಂದನನ್ನು ಮುಖ್ಯ ವಿಷಯಕ್ಕೆ ಎಳೆಯಬೇಕೆಂಬುದು ವಸಂತನಿಗೆ ತಿಳಿಯದಾಗಿತ್ತು. ಒಂದು ಕ್ಷಣದ ಮಟ್ಟಿಗಾದರೂ ಆನಂದನ ಹೃದಯದಲ್ಲಿ ಹಳೆಯ ಆಸೆ ಮಿನುಗಿತೆಂದು ಕಾಣುತ್ತದೆ. ಇಲ್ಲದಿದ್ದರೆ ಆತ ತೋರುತ್ತಿದ್ದ ಕುತೂಹಲವನ್ನು ತಳೆಯುತ್ತಿರಲಿಲ್ಲ. ಅವನೆಂದ :

" ಏನೆಂದು ಹೇಳಿದಿರಿ ? "

" ನಾನೇನು ಬೇರೆಯಾಗಿ ಹೇಳುವುದು ? ನಾನು ಎಂದಿಗೊ ಹೇಳಿದ ಮಾತನ್ನೇ ಹೇಳಿದೆ. ಈ ಕೆಲಸ, ಅದು, ಇದು ಎಂಬ ಎಲ್ಲ ಹವ್ಯಾಸ ಬಿಟ್ಟು ಸರಿಯಾಗಿ ಮನೆ ಹೊಂದಿಸಿಕೊಂಡು ಇರುವುದರ ಹೊರತು ನನಗಂತೂ ಬೇರೆ ಯಾದ ಮಾರ್ಗ ಕಾಣುವುದಿಲ್ಲ ಎಂದು ಹೇಳಿದೆ."

ಈ ಒಂದು ಮಾತಿನಿಂದ ತಾನು ಮೋಹಿನಿಯನ್ನು ಮಾತನಾಡಿಸಿದ ಸಂದರ್ಭ ಆನಂದನ ಕಣ್ಣೆದುರು ನಿಂತಿರಬೇಕು. ಒಂದೆರಡು ನಿಮಿಷ ಮೊದಲು ಮಿನುಗಿದ ಆಸೆಯೂ ಮಾಯವಾಗಿರಬೇಕು. ಅರ್ಥಮರ್ಥ ಕಟುವಾಗಿ ಯೆಂಬಂತೆಯೆ ಆನಂದ ಹೇಳಿದ:

" ಸರಿಯಾಯಿತಲ್ಲ, ಮತ್ತೆ—"

" ಸರಿಯಾಗಲಿಲ್ಲ, ಆನಂದರಾವ್. ಸರಿಯಾಗಲಿಲ್ಲ ಎಂದಿಗೂ ನನಗೆ ಅದೇ ಯೋಚನೆ "

" ನಿಮಗಿನ್ನೂ ಭ್ರಮೆ ಎಂದು ಕಾಣುತ್ತದೆ. ಅದೆಲ್ಲ ಹುಚ್ಚು ವಿಚಾರ. ಆಗದ ಮಾತು ! "

" ನೀವೇ ಹೀಗೆ ಮಾತನಾಡಿದರೆ ಹೇಗೆ ಹೇಳಿ—"

" ನಾನು ಹೇಗೆ ಮಾತನಾಡಿದರೂ ಪ್ರಯೋಜನವಿಲ್ಲ. ಆ ಕತೆ ಎಂದೋ ಮುಗಿದು ಹೋಗಿದೆ ಮುಗಿಯಬಾರದಾಗಿತ್ತು, ನಿಜ ನನಗೆ ಸಾಧ್ಯವಾದ ಯತ್ನ ನಾನು ಮಾಡಿ ಮುಗಿಸಿದ್ದೇನೆ. ಒಂದು ವೇಳೆ ನಿಮ್ಮೆದುರು ಆಕೆ ಹೇಳಿರಲೂ ಸಾಕು."

" ಏನೋ ಒಂದು ಮಾತು ಬಂದಿತ್ತು. ಆದರೆ ನನಗೆ ಪೂರ್ತಿಯಾಗಿ ಅರ್ಥವಾಗಲಿಲ್ಲ."

" ಅರ್ಥವಾಗಬೇಕಾದದ್ದು ಯಾವುದೂ ಇಲ್ಲ. ಎಲ್ಲವೂ ಸ್ಪಷ್ಟವಾಗಿಯೇ ಇದೆ ' ಹಿಂದೆ ಏನಾದದ್ದು ಆಗಿಹೋಯಿತು. ಎಲ್ಲವನ್ನು ಮರೆತುಬಿಟ್ಟು ಮತ್ತೆ ಮನೆಯನ್ನು ಕಟ್ಟಿ ಸುಖವಾಗಿ ಇರೋಣ ' ಎಂದು ಆಕೆಯ ಬಾಗಿಲ ವರೆಗೆ ಹೋಗಿ ಹೇಳಿದೆ, ವಸಂತರಾವ್ ! ಹೆಮ್ಮೆ, ಸ್ವಾಭಿಮಾನ ಎಲ್ಲವನ್ನೂ ಮರೆತು ಬಿಟ್ಟು ಈಗ ನಡೆದ ಅಪಹಾಸ್ಯ ಬೇಡ ಎಂಬುದಕ್ಕಾಗಿ ಹೋದರೆ—"

" ಹಾಗಾದರೆ—"

" ಏನೂ ಇಲ್ಲ. ಆಕೆಯ ದಾರಿಗಳೇ ಬೇರೆ. ಆ ದಾರಿಗಳು ನನಗೆ ಸರಿ ಬೀಳುವುದು ಸಾಧ್ಯವಿಲ್ಲ. ನನ್ನನ್ನು ಹೊಂದಿಕೊಂಡಿರುವುದು ಆಕೆಗೆ ಸುತರಾಂ ಇಷ್ಟವಿಲ್ಲ. ಇಷ್ಟು ಸ್ಪಷ್ಟವಾಗಿದ್ದ ಮೇಲೆ ಮತ್ತೆ ಮತ್ತೆ ಅದನ್ನೇ ಮಾತ ನಾಡುವುದರಲ್ಲಿ ಏನು ಪ್ರಯೋಜನ? ಅದಕ್ಕಾಗಿಯೇ ನಾನು ನಿಮ್ಮ ಕಡೆಗೆ ಇಷ್ಟು ದಿನ ಬರಲಿಲ್ಲ. ಆ ವಿಷಯದಲ್ಲಿ ನನಗೆ ಪೂರ್ತಿಯಾಗಿ ನಿರಾಶೆಯಾಗಿದೆ.

ಅಥವಾ ನನ್ನ ಆಸೆ ಸತ್ತುಹೋಗಿದೆ ಎಂದೇ ಹೇಳಬಹುದು. ಇಂದು ಆಕೆ ತಾನಾಗಿಯೇ ಬಂದರೂ ನನಗೆ ಒಪ್ಪಿಗೆಯಿಲ್ಲ. ಅಲ್ಲದೆ, ಆಕೆ ಬರುವುದೂ ಸಾಧ್ಯವಿಲ್ಲ."

"ನೀವು ಒಂದನ್ನು ಮಾಡಿದರೆ ಸಾಧ್ಯವಾಗಬಹುದು ಎಂದು ನನಗಂತೂ ತೋರುತ್ತದೆ—ವಿಶೇಷವಾಗಿ ಇಂದಿನ ಪರಿಸ್ಥಿತಿಯಲ್ಲಿ."

"ಏನು—?"

"ನೀವು ಬೇರೆಯಾಗಿ ಇರುವ ಏರ್ಪಾಡು ಮಾಡಿದರೆ—"

"ಮಾಡುತ್ತೇನೆ ಎಂದು ಹೇಳಿದರೆ ಆಕೆಗೆ ವಿಶ್ವಾಸವಿಲ್ಲ."

"ಮಾಡಿ ತೋರಿಸಿದರೆ ವಿಶ್ವಾಸ ತಾನಾಗಿಯೆ ಹುಟ್ಟುತ್ತದಲ್ಲ—"

"ಇಷ್ಟು ಹಟ ಯಾಕೆ? ಇಂಥ ಹಟಮಾರಿಯನ್ನು ಕಟ್ಟಿಕೊಂಡು ನಾನಾದರೂ ಯಾತಕ್ಕೆಂದು ಒದ್ದಾಡಬೇಕು? ಮನೆ ಕಟ್ಟಿಕೊಂಡಿರಬೇಕಾದಾಗ ಇದು ಯಾವುದಕ್ಕೂ ಬಾರದು ಒಂದೆರಡು ದಿನ ಹೇಗೂ ಹೊಂದಿಸಿಕೊಂಡು ಹೋಗಬೇಕಾದ ವಿಷಯ ಇದಲ್ಲ ನಾನು ಪೂರ್ತಿಯಾಗಿ ಯೋಚನೆ ಮಾಡಿಕೊಂಡೇ ಸುಮ್ಮನಾಗಿದ್ದೇನೆ."

"ಸುಮ್ಮನಾಗಿದ್ದರೆ ಏನು ಮಾಡಿದ ಹಾಗಾಯಿತು? ಅದರಿಂದ ಯಾರಿಗೆ ಸುಖ?"

"ಅದನ್ನು ನಾನೊಬ್ಬನೇ ಯೋಚಿಸಿ ಏನಾಗಬೇಕು?"

"ಅದೂ ನಿಜ. ಆದರೆ—"

"ಆದರೆ ಎನ್ನುವ ಮಾತಿಗೆ ಇಲ್ಲಿ ಅವಕಾಶವೇ ಉಳಿದಿಲ್ಲ. ಉಳಿಯಬೇಕು ಎಂಬ ಆಸೆಯನ್ನೂ ನಾನು ಇಟ್ಟುಕೊಂಡಿಲ್ಲ. ಇಂದಿಲ್ಲ ನಾಳೆ ಇದು ಬಿಡುಗಡೆಗೆ ಬರಲೇಬೇಕಾದ ಸಂದರ್ಭ. ಈಗ ನಾನು ಯೋಚಿಸುತ್ತಿರುವುದು ಆ ಅಂಶವನ್ನು ನನಗಿಂದು ನಿರಾಶೆಯೆನಿಸುತ್ತಿದ್ದರೆ ನಮ್ಮಿಬ್ಬರ ಬಿಡುಗಡೆ ಕೂಡ ಅಷ್ಟೊಂದು ಸುಲಭಸಾಧ್ಯವಿಲ್ಲ ಎಂಬುದಕ್ಕಾಗಿ—"

ಆನಂದನ ಖಂಡಿತವಾದ ಈ ಮಾತುಗಳಿಂದಾಗಿ ವಸಂತ ತುಸು ಹಿಂತೆಗೆಯುವಂತಾಯಿತು. ಆತನ ಹೃದಯದ ಯಾವ ಮೂಲೆಯಲ್ಲಾದರೂ ಅವರು ಇಬ್ಬರೂ ಹೊಂದಿಕೊಳ್ಳುವುದು ಒಂದಿಲ್ಲೊಂದು ದಿನ ಸಾಧ್ಯ ಎಂಬ ಆಸೆ ಉಳಿದಿದ್ದರೆ ಅದೂ ಆ ಕ್ಷಣಕ್ಕೆ ಮಾಯವಾಯಿತು. ಮೋಹಿನಿಯ ಮನಸ್ಸನ್ನು ಆತ

ತಿಳಿದವನೇ ಆಗಿದ್ದ. ಆನಂದನ ವಿಚಾರವೂ ಸ್ಪಷ್ಟವಾಯಿತು ಇನ್ನು ತಾನು ಮಾಡಬಹುದಾದದ್ದು ಉಳಿಯಲಿಲ್ಲ ಎಂಬುದಕ್ಕಾಗಿ ನಿಜವಾಗಿಯೂ ಆತನಿಗೆ ವ್ಯಥೆಯಾಯಿತು—ಆನಂದನಕಿಂತಲೂ ಹೆಚ್ಚಾಗಿ ಮೋಹಿನಿಗಾಗಿ. ನೇರವಾದ, ಸಹಜವಾದ ಒಂದು ಮಾರ್ಗದಲ್ಲಿ ಮೋಹಿನಿ ಸುಖವಾಗಿ ಬಾಳಬೇಕು ಎಂಬ ಆತನ ಆಸೆ ಅಷ್ಟು ಉತ್ಕಟವಾಗಿತ್ತು ! ಆದರೆ ಆನಂದನ ಮಾತು ಕೇಳಿ ಮುಂದೆ ಮಾತನ್ನೇ ಆಡಬೇಕಿರಲಿಲ್ಲ. ಸುಮ್ಮನಾದ ವೇಳೆ ಒಂಬತ್ತಕ್ಕೆ ಸಮೀಪಿಸು ತ್ತಿತ್ತು. ಆನಂದನಕಿಂತಲೂ ಹೆಚ್ಚಾಗಿ ವಸಂತನೇ ನೊಂದವನ ಹಾಗಿತ್ತು. ಕೊನೆಗೆ ಆನಂದನೇ ಹೇಳಿದ ·

" ಅದನ್ನೆಲ್ಲ ಕಟ್ಟಿಕೊಂಡು ಏನು ಮಾಡುತ್ತೀರಿ ? ಅದೊಂದು ಹಳೆಯ ಕತೆ, ಇನ್ನೇನೂ ಅಲ್ಲ. ಅದನ್ನು ಬೆಳೆಯಿಸುವುದರಲ್ಲಿ ಯಾವ ಅರ್ಥವೂ ಇಲ್ಲ ! ಅದು ಹೋಗಲಿ, ಅದೇನು ನೀವು ಇತ್ತೀಚೆ ಇಷ್ಟು ರಜೆ ಪಡೆದುಕೊಂಡು ಹೋಗುತ್ತಿದ್ದೀರಲ್ಲ ? "

" ಹುಂ—ಬಂದಿದೆ ರಜೆ ಪಡೆಯಬೇಕಾದ ಪ್ರಸಂಗ ! " ಎಂದು ಹುಸಿ ನಗೆ ನಕ್ಕ.

" ಪ್ರಸಂಗ ಅಂದರೆ ?—"

" ಮದುವೆ ಮಾಡಿಕೊಳ್ಳುವುದು ಎಂದರೆ ಒಂದು ಪ್ರಸಂಗವೇ ಅಲ್ಲವೆ ? ನನಗಂತೂ—"

" ಏನು ? ಮದುವೆ ಗೊತ್ತುಮಾಡಿದ್ದೀರಾ ? ನೋಡಿದಿರಾ ? ಇಂಥ ವಿಷಯವನ್ನೂ ನಮಗೆ ತಿಳಿಸದೆಯೆ ನಡೆಸಿಬಿಟ್ಟಿದ್ದೀರಿ ! ಅಂ ? ಏನು ಮದುವೆ ಆಗಿಯೇ ಹೋಯಿತೊ ? ಹಾಗಿದ್ದರೆ ಅಭಿನಂದನೆ ಹೇಳುವ ಅವಕಾಶವೂ ನಮಗಿಲ್ಲದಾಯಿತು ! " ಎಂದು ನಕ್ಕ

" ಮದುವೆ ನಿಮಗೆ ತಿಳಿಯದೆ ಆಗುತ್ತದೆಯೆ ? ಆಗಿದ್ದರೆ ನಾನೇಕೆ ಚಹ ಮಾಡುತ್ತಿದ್ದೆ ? ಒಂದೊಂದು ಸಲ ನನಗಂತೂ ತುಂಬಾ ಹೆದರಿಕೆಯಾಗುತ್ತದೆ. ಇಷ್ಟು ಹತ್ತಿರದವರು ನೀವು ನನಗೆ. ಇದನ್ನೆಲ್ಲ ನೆನೆದರೆ—"

" ಸರಿ. ಹೀಗೆಲ್ಲ ಯೋಚನೆ ಮಾಡುತ್ತ ಹೋದರೆ ಯಾರೂ ಮದುವೆ ಯನ್ನೇ ಮಾಡಿಕೊಳ್ಳಬಾರದಾದೀತು. ಅದೆಲ್ಲ ಅವರವರ ದೈವ. ಹಣೆಯಲ್ಲಿ ಬರೆದ ಹಾಗೆ ನಡೆಯುತ್ತದೆ. ಇನ್ನೇನೂ ಇಲ್ಲ "

ಆನಂದನ ಸರಳವಾದ ಹೃದಯ, ಸಾತ್ವಿಕವಾದ ವೃತ್ತಿಯನ್ನು ನೆನೆದು ವಸಂತನಿಗೆ ಕನಿಕರವೆನಿಸಿತು. ಮೋಹಿನಿ ತನ್ನ ಹಟವನ್ನು ಕೆಲಮಟ್ಟಿಗಾದರೂ ಬಿಡಲೊಪ್ಪಿದರೆ ಆನಂದನನ್ನು ಸಹಜವಾಗಿಯೆ ಮನವೊಲಿಸಬಹುದು ಎಂದೆನಿಸಿತು. ಆದರೆ ಮೋಹಿನಿಯ ಹಟ ಮುರಿಯಲಸಾಧ್ಯವೆಂದು ಮನಗಂಡಿದ್ದ ವಸಂತನಿಗೆ ಅವರಿಬ್ಬರ ವೈವಾಹಿಕ ಜೀವನದ ಬಗೆಯಲ್ಲಿ ನಿರಾಶೆಯಲ್ಲದೆ ಬೇರೆ ಏನೂ ಎನಿಸುವುದು ಉಳಿಯಲಿಲ್ಲ ಆದರೂ ನೋಡುವಾ, ಇಂದಿಲ್ಲ ನಾಳೆ ಆಕೆ ಹಟದಿಂದ ಹಿಂದಿರುಗಿ ಹಾದಿಗೆ ಬರುವಂತಾದರೆ ಏನಾದರೂ ಮಾಡಬಹುದು ಸದ್ಯಕ್ಕಂತೂ ಯಾವುದೂ ಸಾಧ್ಯವಾಗಿ ಕಾಣುವುದಿಲ್ಲ ಎಂದು ಸುಮ್ಮನಾದ.

"ಮದುವೆ ಎಂದು ಹಾಗಿದ್ದರೆ ?" ಎಂದು ಆನಂದ ಕೇಳಿದ :

"ಇನ್ನೂ ದಿನ ನಿಶ್ಚಯವಾಗಲಿಲ್ಲ ಡಿಸೆಂಬರ್ ಕೊನೆಯ ವಾರದಲ್ಲಿ ಆಗಬಹುದು ಎಂದು ಕಾಣುತ್ತದೆ ನೀವು ಇನ್ನು ಮತ್ತೆ ಸಿಕ್ಕುವುದು ಎಂದಿಗೊ ಅದಕ್ಕೆ ಇಂದೇ ಆಮಂತ್ರಣ ಹೇಳಿಬಿಡುತ್ತೇನೆ. ಖಂಡಿತವಾಗಿಯೂ ಬರಬೇಕು ಮತ್ತೆ."

"ಇಂಥ ದಿನ ಎಂದು ಹೇಳದೆ ಬರಿಯ ಆಗ್ರಹ ಮಾಡಿದರೆ—" ಎಂದು ಆನಂದ ನಕ್ಕ.

"ದಿನ ತಿಳಿಸದೆ ಇರುತ್ತೇನೆಯೆ ? ಅಲ್ಲದೆ ಈಗ ಆಮಂತ್ರಣ ಹೇಳಿದರೂ ನಿಮ್ಮ ಮನೆಯ ತನಕ ಬಂದು ಹೇಳಬೇಡವೆ ? ನಾರಾಯಣರಾಯರಿಗೆ, ನಿಮ್ಮ ಅಕ್ಕನಿಗೆ—"

"ಸಂತೋಷ, ಬರುತ್ತೇನೆ ಆಗಲೆ ತುಂಬಾ ವೇಳೆಯಾಗಿಬಿಟ್ಟಿತಲ್ಲ ?"

"ಹುಂ. ನನಗೂ ಅಷ್ಟೇ—"

"ನೀವೇ ಮಾಡಿದ್ದು. ಇಲ್ಲದ ಮಾತು ತೆಗೆದು—"

"ಇಲ್ಲದ ಮಾತೇಕೆ ಆನಂದರಾವ್ ? ಇದ್ದ ಮಾತೇ ಇಂದಿಲ್ಲ ನಾಳೆಯಾದರೂ—"

"ಹುಂ. ನಿಮ್ಮ ಮದುವೆ ಒಂದೇ ಇದ್ದ ಮಾತು ನಿಜ" ಎಂದು ಆನಂದ ನಕ್ಕು ಹೊರಟ.

"ಬನ್ನಿ ಮತ್ತೆ ಯಾವಾಗಲಾದರೂ—ಮುಂದಿನ ಭಾನುವಾರ ?"

" ನಿಮ್ಮ ಮನೆಯವರು ಬರಲಿ ಆಮೇಲೆ ಬರುತ್ತೇನೆ. ಇನ್ನೇನೂ ಬಹಳ ದಿನ ಉಳಿಯಲಿಲ್ಲವಲ್ಲ ಇನ್ನು ನಿಮ್ಮ ಕೈಯಿಂದ ಚಹ ಬೇಡ "

" ಅದೇ ಮಾತನ್ನು ನಾನು ನಿಮಗೂ ಹೇಳಬೇಕಾಗಿದೆ. ಆ ಆಸೆಯನ್ನು ಇಟ್ಟುಕೊಂಡಿದ್ದೇನೆ. ಅಷ್ಟಾದರೆಯೆ ನಾನು ನನ್ನ ಕರ್ತವ್ಯವನ್ನು ಮಾಡಿದ ಹಾಗಾದೀತು—"

ವಸಂತ ನಿಜವಾಗಿಯೂ ಕಳಕಳಿಯಿಂದ ಮಾತನಾಡಿದ್ದ. ಆದರೆ ಆ ಮಾತು ಆನಂದನ ಹೃದಯವನ್ನು ತಟ್ಟುವಂತಿರಲಿಲ್ಲ ಆತ ಮೋಹಿನಿಯ ಆಸೆ ಯನ್ನು ಪೂರ್ತಿಯಾಗಿ ಬಿಟ್ಟಹಾಗಿತ್ತಲ್ಲದೆ ಆ ವಿಷಯದಲ್ಲಿ ಯಾವ ಬಗೆಯ ವಿಶೇಷವಾದ ವಿವಂಚನೆಗೂ ಒಳಗಾಗಿದ್ದ ಹಾಗೆ ಕಾಣಲಿಲ್ಲ

೧೭

ಮರುದಿನ ಮಧ್ಯಾಹ್ನದ ವರೆಗೆ ಮೋಹಿನಿ ಮುನ್ನಾದಿನ ರಾತ್ರಿ ವಸಂತನನ್ನು ಬೀಳ್ಕೊಡುವಾಗಿನ ಮನಃಸ್ಥಿತಿಯಲ್ಲಿಯೆ ಇದ್ದಳು. ನಿರಾಶೆಯೂ ಅಲ್ಲ, ಸಂತೋಷವೂ ಅಲ್ಲ. ಎರಡೂ ಸರಿಬೆರಕೆಯಾಗಿ ಕೂಡಿಕೊಂಡು ಮನಸ್ಸನ್ನು ಉಯ್ಯಾಲೆಯಾಡಿಸುತ್ತಿದ್ದವು ವಸಂತ ವಸಂತನಾಗಿಯೆ ಉಳಿದನೆಂದು ಒಮ್ಮೆ ತೋರಿದರೆ ಇನ್ನೊಮ್ಮೆ ತನ್ನವರೆನ್ನುವವರು ಯಾರೂ ಇಲ್ಲ ಎಂದೆನಿಸುತ್ತಿತ್ತು. ಆದರೆ ಆತನ ಸಹಾನುಭೂತಿಯ ಬಲದ ಮೇಲೆ ತನ್ನ ಧೈರ್ಯವನ್ನು ನಿಲ್ಲಿಸಬಹುದು, ತಾನಾಗಿಯೇ ಇರಬೇಕೆಂಬ ಹಟವನ್ನು ಕಟ್ಟಬಹುದು ಎಂದು ತೋರಿತು. ಚಿತ್ರಪಟದಲ್ಲಿ ಕೆಲಸ ಮಾಡಬೇಕೆಂದು ಅನುರಾಧೆ ಸೂಚಿಸಿದಾಗ ಅಷ್ಟೇನೂ ಉತ್ಸಾಹವನ್ನು ತೋರಿರದ ತಾನು ವಸಂತನೆದುರು ಆ ಕೆಲಸವನ್ನು ಒಪ್ಪಿಕೊಂಡಂತೆಯೆ ಮಾತನಾಡಿರಲಿಲ್ಲವೆ? ಆ ಸೂಚನೆ ಬಂದು ಆಗಲೆ ಒಂದು ತಿಂಗಳಾಗಿತ್ತು. ಇಷ್ಟರಲ್ಲಿ ಅವರು ಬೇರೆ ಯಾರನ್ನಾದರೂ ಆರಿಸಿಕೊಂಡಿದ್ದರೆ? ಇತ್ತ ಅನುರಾಧೆಯೂ ಬರಲಿಲ್ಲ. ಮರುದಿನ ಬರಬಹುದು. ಆದರೆ ತಾನು ಕೆಲಸದ ವಿಚಾರದಲ್ಲಿ ರಂಗನಾಥನ್‌ನನ್ನು ನೋಡುವುದೇ ಆದರೆ ಅನುರಾಧೆ ಬರುವುದಕ್ಕೆ ಮುಂಚಿತವಾಗಿಯೆ ನೋಡುವುದು ಒಳ್ಳೆಯದು ಎಂದುಕೊಂಡಳು. ಆಕೆ ಜೊತೆ ಇದ್ದರೆ ಕೆಲಸಕ್ಕೆ ಬಾರದ ಹರಟೆಯಲ್ಲಿಯೆ ವೇಳೆ ಕಳೆಯುತ್ತದೆ. ತನ್ನ ಕೆಲಸದ ವಿಚಾರದಲ್ಲಿ ರಂಗನಾಥನ್ ಕೂಡ ಸ್ಪಷ್ಟವಾಗಿ ಮಾತನಾಡಲೂ ಆಗುವುದಿಲ್ಲ ಎಂದುಕೊಂಡು ಅಂದು ಸಾಯಂಕಾಲವೆ ಆತನನ್ನು ನೋಡುವುದು ಎಂದು ನಿಶ್ಚಯಿಸಿದಳು ತಾನಾಗಿಯೇ ಹೋದರೆ ರಂಗನಾಥನ್ ಏನೆನ್ನಬಹುದು? ಚಿತ್ರಪಟದಲ್ಲಿ ಕೆಲಸ ಮಾಡಲು ಒದಗಿದ್ದ ಸದ್ಯದ ಸಂದರ್ಭವನ್ನು ಕುರಿತು ಆತ ತನ್ನೊಡನೆ ನೇರವಾಗಿ ಮಾತನಾಡಿರಲಿಲ್ಲ. ಆದರೆ ತಾನು ಕೆಲಸ ಮಾಡಲೊಪ್ಪುವುದು ಆತನಿಗೆ ಇಷ್ಟ, ಖಂಡಿತವಾಗಿಯೂ ಅದಕ್ಕೆ ಅವಕಾಶವನ್ನು ಕೊಡಬಹುದು ಎಂಬುದು ಅವನ ಮಾತಿನಲ್ಲಿ ಎಷ್ಟೋ ಬಾರಿ ಸ್ಪಷ್ಟವಾಗಿದ್ದಿತು. ಈ ಚಿತ್ರದಲ್ಲಿ ಅಲ್ಲದಿದ್ದರೆ ಇನ್ನೇನಾದರೂ ಕೆಲಸವನ್ನು ಒದಗಿಸಿಕೊಡಬಹುದು. ಅಂಥ ಭರವಸೆಯನ್ನು ಆತನ ಮಾತಿನಲ್ಲಿ ಕಂಡಿದ್ದಳೆಂದೇ ವಸಂತನೆದುರಿಗೆ ಆ ವಿಷಯವನ್ನು ಎತ್ತಿಹೇಳುವುದು ಸಾಧ್ಯವಾಗಿತ್ತು.

ಇದೇ ವಿಷಯವನ್ನು ಕುರಿತು ನೂರಾರು ಯೋಚನೆಗಳನ್ನು ಕಟ್ಟಿಕೊಂಡೇ ಮೋಹಿನಿ ಸಾಯಂಕಾಲದ ಐದು ಗಂಟೆಯ ಸುಮಾರಿಗೆ 'ಶಾರದಾ ಸ್ಟೂಡಿಯೋಸ್'ದ ಕಡೆ ನಡೆದಳು. ಆಕೆಯ ಮುಖದಲ್ಲಿ ಯಾವ ಉತ್ಸಾಹವೂ ಇಲ್ಲದಂತೆ ವೇಷದಲ್ಲಿ ಯಾವ ಆಡಂಬರವೂ ಇರಲಿಲ್ಲ. ಹಿಂದೊಮ್ಮೆ ಹೋದಾಗ ಉಟ್ಟ ಸಿಲ್ಕ್ ಸೀರೆ, ಸಾಮಾನ್ಯವಾದ ಒಂದು ಬ್ಲೌಜ್, ಕೈಯಲ್ಲಿ ಒಂದು ಪರ್ಸ್. ವೇಷದ ಸಾಮಾನ್ಯತೆಯ ಮೂಲಕವೇ ಎಂಬಂತೆ ಮುಖ, ನಿಲುವು, ಅವುಗಳ ನಿರಾಡಂಬರವಾದ ಮನೋಹರತೆ ಎದ್ದು ಕಾಣುತ್ತಿದ್ದವು. ತೀರ ಅನಿರೀಕ್ಷಿತವಾಗಿ ಬಾಗಿಲಲ್ಲಿ ನಿಂತ ಆಕೆಯನ್ನು ನೋಡಿ ರಂಗನಾಥನ್‌ನಿಗೆ—ಮೋಹಿನಿ ಬಂದಳೆಂದೊ, ಬಂದವಳು ಆ ಸಹಜಮನೋಹರವಾದ ರೀತಿಯಲ್ಲಿ ಬಂದಳೆಂದೊ —ಆಶ್ಚರ್ಯವೆನಿಸಿದ್ದರೆ ಸಹಜವೇ. ಅರೆನಿಮಿಷ ತನ್ನ ಕಣ್ಣುಗಳನ್ನೆ ನಂಬದವನಂತೆ ನೋಡಿದ. ಕುರ್ಚಿಯಿಂದ ಎದ್ದು ಬಾಗಿಲೆಡೆಗೆ ಬರುತ್ತ ಹೇಳಿದ.

"ಓಹೋ! ಇದೇನು? ಬನ್ನಿ—ಬನ್ನಿ."

ಸಿಕ್ಕ ಸ್ವಾಗತವನ್ನು ಸ್ವೀಕರಿಸುವಂತೆ ನಸುನಗುವೊಂದನ್ನು ಬೀರಿ ಮೋಹಿನಿ ಕುರ್ಚಿಯಲ್ಲಿ ಕೂಡುತ್ತಿರುವಾಗಲೆ ರಂಗನಾಥನ್ ಕೇಳಿದ:

"ಅನುರಾಧಾ ಎಲ್ಲಿ?"

"ಆಕೆ ಬಂದಿಲ್ಲ."

"ಒಬ್ಬರೇ ಬಂದಿರಾ?"

"ಆಕೆ ಊರಿಂದಲೇ ಬಂದಿಲ್ಲ, ಇನ್ನೂ"

"ಇಷ್ಟರಲ್ಲಿ ಬರಬೇಕಾಗಿತ್ತು ಎನ್ನುತ್ತಿದ್ದ ಆಪಟೆ—ಹುಂ. ಅಂತೂ ಒಮ್ಮೆ ನಮ್ಮ ಸ್ಟೂಡಿಯೋದ ಜ್ಞಾಪಕ ಬಂದಿತು, ಏನಾದರೂ ಆಗಲಿ."

"ಯಾಕೆ? ಎಂದೂ ಇಲ್ಲಿಗೆ ಬಂದಿರದ ಹಾಗೆ ಹೇಳುತ್ತಿದ್ದೀರಲ್ಲ?"

"ಬಂದಿರಬಹುದು. ಆದರೆ ನಿಜವಾಗಿಯೂ ಅಂದರೆ ನೀವಾಗಿಯೇ ಬಂದದ್ದು ಇದೇ ಮೊದಲು—"

"ಇಂದಿಗೆ ಬರಲೇಬೇಕಾಯಿತು. ಬಂದೆ."

"ಅಂದರೆ?"

"ಅಂದರೆ—"

ಮೋಹಿನಿಗೆ ಮಾತನ್ನು ಹೇಗೆ ಮುಂದರಿಸಬೇಕೆಂಬುದು ತಿಳಿಯಲಿಲ್ಲ.

ತಾನು ಕೆಲಸ ಹುಡುಕಿಕೊಂಡು ಬಂದವಳೆಂದು ಹೇಗೆ ಹೇಳುವುದು ? ಇದುವರೆಗೆ ರಂಗನಾಥನ್ ತನ್ನನ್ನು ಅನುರಾಧೆಯ ಗೆಳತಿಯೆಂದಲ್ಲದೆ, ಕೆಲಮಟ್ಟಿಗಾದರೂ ತನ್ನ ಫ್ರೆಂಡ್ ಎಂದು ತಿಳಿದವನಾಗಿದ್ದ. ಸ್ವಾಮಿ-ಸೇವಕರ ಸಂಬಂಧದಿಂದ ಬಹು ದೂರವಾಗಿದ್ದ ಬೇರೆಯಾದ ಆತ್ಮೀಯತೆಯನ್ನು ತೋರಿದ್ದ. ತನ್ನ ಪರಿಚಯವಾದಂದಿನಿಂದ ಹತ್ತಾರು ಬಗೆಯಲ್ಲಿ ಆ ಪರಿಚಯ ಇನ್ನೂ ಬೆಳೆಯ ಬೇಕೆಂಬ ಆತುರವನ್ನೂ ತೋರ್ಪಡಿಸಿದ್ದ. ಇಂಥವನೆದುರು ನೇರವಾಗಿ ತಾನು ಕೆಲಸವನ್ನು ಕಳೆದುಕೊಂಡು ಅಷ್ಟಕ್ಕಾಗಿ ಬಂದಿದ್ದೇನೆ ಎಂದು ಹೇಳುವುದು ಹೇಗೆ? ಆದರೆ ಇಂಥ ಪರಿಚಯವನ್ನು ಬಳಸದಿದ್ದರೆ ಅದರ ಉಪಯೋಗ ವಾದರೂ ಏನು ಎಂದುಕೊಂಡಳು. ಈ ಮನಸ್ಸಿನ ಇಬ್ಬಣದಲ್ಲಿ ಆಕೆ ಸುಮ್ಮನಿರುವಾಗಲೆ ದೈವವೇ ದಾರಿ ಕಡಿದಂತೆ ರಂಗನಾಥನ್ ಕೇಳಿದ

"ಅದು ಹೇಗೆ ನೀವು ಈ ಹೊತ್ತಿನಲ್ಲಿ ಬಂದಿರಿ ? ಶಾಲೆಗೆ ರಜೆಯೆ ?"

"ಶಾಲೆಗೆ ಕಾಯಂ ರಜೆ!"

"ಅಂದರೆ ?—"

"ಅಂದರೆ ಶಾಲೆಯಿಂದ ನನಗೆ ಕಾಯಂ ರಜೆ!"

"ಹೌದೆ ? ದ್ಯಾಟ್ಸ್ ಗುಡ್ ನ್ಯೂಸ್."

"ನನಗೆ ಕೆಲಸ ಇಲ್ಲದಾದದ್ದು ಸಂತೋಷದ ಸಮಾಚಾರವೆ ?"

"ಒಬ್ಬರ ನಷ್ಟ ಇನ್ನೊಬ್ಬರ ಲಾಭ! ಒನ್ ಮ್ಯಾನ್ಸ್ ಫುಡ್—"

"ಆದರೆ ಫುಡ್ಡೇ ಇಲ್ಲದಿದ್ದಾಗ—?"

"ಉಂಟೇ ಎಲ್ಲಾದರೂ—ಅದೂ ನಿಮ್ಮಂಥವರಿಗೆ ?"

ಇದು ರಂಗನಾಥನ್‌ನ ಮಾತಿನ ಸಹಜವಾದ ರೀತಿ. ನೇರವಾಗಿ ಸ್ತುತಿಮಾಡುವ ಹಾಗಿಲ್ಲ. ನಡು ಮಾತಿನಲ್ಲಿಯೇ ಅದನ್ನು ಅಲ್ಲಿ ಇಲ್ಲಿ ಸೇರಿಸಿ ಮನಸ್ಸನ್ನು ಸೆಳೆಯುವುದು.

"ನಮ್ಮಂಥವರು! ಕೆಲಸವಿಲ್ಲದಿದ್ದ ಮೇಲೆ ಎಲ್ಲರೂ ಒಂದೇ!"

"ಸರಿ. ಹಾಗೆಲ್ಲ ಹೇಳಬೇಡಿ" ಎಂದ ರಂಗನಾಥನ್.

"ಆದರೆ ಕೆಲಸ ಸಿಕ್ಕಬೇಕಲ್ಲ ಮೊದಲು!"

"ಬೇಕು ಎಂದರೆ ಸಿಕ್ಕುತ್ತದೆ!"

"ಕಲ್ಪವೃಕ್ಷದ ಮಾತು ಹೇಳುತ್ತಿದ್ದ ಹಾಗೆ ಕಾಣುತ್ತದೆ ನೀವು!"

ಎಂದು ಮೋಹಿನಿ ನಕ್ಕಳು—ತನ್ನ ಸಲಿಗೆಯ ರೀತಿಗೆ ತಾನೇ ಅಚ್ಚರಿಗೊಂಡವಳಂತೆ. ರಂಗನಾಥನ್‌ನಿಗೆ ಆ ಮಾತು ಒಪ್ಪಿಗೆಯಾಯಿತು. ಗಟ್ಟಿಯಾಗಿ ನಕ್ಕು ಹೇಳಿದ:

"ಚಿತ್ರಪ್ರಪಂಚ ಅಂದರೆ ಕಲ್ಪವೃಕ್ಷ ಇದ್ದಹಾಗೆಯೆ!"

"ಯಾರಿಗೆ?—ಡೈರೆಕ್ಟರ್‌ಗಳಿಗೆ—?"

"ಡೈರೆಕ್ಟರುಗಳು ಏನು ಮಾಡಿಯಾರು? ಅವರನ್ನು ಡೈರೆಕ್ಟ್ ಮಾಡುವವರಿಗೆ."

"ಅಂದರೆ ಸ್ಟಾರ್ಸ್‌ಗೆ ಎಂದಂತಾಯಿತು"

"ಅಥವಾ ಸ್ಟಾರ್ಸ್ ಆಗಬಲ್ಲವರಿಗೆ—"

ಮೋಹಿನಿಗೆ ವಸಂತನ ಚೇಷ್ಟೆಯ ಮಾತು ನೆನಪಾಯಿತು. ತಾನು ನಿಜವಾಗಿಯೂ ಒಂದು ದಿನ 'ಸ್ಟಾರ್' ಆಗಬಹುದೆ? ಆದರೆ? ತನಗೆ ಪರಿಚಯವಿಲ್ಲದ ಯಾವುದೋ ಒಂದು ಬೇರೆಯಾದ ಪ್ರಪಂಚದ ಹೆಬ್ಬಾಗಿಲಲ್ಲಿ ನಿಂತವಳ ಮನಃಸ್ಥಿತಿ ಮೋಹಿನಿಯದಾಗಿತ್ತು.

"ಅದು ಹೋಗಲಿ, ನಮ್ಮ ಶಾಕುಂತಲ ಚಿತ್ರದ ವಿಚಾರದಲ್ಲಿ ಅನುರಾಧಾ ನಿಮಗೆ ಏನೋ ಹೇಳಿದ್ದರಲ್ಲವೆ?"

"ಏನು, ನಾನು ಕೆಲಸ ಮಾಡಬೇಕೆಂದೆ?"

"ನಾನೇ ಸೂಚಿಸಿದ್ದೆ. ಆದರೆ ನೀವು ಬೇಡ ಎಂದಿರಂತಲ್ಲ? ಹೌದೆ?"

"ಹುಂ—ಆಗ ಹೇಳಿದ್ದೆ—"

"ಅಂದರೆ ಈಗ?"

"ಈಗಲೂ ಅಷ್ಟೇ ಎಂದು ಕಾಣುತ್ತದೆ!"

ರಂಗನಾಥನ್‌ನ ಆತುರವನ್ನು ಅಳತೆ ಮಾಡಲೆಂದು ಮೋಹಿನಿ ಹಾಗೆ ಹೇಳಿದಳು. ಇಲ್ಲವಾದರೆ ಅಷ್ಟನ್ನೇ ಹುಡುಕಿಕೊಂಡು ಬಂದವಳು ಹಾಗೇಕೆ ಹೇಳುತ್ತಿದ್ದಳು? ಆದರೆ ಸಾಧ್ಯವಿದ್ದಮಟ್ಟಿಗೆ ಸ್ಪಷ್ಟವಾಗಿ ಆತುರವನ್ನು ತೋರಗೊಡದೆ ತನ್ನ ಕೆಲಸವನ್ನು ನಯವಾದ ಮಾತುಗಾರಿಕೆಯಿಂದ ಸಾಧಿಸುವುದು ರಂಗನಾಥನ್‌ನಿಗೆ ಕರಗತವಾದ ಕಲೆಯಾಗಿತ್ತು. ಅವನೆಂದ:

"ಯಾಕೆ? ಚಿತ್ರಗಳಲ್ಲಿ ಕೆಲಸ ಮಾಡುವ ಮನಸ್ಸಿಲ್ಲವೆ?"

"ಹೆದರಿಕೆಯಾಗುತ್ತದೆ!"

" ಹೆದರಿಕೆಯೆ ? "

" ನನ್ನಿಂದೇನಾದೀತು ಎಂದು. ಅಲ್ಲದೆ—"

" ನಿಮ್ಮಿಂದ ಏನಾಗಬಹುದು ಎಂಬುದು ನಮಗೆ ಸಂಬಂಧಿಸಿದ ವಿಷಯ!"

ಕೈಗೆ ಬಂದುದನ್ನು ಬಿಡಲಾಗದೆ ಬಂದ ಸಂಧಿಯನ್ನು ಸಾಧಿಸಿಯೇ ಬಿಡುವುದೆಂದು ಕೊನೆಗೆ ನೇರವಾಗಿ ರಂಗನಾಥನ್ ಕೇಳಿಬಿಟ್ಟ.

" ನಿಮಗೀಗ ಯಾವುದೂ ಕೆಲಸವಿಲ್ಲವಷ್ಟೆ ! "

" ಹುಡುಕುತ್ತಿದ್ದೇನೆ "

" ಮತ್ತೆ ಸ್ಕೂಲ್‌ನಲ್ಲಿಯೆ ? "

" ಅದಂತೂ ಮುಗಿಯಿತಲ್ಲ—"

" ಹಾಗಿದ್ದರೆ ನನ್ನ ಸೂಚನೆಯನ್ನು ನೀವು ಯಾಕೆ ಒಪ್ಪಬಾರದು ? "

" ಯಾವ ಸೂಚನೆ ? "

" ಶಾಕುಂತಲ ! "

" ಆದರೆ ಅದು ಎಷ್ಟು ದಿನವಾದೀತು ? ಯಾವುದಾದರೂ ಒಂದು ಕಾಯಂ ಕೆಲಸವಿದ್ದರೆ—"

" ಹಾಗಾದರೆ—"

ಎಂದು ರಂಗನಾಥನ್ ಒಂದೆರಡು ನಿಮಿಷ ಯೋಚನೆಯಲ್ಲಿ ಮುಳುಗಿದ. ಆಮೇಲೆ ಕೇಳಿದ :

" ನಮ್ಮ ಆಫೀಸಿನಲ್ಲಿ ಕೆಲಸ ಮಾಡುತ್ತೀರಾ ? "

" ಏನೆಂದು ? "

" ಕೆಲಸಕ್ಕೊಂದು ಹೆಸರು ಬೇಕೆ ? "

" ಹೆಸರು, ಕೆಲಸ—ಎರಡೂ ಬೇಕು ! "

ಏನಾದರೂ ಮಾಡಿ ಮೋಹಿನಿಯನ್ನು ತಮ್ಮ ' ಕಂಪೆನಿ 'ಗೆ ಸೇರಿಸಿಕೊಳ್ಳಬೇಕೆಂದು ಸ್ಪಷ್ಟವಾಗಿದ್ದ ರಂಗನಾಥನ್‌ನ ಮಾತಿನ ರೀತಿಗೆ ಮೋಹಿನಿಯ ಮಾತು ಸಮರ್ಪಕವಾದ ಉತ್ತರವಿದ್ದಂತಿತ್ತು. ಆದರೆ ಆತನ ಲಕ್ಷ್ಯ ಆ ಕಡೆಗೆ ಇರಲಿಲ್ಲವೆಂದೇ ನಗುಮಾತಿನಲ್ಲಿ ಮುಂದುವರಿದ :

" ಹಾಗಿದ್ದರೆ ಸಂಬಳ ಬೇಡ ಎಂದಾಯಿತು ! "

" ಹೌದೆ ? ಇದೊಳ್ಳೆಯ ವ್ಯವಹಾರ " ಎಂದು ಗಟ್ಟಿಯಾಗಿ ನಕ್ಕಳು.

" ಹೋಗಲಿ. ಹೆಸರು, ಕೆಲಸ, ಸಂಬಳ ಮೂರೂ ಇದ್ದರೆ ಒಪ್ಪಿಗೆಯೆ ?"

" ಯಾವುದಕ್ಕೆ ? "

" ನಮ್ಮ ಆಫೀಸಿನಲ್ಲಿ ಎಂದು ಹೇಳಿದೆನಲ್ಲ."

" ಹೆಸರೇನು ? "

" ಸೆಕ್ರೆಟರಿ ! "

" ಕೆಲಸ ? "

" ನಾನು ಹೇಳಿದ್ದು ! "

" ಸಂಬಳ ? "

" ಸ್ಕೂಲಿನಲ್ಲಿ ಎಷ್ಟಿದ್ದಿತು ?"

" ನೂರಿಪ್ಪತ್ತು."

" ಇಲ್ಲಿ ಎಷ್ಟಾಗಬೇಕು ? "

" ಅದನ್ನು ನಾನೇನು ಹೇಳಬೇಕು ? ಇದ್ದುದಕ್ಕಿಂತ ಕಡಿಮೆಯಾಗಿರಬಾರದು. ಅಷ್ಟೆ ! "

" ನಮ್ಮಲ್ಲಿ ಯಾವಾಗಲೂ ಯೋಗ್ಯತೆಗೆ ತಕ್ಕ ಸಂಬಳ—" ರಂಗನಾಥನ್ ನಗು ಸೂಸಿದ.

" ಅಂದರೆ ಎಷ್ಟು ? "

" ಅದನ್ನು ಈಗಲೆ ಹೇಗೆ ಹೇಳಲಿಕ್ಕಾದೀತು ? ಕೆಲಸ ನೋಡಿದಮೇಲೆ ತಾನಾಗಿಯೆ ತಿಂಗಳ ಕೊನೆಗೆ ನಿರ್ಣಯವಾಗುತ್ತದೆ " ಎಂದು ಮತ್ತೆ ನಕ್ಕು,

" ಹಾಗಾದರೆ ಒಪ್ಪಿಗೆಯೆ ? " ಎಂದ.

" ನಾಳೆ ಹೇಳುತ್ತೇನೆ."

" ಏನು ಯೋಚನೆ ? ಮತ್ತೆಲ್ಲಾದರೂ ಮಾತುಕೊಟ್ಟಾಗಿದೆಯೆ ? "

" ಇಲ್ಲ. ಆದರೂ—"

" ಹದಿನೈದು ನಿಮಿಷ ಮಾತ್ರ ಯೋಚಿಸಬಹುದು, ಯೋಚಿಸಬೇಕಾಗಿಯೆ ಇದ್ದರೆ. ನಾನಿದೇ ಬಂದೆ. ಅಷ್ಟರಲ್ಲಿಯೆ ನಿಮ್ಮ ನಿರ್ಣಯ ಸಿದ್ಧವಾಗಿರಲಿ ! " ಎಂದು ಕೋಣೆಯ ಹೊರಕ್ಕೆ ಹೋದ. ರಂಗನಾಥನ್‌ನ ಮಾತಿನ ರೀತಿ, ಅಚ್ಚುಕಟ್ಟು, ಔಚಿತ್ಯದ ಎಲ್ಲೆಯನ್ನು ಎಂದಿಗೂ ಮೀರದ ಸಲಿಗೆ, ಅದರಿಂದಾಗಿ ಸಹಜವಾಗಿಯೆ ಹುಟ್ಟುವ ವಿಶ್ವಾಸ ಮೋಹಿನಿಯ ಮನಸ್ಸನ್ನು ಸೂರೆ

ಗೊಂಡಿದ್ದವು 'ಯಾಕೆ ಒಪ್ಪಬಾರದು ?' ಎಂದೊಮ್ಮೆ 'ಚಿತ್ರಪಟ ಸೇರುವು ದಾದರೆ ಇನ್ನೂ ಯೋಚಿಸು' ಎಂದು ಹೇಳಿದ ವಸಂತನ ಮಾತು ಮತ್ತೊಮ್ಮೆ ವಸಂತನೆದುರು ತಾನು ಆಡಿದ ಮಾತು ಮತ್ತೆ ನೆನಪಾಯಿತು. 'ಬದುಕೇ ನಮ್ಮ ಕೈಯನ್ನು ಹಿಡಿದು ನಡಸುತ್ತದೆ' ಬಂದುದನ್ನು ಬಂದಂತೆ ಎದುರಿಸು ವುದೇ ಬದುಕು ಅಲ್ಲವೆ ? ಅಲ್ಲದೆ ಕೆಲಸವೆಂದರೆ ಕೆಲಸ. ಯಾವುದಾದರೇನು ? ಯಾವ ಆಫೀಸಾದರೂ ಅಷ್ಟೆ. ಒಳ್ಳೆಯದೆಂದರೆ ಒಳ್ಳೆಯದು, ಕೆಟ್ಟದು ಎಂದರೆ ಕೆಟ್ಟದು. ಇಲ್ಲಿ ರಂಗನಾಥನ್—ಅದೂ ಆತ ಎಲ್ಲದಕ್ಕೂ ಮುಖ್ಯಸ್ಥ—ತಾನಾ ಗಿಯೆ ಬರಮಾಡಿಕೊಳ್ಳುತ್ತಿರುವಾಗ, ಆತನ ಕಾರ್ಯದರ್ಶಿನಿಯೇ ಆಗಬಹು ದಾದಾಗ—ಇಂಥ ಸಂದರ್ಭ ಬೇರೆ ಯಾವ ಆಫೀಸಿನಲ್ಲಾಗಲಿ, ಸಂಸ್ಥೆಯಲ್ಲಾ ಗಲಿ ಸಿಕ್ಕುವುದು ಸಾಧ್ಯವೆ ? ಬೇಡವೆನಿಸಿದರೆ ಬಿಟ್ಟರಾಯಿತು. ಕೆಲಸವನ್ನು ಕೊಡುವುದು ಕೊಡುವವರ ಕೈಯಲ್ಲಾದರೆ ಬೇಡವಾದಾಗ ಬಿಡುವುದು ಮಾಡು ವವರ ಕೈಯಲ್ಲಿಲ್ಲವೆ ? ಈ ಕೆಲಸವನ್ನು ಒಪ್ಪಿದ್ದೇ ಆದರೆ ಆಪಟೆ–ಅನುರಾಧೆ ಇಬ್ಬರೂ ಇನ್ನೂ ಹತ್ತಿರದವರಾಗಿ ಬಿಡುತ್ತಾರೆ ಎಲ್ಲವೂ ಒಂದು ಬಳಗ ಬೆಳೆದ ಹಾಗೆ ಬೆಳೆಯುತ್ತದೆ, ಎಂದು ಏನೊಂದನ್ನೆಲ್ಲ ಯೋಚಿಸಿ 'ಒಪ್ಪ ಬಹುದು' ಎಂದುಕೊಳ್ಳುವಂತಾದಳು. ಆದರೆ ಅದೇಕೊ ವಸಂತನ ಮಾತು ಮಾತ್ರ ಮೇಲಿಂದಮೇಲೆ ಜ್ಞಾಪಕಕ್ಕೆ ಬರುತ್ತಿತ್ತು. ಆತ ಯಾವ ಕಾರಣ ಗಳನ್ನೂ ಹೇಳಿರಲಿಲ್ಲ ಆತನ ಅನುಮಾನ ಮಾತ್ರ ಸ್ಪಷ್ಟವಾಗಿತ್ತು. ಚಿತ್ರಪಟ ಪ್ರಪಂಚದ ವಿಷಯದಲ್ಲಿ ಸಾಮಾನ್ಯವಾಗಿ ರೂಢವಾಗಿದ್ದ ಪೂರ್ವಗ್ರಹಗಳಿಂದಾ ಗಿಯೇ ಆತ ಹಾಗೆ ಹೇಳಿರಬಹುದು ಎಂದುಕೊಂಡಳು ಅಲ್ಲದೆ ರಂಗ ನಾಥನ್‌ನಂಥ ನೇರವಾದ, ವ್ಯವಸ್ಥಿತವಾದ, ಮುಚ್ಚುಮರೆಯಿಲ್ಲದ ಸ್ವಭಾವ ದೆದುರು ಯಾವ ವಿಪರೀತಕ್ಕೆ ಅವಕಾಶ ಎಂದೂ ಕೇಳಿಕೊಂಡಳು. ಹೀಗಾಗಿ ಇನ್ನೈದು ನಿಮಿಷಗಳಲ್ಲಿ ಹಿಂತಿರುಗಲಿದ್ದ ಆತನೆದುರು 'ಒಪ್ಪಿದೆ' ಎಂದು ಹೇಳಲು ಸಿದ್ಧಳಾದಳು. ತನ್ನ ಕೆಲಸದ ಸಮಸ್ಯೆ ಇಷ್ಟು ಸಹಜವಾಗಿ ಬಗೆಹರಿಯ ಬಹುದೆಂದು ಆಕೆ ಎಣಿಸಿರಲಿಲ್ಲ. ಆದರೂ ಅನುರಾಧೆಯ ಮಾತಿನ ಮೇಲಿಂದ ರಂಗನಾಥನ್‌ನ ಅನೌಪಚಾರಿಕವಾದ ವೃತ್ತಿಯಿಂದ ತನಗೆ ಆ ಬಗೆಯಲ್ಲಿ ವಿಶೇಷವಾದ ಹೆದರಿಕೆ ಇರಲಿಲ್ಲವೆಂಬುದೇ ನಿಜವೆನಿಸಿತು. ಇಪ್ಪತ್ತು ನಿಮಿಷ ಗಳಾದರೂ ರಂಗನಾಥನ್ ಬರಲೇ ಇಲ್ಲ. ಬದಲಾಗಿ ಜವಾನನೊಬ್ಬ ಬಂದು

" ಸಾಹೇಬರು ಕರೆಯುತ್ತಿದ್ದಾರೆ " ಎಂದು ಹೇಳಿದ. ಆತನ ಹಿಂದೆಯೇ ' ಸೆಟ್ ' ನೋಡಲೆ ಹೋದಳು ರಂಗನಾಥನ್ ಆಪಟೆಯ ಕೂಡ ಏನನ್ನೋ ಚರ್ಚಿಸುತ್ತಿದ್ದ. ಬದಿಯಲ್ಲಿ ಋಷ್ಯಾಶ್ರಮವೊಂದು ಸಿದ್ಧವಾಗುವುದರಲ್ಲಿತ್ತು. ' ಶಾಕುಂತಲ'ದ ಸಿದ್ಧತೆ ಜೋರಿನಿಂದ ನಡೆದಿತ್ತೆಂದು ಮೋಹಿನಿಗೆ ಬೇರೆಯಾಗಿ ಹೇಳಬೇಕಾಗಿರಲಿಲ್ಲ

ಮೋಹಿನಿ ಒಬ್ಬಂಟಿಗಳಾಗಿ ಸ್ಟೂಡಿಯೋಕ್ಕೆ ಬಂದದ್ದು ಅದೇ ಮೊದಲ ಸಲವೆಂಬುದು ಆಪಟೆನಿಗೂ ಗೊತ್ತಾದ್ದರಿಂದ ಆಕೆ ಆಗ ಬಂದ ಕಾರಣ ಮಾತ್ರ ಆತನಿಗೆ ಹೊಳೆಯಲಿಲ್ಲ ರಂಗನಾಥನ್ ಅಷ್ಟರಲ್ಲಿಯೆ ಕಲವೊಂದು ಮಾತುಗಳನ್ನು ಆಡಿವಂತಿತ್ತು ಶಾಲೆಯಿಂದ ತಾನು ದೂರವಾದ ಸಮಾಚಾರವನ್ನು ಒಂದು ಮಾತಿನಿಂದಲೂ ತನಗೆ ತಿಳಿಸದೆ ನೇರವಾಗಿ ರಂಗನಾಥನ್ ಕಡೆಗೆ ಬಂದದ್ದು ಆತನಿಗೆ ಅಷ್ಟೇನೂ ಒಪ್ಪಿಗೆಯಾದ ವಿಷಯವಾಗಿರಲಿಲ್ಲ ಅಲ್ಲದೆ ರಂಗನಾಥನ್‌ನ ಪೂರ್ವಾಚಾರಗಳನ್ನು ಆತ ತಿಳಿದವನಾದ್ದರಿಂದ ಮೋಹಿನಿಯ ಕೂಡ ಸಲಿಗೆಯ ವಿಚಾರದಲ್ಲಿಯೂ ಆತ ಸಾಶಂಕನಾಗಿಯೇ ಇದ್ದನಲ್ಲದೆ ಈ ವಿಷಯ ಒಂದಿಲ್ಲೊಂದು ದಿನ ತೊಂದರೆಯನ್ನುಂಟುಮಾಡಬಹುದೆಂದು ಅನುರಾಧೆಗೆ ಹೇಳಿಯೂ ಇದ್ದ ಆದರೆ ಅನುರಾಧೆ ಅಂಥ ವಿಷಯಗಳನ್ನು ಕುರಿತು ದೀರ್ಘವಾಗಿ ಯೋಚಿಸಿದವಳೇ ಅಲ್ಲ ಆಕೆಯ ಸ್ವಭಾವ ಅದು. ಮೋಹಿನಿ ಬಂದ ಕೂಡಲೆ ಆಪಟೆ ಕೇಳಿದ .

" ನಿಮ್ಮ ಶಾಲೆಯ ಕೆಲಸದ ಸಮಾಚಾರ ನನಗೆ ಹೇಳಲೇ ಇಲ್ಲವಲ್ಲ ? "

" ಹೇಳಬೇಕೆಂದಿದ್ದೆ ಆದರೆ—" ಎಂದು ಅರ್ಧಕ್ಕೆಯೆ ತಡೆದಳು. ಹೇಳಬೇಕಾದ್ದೂ ಇರಲಿಲ್ಲ.

" ಇವರು ನಮ್ಮ ಆಫೀಸಿನಲ್ಲಿ ಸೆಕ್ರೆಟರಿ ಕೆಲಸ ಮಾಡಬಹುದಲ್ಲವೆ ? " ಎಂದು ರಂಗನಾಥನ್ ಕೇಳಿದ

" ಆಗಬಹುದು. ಅದಕ್ಕೇನು ? "

ಎಂದು ಆಪಟೆ ಬಾಯಿಂದ ಹೇಳಿದನಾದರೂ ' ಏನಾದರೊಂದು ಕೆಲಸದ ನೆಪ ಹೂಡಿ ಈಕೆಯನ್ನು ಹತ್ತಿರ ತಂದುಕೊಳ್ಳುವುದೇ ಇಚ್ಛೆಯಾಗಿದ್ದಾಗ ಆಕೆ ಯಾವ ಕೆಲಸವನ್ನು ಮಾಡಬಹುದು, ಯಾವುದನ್ನು ಮಾಡಲಾರಳು ಎಂಬ ಯೋಚನೆ ಯಾಕೆ ? ' ಎಂದು ಅಂದುಕೊಂಡ. ಮೋಹಿನಿ ಕೇಳಿದಳು :

" ಅನುರಾಧೆಯಿಂದ ಮತ್ತೇನಾದರೂ ಕಾಗದ ಬಂದಿದೆಯೆ ? "

" ಇಲ್ಲ. ಯಾಕೆ ? "

" ಇಂದು ಆಕೆ ಬರಬೇಕಾಗಿದ್ದಿತು, ಅಲ್ಲವೆ ? "

" ಇಂದಲ್ಲ, ನಾಳೆ—ಸಾಯಂಕಾಲದ ರೈಲಿನಿಂದ ಬರುತ್ತಾಳೆ "

ಸಾಮಾನ್ಯವಾಗಿ ನಗುಮಾತುಗಳನ್ನೇ ಹೇಳುವ ಆಪಟೆ ಇಂದು ನೇರವಾಗಿ ಒಂದೆರಡು ಮಾತುಗಳನ್ನು ಮಾತ್ರ ಆಡಿ ಸುಮ್ಮನಾದುದನ್ನು ನೋಡಿ ಮೋಹಿನಿಗೆ ಹೇಗೋ ಅನಿಸಿತು. ರಂಗನಾಥನ್ ಮೋಹಿನಿಗೆ ಹೇಳಿದ :

" ಇನ್ನು ಹದಿನೈದು ನಿಮಿಷ ವೇಟ್ ಮಾಡುತ್ತೀರಾ ? ಇದೇ ಬಂದೆ."

" ಆಗಬಹುದು "

ಎಂದು ಮೋಹಿನಿ ಮತ್ತೆ ಆಫೀಸಿನಲ್ಲಿ ಬಂದು ಕುಳಿತಳು. ಈ ಸಲ ಮಾತ್ರ ರಂಗನಾಥನ್ ಹೇಳಿದ ವೇಳೆಗೆ ಸರಿಯಾಗಿ ಬಂದು ಕೇಳಿದ :

" ಏನಾಯಿತು—ನಿರ್ಣಯ ? "

" ಏನಾಗುವುದು ? ನನ್ನ ಪರವಾಗಿ ಎಲ್ಲ ನಿರ್ಣಯವನ್ನು ನೀವು ಮಾಡಿದ ಹಾಗೆಯೆ ಇದೆ ಎಂದಮೇಲೆ ? "

" ಅಂಥದೇನಾಯಿತು ? "

" ಆಪಟೆಯವರ ಮುಂದೆ ನೀವು ಹೇಳುತ್ತಿದ್ದಿಲ್ಲವೆ ? "

" ಆದರೆ ನೀವು ಒಪ್ಪದಿದ್ದರೆ ಆಪಟೆನಿಗೆ ನಾನು ಹೇಳಿದ್ದರಿಂದ ಏನಾಗಬೇಕು ? "

" ಆಪಟೆ ಒಪ್ಪಿದ್ದಾರೆಯೆ ? "

" ಆತನ ಒಪ್ಪಿಗೆ ಬೇಕಾಗಿಯೇ ಇಲ್ಲ. ನನ್ನ ಸೆಕ್ರೆಟರಿಯಾಗಬೇಕಾಗಿರುವವರು ನೀವು ! "

" ಹೌದೆ ? ಹಾಗಾದರೆ ಆಗಬಹುದು ! "

' ಹಾಗಾದರೆ ' ಎಂಬ ಮಾತನ್ನು ಮೋಹಿನಿ ಯಾಕೆ ಹೇಳಿದಳೆಂಬುದು ತಿಳಿಯಲಾಗದ ವಿಷಯ. ರಂಗನಾಥನ್‌ನಿಗೆ ಆಕೆಯ ಒಪ್ಪಿಗೆಗಿಂತಲೂ ಹೆಚ್ಚಾಗಿ ಆ ಒಂದು ಮಾತಿನಿಂದ ಸಂತೋಷವಾಯಿತೆಂದು ಬೇರೆಯಾಗಿ ಹೇಳಬೇಕಾದುದೇ ಇಲ್ಲ. ಅದೇ ಉತ್ಸಾಹದಲ್ಲಿ ಉಸಿರಿದ :

" ನಾಳೆಯಿಂದ ಕೆಲಸಕ್ಕೆ ಬರಬೇಕು—"

" ಏನು ಕೆಲಸ ?—"

" ಬಂದಮೇಲೆ ತಾನಾಗಿಯೆ ತಿಳಿಯುತ್ತದೆ! "

" ಯಾವಾಗ ಬರುವುದು ? "

" ಮುಂಜಾನೆ ಹತ್ತರಿಂದ ಸಂಜೆ ಆರು—ಅಥವಾ ಕೆಲಸ ಮುಗಿಯುವ ವರೆಗೆ."

ರಂಗನಾಥನ್‌ನ ಕೊನೆಯ ಮಾತುಗಳು ಸಲಿಗೆಯ ರೀತಿಯಲ್ಲಿರಲಿಲ್ಲ. ಕೆಲಸದ ನೇಮಕವನ್ನು ಸಲಿಗೆಯಲ್ಲಿ ಹೇಳಿದ್ದರೂ ಮಾಡಬೇಕಾಗಬಹುದಾದ ಕೆಲಸಗಳ ವಿಷಯದಲ್ಲಿ ಆ ಸಲಿಗೆಯಿಂದ ಯಾವ ಪ್ರಯೋಜನವೂ ಆಗಲಿಕ್ಕಿಲ್ಲ ವೆಂದು ಸೂಚಿಸುವ ದರ್ಪದ—ಅಥವಾ ಕಾರ್ಯಕ್ಷಮತೆಯ—ಛಾಯೆ ಆ ಮಾತಿನಲ್ಲಿ ಸ್ಪಷ್ಟವಾಗಿ ಮೂಡಿದ್ದಿತು

" ನಾನಿನ್ನು ಹೊರಡಲಾ ? "

" ಇನ್ನೂ ಆರು ಗಂಟೆಯಾಗಿಲ್ಲ! " ಎಂದು ನಕ್ಕ ರಂಗನಾಥನ್.

" ಇನ್ನೈದು ನಿಮಿಷ ಅಷ್ಟೆ ? "

" ಕೆಲಸವೂ ಮುಗಿದಿಲ್ಲ ! "

" ಕೆಲಸ ಪ್ರಾರಂಭವಾಗಿಯೇ ಇಲ್ಲ! ಕೆಲಸ ನಾಳೆನಿಂದ ಎಂದು ಹೇಳಿ ದಿರಲ್ಲವೆ ? "

" ಈಗ ಚಹ ಕುಡಿಯುವ ಕೆಲಸವಿದೆ—"

" ಇದು ಕೆಲಸವೆ ? "

" ಇದೂ ಒಂದು ಕೆಲಸ—ಅಂದರೆ ಸಾಹೇಬರಿಗೆ ಚಹ ಸರಿಯಾಗಿ ಒದ ಗಿಸುವುದು."

ಸಾಮಾನ್ಯವಾಗಿ ಆಕೆ ಮಾಡಬೇಕಾಗಬಹುದಾದ ಕೆಲಸಗಳ ಸ್ಥೂಲವಾದ ಪರಿಚಯವನ್ನು ಚಹ ಕುಡಿಯುವುದು ನಡೆದಾಗ ಮಾಡಿಕೊಟ್ಟ. ಅದನ್ನೆಲ್ಲ ಕೇಳಿಕೊಂಡು ಮೋಹಿನಿ ' ಇದಾವ ಕೆಲಸ! ಬೇಕಾದ ಹಾಗೆ ಮಾಡಬಹುದು ' ಎಂದುಕೊಂಡಳು.

ಗೊತ್ತುಮಾಡಿದಂತೆ ಡಿಸೆಂಬರ್ ತಿಂಗಳ ಮೊದಲ ವಾರದಲ್ಲಿ ಪ್ರಾರಂಭವಾದ 'ಶಾಕುಂತಲ'ದ ಶೂಟಿಂಗ್ ಭರದಿಂದ ಸಾಗಿತ್ತು. ಕ್ರಿಸ್‌ಮಸ್ ಹೊತ್ತಿಗೆ ಆಪಟೆ ರಂಗನಾಥನ್ ಅವರ ನಿರೀಕ್ಷೆಯನ್ನು ಮೀರಿಸಿ ಚಿತ್ರಪಟದ ಪ್ರಗತಿ ನಡೆದಿತ್ತು. ಆಪಟೆ ಮುಖ್ಯ ನಿರ್ದೇಶಕನಾಗಿದ್ದರಿಂದ ಆತನಿಗೆ ಇದೊಂದು ಹೆಮ್ಮೆಯ ವಿಷಯವೇ ಆಗಿತ್ತು. ಇದಕ್ಕೆ ಮುಖ್ಯವಾದ ಕಾರಣವೆಂದರೆ ಅದರಲ್ಲಿ ಕೆಲಸ ಮಾಡುತ್ತಿದ್ದ ನಟನಟಿಯರಿಂದ ಸಹಕಾರ ಆತ ಅಪೇಕ್ಷಿಸಿದಂತೆ ಸಿಕ್ಕಿತ್ತು. ಮೂರು ತಿಂಗಳಲ್ಲಿ ಮುಗಿಯಿಸಿಬಿಡುತ್ತೇನೆಂದು ಆತ್ಮವಿಶ್ವಾಸದಿಂದ ಎಷ್ಟೋ ಬಾರಿ ರಂಗನಾಥನ್‌ನಿಗೆ ಹೇಳಿಯೂ ಇದ್ದ.

ದುಷ್ಯಂತನ ಪಾರ್ಟು ವಹಿಸಿದ ರಾಮಕುಮಾರ ವರ್ಮಾ ಹಾಗು ಶಕುಂತಲೆಯ ಕೆಲಸ ಮಾಡುತ್ತಿದ್ದ ಯಶೋಮತಿ ಇಬ್ಬರೂ ನುರಿತ ನಟನಟಿಯರು. ಹತ್ತಾರು ಚಿತ್ರಗಳಲ್ಲಿ ಕೆಲಸ ಮಾಡಿದವರು. ಅಲ್ಲದೆ ಅವರಿಬ್ಬರಿಗೂ ಮುಂಬರುವ ಜೂನ್ ತಿಂಗಳಿಂದ ಬೇರೆ ಎಲ್ಲಿಯೋ ಕೆಲಸ ಮಾಡಬೇಕಾಗಿದ್ದರಿಂದ ಈ ಚಿತ್ರಪಟದ ಕೆಲಸ ಬೇಗನೆ ಮುಗಿದರೆ ಅವರಿಗೂ ಅನುಕೂಲವಾಗಿದ್ದಿತು. ಇದಲ್ಲದೆ ಒಟ್ಟು ಚಿತ್ರಪಟಕ್ಕೆ ಇಂತಿಷ್ಟು ಎಂಬ ರೀತಿಯಲ್ಲಿ ಕಾಂಟ್ರಾಕ್ಟ್ ಆಗಿದ್ದರಿಂದ ಆಪಟೆನ ಉತ್ಸಾಹಕ್ಕೆ ಸರಿಯಾಗಿ ಅವರು ಕೆಲಸ ಮಾಡುತ್ತಿದ್ದರು. ಇದೇ ರೀತಿಯಾಗಿ ಕೆಲಸ ಸಾಗಿದ್ದರೆ ಮಾರ್ಚ್ ತಿಂಗಳ ಸುಮಾರಿಗೆ ಚಿತ್ರ ಮುಗಿಯಲೂಬಹುದಿತ್ತು. ಆದರೆ ಕ್ರಿಸ್‌ಮಸ್ ರಜೆಯ ಸುಮಾರಿನಿಂದ ಮೊದಲಾಗಿ ಮುಂದುವರಿದ ಕೆಲವೊಂದು ಘಟನೆಗಳಿಂದಾಗಿ ಚಿತ್ರಪಟದ ಭವಿತವ್ಯ ಬೇರೆಯಾಗಿಯೆ ರೂಪುಗೊಂಡಿತು.

ಚಿತ್ರದಲ್ಲಿ ಅನುರಾಧೆ ಕೆಲಸ ಮಾಡುವ ವಿಚಾರದಲ್ಲಿ ಆಪಟೆ ಮೊದಲಿನಿಂದಲೂ ಅಷ್ಟೊಂದು ಉತ್ಸಾಹ ತೋರಿಸಿರಲಿಲ್ಲ. ಅನುರಾಧೆ ಒಳಗಿನಿಂದಲೆ ಒತ್ತಾಯಪಡಿಸಿದಾಗಲೆಲ್ಲ ಏನಾದರೊಂದು ನಗೆಮಾತು ಹೇಳಿ ಆಕೆಯ ಆಸೆಯನ್ನು ಹಿಂದೂಡಿದ್ದ. ಆದರೆ ಈ ಸಲ ಆಕೆಯ ಆಸೆಗೆ ರಂಗನಾಥನ್‌ನ ಪುಷ್ಟಿಯೂ ಅರ್ಧಮರ್ಧ ದೊರೆತಿದ್ದಿತು. ಹೀಗಾಗಿ ಕೊನೆಯಲ್ಲಿ ಆಪಟೆನಿಗೆ ಒಪ್ಪಬೇಕಾಗಿದ್ದಿತು. ಎಷ್ಟಾದರೂ ಚಿಕ್ಕದಾದ ಪಾತ್ರ; ಸಾಗಿಸಿಕೊಂಡು

ಹೋದರಾಯಿತು, ಎಂದುಕೊಂಡಿದ್ದ. ಆದರೆ ತಾನು ವಹಿಸಿದ ಪಾತ್ರಕ್ಕೆ ಸರಿಯಾದ ಅಭಿನಯಕ್ಕಿಂತ ಉಳಿದ ಓಡಾಟಗಳೆ ಹೆಚ್ಚಾಗಿ, ಇಲ್ಲದ ತೊಂದರೆಗಳನ್ನುಂಟುಮಾಡಿತು. ಪ್ರಿಯಂವದೆಯ ಪಾತ್ರವನ್ನು ವಹಿಸಿ ಅನುರಾಧೆ ಮೊದಲ ಸಾರೆ ಸೆಟ್ ಮೇಲೆ ಬಂದಾಗ ಇಪ್ಪತ್ತು ಬಾರಿಯಾದರೂ 'ಕಟ್' ಮಾಡಬೇಕಾಯಿತು. ಆಶ್ರಮದಲ್ಲಿ ಮೊದಲ ಬಾರಿ ದುಷ್ಯಂತನೊಡನೆ ನಡೆದ ಮಾತುಗಳಲ್ಲಿ ಆಕೆ ತೋರಬೇಕಾಗಿದ್ದ ಸ್ನಿಗ್ಧಮಾಧುರ್ಯಪೂರ್ಣವಾದ ಮಾತುಗಾರಿಕೆಯನ್ನು ನಿರ್ವಹಿಸುವುದು ಆಕೆಗೆ ಅಸಾಧ್ಯವೆಂದೇ ತೋರಿತು. ಆಪಟಿಯಲ್ಲದೆ ಆ ಸನ್ನಿವೇಶದಲ್ಲಿದ್ದ ಇತರ ಪಾತ್ರಗಳಾದ ದುಷ್ಯಂತ ಅನಸೂಯೆ ಶಕುಂತಲೆ (ವರ್ಮಾ, ಮೋಹಿನಿ, ಯಶೋಮತಿ) ಎಲ್ಲರೂ ಬೇಸರಪಟ್ಟಿದ್ದರು. ಧ್ವನಿ ಲೇಖಕರು, ಕ್ಯಾಮೆರಾಮೆನ್‌ರು ಕೈಚೆಲ್ಲಿದರು ಉಳಿದ ಹತ್ತಾರು ನಿರ್ಮಾತೃಗಳಂತೆ ಯಾವ ರೀತಿಯಿಂದಲೂ ಕಾಳಿದಾಸನ ಕೃತಿಯನ್ನು ವಿಕೃತಗೊಳಿಸಲಾಗದ ಆಪಟೆನಿಗೆ ಎಲ್ಲವೂ ಸರಿಯಾಗದೆ ಮುಂದೆ ಸಾಗುವ ಮನಸ್ಸಾಗಲಿಲ್ಲ ಕೊನೆಯಲ್ಲಿ ಒಂದೆರಡು ಗಂಟೆ ಕೆಲಸವನ್ನು ನಿಲ್ಲಿಸಿದಾಗ ವರ್ಮಾ ಆಕೆಗೆ ಆ ಸನ್ನಿವೇಶಕ್ಕೆ ತಕ್ಕ ಅಭಿನಯವನ್ನು ಹತ್ತಾರು ಬಾರಿ ಹೇಳಿಕೊಟ್ಟ.

ವರ್ಮಾನಿಂದ ಈ ಅಭಿನಯವನ್ನು ಹೇಳಿಸಿಕೊಳ್ಳುವುದೇ ಒಂದು ಅನುರಾಧೆಗೆ ಆನಂದದ ವಿಷಯವಾಗಿತ್ತು ತನ್ನಿಂದಾಗಿ ಇಡೀ ಬೆಳಗಿನ ವೇಳೆಯೆಲ್ಲ ವ್ಯರ್ಥವಾಗಿ ಕಳೆಯಿತೆಂಬುದಾಗಲಿ ಮುನ್ನೂರು ಅಡಿ ಫಿಲ್ಮ್ ಹಾಳಾಯಿತೆಂಬುದಾಗಲಿ ಅನುರಾಧೆಯ ಗಮನಕ್ಕೆ ಬಂದಿರಲೇ ಇಲ್ಲ ಇಂಥ ಸೂಕ್ಷ್ಮಗಳನ್ನು ಆಕೆ ತಿಳಿಯುವುದಾದರೆ ಆಕೆ ಅನುರಾಧೆಯೆ ಆಗಿರಬೇಕಿರಲಿಲ್ಲ. ಮೊತ್ತಮೊದಲ ಸಾರೆ ಆಕೆ ರಾಮಕುಮಾರನನ್ನು ನೋಡಿದಾಗಿನಿಂದ ಆತನೊಡನೆ ತಾನು ಕೆಲಸ ಮಾಡುವುದಾದರೆ ತಾನು ಶಕುಂತಲೆಯೆ ಆಗಿದ್ದರೆ ಚೆನ್ನಾಗಿತ್ತು ಎಂಬ ಆಕೆಯ ಆಸೆ ದಿನ ಕಳೆದ ಹಾಗೆ ಬಲಿತಿತ್ತು ಆದರೆ ಅದಕ್ಕೆ ಅವಕಾಶವಿರುವುದು ಸಾಧ್ಯವಿರದ್ದರಿಂದ ರಾಮಕುಮಾರ ಸೆಟ್ ಮೇಲೆ ಇದ್ದಾಗಲೆಲ್ಲವೂ ಅಲ್ಲಿ ಅನುರಾಧೆ ಇರತಕ್ಕವಳೇ. ಆತನನ್ನು ಕುರಿತು ಆಕೆ ಯಶೋಮತಿಯ ಕೂಡ ಆಡಿದ ಮಾತುಗಳಿಗೆ ಲೆಕ್ಕವೇ ಇರಲಿಲ್ಲ. ರಾಮಕುಮಾರ ತುಂಬಾ ಚೆಲುವ. ನಡುಹರಯದ, ನಗೆಮಾತಿನ, ಮನಸೆಳೆಯಬಲ್ಲ ಯುವಕ ಮಾತುಮಾತಿಗೆ ಆತನ ಕೆಂದುಟಿಗಳ ಮೇಲೆ ಮಿನುಗುವ ನಸುನಗೆ ಅನುರಾಧೆಯನ್ನು ಸೆಳೆದಿತ್ತು.

ಯಶೋಮತಿಯ ಬಗ್ಗೆ ತುಂಬ ಅಸೂಯೆ ಪಡುವಂತೆ ಮಾಡಿತ್ತು.

ಈ ನೆಪವನ್ನು ಹೂಡಿಕೊಂಡು ಇಷ್ಟರಲ್ಲಿಯೆ ಅನುರಾಧೆ ಎರಡು ಸಲ ವರ್ಮಾನ ಕೋಣೆಯ ವರೆಗೆ ಹೋದದ್ದೂ ಇತ್ತು. ಹೆಣ್ಣುಗಳ ಮನಸ್ಸಿನ ಮೇಲೆ ತಾನು ಸದಾಕಾಲವೂ ಬೀರುತ್ತಿದ್ದ ಪ್ರಭಾವವನ್ನು ಬಲ್ಲವನಾಗಿದ್ದ ವರ್ಮಾನಿಗೆ ಅನುರಾಧೆಯ ಅನುರಕ್ತಿಯನ್ನು ತಿಳಿಯಲು ಬಹುಕಾಲ ಹಿಡಿಯಲಿಲ್ಲ. ಎಂದಿನಂತೆಯೆ ಆತ ಅದನ್ನು ಬೆಳೆಯಗೊಟ್ಟ. ನಾಲ್ಕಾರು ಕಡೆಯಲ್ಲಾದರೂ ಇಂಥ ಸನ್ನಿವೇಶವನ್ನು ಆತ ಅನುಭವಿಸಿದ್ದ. ಈ ಮೊದಲು ಕೆಲಸಮಾಡಿದ ಚಿತ್ರಪಟದಲ್ಲಿಯೂ ಯಶೋಮತಿಯು ಕೂಡ ಅಭಿನಯಿಸಿದ್ದನಾದ್ದರಿಂದ ಅವರಿಬ್ಬರ ಸಂಬಂಧದಲ್ಲಿಯೂ ತರ್ಕ–ವಿತರ್ಕಗಳು, ಮಾತು ಮರು ಮಾತು–ಪಿಸು ಮಾತುಗಳು ಹತ್ತಾರು ನಾಲಗೆಗಳ ಮೇಲೆ ಬೆಳೆದಿದ್ದವು. ಆದರೆ ಇಂಥ ಸನ್ನಿವೇಶಗಳಿಗೆ ವರ್ಮಾನ ಉತ್ತರ ಒಂದೇ—ಆತನ ಆ ಹುಚ್ಚು ಹಿಡಿಸುವ ಮಂದಹಾಸ! 'ನನ್ನ ಚೆಲುವಿಗೆ ಇವರು ಮನಸೋತರೆ ನಾನೇನು ಮಾಡಲಿ? ಅಂಥ ಚೆಲುವನಲ್ಲವೆ ನಾನು! ಎಷ್ಟು ಜನ ನನಗೆ ಮನಸೋತರು?' ಎಂದು ಸಾರಿ ಕೇಳುತ್ತಿರುವಂತಿತ್ತು ಆತನ ಆ ನಗೆ.

ನಿತ್ಯ ಒಂದಿಲ್ಲೊಂದು ಬಗೆಯಲ್ಲಿ ಅನುರಾಧಾ–ವರ್ಮಾ ಅವರ ಪರಿಚಯ ಬೆಳೆಯುತ್ತಲೆ ನಡೆಯಿತು. ವರ್ಮಾ ಹೆಚ್ಚುಕಡಿಮೆ ನಿರ್ಲಿಪ್ತನಾಗಿಯೆ ಇದ್ದ ಹಾಗಿದ್ದ. ಅನುರಾಧೆಗೆ ಮಾತ್ರ ದಿನದಿನವೂ ಮೋಹ ಬೆಳೆಯುತ್ತಲಿದ್ದಿತು. ಯಶೋಮತಿಯ ಕೂಡ ಸೆಣಸಾಟಕ್ಕೆ ಪ್ರಾರಂಭವಾಗುವುದರಲ್ಲಿತ್ತು. ಆದರೆ ವರ್ಮಾ ಮಾತ್ರ ಇಬ್ಬರಿಗೂ ಸೊಪ್ಪುಹಾಕುತ್ತಿರಲಿಲ್ಲ. ಚಿತ್ರಪಟದ ಕೆಲಸ ಪ್ರಾರಂಭವಾಗಿ ತಿಂಗಳಾಗುತ್ತ ಬಂದಿತ್ತು. ಆದರೂ ಅನುರಾಧೆಯ ಈ ಹೊಸ ವ್ಯಾಮೋಹ ಆಪಟೆನಿಗೆ ತಿಳಿದಿರಲಿಲ್ಲ, ತಿಳಿಯುವುದು ಸಾಧ್ಯವೂ ಇರಲಿಲ್ಲ. ಚಿತ್ರಪಟವನ್ನು ತೀವ್ರವಾಗಿ, ಯಶಸ್ವಿಯಾಗಿ ಕೊನೆಗಾಣಿಸಬೇಕೆಂಬ ಉತ್ಸಾಹದಲ್ಲಿ ಹಗಲು ರಾತ್ರಿಯೂ ಅದೇ ಕೆಲಸದಲ್ಲಿ ತೊಡಗಿರುತ್ತಿದ್ದನಾದ್ದರಿಂದ ಉಳಿದ ಯಾವ ಯೋಚನೆಗಳೂ ಆತನಿಗೆ ಹೊಳೆಯುತ್ತಿರಲಿಲ್ಲ. ಒಂದು ಸಾರೆ ಮಾತ್ರ ರಾತ್ರಿ ಹನ್ನೆರಡು ಗಂಟೆಯಾದರೂ ಅನುರಾಧೆ ಮನೆಗೆ ಬರಲಿಲ್ಲ. ಆರು ಗಂಟೆಗೆ ಸ್ಟುಡಿಯೋದಿಂದ ಹೊರಟವಳು ಮನೆಯಲ್ಲಿಯೆ ಇರುತ್ತಾಳೆಂದು ಎಲ್ಲ ಕೆಲಸಗಳನ್ನು ಪೂರೈಸಿಕೊಂಡು ಆಪಟೆ ಒಂಬತ್ತು ಗಂಟೆಗೆ ಮನೆಗೆ ಬಂದಾಗ

ಅನುರಾಧೆ ಇರಲೇ ಇಲ್ಲ! ಬಂದ ಕೂಡಲೆ ಮೋಹಿನಿಯನ್ನು ಕೇಳಿದ್ದ :

" ಈಕೆ ನಿಮ್ಮ ಜೊತೆಯಲ್ಲಿ ಬರಲಿಲ್ಲವೆ ? "

" ಬಂದಿದ್ದಳು—"

ಎಂದು ಅರ್ಧಕ್ಕೆಯೆ ತಡೆದಳು. ಆಪಟೆನಿಗೆ ಅರ್ಥವಾಗಲಿಲ್ಲ.

" ಎಲ್ಲಿಯಾದರೂ ಹೋಗುತ್ತೇನೆಂದು ಹೇಳಿದಳೆ ? "

" ನಾವು ಬರುವಾಗ ವ್ಯಾನ್‌ನಲ್ಲಿ ವರ್ಮಾ ಬಂದಿದ್ದರು ಚಹವಾದ ನಂತರ ಮತ್ತೆ ಇಬ್ಬರೂ ಹೊರಟುಹೋದರು—ಎಲ್ಲಾದರೂ ಪಿಕ್ಚರಿಗೆ ಹೋಗಿರಬೇಕೆಂದು ಕಾಣುತ್ತದೆ "

ಆಪಟೆ ಸುಮ್ಮನಾದ. ಹೀಗೆ ನಡೆದದ್ದು ಎರಡನೆಯ ಬಾರಿಯಾದ್ದರಿಂದ ಆತನಿಗೆ ಕೊಂಚ ಸಿಟ್ಟೂ ಬಂದಿತ್ತು ಇಡೀ ದಿವಸ ಕೆಲಸದಲ್ಲಿ ಸೋತುಹೋದವನಾದ್ದರಿಂದ ಸಿಡುಕಿನಲ್ಲಿಯೆ ಇದ್ದ ಅನುರಾಧೆ ಮೋಹಿನಿಗೆ ಕೂಡ ಒಂದು ಮಾತನ್ನೂ ಹೇಳದೆ ವರ್ಮಾನ ಜೊತೆಯಲ್ಲಿ ಹೋದದ್ದು ತಿಳಿದನಂತರವಂತೂ ಕೋಪದಿಂದ ಕೆಂಡದಂತಾದ ಆಕೆಯ ಬರವನ್ನೇ ಇದಿರುನೋಡುತ್ತ ಮುಂದಿನ ಕೋಣೆಯಲ್ಲಿಯ ಸೋಫಾದಲ್ಲಿ ಕುಳಿತು ಕಣ್ಣು ಮುಚ್ಚಿದ

ಅನುರಾಧೆ ಮನೆಗೆ ಬಂದಾಗ ತೆರೆದ ಬಾಗಿಲು ಹಾಗೆಯೆ ಇದ್ದಿತು ಆಪಟೆ ತೂಕಡಿಕೆಯಲ್ಲಿ ತೇಲಾಡುತ್ತಿದ್ದ. ಓದಲೆಂದು ಎತ್ತಿಕೊಂಡ ದಿನಪತ್ರಿಕೆ ಮೈಮೇಲೆ ಬಿದ್ದಿತ್ತು. ಆಪಟೆ ಕಾಯುತ್ತಿರಬೇಕೆಂಬ ದುಗುಡ ಅನುರಾಧೆಗೆ ಇದ್ದೇ ಇದ್ದಿತು. ಹೀಗೆಂದೇ ಬಂದ ಕೂಡಲೆ ಹತ್ತಿರ ಬಂದು ಭುಜ ತಟ್ಟಿ ಎಚ್ಚರಗೊಳಿಸಿದಳು.

" ಇದೇನು, ಇಲ್ಲಿಯೇ ಮಲಗಿಬಿಟ್ಟಿದ್ದೀರಲ್ಲ—"

ಆಪಟೆ ಕಣ್ಣು ತೆರೆದ. ತುಟಿ ಮುಚ್ಚಿದ

" ನೀವು ಬಂದು ಬಹಳ ಹೊತ್ತಾಯಿತೆ ? "

" ಎಷ್ಟಾಗಿದೆ ಗಂಟೆ ಈಗ ? "

ಆಪಟೆ ವೇಳೆಯನ್ನು ಕೇಳುತ್ತಿರಲಿಲ್ಲವೆಂಬುದು ಆತನ ದನಿಯಲ್ಲಿಯೆ ಸ್ಪಷ್ಟವಾಗಿದ್ದಿತು.

" ನಾನು ಬೇಡ ಎಂದು ಹೇಳಿದರೂ ಕೇಳಲೇ ಇಲ್ಲ. ತುಂಬಾ ಬಲವಂತ ಮಾಡಿದರು, ಊಟ ಮಾಡಿಕೊಂಡೇ ಹೋಗು ಎಂದು—"

" ಯಾರು ? "

" ವರ್ಮಾ—"

" ವರ್ಮಾನ ಮನೆಗೆ ಹೋಗಿದ್ದೆಯಾ ? "

" ಇಲ್ಲಿಂದ ಮೊದಲು ಪಿಕ್ಚರಿಗೆ, ಆಮೇಲೆ ತಿರುಗಿ ಬರುವಾಗ ಮನೆಗೆ" ಎಂದು ಸುಳ್ಳು ಹೇಳಿದಳು.

ಚಿತ್ರ ನೋಡಲಿಕ್ಕೆ ಎಂದು ಹೇಳಿರದಿದ್ದರೆ ಎಲ್ಲವೂ ಸರಿಯಾಗಬಹುದಿತ್ತು ಆಪಟೆ ಸಹಜವಾಗಿಯೆ ಕೇಳಿದ

" ಯಾವ ಪಿಕ್ಚರಿಗೆ ? "

" ದಿ ಮ್ಯಾನ್ ಫ್ರಾಮ್ ದಿ ಹಿಲ್ಸ್."

" ಎಲ್ಲಿ ? "

" ಮೆಟ್ರೊ ! "

" ಕೊನೆಯ ಆಟಕ್ಕೆ ಹೋಗಿದ್ದಿರಾ ? "

" ಇಲ್ಲ. ಆರೂವರೆ ಆಟಕ್ಕೆಯೆ ಹೋಗಿದ್ದೆವು."

" ಆರು ಗಂಟೆಗೆ ಮನೆಗೆ ಬಂದಿದ್ದಿರಲ್ಲವೆ ? "

" ಹುಂ. ವ್ಯಾನ್‌ನಲ್ಲಿಯೆ ಹೋದೆವು. ಆದರೂ ಇಪ್ಪತ್ತು ನಿಮಿಷ ತಡವೇ ಆಯಿತು."

" ಹೌದೆ ?—"

ಎಂದಿಷ್ಟೇ ಹೇಳಿ ಆಪಟೆ ಸುಮ್ಮನಾದ. ಆ ಒಂಟಿ ಮಾತಿನಲ್ಲಿಯ ಮರ್ಮ ಅನುರಾಧೆಗೆ ಪೂರ್ತಿಯಾಗಿ ಹೊಳೆಯದಿರಲಿಲ್ಲ. ಆದರೆ ಆ ದಿನ ಮೆಟ್ರೋದಲ್ಲಿ ಆ ಚಿತ್ರವಿರಲಿಲ್ಲವೆಂಬುದನ್ನು ಆಪಟೆ ತಿಳಿದವನಾಗಿದ್ದನೆಂಬುದನ್ನು ಮಾತ್ರ ಅನುರಾಧೆ ಗಮನಿಸದೆ ಹೋದಳು. ಹತ್ತಿರದಲ್ಲಿಯೆ ಬಿದ್ದಿದ್ದ ದಿನಪತ್ರಿಕೆಯಲ್ಲಿಯ ಜಾಹೀರಾತನ್ನು ಆಕೆಯ ಮುಖದೆದುರು ಆತ ಹಿಡಿಯಬಹುದಿತ್ತು. ಆದರೆ ಅನುರಾಧೆ ಹೇಳುತ್ತಿದ್ದುದು ಕಟ್ಟುಕತೆ ಎಂಬುದನ್ನು ಮೊದಲಿಗೆಯೆ ಕಂಡುಹಿಡಿದ ಆಪಟೆ ಮಾತನಾಡಿ ಸುಮ್ಮನೆ ಪ್ರಸಂಗವನ್ನು ಬೆಳೆಯಿಸುವುದು ಬೇಡವೆಂದು ಸುಮ್ಮನಾಗಿಬಿಟ್ಟ. ಆದರೆ ವರ್ಮಾನ ವಿಚಾರದಲ್ಲಿ ಆತನ ಮನಸ್ಸು ಕೆಲಮಟ್ಟಿಗಾದರೂ ಆ ಕ್ಷಣಕ್ಕೆ ಕಲುಷಿತವಾಗಿ ಈ ವಿಷಯದಲ್ಲಿ ತುಸು ಎಚ್ಚರವಾಗಿರುವುದು ಒಳ್ಳೆಯದೆಂದುಕೊಂಡು ಸುಮ್ಮನಾದ. 'ನೀನು ಹೇಳುತ್ತಿರುವುದು

ಸುಳ್ಳು' ಎಂದು ಒಂದೇ ಮಾತನ್ನು ಆಪಟೆ ಅನುರಾಧೆಗೆ ಆ ಕ್ಷಣಕ್ಕೆ ಹೇಳಿಬಿಟ್ಟಿದ್ದರೆ ಆಕೆ ಎಚ್ಚರಗೊಳ್ಳಬಹುದಾಗಿತ್ತು. ಆದರೆ ಆಪಟೆ ಅಷ್ಟನ್ನು ಮಾಡಲಿಲ್ಲ ಅನುರಾಧೆಗೆ ಯಾವ ಸಂಶಯವೂ ಹೊಳೆಯಲಿಲ್ಲವಾದ್ದರಿಂದ ಆ ರಾತ್ರಿ ಆಕೆ ನಿದ್ರೆಹೋಗುವ ವರೆಗೆ ಸಾಯಂಕಾಲ ನಡೆದ ಸನ್ನಿವೇಶವನ್ನೇ ಮೆಲುಕು ಹಾಕುತ್ತಿದ್ದಳು.

ಮನೆಯಿಂದ ಹೊರಟು ಅವರು ನೇರವಾಗಿ ಹೋದದ್ದು ತಾರ್‌ದೇವ್‌ದಲ್ಲಿಯ ಪ್ರಭಾ ಸ್ಟೂಡಿಯೋಕ್ಕೆ. ವರ್ಮಾನಿಗೆ ಅಲ್ಲಿಯ ಡೈರೆಕ್ಟರ್ ಕೂಡ ಏನೋ ಮಾತನಾಡಬೇಕಾಗಿದ್ದಿತು ಹತ್ತು ನಿಮಿಷದ ಕೆಲಸ ಎಂದು ಅನುರಾಧೆಯನ್ನು ಹೊರಗಿನ ಹಾಲ್‌ನಲ್ಲಿ ಬಿಟ್ಟುಹೋದ ವರ್ಮಾ ಅರ್ಧಗಂಟೆಯಾದರೂ ಬಂದಿರಲಿಲ್ಲ. ಬಂದಾಗ ತನ್ನ ವಾಡಿಕೆಯ ನಗೆಯನ್ನು ಬೀರಿ ಅನುರಾಧೆಯನ್ನು ಅನುನಯಿಸುವಂತೆ ಕೇಳಿದ್ದ

"ಆಯ್ ಆಮ್ ಸಾರಿ. ಬೇಸರವಾಯಿತೆ?"

"ಇಲ್ಲವಲ್ಲ!"

"ಸುಮ್ಮನೆ ಈ ಸುಳ್ಳು ಯಾಕೆ? ಬೇಸರವಾಗಿದ್ದರೆ—"

"ಆಗಿದ್ದರೆ ಏನು?"

"ಆಗಿದ್ದರೆ ಅದನ್ನು ಕಳೆಯುವ ಹೊಣೆ ನನ್ನದು."

"ನಿಮಗೂ ಬೇಸರವಾದ ಹಾಗಿದೆ?"

"ನನಗೆ ಬೇಸರವೆ? ಅದೂ—ನೀನಿರುವಾಗ!"

ಮಾತನ್ನು ತಡೆದು ಹೇಳಿದ ರೀತಿ ವಿಚಿತ್ರವಾಗಿತ್ತು. 'ನೀನಿರುವಾಗ' ಎನ್ನುವುದರ ಬದಲು 'ಯಶೋಮತಿ ಇರುವಾಗ—ಇನ್ನಾರೋ ಇರುವಾಗ' ಎಂದೂ ಆತ ಹೇಳುತ್ತಿದ್ದಂತಿತ್ತು. ಆದರೆ ಅಂಥ ಸೂಚನೆಯನ್ನು ಅನುರಾಧೆ ಗ್ರಹಿಸುವುದು ಸಾಧ್ಯವೇ ಇರಲಿಲ್ಲ. ಅದಕ್ಕೆ ಪ್ರತಿಯಾಗಿ ಆ ಒಂದು ಮಾತು ಅನುರಾಧೆಯನ್ನು ಪೂರ್ತಿಯಾಗಿ ಮೈಮರೆಯಿಸಿತ್ತು

ಸಮೀಪದಲ್ಲಿಯ 'ಸ್ಟಾರ್'ದಲ್ಲಿ ಸುಖಾಸನದಲ್ಲಿ ಇಬ್ಬರೂ ಹತ್ತಿರವಾಗಿ ಮೈಚೆಲ್ಲಿದಾಗ ವರ್ಮಾ ಕೇಳಿದ್ದ:

"ಏನಾಗಬೇಕು ಈಗ?"

"ಏನು ಬೇಕಾದದ್ದು—"

"ಯಾರಿಗೆ ಬೇಕಾದದ್ದು ?" ಎಂದು ವರ್ಮಾ ಸೂಚ್ಯವಾಗಿ ನಕ್ಕ ಅನುರಾಧೆಗೆ ಅದರ ಅರ್ಥ ಹೊಳೆಯಿತೊ ಇಲ್ಲವೊ ಆದರೆ ವರ್ಮಾನಂಥ ಸುಪ್ರಸಿದ್ಧ ನಟನ ನಿಕಟ ಪರಿಚಯವಲ್ಲದೆ ಅದಕ್ಕಿಂತಲೂ ಹೆಚ್ಚಿನದಾದ ಸಾಮೀಪ್ಯ ತನಗೆ ದೊರಕಿದ್ದು ತನ್ನಲ್ಲಿಯ 'ಯೋಗ್ಯತೆ'ಗೆ ಒಂದು ನಿದರ್ಶನ ವೆಂದು ಭಾವಿಸಿದ ಅನುರಾಧೆ ಬೇರೆಯಾದ ಪ್ರಪಂಚದಲ್ಲಿಯೆ ಇದ್ದಹಾಗಿತ್ತು. ವರ್ಮಾ ಉತ್ತಮ ತರಗತಿಯ ನಟನಲ್ಲವೆ ? ಅನುರಾಧೆಯಂಥವರನ್ನು ನಟನೆ ಯಿಂದ ಮೋಸಗೊಳಿಸುವುದು ಅಂಥವನಿಗೆ ದೊಡ್ಡ ವಿಷಯವಾಗಿರಲಿಲ್ಲ ಅಂಥ ಮೋಸ ಮಾಡಬೇಕೆಂದೂ ಆತ ಹೊರಟವನಲ್ಲ ಆದರೆ ಎಷ್ಟು ಸಹಜವಾಗಿ ತಾನು ಹೆಣ್ಣನ್ನು ಗೆಲ್ಲಬಲ್ಲೆ ಎಂಬ ಹೆಮ್ಮೆ ಆತನನ್ನು ಇಂಥ ಪ್ರಸಂಗಗಳೆಡೆಗೆ ನೂಕುತ್ತಿತ್ತು ಅಂಥ ಪ್ರಸಂಗಗಳಿಂದಾಗಿ ತನ್ನ ಹೆಮ್ಮೆಯನ್ನು ಪೂರೈಸಿ ಕೊಂಡು ನಿರ್ಲಿಪ್ತನಾಗಿ ಪಾರಾಗುವ ಚಾಣಾಕ್ಷತೆಯೂ ಆತನಲ್ಲಿದ್ದಿತು ಜೀವನ ದಲ್ಲಿಯ ಮೇಲ್ತೋರಿಕೆಯ ಮೆರುಗಿಗೆ ಮಾರುಹೋದ ಅನುರಾಧೆಗೆ ವರ್ಮಾನ ದೇಹಸೌಂದರ್ಯ ಕಾಣುತ್ತಿತ್ತೇ ವಿನಹ ಆತನ ಸ್ವಭಾವ ಅರ್ಥವಾಗುತ್ತಿರಲಿಲ್ಲ ಹೀಗೆಂದೇ 'ಯಾರಿಗೆ ಬೇಕಾದದ್ದು ?' ಎಂದು ವರ್ಮಾ ಕೇಳಿದಾಗ ಆತ ತನ್ನ ಒಳಮನಸ್ಸಿನಲ್ಲಿ ಬೇರೆಯಾದ ಯೋಚನೆಯಲ್ಲಿ ತೊಡಗಿದ್ದುದು ಅನುರಾಧೆಗೆ ತಿಳಿಯಲಿಲ್ಲ. ಮೇಲ್ತೋರಿಕೆಗೆ ಅನುರಾಧೆಯೊಡನೆ ಮಾತನಾಡು ತ್ತಿದ್ದರೂ ಮನಸ್ಸು ಒಂದು ಕ್ಷಣ ಯಶೋಮತಿಯನ್ನು ಚಿನ್ನಟ್ಟುತ್ತಿತ್ತು: 'ಇಂದು ಬೆಳಿಗ್ಗೆ ಸೆಟ್ ಮೇಲೆ ಆಕೆ ಎಷ್ಟು ಚೆಲುವಾಗಿ ಕಂಡಳು! ನಾಳೆ ಮಧ್ಯಾಹ್ನ ಬರುತ್ತೇನೆ ಎಂದಿದ್ದಳಲ್ಲವೆ ? ಎಲ್ಲಿಗೆ ಹೋಗುವುದು ?—'

"ನನಗಂತೂ ಯಾವುದೂ ಬೇಡ. ಸುಮ್ಮನೆ ಹೀಗೆಯೇ ಕುಳಿತರೂ ಆಯಿತು"

"ಕುಳಿತಂತೂ ಆಯಿತಲ್ಲ—"

ವರ್ಮಾ ಯೋಚಿಸುತ್ತಿದ್ದ 'ಆ ಮೋಹಿನಿ ಯಾರು ? ಒಳ್ಳೆ ಬಿಗುವಿ ನಲ್ಲಿಯೆ ಇರುತ್ತಾಳಲ್ಲ! ತನ್ನ ಚೆಲುವಿನ ಹೆಮ್ಮೆ ವಿಶೇಷವಾಗಿದ್ದಂತೆ ಕಾಣು ತ್ತದೆ. ಅಲ್ಲದೆ, ಮುಖ್ಯ ನಿರ್ದೇಶಕನ ಕಾರ್ಯದರ್ಶಿನಿ ಬೇರೆ. ಆ ಹೆಮ್ಮೆ ಯನ್ನು ಮುರಿಯಬೇಕು. ಅಷ್ಟು ನನ್ನಿಂದ ಆಗದೆ ? ನೋಡುವಾ—'

ವೇಟರ್ ಬಂದು ನಿಂತಿದ್ದರೂ ವರ್ಮಾ ಮೋಹಿನಿಯ ಯೋಚನೆ

ಯಲ್ಲಿಯೆ ಇದ್ದ. ಅನುರಾಧೆ ಆತನ ಸಾನ್ನಿಧ್ಯದಲ್ಲಿ ಎಲ್ಲವನ್ನೂ ಮರೆತಿದ್ದಳು. ಕೊನೆಗೆ ಎಚ್ಚರವಾಗಿ ಉಪಾಹಾರಕ್ಕಾಗಿ ಅದು ಇದು ಎಂದು ಏನೇನೋ ಹೇಳಿದ ಆತ ಹೊರಟುಹೋದಮೇಲೆ ಕೇಳಿದ, ತಡೆಯಲಾಗದೆ :

" ಅಲ್ಲ, ಆ ಮೋಹಿನಿ ಯಾರು ? "

" ಯಾರೆಂದರೆ ? ಏನೂ ಗೊತ್ತಿಲ್ಲದವರ ಹಾಗೆ ಕೇಳುತ್ತೀರಲ್ಲ—"

" ಆಕೆ ಅನಸೂಯೆಯ ಪಾರ್ಟ್ ಮಾಡುತ್ತಾಳೆ ಗೊತ್ತು, ಆದರೆ—"

" ರಂಗನಾಥನ್‌ರ ಸೆಕ್ರೆಟರಿ ! "

" ಪ್ರೈವೇಟ್ ಸೆಕ್ರೆಟರಿಯೇನು ? " ಎಂದು ನಕ್ಕ

" ಅದನ್ನು ಆಕೆಯನ್ನೇ ಕೇಳಿರಿ—"

ಮೋಹಿನಿಯ ಮಾತನ್ನೆತ್ತಿದ್ದು ಅನುರಾಧೆಗೆ ಸರಿ ಬಂದಿರಲಿಲ್ಲ. ತಾನು ಊರಿಗೆ ಹೊರಡುವಾಗ ಚಿತ್ರದಲ್ಲಿ ಪಾತ್ರವಹಿಸುವ ವಿಷಯವನ್ನೆತ್ತಿದಾಗ ಮೂಗು ಮುರಿದು ಮಾತನಾಡಿದವಳು ತಾನು ಹಿಂದಿರುಗುವಷ್ಟರಲ್ಲಿ ಪಾತ್ರ ವಹಿಸುವುದನ್ನು ಒಪ್ಪಿದ್ದಳಲ್ಲದೆ ರಂಗನಾಥನ್‌ನ ಕಾರ್ಯದರ್ಶಿನಿಯಾಗಿದ್ದಳು ! ತನ್ನ ಆಶ್ರಯದಲ್ಲಿದ್ದುಕೊಂಡು ತನಗಿಂತಲೂ ಒಂದು ಕೈ ಮೇಲು ಸಾಧಿಸಿ ಬಿಟ್ಟಳು ಎಂದು ಅಸೂಯೆ ಪಡುತ್ತಿದ್ದಳು. ಮೋಹಿನಿ ಎಲ್ಲ ಸಮಾಚಾರ ವನ್ನು ವಿವರಿಸಿದಾಗ 'ಇದು ನನಗೆ ಎಂದಿಗೋ ತಿಳಿದಿತ್ತು' ಎಂಬ ಚುಚ್ಚು ಮಾತನ್ನೇ ಆಡಿದ್ದಳು ರಂಗನಾಥನ್‌ನ ಆತುರ ಆಕೆಗೆ ಎಂದಿಗೋ ತಿಳಿದಿತ್ತು. ಹೀಗಾಗಿ ಮೋಹಿನಿಯನ್ನು ಕುರಿತು ಯಾವ ಮೆಚ್ಚಿಗೆಯ ಮಾತು ಯಾರಿಂದ ಬಂದರೂ ಅದನ್ನು ಆಕೆಗೆ ಸಹಿಸುವುದಾಗುತ್ತಿರಲಿಲ್ಲ ಈ ವಿಷಯದಲ್ಲಿ ಮೋಹಿನಿ ತನ್ನನ್ನು ಒಂದೂ ಕೇಳದೆ ಎಲ್ಲವನ್ನೂ ನಿರ್ವಹಿಸಿಕೊಂಡದ್ದು ಆಪಟೆನಿಗೂ ಸರಿಬಿದ್ದಿರಲಿಲ್ಲವಾದರೂ ಆಕೆಯಲ್ಲಿ ಇದ್ದ ಯೋಗ್ಯತೆಯನ್ನು ಆತ ಅಲ್ಲಗಳೆಯು ತ್ತಿರಲಿಲ್ಲ. ಅನಸೂಯೆಯ ಪಾತ್ರದ ನಟನೆಯನ್ನು ರಂಗನಾಥನ್ ತಾನಾಗಿಯೆ ಆಕೆಯಿಂದ ರಿಹರ್ಸ್ ಮಾಡಿಸುತ್ತಿದ್ದನೆಂದೂ, ಸಹಜವಾದ ನಟನೆ ಆಕೆಗೆ ಸುಲಭಸಾಧ್ಯವಾಗಿತ್ತೆಂದೂ, ಆಕೆ ಸೆಟ್‌ಮೇಲೆ ಎಂದೂ ತೊಂದರೆ ಕೊಟ್ಟಿರಲಿಲ್ಲ. ಇದನ್ನು ಎತ್ತಿ ಆಪಟೆ ಮಾತನಾಡಿದಾಗ ಕೂಡ ಅನುರಾಧೆ ಸಿಡಿಮಿಡಿಗೊಂಡೇ ಇರುತ್ತಿದ್ದಳು. ಎದೆಯ ಈ ಒಳ ಕುದಿಯನ್ನು ತಿಳಿಯದ ವರ್ಮಾ ಅನುರಾಧೆ ಯನ್ನು ಮಾತನಾಡಿಸಿದ್ದು ಸಹಜವೇ ಇದ್ದಿತು.

" ಯಾಕೆ, ಆಕೆಯನ್ನು ಕಂಡರೆ ನಿನಗೆ ಅಸೂಯೆ ಎಂದು ಕಾಣುತ್ತದೆ ! " ಎಂದು ವರ್ಮಾ ನಕ್ಕು ಕೇಳಿಬಿಟ್ಟ.

" ಆಕೆಯನ್ನು ಕಂಡರೆ ನಿಮಗೆ ಬಹಳ ಸಂತೋಷವೆಂದು ಕಾಣುತ್ತದೆ ! " ಎಂದು ಅನುರಾಧೆ ಮೂದಲಿಸಿದಳು.

" ಆಕೆಯನ್ನು ಕಂಡರೆ ಯಾರಿಗೂ ಸಂತೋಷವಾಗಬೇಕು—"

" ಹೌದೆ ? ಹಾಗಿದ್ದರೆ ನಾನು ಹೊರಟುಬಿಡುತ್ತೇನೆ."

" ಯಾಕೊ ?—ನಿಮ್ಮ ಹತ್ತಿರವೇ ಇರುತ್ತಾಳೆ ಆಕೆ ಅಲ್ಲವೆ ? "

ಒರಟು ಉತ್ತರ ಹೇಳಿ ವರ್ಮಾನನ್ನು ಅಸಂತೋಷಗೊಳಿಸುವುದು ಆಕೆಗೆ ಬೇಡವಾಗಿತ್ತು.

" ಇದುವರೆಗಂತೂ ಇದ್ದಾಳೆ. ಇನ್ನುಮುಂದೆ ಯಾರಿಗೆ ಗೊತ್ತು ? "

" ಇದೇ ಮೊದಲ ಸಲವೇ ಆಕೆ ಕೆಲಸ ಮಾಡುತ್ತಿರುವುದು ? "

" ಹೌದು—"

" ಹಾಗಿದ್ದರೆ ನಿಜವಾಗಿಯೂ ಆಶ್ಚರ್ಯ—"

" ಏನು ಆಶ್ಚರ್ಯ ?—" ಎಂದು ಕೊಂಕು ದನಿಯಲ್ಲಿ ಕೇಳಿದಳು.

" ಹತ್ತಾರು ಚಿತ್ರಗಳಲ್ಲಿ ಕೆಲಸ ಮಾಡಿದ ಅನುಭವ ಇದ್ದವರ ಹಾಗಿದ್ದಾಳೆ. ಹಾಗೆ ನೋಡಿದರೆ ಆಕೆಯೇ ಶಕುಂತಲೆಯ ಪಾತ್ರವನ್ನು ಯಶೋಮತಿಗಿಂತಲೂ ಚೆನ್ನಾಗಿ ಮಾಡಬಹುದಿತ್ತು ! "

" ನೀವು ದುಷ್ಯಂತ ಆದದ್ದಕ್ಕೆ ಆಕೆ ಶಕುಂತಲೆಯಾಗಬೇಕಿತ್ತೇನೊ ! "

" ಹೋಗಲಿ ಬಿಡು. ಆ ಮಾತು ಬೇಡವಾಗಿದ್ದರೆ ಯಾಕೆ ಸುಮ್ಮನೆ—"

" ನನಗೆ ಬೇಡವಾಗಿದ್ದರೆ, ನಿಮಗೆ ಬೇಕಾಗಿದೆಯಲ್ಲ—"

" ಏನೋ ಸುಮ್ಮನೆ ಮಾತಿಗೆ ಮಾತು ಬಂದಿತು ಎಂದು ಕೇಳಿದೆ. ಸರಿ ಈಗ ಉಪಾಹಾರವಾಗಲಿ. ಟೀ ಎಲ್ಲ ತಣ್ಣಗಾಗುತ್ತಿದೆ "

ಎಂದು ಪ್ಲೇಟನ್ನು ಅನುರಾಧೆಯ ಕಡೆಗೆ ಸರಿಸಿ ತಾನೊಂದಕ್ಕೆ ಕೈಹಾಕಿದ.

ಉಪಾಹಾರದೊಡನೆ ಮಾತು ನಡೆದೇ ಇತ್ತು ಕೊನೆಗೆ ' ಪೇಯ 'ವೂ ನಡೆಯಿತು. ವರ್ಮಾನ ಉತ್ಸಾಹ ಮೇರೆ ಮೀರುವುದರಲ್ಲಿತ್ತು. ಒಂಬತ್ತು ಗಂಟೆಯ ಸುಮಾರಿಗೆ ಅಲ್ಲಿಂದ ಹೊರಡಲನುವಾದಾಗ ಅನುರಾಧೆಗೆ ತನ್ನ ನಾಲಗೆಯ ಮೇಲಿನಂತೆ ನಡಿಗೆಯ ಮೇಲೂ ಪ್ರಭುತ್ವ ಉಳಿದಿರಲಿಲ್ಲ. ಆ ಸ್ಥಿತಿ

ಯಲ್ಲಿ ಆಕೆ ಮನೆಗೆ ಹೋಗುವುದು ಅಸಾಧ್ಯವೇ ಇದ್ದಿತು ಆಕೆ ಹೋಗುವುದು ವರ್ಮಾನಿಗೆ ಬೇಕೂ ಇರಲಿಲ್ಲ. ಹೀಗಾಗಿ ಟ್ಯಾಕ್ಸಿಯೊಂದನ್ನು ಹಿಡಿದು ಹಿಂದೂ ಕಾಲನಿಯಲ್ಲಿಯ ವರ್ಮಾನ ಕೋಣೆಗೆ ಬಂದಾಗ ವೇಳೆ ಒಂಬತ್ತೂವರೆ ಯಾಗಿತ್ತು. ಅನುರಾಧೆಯ ಮುಖ ಕೆಂಪೇರಿ ಹೋಗಿತ್ತು. ಆತನ ತೋಳ ಆಶ್ರಯದಿಂದಲೇ ಕೋಣೆಯಲ್ಲಿ ಕಾಲಿಕ್ಕುತ್ತಿದ್ದ ಆಕೆ ಆತನ ಮುಖವನ್ನೇ ನೋಡುತ್ತಿದ್ದಳು. ಒಳಗೆ ಬಂದು ವಿರಾಮಕುರ್ಚಿಯಲ್ಲಿ ಕಣ್ಣು ಮುಚ್ಚಿಕೊಂಡು ಕುಸಿದಳು. ಸಲ್ಲದ ಮಾತುಗಳು ಆಗಾಗ ಆಕೆಯ ಬುದ್ಧಿಯ ಹಿಡಿತವನ್ನು ಮೀರಿ ನಾಲಗೆಯಿಂದ ಮುನ್ನುಗ್ಗುತ್ತಿದ್ದವು. ಕುರ್ಚಿಯಲ್ಲಿ ಸಮಾಧಾನವೆನಿಸಲಿಲ್ಲ. ಆಚೆಯ ಕೋಣೆಯಲ್ಲಿ ಬಾಗಿಲಿಗೆ ಇದಿರಾಗಿ ವಿಶಾಲವಾಗಿ, ವಿಲಾಸಮಯವಾಗಿ ಹಾಸಿಟ್ಟ ಹಾಸಿಗೆಯ ಕಡೆಗೆ ತತ್ತರಿಸಿ ಅನುರಾಧೆ ಉದ್ದವಾಗಿ ಮೈಚೆಲ್ಲಿದಳು. ತನ್ನ ಮೈಮೇಲಿನ ಬಟ್ಟೆಗಳ ಪರಿವೆ ಇರುವುದು ಆ ಸ್ಥಿತಿಯಲ್ಲಿ ಅನುರಾಧೆಗೆ ಸಾಧ್ಯವಿರಲಿಲ್ಲ ಇದಾವುದೂ ಅನಿರೀಕ್ಷಿತವಾಗಿರದಂತೆ ವರ್ಮಾ ನಡೆದುಕೊಳ್ಳುತ್ತಿದ್ದ. ಹತ್ತಿರದಲ್ಲಿಯೆ ಕುಳಿತು ಶೀತೋಪಚಾರವನ್ನು ಮಾಡಿದ. ಕೊನೆಗೆ ನಿಧಾನವಾಗಿ ಒಂದು ಗಂಟೆಯನಂತರ ಚೇತರಿಸಿಕೊಂಡಳು ಅನುರಾಧೆ ಮನೆ ತಲಪಿದಾಗ ವೇಳೆ ಹನ್ನೆರಡಕ್ಕೆ ಸಮೀಪಿಸಿತ್ತು

ಮೋಹಿನಿ ರಂಗನಾಥನ್‌ನ ಕಾರ್ಯದರ್ಶಿನಿಯೆಂದು ಕೆಲಸವನ್ನೊಪ್ಪಿ ಕೊಂಡು ಬಂದಾಗ ತನ್ನ ಸುತ್ತಲಿನ ಹೊಸ ವಾತಾವರಣ ಆಕೆಗೆ ವಿಚಿತ್ರ ವೆನಿಸಿತ್ತು. ಮಾಡಬೇಕಾದ ಕೆಲಸಗಳೂ ವಿಶೇಷವಾಗಿರಲಿಲ್ಲ. ಸ್ಟುಡಿಯೋದ ಒಳಗಿನ 'ಮುಕ್ತ'ವಾದ ನಡೆನುಡಿಗಳು ಎಷ್ಟೋ ಬಾರಿ ಆಕೆಯನ್ನು ಯೋಚನೆಗೀಡುಮಾಡಿದ್ದವು ಆದರೆ ಹೊಸ ವಾತಾವರಣಕ್ಕೆ ಹೊಂದಿಕೊಳ್ಳಲು ಆಕೆಗೆ ವೇಳೆ ಹಿಡಿಯಲಿಲ್ಲ ಶಾಲೆಯಲ್ಲಿಯ ಸಮಯಬದ್ಧತೆಗೆ ಇಲ್ಲಿ ಅವಕಾಶವೆ ಇದ್ದಂತಿರಲಿಲ್ಲ ಗಂಡು ಹೆಣ್ಣು ಎಂಬ ಎಣಿಕೆಗೂ ಅವಕಾಶವಿದ್ದ ಹಾಗೆ ಕಾಣಲಿಲ್ಲ ಮೋಹಿನಿಯನ್ನು ಮೊದಲು ಯೋಚನೆಗೀಡುಮಾಡಿದ ವಿಷಯ ವೆಂದರೆ ಇದೇ. ಆದರೆ ತಾನು ಮುಖ್ಯ ನಿರ್ದೇಶಕನ ಕಾರ್ಯದರ್ಶಿನಿಯೆಂಬ ಸ್ಥಾನಮಾನಗಳು ಎಲ್ಲವನ್ನೂ ಮರೆಯಿಸಿದ್ದವು ಎರಡನೆಯದಾಗಿ ವಿಶೇಷವಾದ ಯಾವ ಕೆಲಸಗಳೂ ಇಲ್ಲದೆ ರಂಗನಾಥನ್ ತನ್ನನ್ನು ನೇಮಕ ಮಾಡಿಕೊಂಡದ್ದು ಯಾಕೆ ಎಂಬುದೂ ಆಕೆಯನ್ನು ಮೊದಲು ದಿಗಿಲುಗೊಳಿಸಿದ್ದಿತು. ಆದರೆ— ತನಗೆ ಕೆಲಸ ಬೇಕಾದಾಗ ಸಿಕ್ಕಿದ್ದಿತು, ಮಾಡಲು ಕೆಲಸವಿಲ್ಲದಿದ್ದರೆ ತಾನೇನು ಮಾಡಬಹುದು ? ನೇಮಕ ಮಾಡುವವರು ಅದನ್ನು ಯೋಚಿಸಬೇಕು—ಎಂದು ಕೊಂಡು ಸುಮ್ಮನಾಗಿದ್ದಳು. ಚಿತ್ರಪಟದಲ್ಲಿ ಕೆಲಸ ಮಾಡಲು ಒಪ್ಪಿರದ ಆಕೆ ಯನ್ನು ಒಪ್ಪಿಸಲು ರಂಗನಾಥನ್ ವಿಶೇಷವಾಗಿ ಶ್ರಮಪಡಬೇಕಾಗಲಿಲ್ಲ 'ಯಾವ ದೊಡ್ಡ ಪಾತ್ರ, ಇಷ್ಟೊಂದು ಹೆದರಿಕೊಳ್ಳಲಿಕ್ಕೆ ? ನಾನಾಗಿಯೇ ಹೇಳಿ ಕೊಡುತ್ತೇನೆ. ಮೊದಲಿಗೆಯೇ ನಾಲ್ಕಾರು ಬಾರಿ ರಿಹರ್ಸ್‌ ಮಾಡಿಕೊಂಡೇ ಹೋದರೆ ನಿನಗೆ ಸೆಟ್ ಮೇಲೆ ಏನೂ ತೊಂದರೆಯಾಗುವುದಿಲ್ಲ' ಎಂದು ಮುಂತಾಗಿ ಮನವೊಲಿಸಿ ಮೋಹಿನಿಯನ್ನು ಒಪ್ಪಿಸಿಯಾಗಿದ್ದಿತು. ಕೆಲಸಕ್ಕೆ ಸೇರಿ ಒಂದು ತಿಂಗಳು ಸರಿಯುವಷ್ಟರಲ್ಲಿಯೇ ಮೋಹಿನಿ ಹೊಸ ಆವರಣಕ್ಕೆ ಸರಿಯಾಗಿ ಹೊಸ ನಡೆನುಡಿಗಳನ್ನು, ಹೊಸ ಭಾವಭಾಷೆಗಳನ್ನು ಪಡೆದಿದ್ದಳು.

ಅಂದು ಸಾಯಂಕಾಲ ಶಕುಂತಲೆ ಆಶ್ರಮದಿಂದ ಹೊರಡುವ ಸನ್ನಿವೇಶ ಚಿತ್ರಿತವಾಗಬೇಕಿತ್ತು. ಇಡೀ ಮಧ್ಯಾಹ್ನ ರಂಗನಾಥನ್ ಮೋಹಿನಿಗೆ ಆ ಸನ್ನಿವೇಶದಲ್ಲಿಯ ಅನಸೂಯೆಯ ಪಾತ್ರದ ಸಿದ್ಧತೆಯನ್ನು ಮಾಡಿ ರಿಹರ್ಸ್‌

ಮಾಡಿಸಿದ್ದರೂ ಅದೇಕೋ ಮೋಹಿನಿ ಸರಿಯಾಗಿ ಅಭಿನಯಿಸುವ ಹಾಗೆ ಕಾಣಲಿಲ್ಲ ಆ ಸನ್ನಿವೇಶದ ಮೊದಲ ಭಾಗ ಆಗಲೇ ಮುಗಿದಿತ್ತು ಅದರಲ್ಲಿ ಸರಿಯಾಗಿ ಅಭಿನಯಿಸಿದ ಆಕೆಗೆ ಅದೇಕೋ ಇಂದು ಸನ್ನಿವೇಶಕ್ಕೆ ಸರಿಯಾದ ವ್ಯಗ್ರಭಾವ ಮುಖದಲ್ಲಿ ಮೂಡದಾಗಿತ್ತು. ಶಕುಂತಲೆ ಕೊನೆಯಾಗಿ ಬೀಳ್ಕೊಡುವಾಗ ವನಜ್ಯೋತ್ಸ್ನೆಯನ್ನು, ಸೆರಗು ಹಿಡಿದು ಹಿಂಬಾಲಿಸುತ್ತಿದ್ದ ಮೃಗಪೋತಕವನ್ನು ಅನಸೂಯೆಪ್ರಿಯಂವದೆಯರಿಗೆ ಒಪ್ಪಿಸಿ ‘ ಇವೆಲ್ಲವನ್ನೂ ನಿಮಗೆ ಒಪ್ಪಿಸಿಹೋಗುತ್ತೇನೆ ನೀವಲ್ಲದೆ ಇನ್ನುಮೇಲೆ ಇವಕ್ಕೆ ಯಾರು ಗತಿ ? ’ ಎಂದು ಕಣ್ಣೀರು ತಂದು ಹೇಳಿದಾಗ ‘ ನಮ್ಮಿಬ್ಬರನ್ನು ಯಾರ ಕೈಗೆ ಒಪ್ಪಿಸಿ ಹೋಗುವಿ ? ’ ಎಂದು ಹೃದಯಸ್ಪರ್ಶಿಯಾಗಿ ಅನಸೂಯೆ ಹೇಳಬೇಕಾದ ಮಾತು ಏನು ಮಾಡಿದರೂ, ಎಷ್ಟು ಸಲ ಪ್ರಯತ್ನ ಮಾಡಿದರೂ, ಮೋಹಿನಿಗೆ ಸಾಧಿಸಲೊಲ್ಲದು ಹತ್ತು ಬಾರಿಯಾಯಿತು, ಹದಿನೈದು ಬಾರಿಯಾಯಿತು. ರಂಗನಾಥನ್ ಬೇಸರವಿಲ್ಲದೆ ಹೇಳಿಕೊಡುತ್ತಲೆ ಇದ್ದ ಅಷ್ಟು ಸಲ ಹೇಳಿದರೂ ಆತನಿಗೆ ಸಮಾಧಾನವೆನಿಸುವಂತೆ ಮೋಹಿನಿಯಲ್ಲಿ ಆ ಭಾವದ ಅಭಿವ್ಯಕ್ತಿ ಮೂಡಲಿಲ್ಲ ಕೊನೆಗೆ ರಂಗನಾಥನ್‌ನಿಗೂ ಬೇಸರವಾಯಿತು. “ ಇನ್ನು ಅರ್ಧ ಗಂಟೆಗೆ ಮತ್ತೆ ಪ್ರಯತ್ನ ಮಾಡುವಾ ಈಗಲೇ ಬೇಡ ” ಎಂದು ಹೇಳಿ ಇನ್ನಾವುದೊ ಕೆಲಸದಲ್ಲಿ ತೊಡಗಿದ. ಆದರೆ ಆತನ ಮನಸ್ಸು ಮಾತ್ರ ಅದೇ ಸನ್ನಿವೇಶವನ್ನು ಸರಿಯಾಗಿ ನಿರ್ವಹಿಸುವ ದಾರಿಯನ್ನು ಹುಡುಕುತ್ತಿತ್ತು.

ಸರಿಯಾಗಿ ಅರ್ಧ ಗಂಟೆಯಾಗುತ್ತಲೆ ನಿಜವಾದ ಕಾರ್ಯದರ್ಶಿನಿಯಂತೆ ಮೋಹಿನಿ ರಂಗನಾಥನ್‌ನಿಗೆ ನೆನಪು ಕೊಟ್ಟಳು

“ ಇನ್ನೊಂದು ಸಾರೆ ರಿಹರ್ಸ್ ಮಾಡಬೇಕಲ್ಲವೆ ? ”

“ ಬೇಡ—” ರಂಗನಾಥನ್ ಮುಖ ಮೇಲಕ್ಕೆತ್ತಲಿಲ್ಲ

“ ಹಾಗಿದ್ದರೆ ಸೆಟ್ ಮೇಲೆ ಹೋಗಬಹುದು ಎನ್ನುತ್ತೀರಾ ? ”

“ ಇಲ್ಲ. ಇನ್ನೂ ರಿಹರ್ಸ್ ಮಾಡಬೇಕು.”

“ ಹಾಗಿದ್ದರೆ—”

“ ನಾನು ಹೇಳಿಕೊಡುವುದಿಲ್ಲ. ರಿಹರ್ಸ್ ಮಾಡುವುದಿದ್ದರೆ ಆಪಟೆನ ಹತ್ತಿರಕ್ಕೆ ಹೋಗು.”

ಮಾತಿನ ಬಗೆ ನಿಷ್ಠುರವಾಗಿತ್ತು. ಮೋಹಿನಿಗೆ ಆತನ ಮಾತಿನ ಈ ರೀತಿ ಅರ್ಥವಾಗಲಿಲ್ಲ ರಂಗನಾಥನ್‌ನಿಂದ ಈ ರೀತಿಯ ಮಾತನ್ನು ಆಕೆ ನಿರೀಕ್ಷಿಸಿರಲಿಲ್ಲ. ಕೊನೆಯಿಲ್ಲದ ತಾಳ್ಮೆಯಿಂದ ರಿಹರ್ಸ್‌ಲ್ ಮಾಡಿಸುತ್ತಿದ್ದವ ಇದೇನು ಒಮ್ಮಿಂದೊಮ್ಮೆಗೆ ಹೀಗೆ ಮಾತನಾಡುತ್ತಿದ್ದಾರೆ ಎಂದು ಮನಸ್ಸಿಗೆ ಕಳವಳವಾಯಿತು. ಆದರೆ ಹೆಚ್ಚಿಗೆ ಮಾತನಾಡುವುದೂ ಸಾಧ್ಯವಾಗಿ ಕಾಣಲಿಲ್ಲ ಮುಖ ತುಸು ಬಾಡಿದಂತಾಯಿತು ಕಾಲೆಳೆಯುತ್ತ ಆಪಟೆ ಇದ್ದೆಡೆಗೆ ಹೊರಟಳು. ಆಕೆ ಹೊರಟಾಗ ಮಾತ್ರ ರಂಗನಾಥನ್ ಒಂದು ಬಾರಿ ಆಕೆಯ ಮುಖವನ್ನು ನಿಟ್ಟಿಸಿ ನೋಡಿದ.

ಯಶೋಮತಿ–ಅನುರಾಧೆಯರಿಗೆ ಆಪಟೆ ಭಾವ-ಭಾಷೆ-ಭಂಗಿಗಳನ್ನು ಹೇಳಿಕೊಡುತ್ತಿದ್ದ. ಮುನ್ನಾರಾತ್ರಿ ನಡೆದ ಸನ್ನಿವೇಶದಿಂದಾಗಿ ಮೊದಲೇ ಬೇಸರಗೊಂಡ ಆತನ ಮನಸ್ಸು ಅನುರಾಧೆಯ ಹಲ್ಲುಕಿರಿಯುವುದರಿಂದ ಇನ್ನೂ ಬೇಸರಗೊಂಡಿತ್ತು. ಮೋಹಿನಿ ಬಂದನಂತರ ಮೂವರೂ ಸೇರಿ ಒಮ್ಮೆ ಅಭಿನಯಿಸಿದರು ಆಪಟೆ ಒಪ್ಪಲಿಲ್ಲ. ಮತ್ತೊಮ್ಮೆ ಆಯಿತು, ಮಗುದೊಮ್ಮೆ ಆಯಿತು. ಆಪಟೆನ ತಾಳ್ಮೆ ಕುಸಿಯಿತು. “ ಇಷ್ಟೊಂದು ಸಣ್ಣ ಮಾತಿಗಾಗಿ ಇಷ್ಟು ನಡೆಯುವುದಾದರೆ ಚಿತ್ರಕ್ಕೆ ದೇವರೇ ಗತಿ ” ಎಂದ. ಮೂರು ನಾಲ್ಕು ನಿಮಿಷ ತಡೆದು ಮತ್ತೆ ರಿಹರ್ಸ್‌ಲ್ ಮಾಡಿಸಿದ. ಎರಡು ಸಲ ಅನುರಾಧೆಯನ್ನು ಗದರಿಸಿ ನಿಷ್ಕಾರಣವಾಗಿ ತೂಗುತ್ತಿದ್ದ ಕೈಗಳನ್ನು ಸರಿಯಾಗಿ ಇಡುವಂತೆ ಮಾಡಿದ. ರಂಗನಾಥನ್‌ನ ಮಾತಿನಿಂದಲೆ ವ್ಯಗ್ರಗೊಂಡಿದ್ದ ಮೋಹಿನಿಯ ಮುಖ ಬಹುಮಟ್ಟಿಗೆ ಸರಿಯಾಗಿ ಕಾಣುತ್ತಿತ್ತು. ಆದರೆ ಕಣ್ಣೀರು ಚಿಮ್ಮಲಿಲ್ಲ. ಮಾತು ಸ್ವಾಭಾವಿಕವಾಗಿ ಬರಲಿಲ್ಲ. ಮತ್ತೆ ಒಂದೆರಡು ಬಾರಿಯಾದನಂತರ ‘ ಶೂಟ್ ’ ಮಾಡಬಹುದೆನಿಸಿ “ ಲೈಟ್ಸ್ ” ಎಂದು ಕೂಗಿದ. ಧ್ವನಿಮಂದಿರದಿಂದ “ ರೆಡಿ ” ಎಂದು ಸೂಚನೆ ಬಂದಿತು ಯಶೋಮತಿ ಮಾತು ಹೇಳಿದಳು : “ ಇವೆಲ್ಲವನ್ನೂ ನಿಮಗೆ—” ಎನ್ನುವಷ್ಟರಲ್ಲಿಯೆ ಆಪಟೆ ‘ ಕಟ್ ’ ಎಂದು ಕೂಗಿದ. ದೀಪಗಳೂ ಆರಿದವು. “ ‘ ಇವೆಲ್ಲವನ್ನೂ ’ ಎಂದಾಗ ಅವನ್ನು ಬೆರಳು ಮಾಡಿ ತೋರಿಸುವುದು ಬೇಡ ಎಂದು ನಿಮಗೆ ಎಷ್ಟು ಸಾರೆ ಹೇಳುವುದು ? ” ಎಂದ ಯಶೋಮತಿಯನ್ನುದ್ದೇಶಿಸಿ. ಆಕೆ ತಲೆ ತಗ್ಗಿಸಿದಳು.

“ ಹುಂ—ಗೆಟ್ ರೆಡಿ—” ಮತ್ತೆ ಪ್ರಾರಂಭವಾಯಿತು ಮೊದಲಿನಿಂದ.

ಯಶೋಮತಿ ಕೊನೆಗೊಮ್ಮೆ ತನ್ನ ಮಾತನ್ನೂ ಅಭಿನಯವನ್ನೂ ಸರಿಯಾಗಿ ನಿರ್ವಹಿಸಿದಳು. ಇದು ನಡೆಯುತ್ತಿರುವಷ್ಟರಲ್ಲಿ ರಂಗನಾಥನ್ ಯಾವಾಗಲೊ ಹಿಂದುಗಡೆಯಲ್ಲಿ ಬಂದು ನಿಂತಿದ್ದ. ಆತ ಬಂದುದನ್ನು ಮೋಹಿನಿ ನೋಡಿದ್ದಳೆಂದೊ, ಸ್ವಾಭಾವಿಕವಾಗಿಯೊ, ಮೋಹಿನಿಗೆ ಮಾತೇ ಮರೆತುಹೋಯಿತು. ಮತ್ತೆ " ಕಟ್ " ಕೊನೆಗೆ ಆಪಟೆ ಹೇಳಿದ

" ನನಗೆ ತೀರ ಬೇಸರವಾಗಿದೆ ಒಂದು ಗಂಟೆಯಾದರೂ ಮೂರು ಮಾತು ಮುಂದೆ ಸಾಗಿಲ್ಲ "

" ನಾನೇ ನೋಡುವೆ—" ಎಂದು ರಂಗನಾಥನ್ ಮುಂದೆ ಬಂದು ನಿಂತ.

ಮೋಹಿನಿಗೆ ಇನ್ನೂ ಅಧೈರ್ಯವೆನಿಸಿತು ಆ ಮೂವರನ್ನೂ ಉದ್ದೇಶಿಸಿ ರಂಗನಾಥನ್ ಹೇಳಿದ

" ನೀವು ಒಂದು ಮಾತನ್ನು ಜ್ಞಾಪಕದಲ್ಲಿಡಬೇಕು ಇದು ಜೀವದ ಗೆಳತಿಯರಿಂದ ಅಗಲಬೇಕಾದಾಗಿನ ಪ್ರಸಂಗ ಆಶ್ರಮದಲ್ಲಿಯ ಪ್ರತಿಯೊಂದು ಗಿಡಬಳ್ಳಿಯನ್ನು, ಹೂವು, ಹುಲ್ಲೆ, ಮೃಗ ಎಲ್ಲವನ್ನೂ ತನ್ನ ಜೀವದಕಿಂತಲೂ ಹೆಚ್ಚಾಗಿ ಪ್ರೀತಿಸುತ್ತಿದ್ದ ಶಕುಂತಲೆ ಅವೆಲ್ಲವನ್ನೂ ಬಿಟ್ಟು ಹೋಗಬೇಕಾಗಿದೆ. ಇದಕ್ಕೂ ಹೆಚ್ಚಿಗೆ, ಜೀವ ಒಂದು, ದೇಹಗಳು ಬೇರೆ ಎಂಬಂತಿದ್ದ ಮೂವರು ಗೆಳತಿಯರು ಅವರು ಶಕುಂತಲೆ ಹೊರಟಾಗ ಅನಸೂಯೆ–ಪ್ರಿಯಂವದೆಯರಿಗೆ ಆದ ದುಃಖ ಸಾಮಾನ್ಯವಾದುದಲ್ಲ. ಅದರಲ್ಲಿ ಮರುಕವಿದೆ, ಅಸಹಾಯತೆ ಇದೆ. ಇದನ್ನೆಲ್ಲ ನೀವು ಈ ಎರಡು ಮೂರು ಮಾತುಗಳಿಂದ ತೋರಿಸಿ ಕೊಡಬೇಕು—"

ರಂಗನಾಥನ್‌ನ ಉಪನ್ಯಾಸದ ಪ್ರಯೋಜನ ಎಷ್ಟಾಯಿತೊ ! ಆಪಟೆ ಹಿಂದಕ್ಕೆ ಸರಿದಿದ್ದ.

" ಹುಂ—ಸ್ಟಾರ್ಟ್—ಲೈಟ್ಸ್—"

" ಯೆಸ್—ರೆಡಿ—"

ದೀಪಗಳು ಬೆಳಗಿದವು. ಕ್ಯಾಮೆರಾ ' ರ್‌ರ್‌ರ್ ' ಎಂದು ಕೆಲಸಕ್ಕೆ ತೊಡಗಿತು.

" ಇವುಗಳನ್ನು ನಾನು ನಿಮಗೆ ಒಪ್ಪಿಸಿ ಹೋಗುತ್ತಿದ್ದೇನೆ. ನೀವೇ—"

" ಕಟ್—"

" ಮಾತು ತಪ್ಪಿತು. ದನಿಯಲ್ಲಿ ವ್ಯಾಕುಲ ಬರಲಿಲ್ಲ—"

ಮತ್ತೆ ಮೊದಲಿನಿಂದ ಪ್ರಾರಂಭ. ಎರಡು ಸಲವಾದನಂತರ ಕೊನೆಗೊಮ್ಮೆ ಯಶೋಮತಿಯ ಮಾತು ಸರಿಯಾಗಿ ಬಂದಿತು. ಮೋಹಿನಿ ಉತ್ತರ ಹೇಳಬೇಕು. ಹೇಳಿಕೊಟ್ಟಂತೆ ನಿಂತು ಮೋಹಿನಿ ಬಾಯಿ ತೆರೆದಳು ಮಾತ್ರ:

" ನಮ್ಮಿಬ್ಬರನ್ನು—"

" ಕಟ್—"

" ಮುಖದಲ್ಲಿ ದುಃಖ ಬೇಕು—ಹದರಿಕೆಯಲ್ಲ! ನಿನ್ನೆದುರಿಗೆ ನಿಂತವಳು ಶಕುಂತಲೆ, ಹುಲಿಯಲ್ಲ ತಿಳಿಯಿತೆ?—ಹುಂ, ಸ್ಟಾರ್ಟ್—"

ಮೋಹಿನಿಯ ಮನಸ್ಸು ನಿಜವಾಗಿಯೂ ವ್ಯಗ್ರವಾಯಿತು ಮಾತನ್ನು ಹೇಳಿದಳು. ಆದರೆ ರಂಗನಾಥನ್‌ನಿಗೆ ಸಮಾಧಾನವಿಲ್ಲ ಮತ್ತೆ ಪ್ರಾರಂಭವಾಯಿತು. ಆ ಮಾತುಗಳನ್ನು ಮೋಹಿನಿಯಿಂದ ಸರಿಯಾಗಿ ಹೇಳಿಸದ ಹೊರತು ಮುಂದೆ ಸಾಗುವಂತಿಲ್ಲ ಮೋಹಿನಿಯ ಮುಖದಲ್ಲಿ ದೈನ್ಯ ಮೂಡಿತ್ತು. ಆದರೆ ಕಣ್ಣು ಬಾಡಿರಲಿಲ್ಲ ನೀರು ಬಂದಿರಲಿಲ್ಲ. ಮೂರನೆಯ ಬಾರಿಯೂ ಅದೇ ಗತಿಯಾಯಿತು. ರಂಗನಾಥನ್ ಕೊನೆಗೆ ಅಬ್ಬರಿಸಿದ

" ನಿನಗೆ ಪಾರ್ಟು ಮಾಡುವುದಿದೆಯೊ ಇಲ್ಲವೊ? ಹುಂ—ಸ್ಟಾರ್ಟ್—"

ಮೋಹಿನಿ ಮಾತು ಮೊದಲುಮಾಡಿದಳು. ದನಿಯಲ್ಲಿ ನಡುಕ ಮಾತ್ರ ಮೂಡಿತ್ತು. ಆದರೆ ಕಣ್ಣೀರಿಲ್ಲ.

" ನಾನ್‌ಸೆನ್ಸ್! ನಿನಗೆ ನಾಚಿಕೆಯಾಗುವುದಿಲ್ಲವೆ? ಎಷ್ಟು ಸಲ ಅದನ್ನೇ ಹೇಳಿಕೊಡುವುದು?"

ಎಂದು ರಂಗನಾಥನ್ ಹೆಚ್ಚುಕಡಿಮೆ ಮೋಹಿನಿಯ ಮೈಮೇಲೆ ಏರಿ ಹೋಗುವಂತೆ ಚೀರಿದ. ಮೋಹಿನಿಯ ಕಣ್ಣೊಳಗಿನಿಂದ ಪಳಕ್ಕನೆ ನೀರು ಉದುರಿತು.

" ಸ್ಟಾರ್ಟ್—"

ದೀಪಗಳು ಬೆಳಗಿದವು. ಕಾಮೆರಾ ರ್‌ರ್‌ರ್ ಎಂದು ಸುರುವಾಯಿತು. ಮೋಹಿನಿ ಸ್ವಾಭಾವಿಕವಾಗಿಯೆ ಸೀರೆಯ ತುದಿಯಿಂದ ಕಣ್ಣೊರಸುತ್ತ ನಡುಗುವ ದನಿಯಲ್ಲಿ ಮಾತು ಹೇಳಿದಳು. ರಂಗನಾಥನ್ ಹಿಂದಕ್ಕೆ ಸರಿದು ನಕ್ಕು,

" ದ್ಯಾಟ್ಸ್ ರೈಟ್—" ಎಂದು ಗಟ್ಟಿಯಾಗಿ ಹೇಳಿದ.

ಮತ್ತೆ ದೀಪಗಳು ಆರಿದವು. ಧ್ವನಿಮುಂದಿರದಿಂದ "ಓ.ಕೆ." ಬಂದಿತು. ಇದನ್ನು ನೋಡುತ್ತಲೆ ಇದ್ದ ಆಪಟೆ "ಬ್ಯೂಟಿಫುಲ್" ಎನ್ನುತ್ತಲೆ ಎದ್ದು ಬಂದ ಮಧ್ಯಾಹ್ನದಲ್ಲಿ ಮೊದಲಾದ ಮೂರು ಮಾತುಗಳು ಮುಚ್ಚಂಜೆಗೆ ಮುಗಿದುವು

ಆ ದಿನ ಸೆಟ್ ಮೇಲಿನ ಕೆಲಸ ಅಲ್ಲಿಗೇ ಮುಗಿಯಿತು. ಮೋಹಿನಿ ತನ್ನ ಕೋಣೆಯಲ್ಲಿ ಬಂದು ಕುಳಿತಿದ್ದಳು ರಿಹರ್ಸ್ ಮಾಡಿ ಮಾಡಿ, ಸೆಟ್ ಮೇಲೆ ನಿಂತು ನಿಂತು ಕಾಲು ನೋಯುತ್ತಿದ್ದವು ಕಾಲುಗಳಿಗಿಂತ ಹೆಚ್ಚಾಗಿ ರಂಗ ನಾಥನ್ ತನಗಾಡಿದ ಮಾತಿನಿಂದ ಮನಸ್ಸು ಇನ್ನೂ ನೊಂದುಕೊಂಡಿತ್ತು ಈ ಅಭಿನಯದ ಕೆಲಸವನ್ನು ತಾನು ಒಪ್ಪಿರದಿದ್ದರೆ ಚೆನ್ನಾಗಿತ್ತು ಎನ್ನುವ ಮಟ್ಟಿಗೆ ಆಕೆಗೆ ಬೇಸರವೆನಿಸಿತ್ತು ಬಂದು ಕುಳಿತು ಅರ್ಧಗಂಟೆಯಾಯಿತು, ಮುಕ್ಕಾಲು ಗಂಟೆಯಾಯಿತು ರಂಗನಾಥನ್ ಬರಲೇ ಇಲ್ಲ ಆತ ಬಾರದೆ—ಆತನಿಂದ ಅನುಮತಿ ಪಡೆಯದೆ—ತಾನು ಹೊರಡುವ ಹಾಗಿಲ್ಲ ಒಂದು 'ಪ್ಲೇ ಬ್ಯಾಕ್' ಹಾಡನ್ನು ರೆಕಾರ್ಡ್ ಮಾಡುವುದಿದ್ದಿತು ಅದರ ಮೇಲ್ವಿಚಾರಣೆಯಲ್ಲಿ ರಂಗನಾಥನ್ ತೊಡಗಿದ್ದನಾದ್ದರಿಂದ ಮೋಹಿನಿ ತನಗಾಗಿ ಕಾಯುತ್ತಿರಬಹು ದೆಂಬುದೂ ಆತನಿಗೆ ಹೊಳೆದಿರಲಿಲ್ಲ ಆ ಕೆಲಸವನ್ನು ಪೂರ್ತಿ ಮುಗಿಸಿಕೊಂಡೇ ತನ್ನ ರೂಮಿಗೆ ಬಂದ ಮೋಹಿನಿ ಅಲ್ಲಿಯೇ ಕಾಯುತ್ತಿದ್ದಳು ಮುಖದಲ್ಲಿಯ ವ್ಯಗ್ರಭಾವ ಮೊದಲಿಗಿಂತಲೂ ಅಧಿಕವಾಗಿತ್ತು ರಂಗನಾಥನ್ ಬಂದಾಗ ಆತನನ್ನು ನೇರವಾಗಿ ನೋಡುವ ಧೈರ್ಯ ಕೂಡ ಆಕೆಯಲ್ಲಿ ಉಳಿದಿರಲಿಲ್ಲ.

"ಯಾಕೆ, ಬಹಳ ಬೇಸರವಾಗಿದ್ದ ಹಾಗಿದೆಯಲ್ಲ?"

ಮೋಹಿನಿ ಮಾತನಾಡಲೆ ಇಲ್ಲ.

"ಬಹಳ ಬೇಸರವಾಯಿತೆ? ಆ ಪ್ಲೇ ಬ್ಯಾಕ್‌ನಲ್ಲಿ ತೊಡಗಿಬಿಟ್ಟೆ. ಮುಗಿಯಿಸದ ಹೊರತು ಬರಲಾಗಲಿಲ್ಲ. ಬಹಳ ಹೊತ್ತಾಯಿತೆ ಕಾಯುತ್ತಿದ್ದು?"

ಮೋಹಿನಿಯ ಮನಃಸ್ಥಿತಿಯನ್ನಾಗಲಿ, ಅದಕ್ಕೆ ಕಾರಣವಾಗಿದ್ದ ಸನ್ನಿ ವೇಶವನ್ನಾಗಲಿ ರಂಗನಾಥನ್ ಗುರುತಿಸುವುದು ಸಾಧ್ಯವೇ ಇರಲಿಲ್ಲ. ತಾನು ಬೇರೊಂದು ಕೆಲಸದಲ್ಲಿ ತೊಡಗಿದ್ದರೆ ಅಲ್ಲಿಗೇ ಬಂದುಬಿಡತಕ್ಕವಳು ಇಂದು ಇದೇನು ಹೀಗೆ ಒಬ್ಬಳೆ ಕುಳಿತುಬಿಟ್ಟಿದ್ದಾಳೆ ಎಂದು ಆಶ್ಚರ್ಯಪಡುತ್ತಿರುವಾಗಲೆ ಮೋಹಿನಿ ಹೇಳಿದಳು:

" ನಾನು ಚಿತ್ರದಲ್ಲಿ ಕೆಲಸ ಮಾಡುವುದಿಲ್ಲ ಎಂದು ಮೊದಲೇ ಹೇಳಿದ್ದಿಲ್ಲವೆ ನಿಮಗೆ ? "

" ಏನಾಯಿತು, ಈಗ ? "

" ಬೇಕಾದಷ್ಟಾಯಿತಲ್ಲ ಪೂಜೆ ಪುನಸ್ಕಾರ—ಅದೂ ಸಾರ್ವಜನಿಕವಾಗಿ."

ಮೋಹಿನಿಗೆ ತಡೆಯದಾಯಿತು. ಇಷ್ಟು ಮಾತನಾಡಿದ್ದೆ ಹೆಚ್ಚು ಎನ್ನುವಂತಿತ್ತು ದನಿ ಕಣ್ಣೀರು ತುಳುಕುವುದರಲ್ಲಿತ್ತು. ಈಗ ಮಾತ್ರ ರಂಗನಾಥನ್ನಿಗೆ ಅರ್ಥವಾಯಿತು ಗಟ್ಟಿಯಾಗಿ ನಕ್ಕು ಕೇಳಿದ

" ಅದಕ್ಕಾಗಿ ಇಷ್ಟೊಂದು ಚಿಕ್ಕ ಮೋರೆ ಮಾಡಿದ್ದೀಯಾ ? ಸರಿ—" ಎಂದು ಮತ್ತೆ ನಗತೊಡಗಿದ

" ಮುಖದ ಮೇಲೆ ಹೊಡೆದ ಹಾಗೆ ಅಷ್ಟು ಮಾತನಾಡಿ ಮತ್ತೆ ನಗುತ್ತೀರಲ್ಲವೆ ? ಅದಕ್ಕೇ—"

" ನಗಬೇಕೊ ಅಳಬೇಕೊ ತಿಳಿಯದಾಗಿದೆ. ಅದಕ್ಕೆ ನಗುತ್ತಿದ್ದೇನೆ ! "

" ನಗೆ ಬರುತ್ತಿದೆಯಲ್ಲವೆ ನನ್ನನ್ನು ನೋಡಿ ?—"

" ಯಾಕೆ ಬರಬಾರದು ?—"

" ನನಗೆ ಅಸಮಾಧಾನವಾದಷ್ಟೂ ನಿಮಗೆ ಸಂತೋಷ—"

" ಅಲ್ಲ. ನಿನ್ನ ಹುಚ್ಚು ಸಿಟ್ಟು ನೋಡಿದಷ್ಟೂ ನನಗೆ ನಗು—"

" ಹೌದು, ನನ್ನ ಸಿಟ್ಟು ಹುಚ್ಚು. ಅಷ್ಟು ಆಡಿಸಿಕೊಂಡೂ ಸಿಟ್ಟು ಬರದಿದ್ದರೇನೆ, ಹುಚ್ಚು—"

" ಹುಚ್ಚು ಎಂದು ನಾನು ಹೇಳಿದ್ದು ಅದಕ್ಕಲ್ಲ. ನಿನಗೆ ಇಷ್ಟೂ ತಿಳಿಯಲಿಲ್ಲ, ಅದಕ್ಕೆ—" ಎಂದು ನಕ್ಕ.

" ಏನು ತಿಳಿಯಲಿಲ್ಲವೊ ! "

" ನಾನು ಗದರಿಸಿದ್ದು ಯಾತಕ್ಕೆ ಎಂಬುದು—"

" ಯಾಕೆ ಯಾರಿಗೆ ಗೊತ್ತು ? ನನಗಂತೂ ಯೋಚನೆ ಮಾಡಿ ಮಾಡಿ ಸಾಕಾಗಿಹೋಗಿದೆ ! "

" ಹೌದೆ ? ಅದಕ್ಕೇ ನಾನು ಹುಚ್ಚು ಎಂದು ಹೇಳುವುದು. ಈಗಲಾದರೂ ಹೇಳು ನೋಡುವ."

" ನಾನೇನು ಹೇಳಲಿ, ಯಾವ ದೆವ್ವ ಹಿಡಿದುಕೊಂಡಿತ್ತು ? "

" ದೆವ್ವ ಹಿಡಿದಿರಲಿಲ್ಲ. ಅಭಿನಯ ಮಾಡಿಸಬೇಕಾಗಿತ್ತು, ಸರಿಯಾಗಿ."

" ಅದಕ್ಕೆ ಅಷ್ಟು ನಿಷ್ಠುರವಾದ ಮಾತೆ ? "

" ಅಷ್ಟು ನಿಷ್ಠುರವಾಗಿ ನಾನು ಮಾತನಾಡಿರದಿದ್ದರೆ ನಿನಗೆ ಕಣ್ಣೀರೇ ಬರುತ್ತಿರಲಿಲ್ಲ ! "

" ಅಷ್ಟಕ್ಕಾಗಿಯೆ ಹಾಗೆ ಮಾಡಿದಿರಾ ? "

" ಮತ್ತಿನ್ನೇನು ? "

" ಮೊದಲಿಗೇ ಬಿರುಸಾಗಿ ಹೇಳಿದಿರಲ್ಲ, ರಿಹರ್ಸ್ ಮಾಡಲಿಕ್ಕೆ ಆಪಟೆನ ಹತ್ತಿರ ಹೋಗು ಎಂದು "

" ಅದೆಲ್ಲ ಪೂರ್ವಸಿದ್ಧತೆ ! ಆಗಲೆ ನಿನ್ನ ಮನಸ್ಸು ಕೆಲಮಟ್ಟಿಗೆ ವ್ಯಗ್ರ ವಾಯಿತು ಅಲ್ಲವೆ ? "

" ಇಷ್ಟೆಲ್ಲವನ್ನೂ ಯೋಚನೆ ಮಾಡಿಕೊಂಡೇ ಮಾಡಿದಿರಾ ? "

" ಮತ್ತಿನ್ನೇನು ಮಾಡುವುದು ? ಇದೀ ಮಧ್ಯಾಹ್ನ ರಿಹರ್ಸ ಮಾಡಿಸಿ ದರೂ ಒಂದು ಸಲವೂ ದನಿ ಸರಿಯಾಗಿ ನಡುಗಲಿಲ್ಲ ಕಣ್ಣೀರಂತೂ ದೂರವೇ–"

" ಹಾಗಿದ್ದರೆ ನಿಮಗೆ ನಿಜವಾಗಿಯೂ ಕೋಪ ಬಂದಿರಲಿಲ್ಲವೆ ? "

" ಯಾರ ಮೇಲೆ ? "

" ನನ್ನ ಮೇಲೆ—"

" ಸರಿ. ಒಳ್ಳೆಯ ಮಾತು—"

ಎಂದು ರಂಗನಾಥನ್ ಆಕೆಯ ಮುಖವನ್ನೇ ದಿಟ್ಟಿಸಿದ. ಮೋಹಿನಿಗೆ ಆಶ್ಚರ್ಯವೆನಿಸಿತು ! ಮಧ್ಯಾಹ್ನದಿಂದ ಕಾಡುತ್ತಿದ್ದ ವಿವಂಚನೆ ದೂರ ವಾಯಿತು.

" ಮೊದಲಿಗೆ ನೀವು ಹಾಗೆ ಹೇಳಿದಾಗಲಂತೂ ನನಗೆ ತುಂಬಾ ಗಾಬರಿ ಯಾಗಿಬಿಟ್ಟಿತು. ಯಾಕಾದರೂ ಈ ಅಭಿನಯಿಸುವುದನ್ನು ನಾನು ಒಪ್ಪಿದೆನೊ ಎಂದುಕೊಳ್ಳುವಂತಾಯಿತು."

" ಆಯಿತು. ಹೀಗೆಲ್ಲಾ ಮನಸ್ಸಿಗೆ ತಂದುಕೊಂಡರೆ—"

" ಕೊನೆಗಾದರೂ ನಿಮ್ಮ ಮನಸ್ಸಿನಂತಾಯಿತೆ ? "

" ಕೇಳುತ್ತೀಯಾ ? ಫಸ್ಟ್ ಕ್ಲಾಸ್—ಮುಂದಿನ ಪಿಕ್ಚರ್‌ನಲ್ಲಿ ನಿನಗೆ ದೊಡ್ಡ ಪಾರ್ಟೇ."

ರಂಗನಾಥನ್‌ನ ಪ್ರಶಂಸೆಯಿಂದ ಮಧ್ಯಾಹ್ನದ ಅಳುಕು–ಅರೆಭರವಸೆಗಳೆಲ್ಲವೂ ಮಾಯವಾಗಿದ್ದವು.

"ಯಾವುದು ಮುಂದಿನ ಪಿಕ್ಚರ್?"

"ಇನ್ನೂ ನಿಶ್ಚಯ ಮಾಡಬೇಕಾಗಿದೆ. ಏನೋ ಒಂದೆರಡು ಒಳ್ಳೆಯ ಕತೆ ಬಂದಿವೆ, ನೋಡಬೇಕು—"

"ನಾನು ಒಂದು ಸೂಚನೆ ಮಾಡಬೇಕೆಂದಿದ್ದೇನೆ—"

"ಏನಾದರೂ ಕತೆ ಬರೆದಿದ್ದೀಯಾ?"

"ನಾನು ಬರೆದದ್ದಲ್ಲ, ಓದಿದ್ದು ಅದನ್ನು ಓದಿದಾಗಿನಿಂದ ಅದನ್ನು ಯಾಕೆ ಚಿತ್ರಮಾಡಬಾರದು, ನಿಜವಾಗಿಯೂ ನಮ್ಮ ದೇಶದಲ್ಲಿ ಪ್ರಸಾರಕ್ಕೆ ಅಗತ್ಯವಾಗಿ ಬೇಕಾದ ಚಿತ್ರವಾಗಬಹುದು ಎಂದೆನಿಸಿದೆ"

"ಯಾವುದದು?"

"ಇಬ್ಸೆನ್‌ನ 'ಸೂತ್ರದ ಬೊಂಬೆ'"

"ಬ್ಯೂಟಿಫುಲ್—" ಎಂದ ರಂಗನಾಥನ್.

"ಚೆನ್ನಾಗಿದೆಯಲ್ಲವೆ?"

"ಚೆನ್ನಾಗಿದೆಯೆಂದು ಕೇಳುತ್ತೀಯಾ? ಈಗ ನಾಲ್ಕು ವರ್ಷ ಯೋಚನೆ ಮಾಡಿದ್ದೇನೆ. ನಾನೇನಾದರೂ ಸಾಮಾಜಿಕ ಚಿತ್ರ ತಯಾರು ಮಾಡಿದರೆ ಅದನ್ನೇ ಮಾಡುವುದು ಎಂದು."

ಮೋಹಿನಿಗೆ ಪರಮಾಶ್ಚರ್ಯವಾಯಿತು, ಚಿತ್ರಪಟಗಳ ವಿಚಾರದಲ್ಲಿ ತಮ್ಮಿಬ್ಬರ ಅಭಿಪ್ರಾಯ ಇಷ್ಟರಮಟ್ಟಿಗೆ ಹೇಗೆ ತೀರ ಹೊಂದಿಕೊಂಡುವಾಗಿರುತ್ತವೆ ಎಂದು.

"ಹಾಗಿದ್ದರೆ ಕೂಡಲೆ ಅದನ್ನೇ ಯಾಕೆ ಮಾಡಬಾರದು?"

"ಮಾಡಬಹುದು. ಇಷ್ಟು ದಿವಸ ಅದಕ್ಕೆ ಬೇಕಾದ ಸರಿಯಾದ ಸ್ಟಾರ್ ಹುಡುಕುತ್ತಿದ್ದೆ ಇನ್ನುಮೇಲೆ ಆ ಯೋಚನೆಯೂ ಇಲ್ಲ!"

ಮೋಹಿನಿಗೆ ಆಗಲೆ ರಂಗನಾಥನ್‌ನ ಮಾತಿನ ಅರ್ಥವಾಗಿತ್ತು. ಆದರೂ ಬೇಕೆಂತಲೆ ಕೇಳಿದಳು.

"ಈಗ ಸ್ಟಾರ್ ಸಿಕ್ಕಳೆ?" ಕಿರುನಗೆಯೊಂದು ತಡೆಯಲಾಗದೆ ತುಟಿಯ ಅಂಚಿನಲ್ಲಿ ಮಿನುಗಿತು.

" ಸಿಕ್ಕಳೆಂದೇ ಈ ಮಾತು ! "

" ಯಾರವರು ? "

" ಯಾರೆ ? ಇವರೇ—"

ಎಂದು ರಂಗನಾಥನ್ ಮೋಹಿನಿಯ ಭುಜ ತಟ್ಟಿದ.

ಒಂದು ಕ್ಷಣ ಮೋಹಿನಿಗೆ ವಿಚಿತ್ರವೆನಿಸಿತು. ಈ ಒಂದು ತಿಂಗಳ ಕಾರ್ಯದರ್ಶಿತ್ವದಲ್ಲಿ ರಂಗನಾಥನ್ ತನ್ನ ಕೈಯನ್ನು, ಭುಜವನ್ನು ತಟ್ಟಿದ್ದು ಮೊದಲ ಸಲವಾಗಿರಲಿಲ್ಲ ಆದರೂ ಇಂದಿನ ಒತ್ತಡದ ರೀತಿ ಬೇರೆಯಾಗಿದ್ದಿತೆಂದೆನಿಸಿತು ಆದರೆ ಆತನಾಡಿದ ಮಾತಿನಿಂದ ತನ್ನಲ್ಲಿ ಮೂಡಿದ ಅಭಿಮಾನ–ಸಂತೋಷಗಳೆದುರು ಬೇರೆ ಯೋಚನೆ ಆಕೆಯನ್ನು ಕಾಡಲಿಲ್ಲ ರಂಗನಾಥನ್‌ನ ಸಂಪರ್ಕ–ಸಾಮೀಪ್ಯಗಳು ಅಸಹಜವೆನಿಸಲಿಲ್ಲ ಆ ತರಹದ ಸಲಿಗೆ ದಿನದಿನಕ್ಕೂ ಅವರಿಬ್ಬರಲ್ಲಿ ಬೆಳೆಯುತ್ತಲಿದ್ದಿತು ಒಂದೊಂದು ಸಲ ಇದನ್ನೆಲ್ಲ ನೆನೆದಾಗ ಆಕೆ ಯೋಚನೆಗೀಡಾಗುತ್ತಿದ್ದಳಾದರೂ ವಯಸ್ಸಿಗೆ ತಕ್ಕ ವಿಹಾರವನ್ನು ಅಸ್ಪಷ್ಟವಾಗಿ ಅಪೇಕ್ಷಿಸುತ್ತಿದ್ದ ಆಕೆಯ ಒಳಮನಸ್ಸು ಆಕೆಗೆ ತಿಳಿಯದಲೆಂಬಂತೆ ಸಂತೋಷವನ್ನೇ ಅನುಭವಿಸುತ್ತಿದ್ದಿತು.

ವೇಳೆ ಎಂಟೂಕಾಲಾಗುತ್ತ ಬಂದಿತ್ತು ರಂಗನಾಥನ್ ನಸುನಕ್ಕು ಕೇಳಿದ :

" ನೀನು ಒಳ್ಳೆಯ ಕಾರ್ಯದರ್ಶಿನಿ ! ಒಂದು ಎಂಗೇಜ್‌ಮೆಂಟನ್ನೂ ಜ್ಞಾಪಿಸುವುದಿಲ್ಲ ! "

" ಸ್ವತಹದ ಎಂಗೇಜ್‌ಮೆಂಟುಗಳನ್ನು—"

" ಹಾಗಿದ್ದರೆ ಕಾರ್ಯದರ್ಶಿ ಯಾತಕ್ಕೆ ಬೇಕು ? "

" ಕಾರ್ಯದರ್ಶಿ ನಿರ್ದೇಶಕರಿಗೆ—ರಂಗನಾಥನ್‌ರಿಗಲ್ಲ ! "

" ಅವರು ಬೇರೆ ಬೇರೆ ವ್ಯಕ್ತಿಗಳಲ್ಲವಲ್ಲ ! "

" ಅಲ್ಲವೆ ? ಮಧ್ಯಾಹ್ನ ಸೆಟ್ ಮೇಲೆ ನಿಂತವರನ್ನು ತಿಂದುಹಾಕುವ ಹಾಗೆ ಗದರಿಸುತ್ತಿದ್ದವರು ನೀವೇ ಏನು ? " ಎಂದು ಕೊರಳು ಕೊಂಕಿಸಿ ನಗು ಬೀರಿದಳು

" ಅದೂ ಹೋಗಲಿ. ಈಗ ನನ್ನ ಎಂಗೇಜ್‌ಮೆಂಟ್ ಏನು ? "

" ಒಂಬತ್ತು ಗಂಟೆಗೆ ಗ್ರೀನ್ಸ್‌ನಲ್ಲಿ ಇರಬೇಕು— ಡಿನರ್ ! "

" ಯಾರಿರಬೇಕು ? "

" ಯಾರೆಂದರೆ? ನೀವು—ಡೈರೆಕ್ಟರ್ ರಂಗನಾಥನ್ ! "

" ಅಲ್ಲ! ನೀವು ಅಲ್ಲ, ನಾವು! ಡೈರೆಕ್ಟರ್ ರಂಗನಾಥನ್ ಮತ್ತು ಜೊತೆಗೆ ಒಬ್ಬ ಸ್ಟಾರ್—"

ರಂಗನಾಥನ್‌ನ ಮಾತಿನ ರೀತಿಯನ್ನು ಆಕೆ ಬಲ್ಲವಳಾಗಿರದಿದ್ದರೆ ಹೇಳದಿದ್ದ ಹೆಸರಿನಿಂದ ಆಕೆ ಸಂಕೋಚ-ಸಂಶಯಗಳಿಂದ ಮುದುಡಿಕೊಳ್ಳ ಬಹುದಿತ್ತು.

" ಹೌದೆ? ಹಾಗಿದ್ದರೆ ದಯವಿಟ್ಟು ನನಗೆ ಮನೆಯ ವರೆಗೆ ಲಿಫ್ಟ್ ಕೊಟ್ಟುಬಿಡಿರಿ! "

" ಅಷ್ಟನ್ನು ಮಾಡಬಹುದು. ಆದರೆ ಅದು ಡಿನರ್ ಮುಗಿದನಂತರ! "

" ಅಂದರೆ ನಾನೂ ಬರಬೇಕಾಯಿತಲ್ಲ! "

" ಇದೀಗ ನಾನೇನು ಹೇಳಿದೆ? "

" ಸ್ಟಾರ್ ಅಂದಿರಲ್ಲ, ಮತ್ತೆ—"

" ಆ ಸ್ಟಾರ್ ನೀನೇ ಎಂದು ಹೇಳಿಸಿಕೊಳ್ಳುವ ಆಸೆ ಏನೊ! "

ಎಂದು ಆಕೆಯ ಗಲ್ಲದ ಮೇಲೆ ಬೆರಳು ಎಳೆದ. ಮೋಹಿನಿ ಒಂದು ಹೆಜ್ಜೆ ಹಿಂದೆ ಸರಿದಳು. ಆದರೆ ಅಷ್ಟರಲ್ಲಿಯೇ ಆಕೆಯ ಮುಖದ ಮೇಲೆ ಒಂದರೆಕ್ಷಣ ಒಂದು ನಸುಗೆಂಪಿನ ತೆರೆ ಹಾಯ್ದು ಹೋದಂತಾಯಿತು.

" ಅಂಥದೇನೂ ಇಲ್ಲ. ಆದರೆ ಬರಲಿಕ್ಕೆ ತುಂಬಾ ತಡವಾಗಿಬಿಡುವು ದಿಲ್ಲವೆ? " ಎಂದಳು ತಡೆದು.

" ಎಷ್ಟಾದೀತು? ಹೆಚ್ಚೆಂದರೆ ಹನ್ನೊಂದು."

" ನಾನು ಆಪಟೆಯವರ ಮನೆಯಲ್ಲಿರುತ್ತೇನೆ ಎಂಬುದನ್ನು ಮರೆಯ ಬೇಡಿರಿ—"

" ಅದನ್ನೇನು ಮರೆಯುತ್ತೇನೆ? ಆದರೆ ಅದೇ ತೊಂದರೆಯಾಗಿದೆ—" ಎಂದು ನಕ್ಕ.

ಮೋಹಿನಿಗೆ ಆ ನಗುವಿನ ಅರ್ಥ ಹೊಳೆಯದಿರುವುದು ಸಾಧ್ಯವಿರಲಿಲ್ಲ. ಆಕೆಯ ದೃಷ್ಟಿಯಿಂದಲೂ ತಾನು ಇದ್ದಲ್ಲಿಯೆ ಇರುವುದು ತೊಂದರೆಯದೇ ಆಗಿತ್ತು. ಊರಿನಿಂದ ಬಂದಮೇಲೆ ಅನುರಾಧೆ ಮೊದಲಿನಂತೆ ಉಳಿದಿರಲಿಲ್ಲ.

ತಾನು ಅಲ್ಲಿ ಉಳಿಯುವುದು ಇಬ್ಬರಿಗೂ ಬೇಡವಾಗಿದ್ದಿತು. ಅನುರಾಧೆಯ ಮಟ್ಟಿಗೆ ಅಸೂಯೆಯೊಂದೇ ಕಾರಣವಾಗಿರದೆ ಅದರಲ್ಲಿ ವರ್ಮಾನಾದರೂ ಸೇರಿಕೊಂಡಿದ್ದ. ಆಪಟೆನ 'ಒಳ ಒಕ್ಕಲಾಗಿ' ಉಳಿಯುವುದು ಮೋಹಿನಿಗೆ ಬೇಡವಾಗುತ್ತಿದ್ದಂತೆ ಆಕೆ ಬೇರೆಯಾಗಿಯೇ ಇರಬೇಕೆಂಬ ರಂಗನಾಥನ್‌ನ ಆಸೆಯೂ ಬಲಿಯುತ್ತಿದ್ದಿತು.

"ಅಷ್ಟು ತಡ ಮಾಡಿ ಹೋದರೆ ಆಪಟೆ ಏನೆಂದುಕೊಳ್ಳುತ್ತಾರೆಯೊ ?" ಎಂದಳು ಮೋಹಿನಿ

"ಏನೆಂದುಕೊಂಡರೂ ಅದರಿಂದ ನಿನಗೇನಾಗಬೇಕು ? ಈಗಾಗಲೆ ಅನುರಾಧೆ ಕತೆ ಕಟ್ಟಿ ಬೇಕಾದಷ್ಟು ಹೇಳಿರಬೇಕು—"

"ಅದಕ್ಕೇ—"

"ಅದಕ್ಕೇ ಏನು ನಿನ್ನ ತಲೆ ಈಗಾಗಲೆ ಎಂಟೂವರೆಯಾಗುತ್ತ ಬಂದಿತು. ಗೆಟ್ ರೆಡಿ—"

"ನಾನೇನು ರೆಡಿಯಾಗುವುದು ? ಬರುವಾಗ ಪತ್ತ್ರಲಗಳ ಗಂಟು ಕಟ್ಟಿ ಕೊಂಡು ಬಂದಿದ್ದೇನೆಯೆ ?"

"ಅಷ್ಟನ್ನು ಮಾಡಬೇಕಿಲ್ಲ. ಇದು ಫಿಲ್ಮ್ ಸ್ಟುಡಿಯೊ!"

ಎಂದವನೆ ತನ್ನ ಒಳಕೋಣೆಯಲ್ಲಿಯ ಆಲ್ಮಿರಾದಿಂದ ನೂರಿನ್ನೂರು ರೂಪಾಯಿ ಬೆಲೆ ಬಾಳುವ ಒಂದು ಭರ್ಜರಿಯಾದ ತಿಳಿಗುಲಾಬಿಯ ಸಿಲ್ಕ್ ಸೀರೆಯನ್ನೂ ಅದಕ್ಕೆ ಒಪ್ಪುವ ಜಂಪರ್ ತಂದು ಮೋಹಿನಿಯ ಮುಂದಿರಿಸಿದ. "ಉಳಿದ ಮೇಕಪ್ ನಿನ್ನನ್ನು ಕೂಡಿದೆ" ಎಂದು ಹೇಳಿ, ತಾನೂ ಬಟ್ಟೆ ಬದಲಾಯಿಸಲೆಂದು ಹೋದ ಮುಂದೆ ಹತ್ತು ನಿಮಿಷಗಳಲ್ಲಿ ರಂಗನಾಥನ್‌ನ 'ಹಡ್ಸನ್'ನಲ್ಲಿ ಆತನ ಬದಿಯಲ್ಲಿ ಓಲಾಡುತ್ತಿದ್ದ ಮೋಹಿನಿಯ ರೂಪ ವೈಖರಿ ನೋಡಿದ ಯಾರ ಕಣ್ಣನ್ನೂ ಸೆಳೆಯದಿರುವುದು ಸಾಧ್ಯವಿರಲಿಲ್ಲ. ಕಾರಿನಲ್ಲಿ ಕಾಲಿಡುತ್ತಿರುವಾಗಲೆ ರಂಗನಾಥನ್ ಕೇಳಿದ್ದ· "ನಿನಗೆ ಈ ಹೆಸರನ್ನು ಯಾರು ಕೊಟ್ಟರು ?" ಎಂದು. ದಾರಿಯುದ್ದಕ್ಕೂ ಆತನ ಕಣ್ಣು ಆಕೆಯಿಂದ ಸರಿಯಲೆ ಇಲ್ಲ. ಮೋಹಿನಿಯ ಯೋಚನೆ ಮಾತ್ರ ಮರುದಿನ ತಾನು ಪೂರೈಸಬೇಕಾಗಿದ್ದ ಕಾರ್ಯಕ್ರಮದ ಕಡೆಗೆ ಓಡಿತ್ತು.

"ನಾಳೆ—ನಾನು ಆಫೀಸಿಗೆ ಬರುವುದಿಲ್ಲ!"

" ನಮ್ಮ ಆಫೀಸಿನಲ್ಲಿ ಯಾರಿಗೂ ರಜೆ ಸಿಕ್ಕುವುದಿಲ್ಲ—ಕೆಲಸವಿದ್ದಾಗ."

" ನನಗಂತೂ ನಾಳೆ ಕೆಲಸವಿಲ್ಲ ! "

" ನಾಳೆ ಶೂಟಿಂಗ್ ಇಲ್ಲವೆ ? "

" ಇರದೆ ಏನು ? ಶಾಟ್ ೧೮೪ ರಿಂದ ನಡೆಯಬೇಕು. ೨೧೨ರ ವರೆಗೆ ನಾನಿಲ್ಲ. ನಾಳೆ ಬರೀ ಕಣ್ವ ಮತ್ತು ಶಿಷ್ಯರು—"

" ಏನು ? ಸ್ಕ್ರಿಪ್ಟ್ ಮುಖಪಾಠ ಮಾಡಿದ ಹಾಗಿದೆಯಲ್ಲ ? "

" ಇಲ್ಲದಿದ್ದರೆ—"

" ಸರಿ. ನಾಳೆ ಯಾಕೆ ರಜೆ ? "

" ಮದುವೆಯೊಂದಕ್ಕೆ ಹೋಗಬೇಕಾಗಿದೆ ! "

" ಯಾರ ಮದುವೆ ? "

" ನನ್ನದಲ್ಲ!—" ಎಂದು ನಕ್ಕಳು. ಆ ಒಂದು ಮಾತು ಮೋಹಿನಿ-ರಂಗನಾಥನ್‌ರ ನಡುವೆ ಬೆಳೆದುನಿಂತ ಮಾತಿನ ಸಲಿಗೆಗೆ ಸಂಕೇತದಂತಿತ್ತು.

" ಅಷ್ಟೂ ಗೊತ್ತಾಗುವುದಿಲ್ಲವೆ ? ಯಾರಿಗೆ ಮದುವೆ ? "

" ವಸಂತ ! "

" ಆ ನಿಮ್ಮ ಫ್ರೆಂಡೊ ? "

ರಂಗನಾಥನ್ ತನ್ನ ಮಾತಿನಲ್ಲಿ ' ಆ ನಿಮ್ಮ ' ಎಂದು ಸೇರಿಸಬಾರದಿತ್ತು ಎಂದೆನಿಸಿತು ಮೋಹಿನಿಗೆ.

" ಫ್ರೆಂಡ್ ಅಷ್ಟೇ ಯಾಕೆ—ಬೆನಿಫ್ಯಾಕ್ಟರ್."

" ಏನು ಪ್ರೆಜೆಂಟ್ ಕೊಡಬೇಕೆನ್ನುತ್ತೀ ? "

ಮೋಹಿನಿಯ ಮನಸ್ಸು ಆಗಲೆ ವಸಂತನ ಹತ್ತಿರವಿದ್ದಿತು. ತಾನು ಈ ಕೆಲಸವನ್ನು ಒಪ್ಪಿಕೊಂಡ ನಾಲ್ಕನೆಯ ದಿನ ನೋಡಿದ ಆತನನ್ನು ಮತ್ತೆ ನೋಡಲಾಗಿರಲಿಲ್ಲ. ' ಹೇಗಿದೆ, ಅಲ್ಲಿಯ ವಾತಾವರಣ ? ' ಎಂದು ಕೇಳಿದ್ದ. ' ನೀನು ನಿಜವಾಗಿಯೂ ಫಿಲ್ಮ್‌ನಲ್ಲಿ ಕೆಲಸ ಮಾಡುವುದಾದರೆ—' ಎಂದು ಅರ್ಧಕ್ಕೆಯೆ ತಡೆದಿದ್ದ. ' ಯಾಕೆ ? ಏನು ಅನುಮಾನ ? ' ಎಂದು ತಾನು ಎಷ್ಟು ಸಾರೆ ಕೇಳಿದ್ದರೂ ಉತ್ತರ ಹೇಳಿರಲಿಲ್ಲ. ತೀರ ಒತ್ತಾಯಪಡಿಸಿದಾಗ ಕೊನೆಯಾಗಿ ಹೇಳಿದ್ದ. ' ಚಿತ್ರಪ್ರಪಂಚದ ವಿಶೇಷವಾದ ಪರಿಚಯ ನನಗಿದೆ ಎಂದು ಹೇಳುವಂತಿಲ್ಲ. ಆದರೂ ಹತ್ತಾರು ಕತೆಗಳನ್ನು ಕೇಳಿದ್ದೇನೆ—ಅಲ್ಲಿ

ಒಳ್ಳೆಯದಾಗಿ ಕೆಲಸ ಮಾಡಿ ಕಲೆಯ ಸೇವೆಯನ್ನು ಮಾಡಲು ಅವಕಾಶ ವಿದ್ದಷ್ಟೂ ದುರ್ಮಾರ್ಗಕ್ಕೆ ಪ್ರಲೋಭನೆಗಳಿಲ್ಲದಿಲ್ಲ ನಿನಗೇನೂ ಇದು ತಿಳಿ ಯದ ವಿಷಯವಲ್ಲ. ಏನೋ ಮನಸ್ಸು ನಿಲ್ಲದೆ ಹೇಳುತ್ತಿದ್ದೇನೆ. ನಿಯಮಕ್ಕೆ ಅಪವಾದವಾಗಬೇಕು, ನೀನು.' ಆದರೆ ಅಲ್ಲಿಯ ವಾತಾವರಣದ ಗುಣವೊ, ಮೋಹಿನಿಯ ಸುಪ್ತ ಆಕಾಂಕ್ಷೆಗಳ ಕೈವಾಡವೊ, ಒಂದೂವರೆ ತಿಂಗಳಲ್ಲಿ ಮೋಹಿನಿ ನಿಯಮಕ್ಕೆ ಅಪವಾದವಾಗುವುದರ ಬದಲು ನಿಯಮವನ್ನೇ ಸ್ಥಿರ ಪಡಿಸುವ ದಾರಿಯಲ್ಲಿದ್ದಳೆಂಬುದನ್ನು ಆಕೆಯೆ ತಿಳಿಯದವಳಾಗಿದ್ದಂತಿತ್ತು. ಈ ಯೋಚನೆಗಳಲ್ಲಿ ಸಿಲುಕಿದ ಮೋಹಿನಿಯನ್ನು ಎಚ್ಚರಿಸುವವನಂತೆ ಆಕೆಯ ಭುಜವನ್ನು ಬಲವಾಗಿ ಅಲ್ಲಾಡಿಸಿ ರಂಗನಾಥನ್ ಕೇಳಿದ.

"ಯಾಕೆ, ಎಲ್ಲಿದ್ದೀ? ಪ್ರೆಜೆಂಟ್ ಏನು ಕೊಡಮಾಡಿರುವಿ ಎಂದೆ?"

"ಪ್ರೆಜೆಂಟೆ?"

ಮೋಹಿನಿಗೆ ನಿಜವಾಗಿಯೂ ಯೋಚನೆಯಾಯಿತು. ಇದನ್ನು ಕುರಿತು ಆಕೆ ಎಷ್ಟೋ ಬಾರಿ ಯೋಚಿಸಿದ್ದರೂ ಪ್ರಶ್ನೆ ಬಗೆಹರಿದಿರಲಿಲ್ಲ. ವಸಂತನಿಗೆ ತಾನೇನು ಕೊಡಬಲ್ಲೆ? ತನ್ನ ಸರ್ವಸ್ವವನ್ನೆ ಆತನಿಗೆ ಸೂರೆಮಾಡಬಹುದಾಗಿದ್ದ ಕಾಲ ಅಷ್ಟೇನು ದೂರ ಸರಿದಿರಲಿಲ್ಲ ಆದರೆ ಅದಕ್ಕೆ ಅವಕಾಶವಿರಲಿಲ್ಲ ಅಂಧವನಿಗೆ ತಾನು ಏನು ಕೊಟ್ಟರೆ ಏನು, ಕೊಡದಿದ್ದರೂ ಏನು? ವಸಂತನಿಗೆ ಇದು ತಿಳಿಯದೆ? ವೇಗವಾಗಿ ಸಾಗುತ್ತಿದ್ದ ಕಾರು, ಬದಿಯಲ್ಲಿಯೆ ಕುಳಿತಿದ್ದ ರಂಗನಾಥನ್, ಭರದಿಂದ ಹಿಂದಕ್ಕೆ ಸಾಗುತ್ತಿದ್ದ ಮನೆಗಳು, ಜನಗಳು ಮೋಹಿನಿಯ ಕಣ್ಣಿಗೆ ಕಾಣುತ್ತಲೆ ಇರಲಿಲ್ಲ ಆಕೆಯ ಕಣ್ಣೆದುರು ನಿಂತಿದ್ದುದು ಒಂದೇ ಒಂದು ಚಿತ್ರ, ಆ ಚಿತ್ರ ವಸಂತನದು! ತನ್ನ ಕಡೆಗೆ ಲಕ್ಷ್ಯವಿಲ್ಲದ ಮೋಹಿನಿಯನ್ನು ಗಮನಿಸಿ ರಂಗನಾಥನ್ :

"ಹುಂ, ಪ್ರೆಜೆಂಟು ಅಂದರೆ ಮದುವೆ ಮುಂತಾದ ಸಮಾರಂಭಗಳಲ್ಲಿ ತಮಗೆ ಬೇಕಾದವರಿಗೆ ಕೊಡಬೇಕಾದ ಉಡುಗೊರೆ, ಕಾಣಿಕೆ. ತಿಳಿಯಿತೆ?"

"ತಿಳಿಯಿತು ಹೀಗೇಕೆ ಸಿಘಂಟುವಿನ ತರಹ ಹೇಳುತ್ತಿದ್ದೀರಿ? ಅಷ್ಟೂ ಗೊತ್ತಾಗುವುದಿಲ್ಲವೆ ನನಗೆ?"

"ಗೊತ್ತಾಗುತ್ತದೆಯೊ ಇಲ್ಲವೊ. ಯಾರು ಹೇಳಬೇಕು? ಈ ಪ್ರಪಂಚ ದಲ್ಲಿಯೇ ಇದ್ದ ಹಾಗಿಲ್ಲ!"

ಮೋಹಿನಿ ನಿಜವಾಗಿಯೂ ಹೇಳಬಹುದಾಗಿತ್ತು: 'ಹೌದು, ನಾನೀಗ ವಿಹರಿಸುತ್ತಿರುವ ಪ್ರಪಂಚ ಬೇರೆಯಾದದ್ದೇ. ನನ್ನದಲ್ಲ ಈ ಕಾರು, ಈ ವೇಷ, ಈ ಸನ್ನಿವೇಶ, ಈ ಸುಖ ಸೌಲಭ್ಯ, ಸಾನ್ನಿಧ್ಯ, ಇದರ ವಿಲಾಸ, ವೈಖರಿ; ಇದೆಲ್ಲದರ ಆಶೋತ್ತರ, ಈ ಯಾವವೂ ನನ್ನ ಇದುವರೆಗಿನ ಬಾಳಿಗೆ ಸಂಬಂಧ ಪಟ್ಟವುಗಳಲ್ಲ ಈ ಬಣ್ಣ ಬೆಡಗುಗಳ ಸಾಮ್ರಾಜ್ಯ ನನ್ನದಾಗಿರಲಿಲ್ಲ ಈ ಪ್ರಪಂಚ ಬೇರೆ, ನನ್ನ ಪ್ರಪಂಚ ಬೇರೆ. ಇದುವರೆಗಾದರೂ ಹಾಗಿತ್ತು' ಎಂದು. ಆದರೆ ರಂಗನಾಥನ್‌ನಿಗೆ ಬೇರೆಯಾಗಿಯೆ ಉತ್ತರ ಹೇಳಿದಳು:

"ಬೇರೆ ಪ್ರಪಂಚ ಎಲ್ಲಿಯದು ಬರಬೇಕು? ಇಷ್ಟು ಸಾಕಲ್ಲವೆ?"

"ಇಷ್ಟೇ ಸಾಕೆ? ಇದೇನು ಮಹಾ ನಿನಗೆ ಸಿಕ್ಕದ್ದು—"

"ಮುಂದೆ ಹೇಗೂ ಆದೀತು. ಈಗಂತೂ ಸದ್ಯಕ್ಕೆ ತಿಂಗಳ ಸಂಬಳ ಸಿಕ್ಕರೆ ಸಾಕಾಗಿದೆ—"

ಎಂದು ತಡೆಯದಾಗಿ ಗಟ್ಟಿಯಾಗಿ ನಕ್ಕಳು. ಆ ನಗೆಯಲ್ಲಿ ಮೂದಲಿಕೆ ಇರಲಿಲ್ಲ, ಮಾತುಗಾರಿಕೆಯ ಸಮಯೋಚಿತತೆ ಮಾತ್ರವಿದ್ದಿತು. ರಂಗನಾಥನ್ ಅವಾಕ್ಕಾದ. ಮೋಹಿನಿ ತನ್ನ ಕಾರ್ಯದರ್ಶಿನಿಯಾದಳೆಂಬ ವಿಚಾರದಲ್ಲಿ, ಆಕೆ ಹೆಚ್ಚುಕಡಿಮೆ ತನ್ನ ಹತ್ತಿರದಲ್ಲಿಯೇ ಇರುತ್ತಿದ್ದಳೆಂಬ ವಿಚಾರದಲ್ಲಿ, ದಿನಬೆಳಗೂ ಒಂದೊಂದು ಬಗೆಯಲ್ಲಿ ಬೆಳೆಯುತ್ತಿದ್ದ ಸಹವಾಸ ಸಾನ್ನಿಧ್ಯಗಳ ಸೊಗಸಿನಲ್ಲಿ, ಆಕೆಯ ಮತ್ತು ತನ್ನ ನಡುವೆ ಹೊರ ಜಗತ್ತಿನ ದೃಷ್ಟಿಯಿಂದಾದರೂ ಒಂದು ವ್ಯಾವಹಾರಿಕವಾದ ಸಂಬಂಧವಿದೆ ಎಂಬುದಾಗಲಿ, ಆ ಸಂಬಂಧದ ಅಂಶವೆಂದು ಆಕೆಗೆ ಸಂಬಳ ಸಲ್ಲಬೇಕು ಎಂಬುದಾಗಲಿ ರಂಗನಾಥನ್‌ನಿಗೆ ನಿಜವಾಗಿಯೂ ಹೊಳೆದಿರಲಿಲ್ಲ. ಮೊದಲಿನಿಂದಲೂ ಅಷ್ಟೊಂದು ಆತ್ಮೀಯತೆಯನ್ನು ತಳೆದೇ ಆಕೆಯನ್ನು ಬರಮಾಡಿಕೊಂಡಿದ್ದ. ಮೋಹಿನಿಗಾದರೂ ದುಡ್ಡಿನ ಅಗತ್ಯವೆನಿಸಿರಲಿಲ್ಲ. ಇಲ್ಲಿ ಕೆಲಸಕ್ಕೆ ಸೇರಿದಾಗಿನಿಂದ ಎಲ್ಲವೂ ಯಥಾವತ್ತಾಗಿ ಪುಕ್ಕಟೆಯಾಗಿಯೆ ನಡೆಯುತ್ತಿದ್ದಿತು. ಚಿಲ್ಲರೆ ವೆಚ್ಚಕ್ಕೆ ಬೇಕಾಗುವಷ್ಟು ಹಣ ಆಕೆಯ ಹತ್ತಿರವಿದ್ದಿತು. ಅಲ್ಲದೆ, ತನಗೆ ಯಾವುದಕ್ಕಾದರೂ ಹಣ ಬೇಕಾದುದೇ ಆದರೆ ಯಾವ ಕ್ಷಣಕ್ಕೂ ರಂಗನಾಥನ್‌ನಿಂದ ಪಡೆಯಬಹುದು ಎಂಬ ವಿಶ್ವಾಸ ತಾನು ಅಲ್ಲಿಗೆ ಬಂದ ಹೊಸದರಲ್ಲಿಯೇ ಬೆಳೆದಿದ್ದಿತಾದ್ದರಿಂದ ಸಂಬಳದ ಮಾತನ್ನು ಆಕೆಯೂ ಎತ್ತಿರಲಿಲ್ಲ. ಈಗ ಮೋಹಿನಿ

ಅದೇ ಮಾತನ್ನು ಮುಕ್ತಕಂಠವಾಗಿ ನಕ್ಕು ಹೇಳಿರದಿದ್ದರೆ ರಂಗನಾಥನ್ ನಿಜವಾಗಿಯೂ ನೊಂದುಕೊಳ್ಳಬಹುದಿತ್ತು. ಆದರೂ ಈ ಅಲಕ್ಷ್ಯ ವಿಚಿತ್ರ ವಾದಷ್ಟೇ ಆಕ್ಷೇಪ್ಯ ಎಂದುಕೊಂಡು ಹೇಳಿದ

" ಎಂಥ ಮಾತಿದು ? ನಿಜವಾಗಿಯೂ ಇದು ಅಕ್ಷಮ್ಯ ನೀನಾದರೂ ಒಂದು ಮಾತಿನಿಂದ ನೆನಹು ಕೊಡಬಾರದೇನೊ."

" ನನಗೆ ಬೇಕಾಗಿದ್ದರೆ ಕೇಳುತ್ತಿದ್ದೆ ಈಗಲಾದರೂ ಏನೋ ಮಾತಿಗೆ ಮಾತು ಬಂದಿತು, ಅದಕ್ಕೆ ಹೇಳಿದೆ. ಅಷ್ಟೆ—ಅಲ್ಲದೆ ' ಕೆಲಸ ನೋಡಿಕೊಂಡು ಸಂಬಳ ಗೊತ್ತುಪಡಿಸುತ್ತೇನೆ, ಯೋಗ್ಯತೆಗೆ ತಕ್ಕಂತೆ ' ಎಂದಿರಲಿಲ್ಲವೆ ನೀವು ? ಯಾರಿಗೆ ಗೊತ್ತು, ಕೆಲಸ ನೋಡುವುದು ಮುಗಿದಿದೆಯೊ ಇಲ್ಲವೊ—"

ಎಂದು ಮತ್ತೆ ಅದೇ ನಗೆಯನ್ನು ಬೀರಿದಳು ರಂಗನಾಥನ್‌ನೆಂದ.

" ಅದೇನೂ ಇಲ್ಲ. ನಾಳೆಗೆ ನೀನು ಆಫೀಸಿಗೆ ಬಂದ ಕೂಡಲೆ ಇದು ಮೊದಲನೆಯ ಕೆಲಸ—"

" ಎಷ್ಟು ಎಂದು ಗೊತ್ತಾಯಿತು ? "

" ಅದಲ್ಲ ಈಗ ಯಾಕೆ ? ನಾಳೆಗೆ ತಾನೇ ತಿಳಿಯುತ್ತದೆ "

" ಅಂದರೆ ನಾನು ನಾಳೆ ಬರಲೇಬೇಕಾಯಿತಲ್ಲ ? "

" ಮದುವೆ ಎಷ್ಟು ಗಂಟೆಗೆ ? "

" ಸಾಯಂಕಾಲ ಐದಕ್ಕೆ. ಐದೂವರೆಯಿಂದ ರಿಸೆಪ್ಷನ್."

" ಸರಿ, ಹಾಗಿದ್ದರೆ. ಬೇಕಾದಷ್ಟು ಟೈಮ್ ಇದೆ. ಬೇಕಾದರೆ ಮಧ್ಯಾಹ್ನ ಫೋರ್ಟ್‌ನಲ್ಲಿ ಹೋಗಿ ಸರಿಯಾದ ಪ್ರೆಜೆಂಟ್ ಏನಾದರೂ ತೆಗೆದುಕೊಂಡು ಬರಬಹುದು."

' ಗ್ರೀನ್ಸ್ ' ಎದುರಿಗೆ ರಂಗನಾಥನ್‌ನ ಕಾರು ನಿಂತಾಗ ಒಂಬತ್ತಕ್ಕೆ ಐದು ನಿಮಿಷ ಕಡಿಮೆ ಇದ್ದಿತು. ನಡುವಿನ ಹಾಲ್‌ನಲ್ಲಿಯ ತಿಳಿಬೆಳಕಿನಲ್ಲಿ ಮೋಹಿನಿಯ ಕೈಯಲ್ಲಿ ಕೈ ಸಿಕ್ಕಿಸಿಕೊಂಡು ನಿಧಾನವಾಗಿ ಹೆಜ್ಜೆಯಿಡುತ್ತಿದ್ದಾಗ ಆಕೆಯನ್ನು ಉಳಿದವರು ಕಣ್ಣರಳಿಸಿ ನೋಡುತ್ತಿದ್ದುದನ್ನು ನೆನೆದಾಗ ರಂಗನಾಥನ್‌ನಿಗೆ ಅಭಿಮಾನವೆನಿಸದಿರಲಿಲ್ಲ.

## ೨೦

ಮೋಹಿನಿ ಕೋಣೆಗೆ ಹಿಂದಿರುಗಿದಾಗ ನಡುರಾತ್ರಿ ಸಮೀಪಿಸಿತ್ತು. ಆಪಟೆ-ಅನುರಾಧೆಯರು ಯಾವಾಗಲೊ ನಿದ್ರೆಹೋದಂತಿತ್ತು ರಂಗನಾಥನ್ ಕಾರಿನ ಹತ್ತಿರದಲ್ಲಿಯೆ ಮೋಹಿನಿಯನ್ನು ಬೀಳ್ಕೊಟ್ಟು ಮರುದಿನದ ಕಾರ್ಯ ಕ್ರಮವನ್ನು ಮತ್ತೆ ನೆನಪಿಸಿದ ಇಡಿಯ ಸಾಯಂಕಾಲ ತಾನು ಸೌಂದರ್ಯ ರಾಶಿಯಾಗಿ ಮೆರೆದಿದ್ದಳು. ಹತ್ತಾರು ಜನರ ಕಣ್ಣು ಸೆಳೆದಿದ್ದಳು ಆ ಎಲ್ಲ ಅನುಭವ ಆಕೆಯ ಮನಸ್ಸನ್ನು ಸೂರೆಗೊಂಡಿತ್ತು ಗ್ರೀನ್ಸ್‌ನಲ್ಲಿಯ ನಿಲುಗನ್ನಡಿ ಗಳಲ್ಲಿ ಪ್ರತಿಬಿಂಬಿತವಾದ ತನ್ನ ನಿಲುವು ಚೆಲುವುಗಳನ್ನು ನೆನೆದಾಗ ತನ್ನನ್ನು ತಾನೇ ಮೋಹಿಸಿದಂತಿದ್ದಳು. ಕೋಣೆಯನ್ನು ಪ್ರವೇಶಿಸಿದಾಗ ಇನ್ನೂ ಅದೇ ಮನಃಸ್ಥಿತಿಯಲ್ಲಿದ್ದಳು. ಸಾಯಂಕಾಲದುದ್ದಕ್ಕೂ ರಂಗನಾಥನ್ ಆಡಿದ ಮಾತು, ನಡೆದುಕೊಂಡ ರೀತಿ ಆ ಮನಃಸ್ಥಿತಿಯನ್ನೇ ಪುಷ್ಟೀಕರಿಸುತ್ತಿದ್ದವು. ಆ ವೇಷ, ಆ ಭೂಷಣಗಳಿಂದ ಕೂಡಿದ ತನ್ನನ್ನು ಮತ್ತೊಮ್ಮೆ ನೋಡಿ ಕೊಂಡಳು ಯಾರದೋ ಬೇರೆಯವರ ಚಿತ್ರವೊಂದನ್ನು ಆಕೆ ಸೋತ ಮನಸ್ಸಿನ ಆಸ್ಥೆಯಿಂದ, ಆತುರದಿಂದ ನೋಡುತ್ತಿದ್ದಂತಿತ್ತು. ನೋಡಿ ನೋಡಿ ಮನಸ್ಸು ದಣಿದಿರಬೇಕು. ನೋಡುತ್ತಿರುವಾಗ ಅರಳಿದ ಕಣ್ಣು ನೋಡಿ ನೋಡಿ ಬಾಡಿತು ಕೊನೆಗೆ ಆ ಕಣ್ಣ ಅಂಚಿನಲ್ಲಿ ಹಳೆಯ ಅತೃಪ್ತಿಯೊಂದು ಮೂಡಿತು. ಇದೆಲ್ಲ ಯಾವುದಕ್ಕೆ? ಇದರಿಂದ ತನಗೇನಾಗಿದೆ? ಯಾವ ಸುಖ ದೊರಕಿದೆ? ದೊರ ಕಿಲ್ಲವೆ? ರಂಗನಾಥನ್ ಹೇಗೆ ನಡೆದುಕೊಂಡಿದ್ದ? ಹೇಗೆ ನಡೆದುಕೊಳ್ಳುತ್ತಿದ್ದ? ಆ ಸಾಯಂಕಾಲ ಎಂಥ ಅನುನಯ-ಅನುರಾಗಗಳನ್ನು ಸೂರೆಮಾಡಿದ್ದ! ಅಷ್ಟು ಸಾಕಲ್ಲವೆ?

ಮೋಹಿನಿಗೆ ಸಾಕು ಎನಿಸಲಿಲ್ಲ. ಒಂದೂವರೆ ತಿಂಗಳಲ್ಲಿ ರಂಗನಾಥನ್ ತನಗೆ ಬೇಕಾದುದನ್ನು ಒದಗಿಸಬಲ್ಲನೆಂಬ ಭರವಸೆ ಮೂಡಿ ಅದರಿಂದಾಗಿ ಬಾಳು ಗೆಲುವುಗೊಂಡಿತ್ತು. ಬದುಕಿನಲ್ಲಿಯ ನಷ್ಟನಿಷ್ಠುರಗಳು ಎಲ್ಲಿಯವೊ ಎಂಬಂತೆ ದೂರ ಸರಿದಿದ್ದವು. ಆ ಎಲ್ಲ ಅನುಕೂಲಗಳೇ ಹೊಸ ಬಯಕೆಗಳನ್ನು ಕೆರಳಿಸಿ ದ್ದವು. ಹಳೆಯ ಆಕಾಂಕ್ಷೆಗಳನ್ನು ಜಾಗೃತಗೊಳಿಸುತ್ತಿದ್ದವು. ಹೀಗೆ ಬದುಕು ಹೊಸದಾಗಿ ಬಣ್ಣಗೊಳ್ಳುತ್ತಿದ್ದರೂ ಪೂರ್ತಿಯಾಗಲಿದೆ ಎಂದಾಗಲಿ, ತನಗೆ ನಿಜ

ವಾಗಿ ಸೌಖ್ಯ ಸಿಕ್ಕಿದೆ ಎಂದಾಗಲಿ ಆಕೆಗೆ ತೋರಿರಲಿಲ್ಲ. ಆ ದಾರಿಯಲ್ಲಿದ್ದಳು, ನಿಜ. ರಂಗನಾಥನ್‌ನಿಂದ, ಅವನ ಮುಖಾಂತರ ಎಲ್ಲವನ್ನೂ ಪಡೆಯಬಹುದೆಂಬ ಆಸೆ ಮಾತ್ರ ಚಿಗುರಿತ್ತು. ಆದರೆ ಚಿಗುರಿದ ಆ ಕನಸಿನ ಹಿಂದೆಯೆ— ಮೊಗ್ಗೆಯ ಮಗ್ಗುಲಲ್ಲಿಯೆ ಕೊರೆಯುವ ಹುಳು ಅವಿತುಕೊಂಡಿರುವಂತೆ— ಕೊರೆಯುವ ಯೋಚನೆಯೊಂದು ಆಗಾಗ ಮೋಹಿನಿಯನ್ನು ಪೀಡಿಸುತ್ತಿತ್ತು. ತಾನು ಮಾಡುತ್ತಿರುವುದೇನು ? ರಂಗನಾಥನ್‌ನಿಂದ ತಾನು ಈಗ ಪಡೆಯುತ್ತಿದ್ದ ಅನುಕೂಲಗಳನ್ನು ಪಡೆಯುವುದಾದರೆ, ಇದಕ್ಕೂ ಹೆಚ್ಚಾಗಿ ತಾನು ಅದೇ ದಾರಿಯಲ್ಲಿ ಮುಂದುವರಿಯುವುದಾದರೆ, ಅದಕ್ಕೆ ಕೊನೆಯಾದರೂ ಎಲ್ಲಿ ? ವ್ಯಭಿಚಾರ ? ರಂಗನಾಥನ್ ಖಂಡಿತವಾಗಿಯೂ ತನ್ನಲ್ಲಿ ಅನುರಕ್ತನಿದ್ದ. ಒಂದಿಲ್ಲೊಂದು ದಿನ ಕಾಮದ ಸಂಬಂಧ ಅನಿವಾರ್ಯವಾಗುವುದೂ ಖಂಡಿತ. ಇಂದಿನ ಸಾಯಂಕಾಲದ ಅವನ ಸೂಚನೆ ಸ್ಪಷ್ಟವಾಗಿದ್ದಿತು. ಆ ದಿನವೂ ಬಹಳ ದೂರದಲ್ಲಿದ್ದಂತೆ ಕಾಣಲಿಲ್ಲ ಹಾಗಿದ್ದರ ?—

ತಾನು ಯಾವುದಕ್ಕಾಗಿ ಹಟ ತೊಟ್ಟು ಮುಂದುವರಿದಿದ್ದಳೊ ಅದರಲ್ಲಿ ಈ ಪ್ರಶ್ನೆಯೂ ಅಡಕವಾಗಿತ್ತೆಂಬುದು ಮೋಹಿನಿಗೆ ಹೊಸ ಪರಿಸರದಲ್ಲಿ ಹೆಚ್ಚು ಹೆಚ್ಚಾಗಿ ಗೋಚರಿಸಿತ್ತು. ಬದುಕು ಬಾಳುವುದಕ್ಕಾಗಿ—ಸಾಧ್ಯವಾದಷ್ಟು ಸುಖವಾಗಿ ಬಾಳುವುದಕ್ಕಾಗಿ ಯಾವುದೊ ಒಂದು ಪರಿಸ್ಥಿತಿಯಲ್ಲಿ ನಡೆದು, ಹೇಗೋ ಮುರಿದುಬಿದ್ದ ಮದುವೆಯ ತಾತ್ವಿಕ ಬಂಧನದಿಂದಾಗಿ ಇಂದು ತನ್ನ ಬಾಳನ್ನು ಬರಡು ಬಯಲನ್ನಾಗಿ ಮಾಡಿಕೊಳ್ಳುವುದಾದರೆ ತನ್ನ ವ್ಯಕ್ತಿ ಸ್ವಾತಂತ್ರ್ಯಕ್ಕೆ ಯಾವ ಬೆಲೆ ? ತಾನು ವ್ಯಕ್ತಿಸ್ವಾತಂತ್ರ್ಯವನ್ನು ಬಯಸಿ, ಹಟ ಹಿಡಿದು ಗಳಿಸಿದ್ದೇ ಆದರೆ ತನಗೆ ಬೇಕಾದವನನ್ನು, ತನ್ನ ಹೃದಯ ಒಲಿದವನನ್ನು ಪ್ರೀತಿಸುವ ಅಧಿಕಾರ ತನಗಿರಲೇಬೇಕು. ಹೃದಯದ ಹಾರೈಕೆಗಳನ್ನು ಹಿಂದಕ್ಕೆ ತಳ್ಳಿ ಪೊಳ್ಳು ಬಂಧನಗಳಿಗೆ ಮನ್ನಣೆ ಕೊಡುವುದಾದರೆ ಮನುಷ್ಯನಿಗೆ ವಿವೇಚನೆಯ ಸಾಮರ್ಥ್ಯ ಯಾತಕ್ಕೆ ? ಹಾಗಾದರೆ ಪ್ರತಿಯೊಬ್ಬ ವ್ಯಕ್ತಿಯೂ ಹೀಗೆಯೆ ಸಾಗಿದರೆ ? ಸಮಾಜಸ್ವಾಸ್ಥ್ಯದ ಗತಿಯೇನು ? ಆದರೆ ವ್ಯಕ್ತಿಯ ಜೀವನದಲ್ಲಿ ಸುಖವಿಲ್ಲದೆ ಹೋಗಬಹುದಾದರೆ ಸಮಾಜಸ್ವಾಸ್ಥ್ಯಕ್ಕೆ ಯಾವ ಬೆಲೆ, ಏನು ಮಹತ್ವ ? ಮೋಹಿನಿಯ ಯೋಚನೆ ಮುನ್ನುಗ್ಗುತ್ತಲೇ ಇದ್ದಿತು. ಇಂದಿನ ವಾತಾವರಣದಲ್ಲಿ ಸಮಾಜದ ಯೋಚನೆಯನ್ನು ಕಟ್ಟಿಕೊಂಡು ತನ್ನ

ಸುಖವನ್ನು ಬಿಟ್ಟುಕೊಡಲು ಯಾವ ವ್ಯಕ್ತಿ ಸಿದ್ಧವಿದೆ? ಅಲ್ಲದೆ ತಾನು ಇನ್ನೊಬ್ಬರ ಸುಖವನ್ನು ಹಾಳು ಮಾಡದೆ—ಇನ್ನೊಬ್ಬರ ದಾರಿಯನ್ನು ತಡೆಯದೆ—ತನ್ನ ಸುಖವನ್ನು ಸಾಧಿಸುವುದು ಸಾಧ್ಯವಿದ್ದರೆ ಸಮಾಜದ ಪ್ರಶ್ನೆಯೇ ಏಳುವುದಿಲ್ಲ ಹೀಗೆಂದುಕೊಂಡಾಗ ತಾನು ಆನಂದನ ಸುಖವನ್ನು ಕೆಡಿಸಿಲ್ಲವೆ? ಕೆಡಿಸುತ್ತಿಲ್ಲವೆ? ಎಂದೂ ಕೇಳಿಕೊಳ್ಳುತ್ತಿದ್ದಳು. ಅದಕ್ಕೆ ಉತ್ತರ ವನ್ನೂ ಹೇಳಿಕೊಳ್ಳುತ್ತಿದ್ದಳು. ತನ್ನ ಆನಂದನ ಮದುವೆ ನಡೆದದ್ದೇ ಒಂದು ತಪ್ಪು ಅದು ನಡೆಯಬಾರದ್ದು ಆ ತಪ್ಪನ್ನು ಸರಿಪಡಿಸದೆ, ಅದನ್ನೇ ಮುಂದು ವರಿಸಿ ಒಬ್ಬರಲ್ಲದೆ ಇಬ್ಬರೂ ದುಃಖಿಗಳಾಗುವುದು ಸರಿಯಾದುದಲ್ಲ. ಅಲ್ಲದೆ ತನ್ನಿಂದ ದೂರವಾದ ಆನಂದ ದುಃಖಿಯಾಗಬೇಕಿರಲಿಲ್ಲ ಆತನೂ ತನ್ನ ಸುಖದ ದಾರಿಯನ್ನು ಕಂಡುಕೊಳ್ಳಬಹುದು. ಕಂಡುಕೊಳ್ಳಬೇಕು. ತನ್ನ ಆತನ ಸಂಬಂಧವೇ ಕಡಿದುಹೋದಮೇಲೆ ತಾನು ಮಾಡಬೇಕಾದುದು ತನ್ನ ಸ್ವಂತದ ಯೋಚನೆಯನ್ನು—

ಈ ಎಲ್ಲ ತಾತ್ವಿಕ ಸಮರ್ಥನೆ ಕೆಲಮಟ್ಟಿಗೆ ತನ್ನ ಮತ್ತು ರಂಗನಾಥನ್‌ನ ನಡುವೆ ಬೆಳೆಯುತ್ತಿದ್ದ ಸನ್ನಿವೇಶಗಳಿಗೆ ಸಂಬಂಧಪಟ್ಟಿರುತ್ತಿತ್ತು ಆದರೆ ಬಹು ಮಟ್ಟಿಗೆ ಅದು ದಿನದಿನವೂ ತನ್ನಲ್ಲಿ ಬೆಳೆಯುತ್ತಿದ್ದ ದೇಹದ ಬೇಡಿಕೆಯಿಂದ. ಯಾವ ದೃಷ್ಟಿಯಿಂದ ಯೋಚಿಸಿದರೂ ಆ ಕೊರತೆಯೇನೂ ಆಕೆಗೆ ಸಾಮಾನ್ಯ ವಾಗಿ ಕಾಣುತ್ತಿದ್ದಿಲ್ಲ. ಆ ಕೊರತೆಯಿಂದಾಗಿ ದೇಹ–ಮನಸ್ಸುಗಳೆರಡೂ ಬಳಲುತ್ತಿದ್ದವು, ಮನಸ್ಸು ತೀವ್ರವಾಗಿ ಉದ್ವಿಗ್ನಗೊಳ್ಳುತ್ತಿತ್ತು, ಪ್ರಪಂಚದ ಮೇಲೆಯೆ ಹರಿಹಾಯುತ್ತಿತ್ತು, ದಿವಸಾನುದಿವಸವೂ ಅಸ್ವಸ್ಥವಾಗಿರುತ್ತಿತ್ತು. ಇದೆಲ್ಲವನ್ನೂ ಸ್ಪಷ್ಟವಾಗಿ ಗುರುತಿಸಬಲ್ಲವಳಾಗಿದ್ದ ಆಕೆ ಆ ಕೊರತೆಯನ್ನಾದರೂ ಯಾಕೆ ನೀಗಿಸಿಕೊಳ್ಳಬಾರದೆಂದು ಕೇಳಿಕೊಳ್ಳುತ್ತಿದ್ದಳು. ವಸಂತನಿಂದ ಆ ಆಸೆ ಒಂದು ಕಾಲಕ್ಕೆ ಹೊನಲಾಗಿ ಹರಿದಿದ್ದರೂ ಆ ಬಯಕೆ ಬದುಕಿನ ಮರಳುಗಾಡಿ ನಲ್ಲಿ ಬತ್ತಿ ಹೋಗುವಂತಾಯಿತು. ಇಂದಿಗೂ ವಸಂತನನ್ನು ನೆನೆದಾಗಲೆಲ್ಲ ಆತನ ನೆನಹು—ಆ ಸಹವಾಸ—ಅದರ ಸಂತಸ, ಎಲ್ಲವೂ ಚೂರಿಯಾಗಿ ಇರಿಯು ತ್ತಿದ್ದವು. ಆದರೆ ವಸಂತ ದೂರವಾದ, ಅನಿವಾರ್ಯವಾಗಿ. ಆ ನೋವಿನಿಂದ ಹೃದಯ ಹರಿದುಹೋಗುತ್ತಿದ್ದಾಗಲೆ ಎಲ್ಲವನ್ನೂ ಸೂರೆಮಾಡುವಂತೆ ರಂಗನಾ ಥನ್ ಮುಂದೆ ಬಂದಿದ್ದ. ಆತನಿಂದಾಗಿ ಬಾಳು ಮತ್ತೆ ದಾರಿಗಂಡಿತ್ತು. ಸಂತಸ

ಗೊಳ್ಳಲು ಅವಕಾಶವುಂಟಾಗಿತ್ತು. ತನ್ನ ಮನಸ್ಸು ಆತನೆಡೆಗೆ ಹರಿಯುವಂತೆ ಆಗಿತ್ತು. ಅದರಲ್ಲಿ ತಪ್ಪೇನು ? ಯೋಚನೆಯನ್ನು ದೂರ ಓಡಿಸಿದಷ್ಟೂ ದುಃಖ ಹೆಚ್ಚು. ತನಗೆ ಸುಖವಾಗಿ ಇರುವುದೇ ಇದ್ದರೆ, ಇಲ್ಲದ ತಾತ್ವಿಕ ವಿಚಾರಗಳಿಗೆ ಆಸ್ಪದ ಕೊಟ್ಟು ಇದ್ದಬಿದ್ದ ಅನುಕೂಲಗಳನ್ನು ಕಳೆದುಕೊಳ್ಳಬೇಕಾದೀತು. ಅದು ಬಂದುದನ್ನು ಕಳೆದುಕೊಳ್ಳುವ ಪ್ರಶ್ನೆ ಮಾತ್ರವಾಗಿರಲಿಲ್ಲ. ಬದುಕು ಕೊಡ ಮಾಡಿದ್ದನ್ನು ಬೇಡವೆಂದು ನಿರಾಕರಿಸಿ ' ನನಗೆ ಅದು ಸಿಕ್ಕಲಿಲ್ಲ, ಇದು ಸಿಕ್ಕ ಲಿಲ್ಲ, ಅದು ಬೇಕು, ಇದು ಬೇಕು ' ಎಂದು ಬೇಡುವವ ಕೊನೆಯ ವರೆಗೆ ಬಾಯಿ ಬಿಡುತ್ತಲೆ ಇರಬೇಕಾಗುತ್ತದೆ ಎಂದು ಹೇಳಿಕೊಳ್ಳುವಂತಾದಳು. ಈ ಎಲ್ಲ ಯೋಚನೆ ಸ್ಪಷ್ಟವಾಗಿ ಆಕೆಯ ಮನಸ್ಸಿನಲ್ಲಿ ಮೂಡಿದುವೊ ಇಲ್ಲವೊ. ಆದರೆ ಆಕೆಯ ನಡೆ ಈ ಯೋಚನೆಗಳ ಕ್ರಮದಲ್ಲಿ ಮುಂದುವರಿಯುವುದರಲ್ಲಿತ್ತು. ಆ ನಡೆಗೆ ಸಮರ್ಥನೆಯನ್ನು ಆಕೆ ಮೇಲಿನ ರೀತಿಯಲ್ಲಿ ಹೇಳಿಕೊಂಡಳು. ' ವ್ಯಭಿಚಾರ ' ಎಂಬ ಮಾತು ಬಂದಾಗಲೂ ಹಾಗೆಯೇ. ' ಯಾವುದು ವ್ಯಭಿಚಾರ ಎಂಬುದನ್ನು ಯಾರು ನಿರ್ಣಯಿಸುವವರು ? ಮನಸ್ಸು ಒಂದೆಡೆ ಓಡುತ್ತಿರುವಾಗ ಅದನ್ನು ತಡೆದರೆ ವ್ಯಭಿಚಾರ ತಡೆದಂತಾಯಿತೆ ? ಮನಸ್ಸು ಸೂರೆಗೊಂಡಾಗ ವ್ಯಭಿಚಾರ ನಡೆದುಹೋಯಿತು. ಅಂದಮೇಲೆ ? ಅಲ್ಲದೆ ಇದು ಕೂಡ ವ್ಯಕ್ತಿಯ ಸ್ವಾತಂತ್ರ್ಯದ ಪ್ರಶ್ನೆಯಾಗಿದೆ. ಇನ್ನೊಬ್ಬನ ಸುಖ ವನ್ನು ಕೆಡಿಸದಿರುವ ತನಕ ನಾನು ಏನು ಮಾಡಿದರೂ ನನ್ನನ್ನು ಯಾರೂ ತಡೆಯಕೂಡದೆಂಬ ಸ್ವಾತಂತ್ರ್ಯದ ಅಗತ್ಯವಾದ ಅಂಶ ಅದು. ಈ ಸ್ವಾತಂತ್ರ್ಯ ದಿಂದ ನನಗೆ ಕೇಡಾದರೆ ಅದಕ್ಕೆ ನಾನೇ ಹೊಣೆ. ಸಮಾಜವೂ ಅಲ್ಲ, ಇನ್ನಾರೂ ಅಲ್ಲ.' ಹೀಗೆಂದು ಸ್ವಾತಂತ್ರ್ಯಕ್ಕಾಗಿ ಹಟ ತೊಟ್ಟ ಮೋಹಿನಿ ಸಮಾಜದ ದೃಷ್ಟಿಯಲ್ಲಿ ಯಾವುದಕ್ಕೆ ವ್ಯಭಿಚಾರವೆಂದು ಹೆಸರೊ ಅದರ ಕಹಿಯನ್ನು, ಅದಕ್ಕೆ ಅಂಟಿಕೊಂಡಿದ್ದ ಅಪವಾದವನ್ನು ತನ್ನ ಮಟ್ಟಿಗೆ ದೂರ ಮಾಡಿಕೊಂಡಹಾಗಿದ್ದಳು.

ಸಾಯಂಕಾಲದ ಸರಸ ಸನ್ನಿವೇಶಗಳು ನೂರಾರು ಬಗೆಗಳಲ್ಲಿ ಕಣ್ಣೆದುರು ಕುಣಿಯುತ್ತಿದ್ದಾಗ ನಿದ್ರೆ ಎಲ್ಲಿಯದು ? ಸುಮಾರು ಎರಡು ಗಂಟೆಯಾದರೂ ಆಗಿರಬೇಕು. ಕತ್ತಲೆಯಲ್ಲಿ ಕಣ್ಣು ಪಿಳುಕಿಸುತ್ತ ಹಾಗೆಯೆ ಒಮ್ಮೆ ಆ ಮಗ್ಗಲು ಒಮ್ಮೆ ಈ ಮಗ್ಗಲು, ಹಾಸಿಗೆಯಲ್ಲಿ ಬಿದ್ದುಕೊಂಡಿದ್ದಳು. ಮನಸ್ಸು ಏನೇ

ನನ್ನೋ ನೆನೆಯುತ್ತಿತ್ತು. ಮನೆಗೆ ಹಿಂದಿರುಗುವಾಗ ರಂಗನಾಥನ್ ಕಾರಿನಲ್ಲಿ ಎಷ್ಟು ಹತ್ತಿರಕ್ಕೆ ಕುಳಿತಿದ್ದ ? ಹೊರಡುವಾಗ ? 'ನಾಳೆ ಮಧ್ಯಾಹ್ನ ಫೋರ್ಟ್ ನಲ್ಲಿ ಹೋಗುವುದಲ್ಲವೆ ?' ಎಂದಾಗ ? ಆನಂದನೂ ಹೀಗೆಯೆ ಇದ್ದಿದ್ದರೆ ? ಸರಿ. ವಿಚಾರ ಬೇರೆಯಾದ ದಿಕ್ಕಿನಲ್ಲಿ ಓಡತೊಡಗಿತ್ತು. ಆನಂದ ಕೊನೆಯಲ್ಲಿ ಹೇಗೆ ಅಮಾನುಷವಾಗಿ ನಡೆಸಿಕೊಂಡಿದ್ದ ? ಅಂದಿನಿಂದ ಇಂದಿನ ವರೆಗೆ ದೇಹ ಬಳಲಿತ್ತು ತಡೆಹಿಡಿದ ಆಸೆಯಿಂದ ಅದರ ಬಳಲಿಕೆ ಬೆಳೆಯಿತೆ ಹೊರತು ಕಡಿಮೆಯಾಗಲಿಲ್ಲ. ಜುಹುವಿನ ಕನಸು ಕಣ್ಣೆದುರು ನಿಂತಿತು. ವಸಂತ ! ನಾಳೆ ವಸಂತನಿಗೆ ಮದುವೆಯಲ್ಲವೆ ? ಆತನ ಶಕುಂತಲೆ ಹೇಗಿದ್ದಾಳೊ ! ತನ್ನ ಪ್ರತಿರೂಪದಂತಿದ್ದಾಳೆಂದು ವಸಂತ ಹೇಳಿದ್ದನಲ್ಲವೆ ? ರಿಸೆಪ್ಶನ್ ಐದೂವರೆಗೆ ತುಸು ಬೇಗ ಹೋದರೂ ಏನು ? ಹೋದಾಗ—ವಸಂತನೊಡನೆ ಮಾತನಾಡಲು ಅವಕಾಶ ಎಷ್ಟು ಸಿಕ್ಕೀತು ? ಆದರೂ—ಮನಸ್ಸು ಅಲೆಯುತ್ತಲೆ ಇದ್ದಿತು. ಚಿತ್ರಗಳು ಮಸುಕಾಗತೊಡಗಿದವು ಮಸುಕಾದ ಚಿತ್ರಗಳು ಕನಸಿನಲ್ಲಿ ನಿಚ್ಚಳವಾದವು ಏನೇನೋ ಚಿತ್ರವಿಚಿತ್ರಗಳು. ರಂಗನಾಥನ್—ಕಾರು—ಎಲ್ಲಿಯೋ ಹೋಗುತ್ತಿದ್ದ ಹಾಗೆ—ವಸಂತ—ವಸಂತನಿದ್ದವ ರಂಗನಾಥನ್ ಆಗಿದ್ದ ಹಾಗೆ ! ಇನ್ನೂ ಏನೇನೋ ಎಷ್ಟು ನಿದ್ರೆಯೊ, ಎಷ್ಟು ಕನಸೊ, ಎಷ್ಟು ನನಸೊ—ಯಾರು ಹೇಳಬೇಕು ? ಮೋಹಿನಿಗೆ ಎಚ್ಚರವಾದಾಗ ವೇಳೆ ಏಳೂವರೆಯಾಗಿಹೋಗಿದ್ದಿತು.

೨೧

ದಾದರಿನಲ್ಲಿಯ ' ಲಕ್ಷ್ಮೀ ಬಾಗ್ 'ನಲ್ಲಿ ವಸಂತನ ಮದುವೆ ವಿಜೃಂಭಣೆ ಯಿಂದ ನಡೆಯಿತು. ಒಬ್ಬಳೇ ಮಗಳ ಮದುವೆಯನ್ನು ಇದ್ದ ಊರಲ್ಲಿ ತಮ್ಮ ಮನಸ್ಸಿನಲ್ಲಿಯಂತೆ ಮಾಡಬೇಕೆಂದಿದ್ದ ಜನಾರ್ದನರಾಯರಿಗೆ ಕೆಲವೊಂದು ವಿಷಯಗಳಲ್ಲಿ ನಿರಾಶೆಯೆನಿಸಿದ್ದರೂ ಬೇಕಾದಷ್ಟು ಹಣವನ್ನು ಸೂರೆಮಾಡಲು ಸಿದ್ಧರಾಗಿದ್ದ ಅವರು ಮುಂಬಯಿಯಲ್ಲಿ ಸಾಧ್ಯವಿದ್ದ ಅನುಕೂಲಗಳೆಲ್ಲವನ್ನು ಸಾಧಿಸಿಕೊಂಡು ಕಣ್ಣು ಕುಕ್ಕಿಸುವಂತೆಯೆ ಅಂದಿನ ಸಂದರ್ಭವನ್ನು ನಡಸಿ ಕೊಂಡರು ಯಾವುದಕ್ಕೂ ಕಡಿಮೆಯಾಗಗೊಡಲಿಲ್ಲ ಆ ಎಲ್ಲ ವೈಭವವನ್ನು ನೋಡಿ ಮದುವೆ ಮುಂಬಯಿಯಲ್ಲಿ ಎಂದಾಗ ಮೂಗುಮುರಿದ ಕಮಲಕ್ಕನಿಗೆ ಕೂಡ ಕಣ್ಣಲ್ಲಿ ನೀರು ನಿಂತಿದ್ದಿತು ತಾಯಿತಂದೆಗಳ ನೆನಹೂ ಬಂದಿರಬೇಕು. ವಸಂತ ಸುಖಿಯಾದುವನ್ನು ಕಣ್ತುಂಬ ನೋಡಿದ್ದಳು ತಾನು ಮಾಡಿದ ಮದುವೆ ಎಂದು ಅಭಿಮಾನವೂ ಎನಿಸಿತ್ತು ವಸಂತ ಶಕುಂತಲೆಯರಿಗೆ, ಜನಾರ್ದನ ರಾಯರಿಗೆ, ಮೋಹನರಾಯರಿಗೆ ಸಂತಸದಿಂದ ಮಾತಿಲ್ಲದಾಗಿತ್ತು.

ಐದೂವರೆಯಿಂದ ಜನರು ಬರುತ್ತಲೇ ಇದ್ದರು ಆತಿಥ್ಯವನ್ನು ಪಡೆದು, ವಧೂವರರನ್ನು ಅಭಿನಂದಿಸಿ ಹಿಂದಿರುಗುತ್ತಿದ್ದರು ಸೋಫಾದಲ್ಲಿ ' ಕುಳಿತು ಕೊಂಡು ಅವರಿಬ್ಬರಿಗೂ ಬೇಸರವಾಗತೊಡಗಿತ್ತು. ನಡುನಡುವೆ ಶಕುಂತಲೆ ಯನ್ನು ವಸಂತ ಮಾತಿಗೆಳೆಯುತ್ತಿದ್ದ ಬಂದವರ ಹೋದವರ ಪರಿಚಯ ಮಾಡಿಕೊಡುತ್ತಿದ್ದ. ಶಕುಂತಲೆ ಯಾವುದೋ ಒಂದು ಸವಿಗನಸಿನ ರಾಜ್ಯದಲ್ಲಿ ಓಲಾಡುತ್ತಿದ್ದಂತಿತ್ತು. ವಸಂತನನ್ನು ಎಷ್ಟು ಬಾರಿ ನೋಡಿದರೂ ತೃಪ್ತಿಯಿಲ್ಲ. ಆದರೆ ಆತ ತನ್ನನ್ನು ನೋಡದಿದ್ದಾಗ ನೋಡಬೇಕು. ಆತ ಮಾತನಾಡಿಸಬೇಕು. ಮಾತನಾಡುತ್ತಿದ್ದುದನ್ನು ಕೇಳಬೇಕು. ಆದರೆ ತನ್ನ ನಾಲಗೆ ಏಳದು. ಪರಿವಾರದಲ್ಲಿಯುವರು, ಹತ್ತಿರದವರು ಯಾರಾದರೂ ಚೇಷ್ಟೆಯ ಮಾತು ಹೇಳಿದರೆ ಹಿಡಿಸಲಾರದಷ್ಟು ಸಂತೋಷ. ಸುಮಕೋಮಲವಾದ ಸೌಕು ಮಾರ್ಯ ಸೂಸುವ ಆ ಮುಖವನ್ನು ವಸಂತ ಎಷ್ಟು ಬಾರಿ ನೋಡಿದನೊ. ಜನ ಬಂದೇ ಬರುತ್ತಿದ್ದರು. ಮಿತ್ರರು ಅಭಿನಂದನೆಗಳನ್ನು ಹೇಳುತ್ತಲೆ ಇದ್ದರು. ಆಚೆಯು ಕಡೆಯಿಂದ ಧ್ವನಿವಾಹಕ ಫಿಲ್ಮ್ ಸಂಗೀತವನ್ನು ಸೂರೆಮಾಡುತ್ತಲೆ

ಇದ್ದಿತು. ಹತ್ತು ಹದಿನೈದು ನಿಮಿಷಗಳಿಂದ ವಸಂತನನ್ನು ಒಂದು ಯೋಚನೆ ಕಾಡುತ್ತಿತ್ತು. 'ಮೋಹಿನಿ ಬರಲೇ ಇಲ್ಲವಲ್ಲ ?' ಖಂಡಿತವಾಗಿ ಬರುತ್ತೇನೆ ಎಂದಿದ್ದಳು. ಬಾರದಿರುವುದು ಸಾಧ್ಯವಿಲ್ಲ. ಯಾರಿಗೆ ಗೊತ್ತು ? ಬಾರದಿರುವುದೂ ಅಸಾಧ್ಯವಲ್ಲ. ಬಂದರೆ ನಿಜವಾಗಿಯೂ ಆಕೆಗೆ ಒಂದು ಬಗೆಯ ಮನಸ್ತಾಪ. ಏನಿದ್ದರೂ ಬಂದೇ ಬರುವಳು ಎಂದು ಯೋಚಿಸುತ್ತಲೆ ಇದ್ದ. ಹಿಂದಿನ ಹತ್ತಾರು ಸನ್ನಿವೇಶಗಳು ಕಣ್ಣಮುಂದೆ ನಿಂತವು. ಮುಖ ತಿರುವಿ ಶಕುಂತಲೆಯನ್ನು ನೋಡಿದ. ಓರಗೆಯ ಗೆಳತಿಯೊಬ್ಬಳು ಆಕೆಗಾಗಿ ಕಾಫಿಯ ಕಪ್ಪನ್ನು ತಂದು ಕೊಡಮಾಡಿ ಹೇಳುತ್ತಿದ್ದಳು .

"ತೆಗೆದುಕೊಳ್ಳೇ—ಯಾವಾಗಿನಿಂದ ಏನನ್ನೂ ತೆಗೆದುಕೊಂಡಿಲ್ಲ"

"ನನಗೆ ಬೇಡ—"

"ನಾನು ಕೊಟ್ಟರೆ ನೀನು ಹೇಗೆ ತೆಗೆದುಕೊಳ್ಳಬೇಕು ? ಯಾರ ಕೈಯಿಂದ ಬರಬೇಕೊ ಅವರಿಂದ ಬಂದರೆ—"

ಎಂದು ಆಕೆ ನಗುವಷ್ಟಕ್ಕೆ ವಸಂತ ತಿರುಗಿ ನೋಡಿದ—ಕೇಳಿದ .

"ಏನದು ?"

"ಏನಿಲ್ಲ. ಕಾಫಿಯನ್ನು ನೀವಾಗಿ ಕುಡಿಸಿದರೆ ಕುಡಿಯುತ್ತಾಳಂತೆ!"

"ಹೋಗೇ—ಸುಮ್ಮನಿರು ನೀನು."

"ಹೌದೆ ?"

ಎಂದು ವಸಂತ ಕೇಳಿದ. ಯಾರನ್ನು ಕೇಳಿದ್ದನೊ! ಶಕುಂತಲೆ ನಾಚಿ ಸುಮ್ಮನಾದುದನ್ನು ನೋಡಿ ಮುಂದುವರಿದ .

"ಹಾಗಿದ್ದರೆ ಹೇಳು, ಕುಡಿಸಿಯೆ ಬಿಡುವೆ! ಅದೇನು ದೊಡ್ಡ ಮಾತು."

ಶಕುಂತಲೆ ಬಿಡುಗಣ್ಣಿನಿಂದ ವಸಂತನನ್ನು ನೋಡಿದಳು ಮಾತ್ರ. 'ಸುಮ್ಮನಿರಬಾರದೆ ? ಎಂಥ ಚೇಷ್ಟೆ ಇದು ? ಈ ಸರಸಕ್ಕೆ ಪ್ರತಿಯಾಗಿ ಸರಸ ಮಾಡಬಲ್ಲೆ ನಾನೂ. ಆದರೆ ಈಗ ಯಾಕೆ ?' ಎಂದು ಕೇಳುತ್ತಿರುವಂತಿತ್ತು ಆಕೆಯ ಆ ನೋಟ. ವಸಂತ ನಸುನಕ್ಕು ಗೆಳತಿಗೆ ಹೇಳಿದ:

"ಬೇಡವಾದರೆ ಯಾಕೆ ಸುಮ್ಮನೆ ಬಲವಂತ ?"

ಎನ್ನುವಷ್ಟರಲ್ಲಿ ಇನ್ನಾರೊ ಬಂದರು. ಒಂದೆರಡು ನಿಮಿಷಗಳಲ್ಲಿ ಮಂಟಪ ದೆದುರು ಭವ್ಯವಾದ ಕಾರು ಒಂದು ಬಂದು ನಿಂತಿತು. ಡ್ರೈವರ್ ಬಾಗಿಲು

ತೆರೆದು ಸರಿಯುತ್ತಿರುವಾಗಲೆ ಕಣ್ಣು ಕೋರೈಸುವಂತೆ ವೇಷಭೂಷಣ ಮಾಡಿ ಕೊಂಡಿದ್ದ ಮೋಹಿನಿ ಕೆಳಗಿಳಿದಳು ವಸಂತನಿಗೆ ತನ್ನ ಕಣ್ಣನ್ನೆ ನಂಬಲಾಗ ಲಿಲ್ಲ, ಒಂದು ಕ್ಷಣ. ಆಕೆ ಬಂದಳು ಎಂದು ಸಂತಸ, ಬಂದವಳು ಆಕೆ ಎಂದು ಸಂಕೋಚವೂ ಎನಿಸಿತು. ಮೋಹಿನಿಯ ಮುಖದಲ್ಲಿ ಯಾವ ಸಂಕೋಚವೂ ಕಾಣಲಿಲ್ಲ ನಗುಮಲ್ಲಿಗೆಗಳನ್ನೆ ತೂರುತ್ತಿರುವಂತೆ ನೇರವಾಗಿ ವಸಂತನೆದುರು ಬಂದು ನಿಂತಳು 'ಆಕೆಯನ್ನು ಶಕುಂತಲೆಗೆ ಏನೆಂದು ಪರಿಚಯ ಹೇಳು ವುದು? ಆಕೆಯ ಕೂಡ ಇಂದಿನ ಸಂದರ್ಭದಲ್ಲಿ ಮಾತು ಹೇಗೆ ಮೊದಲು ಮಾಡುವುದು?' ಆದರೆ ಮೋಹಿನಿಯೆ ಹೇಳಿದಳು :

"ತೀರ ತಡವಾಗಿಬಿಟ್ಟಿತು 'ಅಕ್ಷತೆ'ಗೆ ಮೊದಲೇ ಬರಬೇಕೆಂದಿದ್ದೆ—"

"ಯಾಕೆ? ಕೆಲಸ ಬಹಳವಾಗಿತ್ತೆ?"

"ಎಲ್ಲಿಯ ಕೆಲಸ? ಮಧ್ಯಾಹ್ನ ಫ್ಲೋರ್‌ಗೆ ಹೋಗಿದ್ದೆ. ಅಲ್ಲಿ ಇಲ್ಲಿ ಅಲೆದಾಡುವುದೇ ಆಯಿತು."

"ಇನ್ನು ಮೇಲೆ ನೀನು ಬರಬಹುದೊ ಇಲ್ಲವೊ ಅಂದುಕೊಂಡಿದ್ದೆ—"

"ಬಾರದೆ ಇರುತ್ತೇನೆಯೆ?"

ಎಂದು ನಗೆ ಸೂಸಿದಳು. ಅದೇ ನಗೆ. ಎದೆಯನ್ನು ಕೊರೆಯುವ ನಗೆ. ವಸಂತ ಮೋಹಿನಿಯನ್ನು ನಿಟ್ಟಿಸಿ ನೋಡಿದ. ಆಕೆಯಲ್ಲಿ ಮುದುರು, ಅನುಮಾನ ಯಾವುದೂ ಕಾಣಲಿಲ್ಲ ಮರುಕ್ಷಣ ಶಕುಂತಲೆಯನ್ನು ನೋಡಿದ. ಮೋಹಿ ನಿಯ ತಂಗಿಯಂತೆಯೆ ಇದ್ದಳು. ಎಂಥ ಸಾಮ್ಯ ಇದು! ಎಂದುಕೊಂಡ. ಶಕುಂತಲೆಯ ದೃಷ್ಟಿ 'ಈಕೆ ಯಾರು?' ಎಂದು ಕೇಳುತ್ತಿರುವಂತಿತ್ತು.

"ಈಕೆ, ಮೋಹಿನಿ—ಫಿಲ್ಮ್‌ಸ್ಟಾರ್—ಅಥವಾ ಇಷ್ಟರಲ್ಲಿಯೆ ಸ್ಟಾರ್ ಆಗತಕ್ಕವಳು" ಎಂದ.

"ಸರಿ. ಚೆನ್ನಾಗಿದೆ, ಈ ಪರಿಚಯ ಮಾಡಿಕೊಡುವ ರೀತಿ. ಹಾಗೆಲ್ಲ ಹೇಳಬೇಡಿರಿ, ದಯವಿಟ್ಟು."

"ಹಾಗಾದರೆ ಏನೆಂದು ಹೇಳಲಿ?"

ಎಂದು ವಸಂತ ನಕ್ಕ. ನಗೆ ತೋರಿಕೆಯದಾಗಿತ್ತು ಪ್ರಶ್ನೆ ಅನ್ವರ್ಥಕ ವಾಗಿತ್ತು. ಶಕುಂತಲೆ ಮಾತ್ರ ಕ್ಷಣಕ್ಷಣಕ್ಕೆ ಮಾತಿನಲ್ಲಿ, ನಿಲುವಿನಲ್ಲಿ, ಮೈಯ ಪ್ರತಿಯೊಂದು ಮಣಿತದಲ್ಲಿ ಚೆಲುವನ್ನು ಸೂರೆಮಾಡುತ್ತಿದ್ದ ಮೋಹಿನಿ

ಯನ್ನು ಕಣ್ಣುತುಂಬ ನೋಡಿ ಬೆರಗಾದಳು.

ಮೋಹಿನಿ ಕೈಯಲ್ಲಿ ತಂದ ಕಾಗದದ ಪೆಟ್ಟಿಗೆಯೊಂದನ್ನು ಬಿಚ್ಚಿ ಅದರ ಒಳಗಿನಿಂದ ಚಿಕ್ಕದಾದ ಅಂದವಾದ ಪೆಟ್ಟಿಗೆಯೊಂದನ್ನು ವಸಂತನ ಕೈಗಿತ್ತಳು. ವಸಂತ ತೆರೆದು ನೋಡಿದ. ಅದರಲ್ಲೊಂದು ಒಳ್ಳೆಯ ಝುನಿತ್ ರಿಸ್ಟ್‌ವಾಚ್. ವಸಂತ ಅದನ್ನು ನೋಡುತ್ತಿರುವಾಗ ಮೋಹಿನಿ ನೂರು-ನೂರಿಪ್ಪತ್ತು ಬೆಲೆ ಬಾಳುವ ಸಿಲ್ಕ್ ಸೀರೆಯೊಂದನ್ನು ಶಕುಂತಲೆಗೆ ಒದಿಸಿದಳು ವಸಂತ ಪೆಟ್ಟಿಗೆ ಯನ್ನು ಮುಚ್ಚುತ್ತಿರುವಾಗಲೆ ಮೋಹಿನಿ ಹೇಳಿದಳು .

" ವಾಚ್ ತಂದದ್ದು ಪೆಟ್ಟಿಗೆಯಲ್ಲಿಡಲಿಕ್ಕಲ್ಲ, ಕೈಯಲ್ಲಿ ಕಟ್ಟಲಿಕ್ಕೆ—"

" ಅಷ್ಟೂ ತಿಳಿಯದಷ್ಟು ಮೈಮರೆತಿಲ್ಲ ಇನ್ನೂ—" ಎಂದು ವಸಂತ ನಕ್ಕ.

" ಮುಂದೆ ಮೈಮರೆಯುಬಹುದು. ಅದಕ್ಕೆ ಈಗಲೆ ಕೈಗೆ ಕಟ್ಟಿಬಿಡಿ "

ಎಂದು ಶಕುಂತಲೆಯನ್ನು ನೋಡಿದಳು ವಸಂತನಿಂದ ಪೆಟ್ಟಿಗೆಯನ್ನು ತೆಗೆದುಕೊಂಡು ಆತನ ಕೈಗೆ ವಾಚ್ ಕಟ್ಟುತ್ತಿರುವಾಗ ಆತನ ಲಕ್ಷ್ಯ ಬಾಗಿ ಲೆಡೆಗೆ ಸರಿದಿತ್ತು. ಮೂರು ನಾಲ್ಕು ಜನ ಬರುತ್ತಿದ್ದರು. ಹೆಚ್ಚುಕಡಿಮೆ ವಸಂತ ಮೋಹಿನಿಯಿಂದ ತನ್ನ ಕೈಯನ್ನು ಕೊಸರಿಕೊಂಡ. ಬಾಗಿಲಲ್ಲಿ ಬಂದವರು ನಾರಾಯಣರಾಯರು, ಆನಂದ ಮತ್ತು ಇನ್ನಿತರ ಇಬ್ಬರು ! ವಸಂತ ಉಸಿರಿದ .

" ಮೋಹಿನಿ ! "

" ಏನು ? "

" ಅಲ್ಲಿ ನೋಡಿದೆಯಾ ? " ಎಂದು ಹುಸಿನಗೆಯೊಂದನ್ನು ಬೀರಿದ.

ಮೋಹಿನಿ ನೋಡಿದಳು. ಕಟ್ಟುವ ಕೈ ತಡೆಯಿತು—ಒಂದು ಕ್ಷಣ ಮಾತ್ರ ನೋಡಿದುದನ್ನು ಗ್ರಹಿಸಿದನಂತರ ಕಟ್ಟುತ್ತಿರುವ ಕೈ ಬೇಕೆಂತಲೆ—ಸೇಡಿನಿಂದ ಎಂಬಂತೆ—ತಾನು ಕೊಟ್ಟದ್ದು ಈ ವಾಚ್, ಈ ಸೀರೆ ಎಂದು ಎತ್ತಿ ತೋರಿಸು ತ್ತಿರುವಂತೆ—ನಿಧಾನವಾಗಿ ಕೆಲಸ ಮಾಡಿತು ಆದರೆ ಕೆಂಪಗಾದ ಮುಖ ಬಿಳಿಚಿಕೊಂಡಿತ್ತು. ಬಿಗಿಹಿಡಿದ ತುಟಿಗಳಲ್ಲಿ ಯಾವುದೋ ಒಂದು ಕಠೋರತೆ ಮೂಡಿತ್ತು. ಕಟ್ಟಿಯಾದಮೇಲೆ ಶಕುಂತಲೆಯನ್ನುದ್ದೇಶಿಸಿ ಹೇಳಿದಳು :

" ಇವರು ವಾಚ್ ಕಟ್ಟಿದಹಾಗೆ, ನೀವೂ ಕೂಡ ಸೀರೆಯನ್ನು ಇಂದೇ ಉಡಬೇಕು. ನೀವು ಉಟ್ಟುದನ್ನು ನಾನು ನೋಡಬೇಕು."

ಶಕುಂತಲೆ ವಸಂತನ ಮುಖವನ್ನು ನೋಡಿದಳು. ಆತ ಕೇಳಿದ·

" ಈಗಲೆ ? "

" ಆಮೇಲಾದರೂ ಆದೀತು ! ನಾನೇನು ಈಗಲೆ ಓಡಿಹೋಗುವುದಿಲ್ಲ ! "

'ಓಡಿಹೋಗುವುದಿಲ್ಲ' ಎಂಬ ಮಾತನ್ನು ಮೋಹಿನಿ ಬೇಕೆಂತಲೆ ಹೇಳಿದ್ದಳೆಂಬುದನ್ನು ವಸಂತನಿಗೆ ತಿಳಿಹೇಳಬೇಕಿರಲಿಲ್ಲ. ಬಂದವರಿಗೆ ವಸಂತ ಕೈಮುಗಿದ. ಮೋಹಿನಿ ಹಿಂದಕ್ಕೆ ಸರಿದು ಹಣ್ಣುಮಕ್ಕಳಿಗೆ ಕಾದಿಟ್ಟ ಸ್ಥಳದಲ್ಲಿ ಕುಳಿತಳು ಇಲ್ಲಿಗೂ—ತಕ್ಷಣ, ಸಮಯಕ್ಕೆ ಸರಿಯಾಗಿ ಎನ್ನುವಂತೆ—ಆನಂದ ಬರಬೇಕೆ ? ಎಂದು ಕೇಳಿಕೊಂಡು ಕಿಡಿಕಿಡಿಯಾದಳು ಬಂದರೆ ಬರಲಿ, ಅದರಿಂದೇನಾಗಬೇಕು ? ಒಂದು ದೃಷ್ಟಿಯಿಂದ ಈಗ ಬಂದದ್ದು ಒಳ್ಳೆಯದೇ ಆಯಿತು. ಆತ ತನ್ನನ್ನು ನೋಡಲಿ ಕಣ್ಣುತುಂಬ ನೋಡಲಿ, ತಾನು ತನ್ನ ಮಟ್ಟಿಗೆ ಹೇಗಿರಬಹುದು, ಹೇಗಿದ್ದೇನೆ ಎಂಬುದನ್ನು !

ಆ ರೀತಿಯಲ್ಲಿ, ಆ ಸಂದರ್ಭದಲ್ಲಿ ಮೋಹಿನಿಯನ್ನು ನೋಡಿದ ಆನಂದನ ಹೆಜ್ಜೆ ತಡೆದಿತ್ತು. ನಾರಾಯಣರಾಯರು ಆಕೆಯನ್ನು ನೋಡಿದ್ದನ್ನೂ ನೋಡಿದ್ದ. ತಮ್ಮಿಬ್ಬರನ್ನು ವಸಂತ ನೋಡಿಯೂ ಆಗಿತ್ತು ಇಲ್ಲದಿದ್ದರೆ ಆತ ಹಿಂದಿರುಗಲೂ ಬಹುದಿತ್ತು ಆದರೆ ಯಾಕೆ ? ಹೆದರಿಕೆಯೆ ಆಕೆಯದು ? ಆಕೆ ಇಲ್ಲಿದ್ದರೆ ಅದರಿಂದ ತನಗೇನಾಗಬೇಕು ? ಆಕೆ ಯಾರೊ ? ಹೀಗೆ ಹೇಳಿಕೊಂಡು ಹೆಜ್ಜೆ ಎಳೆದನಾದರೂ ಎದೆ ಅಳುಕಿತು. ಆತ್ಮಾನುಕಂಪ ಮರಳಿತು ತನ್ನದಾಗಿಯೂ ತನ್ನದಾಗಿರದ ಆ ಚೆಲುವನ್ನು ನೋಡಿ ಮನಸ್ಸು ಮರುಗಿತು, ರೇಗಿತು, ಜಿಗುಪ್ಸೆಗೊಂಡಿತು. ಹಟದಿಂದೆಂಬಂತೆ ನೇರವಾಗಿ ವಸಂತನೆಡೆಗೆ ಬಂದು ಅಭಿನಂದನೆಯ ಮಾತು ಹೇಳಿದ , ನಾರಾಯಣರಾಯರೂ ಅಷ್ಟೆ ಆಕೆಯನ್ನು ನೋಡಿಯೂ ನೋಡಿರದ ರೀತಿಯಲ್ಲಿ ನಡೆದುಕೊಂಡರು ಆದರೆ ಮನಸ್ಸು ಮಾತ್ರ ಬೇಸರಗೊಂಡಿತ್ತು " ಫಲಾಹಾರ ತೆಗೆದುಕೊಂಡೇ ಹೋಗಬೇಕು " ಎಂದು ವಸಂತ ಉಪಚಾರಕ್ಕೆ ಹೇಳಿದ ಆದರ ತನ್ನ ಲಗ್ನಮಂಟಪದಲ್ಲಿ ನಡೆದಿದ್ದ ಈ 'ನಾಟಕ'ದ ಉತ್ಕಟತೆಯನ್ನು ಆತ ತಿಳಿಯದವನಾಗಿದ್ದನೆ ? ಒಮ್ಮೆ ಮೋಹಿನಿಯನ್ನು, ಒಮ್ಮೆ ಆನಂದನನ್ನು ನೋಡುತ್ತಿದ್ದ ಹತ್ತಿರಕ್ಕೆ ಬಂದು ಮಾತನಾಡಿಸುತ್ತಿದ್ದ ಅತಿಥಿಗಳ ಕಡೆಗೆ ಆತನ ಗಮನವೆ ಇದ್ದ ಹಾಗಿರಲಿಲ್ಲ.

ಮೋಹಿನಿಯನ್ನು ಆನಂದ ಕಂಡದ್ದು ಸುಮಾರು ಐದು ತಿಂಗಳನಂತರ. ಇಷ್ಟೊಂದು ಸ್ಥಿತ್ಯಂತರವನ್ನು ಆಕೆಯಲ್ಲಿ ಆತ ನಿರೀಕ್ಷಿಸಿರಲಿಲ್ಲ. ಇಂದು ಕಣ್ಣಾರೆ ಕಂಡ ಸ್ಥಿತ್ಯಂತರ ಮನಸ್ಸನ್ನು ಕದಡಿಸುವಂತಹದೇ ಇದ್ದಿತು. ನಿಜವಾಗಿಯೂ ಆನಂದನ ಮನಸ್ಸು ಕದಡಿತು, ಸಂಕಟಪಟ್ಟಿತು, ಕೊನೆಗೆ ದ್ವೇಷದಿಂದೆಂಬಂತೆ ರೊಚ್ಚಿಗೆದ್ದಿತು. ನಾರಾಯಣರಾಯರು ಯಾವ ಮಾತನ್ನು ಆಡಿರಲಿಲ್ಲವಾದರೂ ಆನಂದನ ಮುಖವನ್ನು ನೋಡಿದ್ದರು—ಆತನ ಮುಖವನ್ನು ತಪ್ಪಿಸಿದ್ದರು. 'ಇದಕ್ಕೆ ಕೊನೆ ಎಲ್ಲಿ? ಇದನ್ನು ಬಗೆಹರಿಯಿಸಲೇಬೇಕು. ಆದರೆ ಹೇಗೆ?' ಎಂದು ಆನಂದ ಯೋಚಿಸುತ್ತಿದ್ದ. 'ಏನಿದೆಲ್ಲ ನಡೆದದ್ದು? ಇಷ್ಟು ಆಕಸ್ಮಾತ್ತಾಗಿ ಇವರಿಬ್ಬರೂ ಇಲ್ಲಿ ಹೀಗೆ ಭೆಟ್ಟಿಯಾಗಬಹುದಾದುದನ್ನು ನಾನು ನೆನೆಯಲೇ ಇಲ್ಲವಲ್ಲ? ಮೋಹಿನಿ ಎಷ್ಟು ಆತಂಕಪಡುತ್ತಿದ್ದಾಳೆಯೊ? ಆನಂದ ಏನೆಂದುಕೊಳ್ಳುತ್ತಿದ್ದಾನೆಯೊ? ಆದರೆ ನಾನೇನು ಮಾಡುವುದು?' ಎಂದು ವಸಂತ. ಮೂರು ಕಡೆಯಲ್ಲಿ ಮೂವರಿಗೂ ಉಸಿರುಕಟ್ಟಿದಂತಾಗಿತ್ತು.

ಹತ್ತು ನಿಮಿಷಗಳನಂತರ ಆನಂದ-ನಾರಾಯಣರಾಯರನ್ನು ಬೀಳ್ಕೊಟ್ಟಾಗಲೆ ವಸಂತ ನಿಟ್ಟುಸಿರುಬಿಟ್ಟ. ಇದುವರೆಗೆ ನಿರ್ವಿಕಾರವಾಗಿ ಕುಳಿತ ಮೋಹಿನಿಯೂ ಕುಳಿತಲ್ಲಿಂದ ಎದ್ದಳು. ವಸಂತನ ಬದಿಯಲ್ಲಿಯ ಒಂದು ಕುರ್ಚಿಯಲ್ಲಿ ಕೂಡುತ್ತ ಕೇಳಿದಳು:

"ಮುಗಿಯಿತೆ?"

"ಏನದು ಮುಗಿಯುವುದು?"

"ನಾಟಕ!"

"ನಿನಗೆ ತುಂಬ ಆತಂಕವಾಯಿತಲ್ಲವೆ?"

"ಯಾರಿಗೆ? ನನಗೆಯೆ? ಸರಿ. ಹೀಗೆಲ್ಲ ಯೋಚಿಸುತ್ತ ಕುಳಿತರೆ ಮುಗಿದೇಹೋಯಿತು. ನಿಮ್ಮ ಕೈಗೆ ವಾಚ್ ಕಟ್ಟುತ್ತಿದ್ದಾಗ ಅವರು ಬಂದರೂ ನಾನು ತಡೆದೆನೆ?"

"ಆದರೂ—"

"ಏನೂ ಇಲ್ಲ. ಹೋಗಲಿ, ಅದೆಲ್ಲ ಈಗ ಯಾಕೆ?"

ಆಕೆ ಮಾತನಾಡುತ್ತಿದ್ದ ರೀತಿಯಿಂದ, ಆಕೆ ಸೂಸುತ್ತಿದ್ದ ನಗುವಿನಿಂದ ಆಕೆ ಯಾವ ಬಗ್ಗೆಯಲ್ಲಿಯೂ ಸಂಕೋಚಪಟ್ಟುಕೊಂಡಿದ್ದಿಲ್ಲವೆಂಬುದು ಸ್ಪಷ್ಟ

ವಾಗಿಯೆ ಇದ್ದಿತು. ನಿಜವಾಗಿ ಸಂಕೋಚಪಟ್ಟುಕೊಂಡವನೆಂದರೆ ವಸಂತನೊಬ್ಬನೆ. ಆನಂಪ ಕೂಡ ಒಂದೇ ಕ್ಷಣದಲ್ಲಿ ಬದಲಾವಣೆ ಹೊಂದಿದ್ದ ಆಕೆಯನ್ನು ನೋಡಿದಾಗ ತಡೆದ ಆತನ ಹೆಜ್ಜೆ ಸಂತಾಪದಿಂದೆಂಬಂತೆ, ಸೇಡಿನಿಂದ ಎಂಬಂತೆ ಮುಂಬಂದಿರಲಿಲ್ಲವೆ? ಜನ ಬರುವುದು ಕಡಿಮೆಯಾಗಿತ್ತು. ಆಗೀಗ ಯಾರುಯಾರೋ ಪರಿಚಿತರು ಬಂದುಹೋಗುತ್ತಿದ್ದರು. ವಸಂತ ಶಕುಂತಲೆಯರಿಬ್ಬರಿಗೂ ಒಂದೇ ಕಡೆಗೆ ಕುಳಿತು ಬೇಸರವಾಗಿತ್ತು. ಅದಕ್ಕೆ ಸರಿಯಾಗಿ ಜನಾರ್ದನರಾಯರು—ಅವರ ಕಡೆಯ ಪುರೋಹಿತರ ಒತ್ತಾಯಕ್ಕಾಗಿ ಇರಬಹುದು—ವಿನಯಪೂರ್ವಕವಾಗಿ ಕೇಳಿದರು. " ಜನ ಬರುವುದು ಆಯಿತು ಎಂದು ಕಾಣುತ್ತದೆ ಇನ್ನು ಒಳಗಡೆ ಬರಬಹುದಲ್ಲವೆ? ಮತ್ತೆ ಇನ್ನುಮುಂದೆ ಎರಡು ಗಂಟೆಯಾದರೂ ಕೆಲಸವಿದೆ—" ಅವರ ಬೆನ್ನ ಹಿಂದೆಯೆ ಕಮಲಕ್ಕ ಬಂದು—ಅಲ್ಲಿ ಜನಾರ್ದನರಾಯರು ನಿಂತುದನ್ನು ನೋಡದೆ—ಗಟ್ಟಿಯಾಗಿ ಕೇಳಿದಳು :

" ಯಾಕಪ್ಪಾ, ಇನ್ನೂ ಸಾಕಾಗಲಿಲ್ಲವೇನೊ ಜೊತೆಯಾಗಿ ಕುಳಿತಿರುವುದು?—"

ಮುಂದೆ ಇನ್ನೇನೋ ಚೇಷ್ಟೆಯ ಮಾತನ್ನು ಹೇಳುವವಳಿದ್ದಳು. ಆದರೆ ಜನಾರ್ದನರಾಯರನ್ನು ತಟ್ಟನೆ ನೋಡಿ ನಾಲಗೆ ಕಚ್ಚಿಕೊಂಡು ಸುಮ್ಮನಾದಳು. ಜನಾರ್ದನರಾಯರೆ ದೂರ ಸರಿದರು.

" ಸಾಕು, ಏಳಿನ್ನು. ಬರುವವರೆಲ್ಲ ಬಂದುಹೋದರು. ಪಾಪ, ಯಾವಾಗಿನಿಂದ ಕಟ್ಟೆ ಹಾಕಿದ ಹಾಗೆ ಕುಳಿತಿದ್ದಾಳೆ. ಮಧ್ಯಾಹ್ನದಿಂದ ಬಾಯಲ್ಲಿ ಏನೂ ಹಾಕಿಲ್ಲ. ಒಂದಿಷ್ಟು ಫಲಾಹಾರವನ್ನಾದರೂ ಮಾಡಲಿ. ಮುಂದೆ ಮತ್ತೆ ಕೆಲಸ ಇದ್ದೇ ಇದೆ. ಏಳಮ್ಮ—"

" ನಮಗೇನೂ ಹಸಿವೆ ಆಗಿರಲಿಕ್ಕೇ ಇಲ್ಲ ಅಲ್ಲವೆ?" ಎಂದ ವಸಂತ

" ನಿನಗೇನು ಹಸಿವೆಯಾಗುತ್ತದೆ? ಹೊಟ್ಟೆ ತುಂಬಿಹೋಗಿದೆ—"

" ಹೌದೆ?—"

" ಅಲ್ಲದೆ ನಿನಗೆ ಬಾ ಎಂದು ಹೇಳುವುದು ಯಾಕೆ? ಆಕೆಯನ್ನು ಕರೆದುಕೊಂಡು ಹೋದರೆ ಹಿಂದಿನಿಂದ ನೀನಾಗಿಯೆ ಬರುತ್ತೀ—" ಎಂದು ನಕ್ಕಳು.

" ಸರಿ, ನಿನ್ನ ಮಾತು ತಪ್ಪಿಸಬೇಕಾದರೆ ನಾನು ಉಪವಾಸ ಇರಬೇಕಾ

ಯಿತು. ನನ್ನದು ಹೇಗೂ ಆದೀತು. ಆದರೆ ರಾತ್ರಿ ಊಟದ ವರೆಗೂ ಇರತಕ್ಕ ವರು ಇವರು. ಇವರ ಸಲುವಾಗಿಯಾದರೂ ನಾನು ಫಲಾಹಾರಕ್ಕೆಂದು ಒಳಗೆ ಬರಲೇಬೇಕು—"

ಎಂದು ಮೋಹಿನಿಯನ್ನು ಉದ್ದೇಶಿಸಿ ಹೇಳಿದ. ಹತ್ತಿರದಲ್ಲಿಯೆ ಕಣ್ಣು ಸೆಳೆಯುವಂತೆ ಕುಳಿತಿದ್ದ ಮೋಹಿನಿಯನ್ನು ಕಮಲಕ್ಕ ನೋಡಿರದಿರು ವುದು ಸಾಧ್ಯವಿರಲಿಲ್ಲ. ಆದರೂ ಯಾರೊ, ಯಾರು ಬಲ್ಲರು ಎಂದುಕೊಂಡಿದ್ದಳು. ವಸಂತ ಆಕೆಯ ಪರಿಚಯವನ್ನು ಮಾಡಿಕೊಟ್ಟ. ಅಷ್ಟಾದಮೇಲೆ ನಾಲ್ವರೂ ಒಳಗಡೆ ಹೊರಟುಹೋದರು ಬಲಗಡೆಯಲ್ಲಿ ಶಕುಂತಲೆ, ಎಡಗಡೆ ಮೋಹಿನಿ ಕುಳಿತು ಮದುಮಗನಿಗೆ ಫಲಾಹಾರವಾಯಿತು. ಮೋಹಿನಿಗೆ ದಾಕ್ಷಿಣ್ಯದ ಪ್ರಶ್ನೆಯೇ ಇರಲಿಲ್ಲ. ಶಕುಂತಲೆ ಮಾತ್ರ ನಾಲ್ಕು ತುತ್ತು ತಿನ್ನಬೇಕಾದರೆ ಕಮಲಕ್ಕ ಹತ್ತು ಬಾರಿ ಒತ್ತಾಯಪಡಿಸಬೇಕಾಯಿತು.

ಫಲಾಹಾರ ಮುಗಿದನಂತರ ತಡ ಮಾಡಿ ಬಂದಿದ್ದ ಮೂರು ನಾಲ್ಕು ಗೆಳೆಯರ ಜೊತೆಗೆ ವಸಂತ ಹೊರಗೆ ಮಂಟಪದಲ್ಲಿ ಬಂದು ಕುಳಿತಾಗ ಮೋಹಿನಿ ಶಕುಂತಲೆಯರ ಪರಿಚಯ ಬೆಳೆಯಿತು. ಹೆಣ್ಣು ಹೃದಯಗಳ ರೀತಿಯೇ ಬೇರೆ ಎಂದು ಕಾಣುತ್ತದೆ. ಒಂದಕ್ಕೊಂದು ಹೊಂದಿಕೊಳ್ಳಲಿಕ್ಕೆ, ಸಲಿಗೆ ಸಾಮರಸ್ಯಗಳು ಬೆಳೆಯಲಿಕ್ಕೆ ವೇಳೆ ಹಿಡಿಯುವುದಿಲ್ಲ. ಗಂಡುಗಳ ಮಾತೇ ಬೇರೆ, ಈ ವಿಷಯದಲ್ಲಿ ಎರಡೂ ಕಡೆಯ ಪುರೋಹಿತರ ಅವಸರಕ್ಕಾಗಿ ವಸಂತ ಎದ್ದು ಮತ್ತೆ ಒಳಗೆ ಬಂದಾಗ ಅವರಿಬ್ಬರೂ ಮತ್ತು ಕಮಲಕ್ಕ ಹಳೆಯ ಗೆಳತಿಯರಂತೆ ನಕ್ಕು ನಲಿದಾಡಿ ಮಾತನಾಡುತ್ತಿದ್ದರು. ಅದನ್ನು ನೋಡಿ ವಸಂತನಿಗೆ ಆಶ್ಚರ್ಯವಾಯಿತು. ಹೀಗಾಗಿ ಮುಂದಿನ ಎಲ್ಲ ಕಾರ್ಯಕ್ರಮ ಗಳಲ್ಲಿಯೂ ಮೋಹಿನಿ ಹತ್ತಿರದ ಬಳಗದವಳಂತೆಯೆ ಇದ್ದಳು.

ಮುಂದೆ ಸುಮಾರು ಎರಡು ಗಂಟೆ ಹೋಮಧೂಮಾದಿಗಳ ಕಾರ್ಯ ಕ್ರಮ ನಡೆಯಿತು. ಮೋಹಿನಿ ಕುರ್ಚಿಯೊಂದನ್ನೆಳೆದುಕೊಂಡು ಎಲ್ಲವನ್ನೂ ನಿರೀಕ್ಷಿಸುತ್ತ ಕುಳಿತಿದ್ದಳು. ಒಮ್ಮೆ ವಸಂತನದಾದರೆ ಇನ್ನೊಮ್ಮೆ ಶಕುಂತಲೆಯ ಮುಖವನ್ನು ನೆಟ್ಟ ದೃಷ್ಟಿಯಿಂದ ನೋಡುತ್ತಿದ್ದಳು. ಇಂಥ ವಿಜೃಂಭಣೆಯಿಂದ ಅಲ್ಲದಿದ್ದರೂ ಉತ್ಸಾಹದಲ್ಲಿ ಯಾವ ರೀತಿಯಲ್ಲೂ ಕಡಿಮೆಯೆನಿಸದೆ ನಡೆದಿದ್ದ ತನ್ನ ಮದುವೆಯ ದಿನಕ್ಕೆ ಆಕೆಯ ನೆನಹು ಓಡಿತು. ಆದರೆ ಆಮೇಲೆ ನಡೆದು

ದೆಲ್ಲವೂ ನಡುವೆ ತೆರೆಯಾಗಿ ಬಂದು ನಿಂತು ಆ ಚಿತ್ರವನ್ನು ಕಣ್ಣೆದುರಿನಿಂದ ಮರೆಮಾಚಿತು ತಾನೂ ಒಂದು ಕಾಲಕ್ಕೆ—ಆ ದಿನ, ಅದರನಂತರದಲ್ಲಿಯೂ ಕೆಲವು ತಿಂಗಳು—ಸುಖಿಯಾಗಿರಲಿಲ್ಲವೆ ? ಅಂಥ ಸುಖದ ಅಪೇಕ್ಷೆ, ನಿರೀಕ್ಷೆ, ಮುನ್ಸೂಚನೆಗಳೆಲ್ಲವೂ ಶಕುಂತಲೆಯ ಮುಖದಲ್ಲಿ, ಆಗೀಗ ಮಿನುಗುವ ಮಂದ ಹಾಸದಲ್ಲಿ ಕಾಣುತ್ತಿರಲಿಲ್ಲವೆ ? ಶಕುಂತಲೆ ನಿಜವಾಗಿಯೂ ಭಾಗ್ಯಶಾಲಿಯಲ್ಲವೆ ? ಮೋಹಿನಿಯ ಮನಸ್ಸು ಕುಳಿತಲ್ಲಿಯೆ ನೂರಾರು ಕನಸುಗಳನ್ನು ಕಂಡಿತು. ವಸಂತನ ಶಕುಂತಲೆಯಾಗಿ ಶಕುಂತಲೆ ಸುಖವಾಗಿರಬಹುದಾಗ ನೂರು ಸನ್ನಿವೇಶಗಳನ್ನು ಕಣ್ಣೆದುರು ನಿಲ್ಲಿಸಿತು. ಆದರೆ ಮರುಕ್ಷಣದಲ್ಲಿಯೆ ಅಂಥ ಯೋಚನೆಗಳ ವಿಫಲತೆಯನ್ನು ಗುರುತಿಸಿ ಬಿಸಿಲುಗುದುರೆಯ ಆಸೆಯಿಂದ ಮುಂದೆ ಓಡಿ ಓಡಿ ಕೊನೆಗೆ ಬಾಯಾರಿ ಹಿಂದಿರುಗುವ ಹುಲ್ಲೆಯಂತೆ ಆಕೆಯ ಒಳಮನಸ್ಸು ದಣಿದು ಕಂಗಾಲಾಗಿ ಹಿಂದಿರುಗಿತು. ಈ ಎಲ್ಲ ಯೋಚನೆಗಳಿಂದಾಗಿ ಸಾಯಂಕಾಲ ತಾನು ವಸಂತನೆಡೆಗೆ ಬರುವಾಗಿನ ಉತ್ಸಾಹ ಬಹುಮಟ್ಟಿಗೆ ತಗ್ಗಿದಂತಾಗಿತ್ತು. ತನ್ನ ಕಣ್ಣೆದುರಿಗೆ ನಡೆದುದೆಲ್ಲದರ ಅರ್ಥವೇನು ? ವಸಂತ ತನ್ನಿಂದ ದೂರವಾದನೆಂದೇ ಅಲ್ಲವೆ ? ದೂರವಾದ, ಹೌದು, ಕೊನೆಯಾಗಿ ದೂರವಾದ ! ಆಗಲೆ ಶಕುಂತಲೆಗೆ ಮಂಗಳಸೂತ್ರವನ್ನು ಕಟ್ಟಿಯಾಯಿತಲ್ಲವೆ ? ಸಪ್ತಪದಿಯೂ ಆಯಿತಲ್ಲವೆ ? ವಸಂತ ಈಗ ಶಕುಂತಲೆಯ ಪತಿ. ತನ್ನ ಮನಸ್ಸಿನಲ್ಲಿ ಇನ್ನುಮುಂದೆ ವಸಂತನನ್ನು ಕುರಿತು ಮೂಡಬಹುದಾದ ಪ್ರತಿಯೊಂದು ಆಸೆಗೂಡಿದ ಬಯಕೆ ಶಕುಂತಲೆಗೆ ಅನ್ಯಾಯ ! ಅದು ಸಲ್ಲದು. ಬರುವಾಗಿನ ಉತ್ಸಾಹದಲ್ಲಿಯೆ ಗೆಲುವಿನಲ್ಲಿಯೆ ತಾನು ಹಿಂದಿರುಗಬೇಕು, ಆ ದಿನ ಸಮುದ್ರದ ಅಂಚಿನಲ್ಲಿ ವಸಂತ ಹೇಳಿದ ಸಮಾಧಾನದ ಮಾತುಗಳಿಂದ ತನ್ನಲ್ಲಿ ಹುಟ್ಟಿದ್ದ ಸಂತುಷ್ಟವೃತ್ತಿ, ಆತ್ಮವಿಶ್ವಾಸಗಳನ್ನು ಕಳೆದುಕೊಂಡರೆ ಆಗದು 'ನಿನ್ನನ್ನು ಮರೆಯುವುದು ಸಾಧ್ಯವೆ ?' ಎಂದಿದ್ದ, ವಸಂತ. ದೇಹದಿಂದ ದೂರವಾದರೂ ನೇಹದಿಂದ ಸಮೀಪವಾಗಿಯೆ ಉಳಿಯುತ್ತಾನೆ, ಎಂದು ಮುಂತಾಗಿ ಎಷ್ಟು ಪರಿಯಿಂದ ಹೇಳಿಕೊಂಡರೂ 'ದೂರವಾದ' ಎಂಬ ಕಣ್ಣಿಗೆ ಕಾಣುತ್ತಿದ್ದ, ಬುದ್ಧಿಗೆ ಸ್ಪಷ್ಟವಾಗಿ ಗೋಚರಿಸುತ್ತಿದ್ದ ಸತ್ಯವನ್ನು ಮರೆಯುವುದು ಆಕೆಯ ಹೃದಯಕ್ಕೆ ಸಾಧ್ಯವಾಗಲಿಲ್ಲ. ಇನ್ನುಮುಂದೆ ಎಂದಿಗಾದರೂ ಆತ ತನ್ನನ್ನು 'ಮೋಹಿನಿ' ಎಂದು ಮೊದಲಿನಂತೆ ನಯವಾಗಿ

ನೇವರಿಸಿ ಕರೆಯುವುದು ಸಾಧ್ಯವೆ? ಇನ್ನು ಮುಂದೆ ಎಂದಿಗಾದರೂ ತಾನು ಕೈ ಮುಟ್ಟಿ ಮೈ ಮುಟ್ಟಿ ಮಾತನಾಡಿಸುವುದು ಸಾಧ್ಯವೆ? ಸಾಯಂಕಾಲ ಆತನ ಕೈಗೆ ಗಡಿಯಾರವನ್ನು ಕಟ್ಟುತ್ತಿದ್ದಾಗಿನ ಸ್ಪರ್ಶವೆ ಕೊನೆಯದೆ? ಹೌದು, ಎಂದು ಬುದ್ಧಿ—ಸಾಧ್ಯವಿಲ್ಲ, ಎಂದು ಹೃದಯ. ಇಷ್ಟು ಹೊತ್ತು ತಾನು ಇಲ್ಲಿ ತಡೆದುದೇಕೆ? ಔತಣದ ಊಟಕ್ಕೆಯೆ? ಒಂದು ನಿಮಿಷದ ಮಟ್ಟಿಗಾದರೂ ತಾನು ಹೊರಡುವ ಮೊದಲು ವಸಂತ ತನ್ನೆಡೆಗೆ ಬಂದು ಒಂದು ಸಲವಾದರೂ ಆತ 'ಮೋಹಿನಿ!' ಎಂದು ಕರೆಯಬೇಕು, ಒಂದು ಸಲವಾದರೂ ತನ್ನ ಕೈಯನ್ನೆತ್ತಿಕೊಳ್ಳಬೇಕು, ಕೊನೆಯದಾಗಿಯಾದರೂ ಆಗಲಿ, ಒಂದು ಸಮಾಧಾನವನ್ನು ಹೇಳಬೇಕು, ಎಂಬ ಬಯಕೆ ಬೆಟ್ಟವಾಗಿ ನಿಂತಿತು. ಆಕೆಗೆ ಬೇರೆ ಯೋಚನೆಯೆ ಉಳಿಯಲಿಲ್ಲ ಕಣ್ಣೆದುರು ಏನೋ ನಡೆಯುತ್ತಿದ್ದಿತು ಗಟ್ಟಿಯಾಗಿ ಹೇಳಲ್ಪಡುತ್ತಿದ್ದ ಮಂತ್ರಗಳು ಎಲ್ಲಿಂದಲೊ ಎಂಬಂತೆ ತೇಲಿಬರುತ್ತಿದ್ದವು ಸುತ್ತಲೂ ಜನರು ಅವಸರದಿಂದ ಓಡಾಡುತ್ತಲೆ ಇದ್ದರು. ಆಕೆ ತನ್ನ ಯೋಚನೆಯಲ್ಲಿಯೆ ಇದ್ದಳು. ಒಂಬತ್ತೂವರೆಯ ಸುಮಾರಿಗೆ ಎಲ್ಲವೂ ಮುಗಿದು ಸೆರಗು ಗಂಟುಹಾಕಿಕೊಂಡು ವಸಂತ ಶಕುಂತಲೆಯರು ಹಿರಿಯರೆಲ್ಲರನ್ನು ನಮಸ್ಕರಿಸುವುದಕ್ಕೆಂದು ಅಲ್ಲಿಂದ ಎದ್ದಾಗಲೆ ಎಚ್ಚರ. ಒಬ್ಬರ ಹಿಂದೊಬ್ಬರು ಹಾಗೆ ಹೊರಟುದನ್ನು ನೋಡಿ ಒಂದು ಕ್ಷಣ ಮೋಹಿನಿಯ ಕಣ್ಣು ಹನಿಗೂಡಿತು. ಕುಳಿತಲ್ಲಿಂದ ಎದ್ದು ಬೇರೆಡೆಗೆ ಹೋಗಿ ಸುಧಾರಿಸಿಕೊಂಡಳು. ಆದರೆ ವಸಂತ ಐದು ನಿಮಿಷಗಳನಂತರ ಹಿಂದಿರುಗಿದಾಗ ಆಕೆಯ ಮುಖ ಬಾಡಿಹೋದುದನ್ನು ಕಂಡನಲ್ಲದೆ ಆಕೆ ಬೇಡುವುದನ್ನು ಆಕೆಯ ಕಣ್ಣನೋಟದಲ್ಲಿಯೆ ತಕ್ಷಣ ಗುರುತಿಸಿದ.

ಹರಟೆ, ಹಾಡು, ನಗೆಮಾತು, ಆಗ್ರಹಗಳೊಂದಿಗೆ ಊಟ ಉರುಟಣೆಗಳು ಮುಗಿಯಬೇಕಾದರೆ ವೇಳೆ ಹನ್ನೊಂದಾಗಿ ಹೋಯಿತು. ಮೋಹಿನಿಯನ್ನು ಸಮೀಪದಲ್ಲಿ ಕುಳ್ಳಿರಿಸಿಕೊಂಡು ವಸಂತ ಎಷ್ಟು ಆಗ್ರಹಪೂರ್ವಕವಾಗಿ ಊಟ ಮಾಡಿಸಿದ್ದರೂ ಆಕೆಗೆ ಮನಸ್ಸಿರಲಿಲ್ಲವೆಂಬುದು ಸ್ಪಷ್ಟವಾಗಿಯೆ ಇದ್ದಿತು. ಎಲ್ಲವೂ ಯಥಾಸ್ಥಿತವಾಗಿ, ಸುಖವಾಗಿ ನೆರವೇರಿತೆಂದು ಸುತ್ತಲಿನವರೆಲ್ಲರೂ ಸಂತೋಷದ ಸಮಾಧಾನದ ಮಾತುಗಳನ್ನೆ ಹೇಳುತ್ತಿದ್ದಾಗ ಮೋಹಿನಿ ಹೊರಡಲನುವಾದಳು. ಎದೆಯಲ್ಲಿಲ್ಲದ ಉತ್ಸಾಹವನ್ನು, ಸಂತಸವನ್ನು, ಮುಖದ

ಮೇಲೆ ಮೂಡಿಸಿಕೊಂಡು ಕಮಲಕ್ಕ ಶಕುಂತಲೆಯರ ಕೂಡ ಏನೇನೋ ಉಪಚಾರದ ಮಾತುಗಳನ್ನು ಹೇಳಿದಳು. ಶಕುಂತಲೆ ಊಟಕ್ಕೆ ಬರುವಾಗ ಮೋಹಿನಿ ಓದಿಸಿದ ಸೀರೆಯನ್ನೆ ಉಟ್ಟಿದ್ದಳಾದ್ದರಿಂದ ಆ ಸೀರೆಯಿಂದಾಗಿ ಎಷ್ಟೋ ಜನರ ಲಕ್ಷ್ಯ ಮೋಹಿನಿಯ ಮೇಲಿದ್ದಿತು ಎಲ್ಲರಿಗೂ ಹೇಳಿಯಾದ ಮೇಲೆ ಮೋಹಿನಿ ಅಲ್ಲಿಂದ ಕಾಲೆಳೆದಳು. ಮೂರು ಗಂಟೆಯಿಂದಲೂ ಕಾಡುತ್ತಿದ್ದ ಬಯಕೆ ಬಾಯ್ಬಿಡುತ್ತಿತ್ತು. ವಸಂತ ಹತ್ತಿರದಲ್ಲಿಯೆ ಇದ್ದ. ಕೊನೆಗೊಮ್ಮೆ ಧೈರ್ಯವಾಗಿ ಕೇಳಿದಳು

" ನಾನಿನ್ನು ಹೊರಡಲಾ ? "

" ಕಾರ್ ಬರುವುದಿಲ್ಲವೆ ? "

" ಇಲ್ಲಿಂದ ಕೋಣೆಗೆ ಹೋಗಲಿಕ್ಕೆ ಕಾರೆ ? ನಾನು ಇಲ್ಲಿಂದ ಬಹಳ ದೂರ ಇಲ್ಲ ದಾದರ್ ಇದು. ಮರೆತೇಹೋಯಿತೆ ? " ಎಂದು ಹುಸಿನಗೆಯೊಂದನ್ನು ಬೀರಿದಳು ವಸಂತನೂ ಸುಮ್ಮನಾದ. ಮೋಹಿನಿಗೆ ಕಾಲೇ ಏಳಲೊಲ್ಲವು ಕಮಲಕ್ಕ ಶಕುಂತಲೆಯರು ಕೈಮುಗಿದು ಒಳಗಡೆ ಹೋದರು. ಕಣ್ಣಾಸನ್ನೆಯಿಂದ ವಸಂತನಿಗೆ ನಾಲ್ಕು ಹೆಜ್ಜೆ ಆಚೆ ಬರಲು ಸೂಚಿಸಲು ಮೋಹಿನಿಗೆ ಅನುಕೂಲವಾಯಿತು. ಅವರು ನಿಂತಲ್ಲಿಂದ ಬೀದಿಗೆ ಬರಬೇಕಾದರೆ ಮಂಟಪದಲ್ಲಿ ಹಾಯ್ದು ಎಡಗಡೆಯ ಕಿರಿಯಾದ ಬಯಲು ಜಾಗದಿಂದ ಗೇಟಿಗೆ ಹೋಗಬೇಕು ಆ ಬಯಲಿನಲ್ಲಿ ವಿಶೇಷವಾದ ಬೆಳಕಿರಲಿಲ್ಲ ಬೀದಿಯ ದೀಪ ದೂರದಿಂದ ಪ್ರಕಾಶವನ್ನು ಸೂಸುತ್ತಿತ್ತು. ಮೋಹಿನಿ ತಡೆದಳು. ಬಾಯಿಗೆ ಮಾತಿಲ್ಲದಾಗಿತ್ತು. ಆಕೆಯ ಮನಃಸ್ಥಿತಿಯನ್ನು ಬಲ್ಲ ವಸಂತನಿಗೂ ಮಾತು ತೋಚಲಿಲ್ಲ. ಅರ್ಧ ನಿಮಿಷ ಇದಿರಾಗಿ ಇಬ್ಬರೂ ನಿಂತುಬಿಟ್ಟರು. ಕೊನೆಗೆ ಮೋಹಿನಿ ಗದ್ಗದಿತಳಾಗಿ ಮತ್ತೊಮ್ಮೆ ಕೇಳಿದಳು. " ನಾನಿನ್ನು ಹೊರಡಲಾ ? "

ವಸಂತ ಸುಮ್ಮನಾಗಿಯೆ ಉಳಿದ. ' ನಿನ್ನ ಹೃದಯದರಮನೆಯನ್ನು ಬಿಟ್ಟು, ಬೇರೆಯವರಿಗಾಗಿ ಅದನ್ನು ತೆರವಾಗಿಸಿಟ್ಟು ನಾನು ಹೊರಡುತ್ತಿದ್ದೇನೆ. ಆ ಅರಮನೆಯ ಕೊನೆಯ ಹೊಸ್ತಿಲು ಇದು ಅದನ್ನು ದಾಟಲಾ ? ' ಎಂದು ಕೇಳಿದ ಹಾಗಿತ್ತು. ನಿಧಾನವಾಗಿ ಮೋಹಿನಿ ವಸಂತನ ಎರಡೂ ಕೈಗಳನ್ನೆತ್ತಿಕೊಂಡು ಕಣ್ಣಿಗೊತ್ತಿಕೊಂಡಳು. ಪಳಪಳನೆ ಕಣ್ಣೀರ ಧಾರೆ ಉದುರಿ ಆತನ ಅಂಗೈಗಳನ್ನು ತೋಯಿಸಿತು.

" ಹೀಗೆಲ್ಲ ಮಾಡಬಾರದು, ಮೋಹಿನಿ. ಹೀಗೆ ಮಾಡಬಾರದು. ಇಷ್ಟು ಧೈರ್ಯ ಬಿಟ್ಟರೆ ಹೇಗೆ ? ಹೇಳಿದ್ದನ್ನೆಲ್ಲ ಮತ್ತೆ ಮರೆತೆಯಾ ? " ಎಂದು ವಸಂತ ಆಕೆಯ ಕೂದಲನ್ನು ನೇವರಿಸಿ ಹೇಳಿದ . " ಅಲ್ಲವೇ ಅಲ್ಲ, ಅದು ಮೊದಲು ಕಣ್ಣೊರಸಿಕೊ, ನೋಡುವಾ " ಎಂದು ತಾನೇ ತನ್ನ ಬೆರಳುಗಳಿಂದ ಆಕೆಯ ಕಣ್ಣುಗಳನ್ನು ಒರಸಿ ಮತ್ತೆ ಹೇಳಿದ " ಇನ್ನು ಹೊರಡು ಹೀಗೆ ನಿಲ್ಲುವುದು ಸರಿಯಲ್ಲ." ಮೋಹಿನಿಗೆ ಎಷ್ಟೋ ಸಮಾಧಾನವೆನಿಸಿತು ಧೈರ್ಯ ಬಂದಿತು ಮತ್ತೊಮ್ಮೆ ಕೈಕುಲುಕುತ್ತಿರುವಾಗ ಮಂಟಪದಲ್ಲಿಂದ ಯಾರೋ " ವಸಂತ ರಾವ್—" ಎಂದು ಕೂಗಿ ಕರೆದಂತಾಯಿತು ಹಿಡಿದ ಕೈಯನ್ನು ಮೋಹಿನಿ ತಟ್ಟನೆ ಬಿಟ್ಟಳು. ವಸಂತ ಹಿಂದಕ್ಕೆ ಸರಿದ. " ನಾನಿನ್ನು ಹೊರಡುವೆ " ಎಂದವಳೆ ಮೋಹಿನಿ ಸರಸರನೆ ಅಲ್ಲಿಂದ ಹೊರಟುಹೋದಳು ಗೇಟಿನಿಂದ ದಾಟಿ ಆಕೆ ಕಣ್ಮರೆಯಾಗುವ ವರೆಗೂ ವಸಂತ ನಿಂತಲ್ಲಿಂದಲೆ ನೋಡಿದ ಮಂಟಪದ ಕಡೆಯಿಂದ ಯಾರೋ ಬರುತ್ತಿರುವುದನ್ನು ನೋಡಿ " ಬಂದೆ, ಏನು ? " ಎಂದು ಹಿಂತಿರುಗಿದ.

## ೨೨

ಡಿಸೆಂಬರ್ ತಿಂಗಳಲ್ಲಿ ಅಷ್ಟೊಂದು ಭರದಿಂದ ಸಾಗಿದ 'ಶಾಕುಂತಲ' ಚಿತ್ರಪಟದ ಕೆಲಸ ಮಾರ್ಚ್ ಮೊದಲ ವಾರವೆನ್ನುವ ಹೊತ್ತಿಗೆ ಕುಂಟುತ್ತ ಕೂರುತ್ತ ಸಾಗಿ ಕೊನೆಗೆ ಪೂರ್ತಿಯಾಗಿ ನಿಂತುಬಿಡುವಂತಾಯಿತು. ಬೇರೆಯಾಗಿ ಬೇಕಾದಷ್ಟು ಕಾರಣಗಳಿದ್ದರೂ ಮುಖ್ಯವಾಗಿ ವರ್ಮಾ–ಅನುರಾಧೆಯರ ಸಂಬಂಧಗಳೆ ಇದಕ್ಕೆ ಮುಖ್ಯವಾದ ಕಾರಣವಾಗಿದ್ದುವು. ಮೊದಲ ಸಲ ಅನುರಾಧೆ ಮಾತಿನಲ್ಲಿ ಸಿಕ್ಕಿಕೊಂಡ ರಾತ್ರಿಯಿಂದ ಆಪಟೆ ಆಕೆಯ ವಿಷಯದಲ್ಲಿ ಸಂಶಯಿತನಾಗಿಯೆ ಇದ್ದ. ಆದರೆ ಆತನ ಸಂಶಯಿತ ದೃಷ್ಟಿಯನ್ನು ಅನುರಾಧೆ ತಿಳಿಯದಕ್ಕಾಗಿಯೊ, ಅಥವಾ ಅಂಥ ದೃಷ್ಟಿಯ ಎಚ್ಚರಿಕೆಯನ್ನು ಮೀರಿನಿಂತ ಭಾವೋದ್ರೇಕಕ್ಕಾಗಿಯೊ, ಈ ಎರಡು ತಿಂಗಳಲ್ಲಿ ಅವರಿಬ್ಬರ ಸಂಬಂಧಗಳು ವಿಪರೀತವಾದ ದಾರಿಗಳಲ್ಲಿಯೆ ಸಾಗಿದ್ದವು. ಈ ವಿಪರೀತಗಳು ಆಪಟೆನ ಮನೆಯಲ್ಲಿಯ ವಾತಾವರಣವನ್ನು ಬಹುಮಟ್ಟಿಗೆ ಕದಡಿಸಿದ್ದುವಲ್ಲದೆ ಚಿತ್ರಪಟದ ಕೆಲಸಕ್ಕೆ ತಡೆಯನ್ನುಂಟುಮಾಡತೊಡಗಿದ್ದವು. ಅನುರಾಧೆಗಿಂತ ಹತ್ತು ಪಾಲು ಚೆಲುವೆಯಾಗಿದ್ದ ಯಶೋಮತಿಯನ್ನು ದೂರವಾಗಿಸುವ ಮಟ್ಟಿಗೂ ವರ್ಮಾನ ಮೋಹ ಬೆಳೆದಿತ್ತು. ಅಂಥ ಯಾವುದನ್ನು ಆಕೆಯಲ್ಲಿ ಕಂಡಿದ್ದನೊ! ಇಡಿಯ ಫೆಬ್ರುವರಿ ತಿಂಗಳಲ್ಲಿ ಅವರಿಬ್ಬರೂ ಸೇರಿ ಎಷ್ಟು ಕಡೆಯಲ್ಲಿ ಅಲೆದಾಡಿದರೊ! ಇದನ್ನು ಅಪ್ರತ್ಯಕ್ಷವಾಗಿ ತಿಳಿದು ಬೇಸರಗೊಂಡ ಆಪಟೆ ಹೆಚ್ಚಾಗಿ ಸ್ಟೂಡಿಯೋದಲ್ಲಿಯೆ ಇರುತ್ತಿದ್ದುದು ಅನುರಾಧೆಗೆ ಅನುಕೂಲವೆ ಆಗುತ್ತಿದ್ದಿತು. ಎರಡು ಮೂರು ಸಲ ಮಧ್ಯಾಹ್ನದಲ್ಲಿ ಆಪಟೆ ಇಲ್ಲದ ಸಮಯಗಳನ್ನು ಸಾಧಿಸಿ ವರ್ಮಾ ಅನುರಾಧೆಯ ಮನೆಗೆ ಬಂದದ್ದೂ ಇತ್ತು. ಇದನ್ನು ಮೋಹಿನಿ ನೋಡಿಯೂ ನೋಡಿರದ ಹಾಗಿದ್ದಳು. ಮೋಹಿನಿ ರಂಗನಾಥನ್‌ನ ಕಾರ್ಯದರ್ಶಿನಿಯಾಗಿ ಆತನ ವಿಶ್ವಾಸ ಪಡೆದು ಮೆರೆಯುತ್ತಿದ್ದಾಗಿನಿಂದ ನಿಧಾನವಾಗಿ ಅಸೂಯೆಯನ್ನು ಬೆಳೆಯಿಸಿಕೊಂಡ ಅನುರಾಧೆ ಇತ್ತೀಚೆಗೆ ಹೆಚ್ಚಾಗಿ ಆಕೆಯ ಕೂಡ ಮಾತನ್ನೂ ಆಡುತ್ತಿರಲಿಲ್ಲ. ಅಲ್ಲದೆ, ವರ್ಮಾನ ಕೂಡ ಬೆಳೆದ ತನ್ನ ಸಂಬಂಧ ನಿಜವಾಗಿಯೂ ನಿರಾತಂಕವಾಗಿರಬೇಕಾದರೆ ಮೋಹಿನಿ ತನ್ನ ಮನೆಯಲ್ಲಿರುವುದು ಸರಿಯಲ್ಲವೆನಿಸಿ, ಆ ಬಗೆಯಲ್ಲಿಯೂ ಒಂದೆರಡು ಸಲ

ಅವರಿಬ್ಬರ ನಡುವೆ ಮಾತು ನಡೆದಿತ್ತು. ವಿರಸ ಇನ್ನೂ ಬೆಳೆದಿತ್ತು.

ಇದಕ್ಕೆ ಸರಿಯಾಗಿ ಒಂದೂವರೆ ವರ್ಷದಿಂದ ಕೆಲಮಟ್ಟಿಗೆ ಶಾರದಾ ಸ್ಟೂಡಿಯೋಸ್‌ನಲ್ಲಿ ಪಾಲುಗಾರನಾಗಿದ್ದ ಆಪಟೆನಿಗೂ ರಂಗನಾಥನ್‌ನಿಗೂ ಕೆಲವೊಂದು ವಿಷಯಗಳಲ್ಲಿ ಭಿನ್ನಾಭಿಪ್ರಾಯ ಬಂದು ಅವರಿಬ್ಬರ ಸಂಬಂಧವೂ ಮೊದಲಿನಂತೆ ಸೌಹಾರ್ದಮಯವಾಗಿರಲಿಲ್ಲ. ಈ ಮೊದಲು ಆಪಟೆ ಪೂರ್ತಿ ಯಾಗಿ ನಿರ್ದೇಶಿಸಿದ 'ಕಲಂಕ' ಚಿತ್ರಪಟದ ಲೆಕ್ಕದಲ್ಲಿ ಭಿನ್ನಾಪ್ರಾಯ ಮೊದಲಾಗಿ ಅದೇ ಪರಿಸ್ಥಿತಿ 'ಶಾಕುಂತಲ'ಕ್ಕೂ ಒದಗಿದರೆ ತಾನಾದರೂ ಇಷ್ಟು ಪರಿ ಜೀವ ಸವೆಯಿಸಿ ಯಾತಕ್ಕಾಗಿ ದುಡಿಯಬೇಕು? ದುಡಿಯುವುದು ತಾನು, ಪಾಲುಗಾರನೆಂದು, ಶಾರದಾ ಸ್ಟೂಡಿಯೋಸ್‌ದ ಮುಖ್ಯ ನಿರ್ದೇಶಕ ನೆಂದು, ಚಿತ್ರದ ನಿರ್ಮಿತಿಯಲ್ಲಿ ಯಾವ ಒಂದೂ ಭಾಗವಹಿಸದೆ ನಿರ್ಮಾತೃ ವೆಂದು ಬೇರೆ ಬೇರೆ ದಾರಿಗಳಿಂದ ರಂಗನಾಥನ್‌ನ ಪಾಲಿಗೆ ದುಡ್ಡು ಹೆಚ್ಚಾಗಿ ಸೇರುತ್ತಿತ್ತಾದ್ದರಿಂದ ಆಪಟೆ ಬರುಬರುತ್ತ ತೀರ ನಿರುತ್ಸಾಹ ತಾಳುವಂತೆ ಆಗಿದ್ದಿತು. ಅಲ್ಲದೆ ಪರಿಸ್ಥಿತಿ ಇದೇ ರೀತಿಯಾಗಿ ಬೆಳೆಯುವುದಾದರೆ ತಾನೇ ಯಾಕೆ ಬೇರೆಯಾಗಿ ನಿಲ್ಲಬಾರದು ಎಂದುಕೊಳ್ಳುವ ಮಟ್ಟಿಗೆ ಆತನ ಬೇಸರ ಬೆಳೆದಿತ್ತು.

ತಾನು ಬೇರೆಯಾಗಿ ನಿಂತು ಮತ್ತೊಂದು ಸ್ಟೂಡಿಯೊ ಕಟ್ಟಬಹುದು, ಅಥವಾ ಕೂಡಲೆ ಮತ್ತೊಂದು ಸ್ಟೂಡಿಯೊ ಕಟ್ಟಲಿಕ್ಕಾಗದಿದ್ದರೂ ಸ್ವತಂತ್ರ ನಿರ್ಮಾತೃವಾಗಿ, ನಿರ್ದೇಶಕನಾಗಿ ಚಿತ್ರಗಳನ್ನು ತಯಾರಿಸಬಹುದು ಎಂಬ ಭರವಸೆ ಆಪಟೆನಲ್ಲಿ ಬೆಳೆಯಲಿಕ್ಕೆ ಆತನ ಗೆಳೆಯನಾದ ಮದನಲಾಲ ಸೇಠನ ಮೈತ್ರಿಯೂ ಕಾರಣವಾಗಿತ್ತು ಯಾವಾಗಲಾದರೊಮ್ಮೆ ಬಂದುಹೋಗುತ್ತಿದ್ದವ ಈಗ ವಾರಕ್ಕೊಮ್ಮೆಯಾದರೂ ಬಂದು ಆಪಟೆಯನ್ನು ಹುರಿದುಂಬಿಸುತ್ತಿದ್ದ. ಮದನಲಾಲನಿಗೆ ದುಡ್ಡಿನ ಕೊರತೆಯಿರಲಿಲ್ಲ. ನಾಲ್ಕಾರು ಲಕ್ಷ ರೂಪಾಯಿ ಗಳನ್ನು ಒಂದು ಹೊಸ ಫಿಲ್ಮ್ ಕಂಪನಿಯಲ್ಲಿ ತೊಡಕಿಸಲಿಕ್ಕೆ ಆತ ಯಾವಾ ಗಲೂ ಸಿದ್ಧನಿದ್ದ. ಫಿಲ್ಮ್ ಕಂಪನಿಯೆಂದರೆ ವ್ಯವಹಾರವಲ್ಲದೆ ವಿಹಾರವೂ ಹೌದು ಎಂದು ದೃಢವಾಗಿ ನಂಬಿದ್ದ ಆತನಿಗೆ ತಾನೂ ಒಂದು ಕಂಪನಿಯನ್ನು ಯಾಕೆ ಪ್ರಾರಂಭಿಸಬಾರದು ಎಂಬ ಬಯಕೆ ಬಲುದಿನದಿಂದ ಮನಸ್ಸಿನಲ್ಲಿ ಮೂಡಿ ನಿಂತು ತನ್ನೊಡನೆ ಬೆಳೆಯುತ್ತಿದ್ದ ಆಪಟೆನ ಸಹವಾಸದೊಂದಿಗೆ

ಬಲಿಯುತ್ತಲಿದ್ದಿತು. ಅಲ್ಲದೆ ಆಪಟೆನ ಸರಲ ಸ್ವಭಾವವನ್ನು ಬಲ್ಲ ಆತ ಆತನನ್ನು ಉಪಯೋಗಿಸಿಕೊಂಡರೆ ತನ್ನ ಎರಡು ಬಯಕೆಗಳೂ ಸಹಜವಾಗಿಯೇ ಸಫಲಿವಾಗುವವೆಂಬ ಧೂರ್ತ ವಿಚಾರ ಆತನನ್ನು ಇನ್ನೂ ಮುಂದೂಡುತ್ತಿತ್ತು. ಒಂದೆಡೆ ದುಡ್ಡು ಗಳಿಸಬೇಕೆಂಬ ರಕ್ತಗತವಾದ ವ್ಯವಹಾರಬುದ್ಧಿಯಾದರೆ ಇನ್ನೊಂದೆಡೆ ಒಂದಲ್ಲದೆ ನಾಲ್ಕು ಚೆಲುವು ನಟಿಯರ ಕೂಡ ವಿಹರಿಸಿ ಸುಖವಾಗಿರಬೇಕೆಂಬ ಸ್ವಭಾವಗತವಾದ ಬಯಕೆ ಆತನನ್ನು ಆಪಟೆನೆಡೆಗೆ ಹೆಚ್ಚಾಗಿ ಕರೆತರುತ್ತಿತ್ತು ಬಂದಾಗಲೆಲ್ಲ ಕೇಳುತ್ತಿದ್ದ

" ಎಲ್ಲಿಗೆ ಬಂದಿತು ನಮ್ಮ ' ಮದನ್ ಪಿಕ್ಚರ್ಸ್ ' ಸಮಾಚಾರ ? "

" ಅಂತೂ ಕಂಪನಿಯ ಹೆಸರು ಕೂಡ ಸಿದ್ಧವಾಗಿದೆಯಲ್ಲವೆ ? " ಎಂದು ಆಪಟೆ ನಗೆಯಾಡುತ್ತಿದ್ದ

" ಹೆಸರು ಸಿದ್ಧವಾಗಿದೆ. ಆದರೆ ಕಂಪನಿಯೆ ಇಲ್ಲ ! ನೀವು ಯಾತಕ್ಕಾಗಿ ಇಷ್ಟು ಹಿಂದುಮುಂದು ನೋಡುತ್ತೀರೊ ನಾ ಕಾಣೆ."

" ಏನು ಸೇಠಜಿಯವರೆ ? ಒಂದು ಫಿಲ್ಮ್ ಕಂಪನಿ ಹೊರಡಿಸುವುದೆಂದರೆ ಸಾಮಾನ್ಯ ಕೆಲಸವೆ ? "

" ನಿಮಗೆ ದುಡ್ಡಿನ ಯೋಚನೆ ಇದ್ದರೆ ಹೇಳಿ ಅದರ ವಿಷಯ ನೀವು ಯಾವ ಆತಂಕವನ್ನೂ ಇಟ್ಟುಕೊಳ್ಳಬೇಡಿ. ಇಷ್ಟು ಎಂದು ನೀವು ಹೇಳಿದರೆ ಅಷ್ಟು ಹಣ ಪೂರೈಸುವುದು ಮಾತ್ರ ನನ್ನ ಕೆಲಸ."

" ಅದು ಸರಿಯಾಯಿತು. ಆದರೆ ಒಂದು ಹೊಸ ಕಂಪನಿಯೆಂದರೆ ಒಂದೇ ಎರಡೇ. ಹತ್ತು ಬಗೆಯ ಜನರನ್ನು ಕಲೆಹಾಕಬೇಕು ಆರ್ಟಿಸ್ಟರು, ಯಾಂತ್ರಿಕರು, ಸ್ಟಾರ್ಸ್—"

" ಅದೆಲ್ಲ ನಿಮಗೆ ಒಪ್ಪಿದ ಕೆಲಸ. ಅದನ್ನೆಲ್ಲ ನಾನೇ ಮಾಡುವ ಹಾಗಿದ್ದರೆ—"

" ಇನ್ನೂ ಕೆಲವು ದಿನ ಹೋಗಲಿ. ಎಲ್ಲವನ್ನೂ ಸ್ವಲ್ಪ ನಿಧಾನವಾಗಿ ಮಾಡುವ ಅವಸರ ಮಾಡಿದರೆ ಯಾವ ಪ್ರಯೋಜನವೂ ಆಗುವುದಿಲ್ಲ—"

" ಸುಮ್ಮನೆ ಕೈಕಟ್ಟಿಕೊಂಡು ಕುಳಿತರೆ ಆಗುತ್ತದೆಯೆ ? ನಾನು ಹೇಳುತ್ತೇನೆ, ಕೇಳಿ. ಈಗ ನೀವು ನಿಮ್ಮ ಸ್ಟುಡಿಯೋದಲ್ಲಿ ಮುಖ್ಯ ನಿರ್ದೇಶಕರಾಗಿ ಕೆಲಸ ಮಾಡಿದ್ದೀರಿ. ಎಲ್ಲ ಜನ ನಿಮಗೆ ಗೊತ್ತಿನವರು. ಮೂರು ಅಥವಾ ನಾಲ್ಕು

ಜನ ಒಳ್ಳೆ ಸ್ಟಾರ್ಸ್ ನಿಮ್ಮ ಕೈಯಲ್ಲಿ ಕೆಲಸ ಮಾಡಿದ್ದಾರೆ. ಅಲ್ಲಿದ್ದವರನ್ನೇ ಒಬ್ಬೊಬ್ಬರನ್ನೆ ವಿಶ್ವಾಸವಾಗಿ ಮಾತನಾಡಿಸಿ, ಹೆಚ್ಚಿನ ಸಂಬಳ ಹೇಳಿ, ಹಾರಿಸಿ ಕೊಂಡು ಬಂದುಬಿಡಿ. ವ್ಯವಹಾರದಲ್ಲಿ ಇಂತಹ ಪಿತೂರಿ ನಡೆಯಬೇಕಾದದ್ದೆ. ಆದರ ಹೊರತು ನಮ್ಮ ಕೆಲಸ ಸಾಗುವಂತಿಲ್ಲ. ಈಗ ನಿಮ್ಮ ಶಾಕುಂತಲದಲ್ಲಿಯ ಸ್ಟಾರ್‌ಗೆ ಏನು ಕೊಡುತ್ತಾರೆ ?"

"ಮೂರು ಸಾವಿರ—ತಿಂಗಳಿಗೆ, ಆದರೆ ಒಟ್ಟಿನಲ್ಲಿ ಹತ್ತು ಸಾವಿರಕ್ಕೆ ಕಡಿಮೆಯಾಗದಂತೆ ಹೀಗೇನೋ ಇರಬೇಕು ಎಂದು ಕಾಣುತ್ತದೆ"

"ಅದೇನು ಮಹಾ. ಐದು ಸಾವಿರ ಗೊತ್ತುಮಾಡಿ. ಉಳಿದವರಿಗೂ ಹಾಗೆಯೆ."

"ನೋಡುವ ಇನ್ನು ಒಂದೆರಡು ವಾರಗಳಲ್ಲಿ ಏನೆಂಬುದನ್ನು ಗೊತ್ತು ಮಾಡುವ. ಆ ಯಶೋಮತಿಯಲ್ಲದೆ ಇನ್ನೂ ಒಂದೆರಡು 'ಹಕ್ಕಿ'ಗಳಿವೆ ಅಲ್ಲಿ. ಎಲ್ಲವನ್ನು ನೋಡಿಕೊಂಡು ಇನ್ನು ಹದಿನೈದು ದಿನಕ್ಕೆ ನಿಮ್ಮನ್ನು ಕಾಣುವೆ—" ಎಂದು ಹೇಳಿದ್ದ. ಮದನಲಾಲ್ ಏನೇನೋ ಕನಸುಗಳನ್ನು ಕಟ್ಟುತ್ತ ಹೊರಟುಹೋಗಿದ್ದ.

ಹೀಗೆ ಹೊಸ ಕಂಪನಿಯನ್ನು ಕಲ್ಪಿಸಬೇಕೆಂಬ ಆಪಟೆನ ಉತ್ಸಾಹದ ಯೋಚನೆಗಳು ಒಂದೆಡೆಯಾದರೆ ಇನ್ನೊಂದೆಡೆ ಅನುರಾಧೆಯ ಮೇಲಿನ ಸಂಶಯದಿಂದಾಗಿ ವಿಪರೀತ ಮನಸ್ತಾಪ, ಸಿಟ್ಟು. ಇದುವರೆಗೆ ನೇರವಾಗಿ ಆಕೆ ಯನ್ನು ಪ್ರಶ್ನಿಸುವುದು ಸಾಧ್ಯವಿರಲಿಲ್ಲ—ಅಂಥ ಯಾವ ಸ್ಪಷ್ಟವಾದ ಸಂದರ್ಭವೂ ಒದಗಿರಲಿಲ್ಲವಾದ್ದರಿಂದ. ತನ್ನ ಹಿಂದಯೇ ಏನೇನೋ ಅವ್ಯಾಪಾರಗಳು ನಡೆಯುತ್ತಿರಬೇಕು ಎಂಬ ಭಾವನೆ ಇದ್ದರೂ ನೇರವಾಗಿ ಕೈಗೆ ಸಿಕ್ಕ ಹೊರತು ಯಾವುದನ್ನೂ ಮಾಡುವಹಾಗಿಲ್ಲವೆಂದು ಸುಮ್ಮನಾಗಿಯೆ ಇದ್ದ. ಆದರೆ ಮನಸ್ಸು ಸಿಡಿಮಿಡಿಗೊಳ್ಳುತ್ತಿತ್ತು. ಮುದುಡಿಕೊಳ್ಳುತ್ತಿತ್ತು. ಇದೆಲ್ಲದರ ಪರಿಣಾಮ ಸೆಟ್ ಮೇಲೆ ಕೆಲಸ ನಡೆದಾಗ ಇತ್ತೀಚೆಗೆ ಸ್ಪಷ್ಟವಾಗಿ ಕಂಡು ಬರುತ್ತಿತ್ತು. ಯಾವಾಗಲೂ ಸಿಡುಕಿನಲ್ಲಿಯೇ ಇರುತ್ತಿದ್ದವ ವರ್ಮಾನನ್ನು ಕಂಡರೆ ಇನ್ನೂ ಸಂತಾಪಗೊಳ್ಳುತ್ತಿದ್ದ. ಇದಕ್ಕೆ ಸರಿಯಾಗಿ ತನಗೆ ಅನುರಾಧೆ ಪೂರ್ತಿಯಾಗಿ ವಶವಾಗಿದಿದ್ದಳೆಂಬ ಒಣ ಹೆಮ್ಮೆಯಿಂದಲೊ, ಇಂಥ ವ್ಯವಹಾರ ಗಳಲ್ಲಿ ಹೃದಯವನ್ನು ತೊಡಕಿಸಿದವನಾದ್ದರಿಂದಲೊ ವರ್ಮಾ ಮೊದಲಿನಂತೆ

ಕೆಲಸಮಾಡುತ್ತಲೂ ಇರಲಿಲ್ಲ. ವೇಳೆಗೆ ಸರಿಯಾಗಿ ಬರುತ್ತಿರಲಿಲ್ಲ. ಬಂದಾಗಲೂ ಸರಿಯಾಗಿ ಅಭಿನಯಿಸುತ್ತಿರಲಿಲ್ಲ. ನಿರ್ದೇಶಿಸುತ್ತಿದ್ದ ಆಪಟೆ ಏನಾದರೂ ಬೇಸರದ ಮಾತು ಹೇಳಿದರೆ ಅದಕ್ಕೆ ಪ್ರತಿಯಾಗಿ ಮಾತು ಹೇಳುತ್ತಿದ್ದ ಒಂದೆರಡು ಸಲ ಬೆಳೆಯಬಾರದ ಮಾತೂ ಬೆಳೆದಿತ್ತು ತನ್ನ ಒಳನೋವನ್ನು ನೆನೆದು ಏನಾದರೂ ಆಪಾದನೆ ಮಾಡುವುದು ತನಗೆಯೇ ಅವಮಾನವೆನಿಸಿ ಆಪಟೆನಿಗೆ ಸುಮ್ಮನಾಗಿರಬೇಕಾಗಿದ್ದಿತು ಆದರೆ ಸೆಟ್ ಮೇಲಿನ ಕೆಲಸ ಹದ ಗೆಡುತ್ತ ಹೋದ ಹಾಗೆ ತಡೆಯದಾಗಿ ರಂಗನಾಧನ್ ವರೆಗೆ ಆತ ದೂರು ಒಯ್ದರೆ ಅಲ್ಲಿಯೂ ಪ್ರಯೋಜನ ಕಾಣಲಿಲ್ಲ ' ಇಷ್ಟು ದಿನ ಇಷ್ಟು ಒಳ್ಳೆಯವನಾಗಿ ಕೆಲಸ ಮಾಡಿದವನಿಗೆ ಈಗಲೆ ಏನಾಯಿತು ? ನೀವು ಹೊಂದಿಸಿಕೊಂಡು ಹೋಗ ಬೇಕು. ನಾನೇನು ಮಾಡಬಹುದು ? ' ಎಂದಿದ್ದ

ಅಂದು ಮಧ್ಯಾಹ್ನ—ಮಾರ್ಚ್ ೨೦ನೆಯ ದಿನಾಂಕ ಎಂದು ಕಾಣು ತ್ತದೆ—ಒಂದು ಗಂಟೆಯ ಸುಮಾರಿಗೆ ಆಪಟೆ ಮನೆಯಲ್ಲಿ ಊಟ ಮಾಡಿ ಕೊಂಡು ಸ್ಟುಡಿಯೋಕ್ಕೆ ಹೊರಟು ನಿಂತಿದ್ದ. ಅನುರಾಧೆ ಕೇಳಿದಳು :

" ಸಂಜೆ ನಿಮಗೆ ಮನೆಗೆ ಬರಲು ತಡವಾಗುತ್ತದೆಯೆ ? "

" ಯಾರಿಗೆ ಗೊತ್ತು? ಕೆಲಸ ಹೇಗೆ ನಡೆಯುತ್ತದೆಯೊ. ಯಾಕೆ ? ನಿನಗೆ ಎಲ್ಲಿಯಾದರೂ ಹೋಗಬೇಕಾಗಿದೆಯೆ ? "

" ನಾನೆಲ್ಲಿ ಹೋಗುವುದು ? ಸುಮ್ಮನೆ ಕೇಳಿದೆ—"

" ಹಾಗಿದ್ದರೆ ಆ ಸೀರೆಯನ್ನೇಕೆ ಉಟ್ಟಿದ್ದು ? "

ನಿಜವಾಗಿಯೂ ಆಕೆ ಎಲ್ಲಿಯಾದರೂ ಹೋಗುವವಳಿರಬೇಕೆಂಬ ಸಂಶಯ ದಿಂದ ಆಪಟೆ ಹಾಗೆ ಕೇಳಿರಲಿಲ್ಲ. ಆದರೆ ಸಾಮಾನ್ಯವಾಗಿ ಆ ಸೀರೆಯನ್ನು ಮನೆಯಲ್ಲಿ ಉಡದೆ ಹೊರಗೆ ಹೋಗುವಾಗ ಮಾತ್ರ ಉಡುತ್ತಿದ್ದಳಾದ್ದರಿಂದ ಸಹಜವಾಗಿ ಕೇಳಿದ್ದ.

" ಈ ಸೀರೆಯನ್ನುಟ್ಟರೆ ಹೋಗಲೇ ಬೇಕೆ ? ಏನೋ ಬಹಳ ದಿನ ವಾಗಿತ್ತು. ಕೈಗೆ ಬಂದದ್ದು ಎಂದು ಉಟ್ಟೆ."

ಆಪಟೆ ಮುಂದೆ ಮಾತನಾಡಲಿಲ್ಲ. ಇತ್ತೀಚೆಗೆ ಅವರಿಬ್ಬರ ನಡುವೆ ಮಾತು ಕೂಡ ತೀರ ಕಡಿಮೆಯಾಗಿದ್ದವು. ಅಡಿಗೆಯವಳು ಅಡಿಗೆಮಾಡುತ್ತಿದ್ದಳು. ಹತ್ತಾರು ಬಗೆಯ ಯೋಚನೆಗಳಿಂದ ತುಂಬಿದ ಆಪಟೆನ ತಲೆಗೆ ತಾನು ಆಕೆಯ

ಕೂಡ ಹೆಚ್ಚಾಗಿ ಮಾತನಾಡುತ್ತಿರಲಿಲ್ಲವೆಂಬುದೂ ಹೊಳೆಯುವಂತಿರಲಿಲ್ಲ

ಸ್ಟುಡಿಯೋಕ್ಕೆ ಬಂದಾಗ ಯಶೋಮತಿ ಆಪಟೆನಿಗಾಗಿ ಕಾಯುತ್ತಿದ್ದಳು. ಆಕೆ ಶಕುಂತಲೆಯ ಪಾತ್ರವನ್ನು ಅಭಿನಯಿಸುತ್ತಿದ್ದರೂ ಹಿನ್ನೆಲೆಯಲ್ಲಿಯ ಒಂದೆರಡು ಹಾಡುಗಳನ್ನೂ, ಹಂಸಪದಿಕೆಯ ಹಾಡನ್ನೂ ಆಕೆಯೇ ಹಾಡುವಂತೆ ಏರ್ಪಾಡಾಗಿತ್ತು. ಇದಕ್ಕೆ ಕಾರಣವೆಂದರೆ ಆಕೆ ಒಳ್ಳೆಯ ಹಾಡುಗಾರ್ತಿ. ಆದರೆ ಆಪಟೆ ಶಕುಂತಲೆಯ ಪಾತ್ರದ ತನ್ನ ಕಲ್ಪನೆಯನ್ನನುಸರಿಸಿ ಇಡೀ ಚಿತ್ರದಲ್ಲಿ ಶಕುಂತಲೆಯ ಬಾಯಲ್ಲಿ ಒಂದು ಹಾಡನ್ನೂ ಹಾಕಿರಲಿಲ್ಲ. ಇದಕ್ಕೆ ಪ್ರತಿಯಾಗಿ ಯಾರಾದರೂ ವಾದಿಸಿದಾಗ ಆಪಟೆ ಕೇಳುತ್ತಿದ್ದ "ನೀವೇ ಹೇಳಿ, ಶಕುಂತಲೆ ಯಾವಾಗ ಹಾಡಬೇಕು? ದುಷ್ಯಂತನನ್ನು ಕಂಡ ಕೂಡಲೆ ತನ್ನಲ್ಲಾದ ಪರಿವರ್ತನೆಯನ್ನು ಆಕೆ ಹಾಡಿನಿಂದ ಕುಣಿದು ಹೇಳಬಹುದೆ? ಗಿಡಗಳಿಗೆ ನೀರು ಹಾಕುತ್ತಿರುವಾಗ ಹಾಡಿದಳೆ? ಆಶ್ರಮದಲ್ಲಿ ಮುಗ್ಧೆಯಾಗಿ ಬೆಳೆದು ನಾಗರಿಕತೆಯ ಯಾವ ಸಂಪರ್ಕವೂ ಇಲ್ಲದ ಆಕೆ ಆಧುನಿಕ 'ಮುಗ್ಧೆಯರು' ಸ್ನಾನ ಮಾಡುತ್ತಿರುವಾಗಲೂ ಹಾಡುವಂತೆ ಕಾಳಿದಾಸನ ಶಕುಂತಲೆ ಹಾಡುವುದು ಸಾಧ್ಯವಿಲ್ಲ. ಮುಂದೆ ಆಶ್ರಮದಿಂದ ಹೊರಡುವಾಗ ಆಕೆ ಅನುಭವಿಸಿದ ವ್ಯಥೆಯನ್ನಾಗಲಿ, ಅರಸನಿಂದ ನಿರಾಕರಿಸಲ್ಪಟ್ಟಾಗ ಅನುಭವಿಸಿದ ನಿರ್ಭರ್ತ್ಸನೆಯನ್ನಾಗಲಿ, ಕೊನೆಯಲ್ಲಿ ಸಮಾಗಮವಾದಾಗ ಬಾಯಿ ಕಟ್ಟುವಂತೆ ಆಕೆಯ ಹೃದಯವನ್ನು ತುಂಬಿದ ಭಾವನೆಗಳನ್ನಾಗಲಿ ಆಕೆ ಹಾಡಿ ಹೇಳಬಹುದೆ? ಹಾಗೆ ಹೇಳಿಸುವುದು ಸಮಂಜಸವೆ?" ಎಂದು ಮುಂತಾಗಿ. ಹೀಗಾಗಿ ಇಡೀ ಚಿತ್ರಪಟದಲ್ಲಿ ಸಂಗೀತವನ್ನು ಬೇಕಾದಷ್ಟು ಸೇರಿಸಿಕೊಂಡಿದ್ದರೂ ಅದೆಲ್ಲವನ್ನೂ ಪಾತ್ರಗಳು ಆಡಿದ ಮಾತುಗಳಿಗೆ, ಮಾಡಿದ ಕೃತಿಗಳಿಗೆ ಸರಿಯಾದ ಹಿನ್ನೆಲೆಯಾಗುವಂತೆ, ಹೊರಬಿದ್ದ ಭಾವನೆಗಳನ್ನು ತೀವ್ರವಾಗಿಸುವಂತೆ ಯೋಜಿಸಿಕೊಂಡು ಹೊಸ ಪ್ರಯೋಗವೊಂದನ್ನು ಹೆಚ್ಚುಕಡಿಮೆ ಯಶಸ್ವಿಯಾಗಿಯೆ ಮಾಡಿದ್ದ.

"ನಿಮ್ಮ ಗಡಿಯಾರದಲ್ಲಿ ಈಗ ಹನ್ನೆರಡಾಯಿತೆ? ಸುಮ್ಮನೆ ನನ್ನನ್ನು ಒಂದು ಗಂಟೆ ಕಾಯಿಸಿದಿರಿ. ಅದೇ ನಾನು ತಡಮಾಡಿ ಬಂದಿದ್ದರೆ—" ಎಂದು ಯಶೋಮತಿ ಕಣ್ಣರಳಿಸಿ ಹುಬ್ಬು ಮಣಿಸಿ ಕೇಳಿದಳು. ತನ್ನ ಯೋಚನೆಗಳಲ್ಲಿ ಆಪಟೆ ತಾನು ಹನ್ನೆರಡಕ್ಕೆ ಬರುವುದಾಗಿ ಹೇಳಿದ್ದನ್ನು ನಿಜವಾಗಿಯೂ ಮರೆತಿದ್ದ.

" ನನಗೇನೋ ಮರೆತೇ ಹೋಯಿತು ಈಗಲಾದರೂ ಬಂದೆ. ಇಲ್ಲ ವಾದರೆ ಇನ್ನೂ ಒಂದೆರಡು ಗಂಟೆ ನಿಧಾನವಾಗಿ ಬಂದರೂ ಆಯಿತು ಎಂದು ಕೊಂಡಿದ್ದೆ. ನಿಮ್ಮ ಹಾಡನ್ನು ರೆಕಾರ್ಡ್ ಮಾಡುವುದು ನೆನಪಾದ ಕೂಡಲೆ ಹೊರಟುಬಿಟ್ಟೆ. ಹುಂ. ಕೊನೆಗೆ ಯಾವ ರಾಗ ಎಂದಾಯಿತು ? "

" ಯಾವ ಹಾಡು ? "

" ಯಾವುದೇನು ? ಹಂಸಪದಿಕೆಯದಲ್ಲವೆ ನಾವಿಂದು ರೆಕಾರ್ಡ್ ಮಾಡ ಬೇಕೆಂದದ್ದು ? "

" ಆ ಹಾಡಿಗೆ ಮಾಂಡ್ ರಾಗವೇ ಸರಿಯಾದದ್ದು—"

" ಸರಿ. ಸಿಂಧುಭೈರವಿಯನ್ನು ಹೊಂದಿಸಿ ನೋಡಿ ಎಂದು ಹೇಳಿದ್ದಿಲ್ಲವೆ ?"

" ಎರಡನ್ನೂ ಮಾಡಿದ್ದೇನೆ, ನೋಡಿ ಬೇಕಾದರೆ ಇನ್ನೂ ಒಮ್ಮೆ ಅಂದು ನೋಡುವಾ. ನೀವು ಕೊನೆಯಲ್ಲಿ ಯಾವುದು ನಿರ್ಣಯ ಮಾಡುತ್ತೀರೊ ಮಾಡಿ ಬೇಕಾದರೆ ಎರಡನ್ನೂ ರೆಕಾರ್ಡ್ ಮಾಡಿ ಬಿಡಬಹುದು. ಸೌಂಡ್ ಎಂಜಿನಿಯರ್ ಬಂದಿದ್ದಾರೆಯೆ ? ಬಂದಿದ್ದರೆ ಮುಗಿಯಿಸಿಬಿಡೋಣ."

" ಕುಳಿತುಕೊಳ್ಳಿ. ಏನಂಥ ಅವಸರ ? ನಿಮ್ಮ ಒಂದು ಹಾಡು ರೆಕಾರ್ಡ್ ಮಾಡಲಿಕ್ಕೆ ಎಷ್ಟು ವೇಳೆ ತಾನೆ ಹಿಡಿದೀತು ? "

" ಯಾಕೆ ? ಮುಂದೆ ಬೇರೆ ಏನೂ ಕೆಲಸ ಇಲ್ಲವೆ ಸೆಟ್ ಮೇಲೆ ? "

" ಸೆಟ್ ಮೇಲೇನು ಕೆಲಸ ? ನಿಮ್ಮ ವರ್ಮಾ ಬಂದರಲ್ಲವೆ ಮುಂದಿನ ಶೂಟಿಂಗ್—"

" ' ನಿಮ್ಮ ವರ್ಮಾ ' ಅನ್ನಬೇಡಿ ಸುಮ್ಮನೆ—"

ಎಂದು ಯಶೋಮತಿ ನಕ್ಕು ಹೇಳಿದರೂ ಅದರಲ್ಲಿಯ ಸೂಚ್ಯವಾದ ಮೂದಲಿಕೆ ಆಪಟೆನನ್ನು ತುಂಬ ನೋಯಿಸಿತು ಆ ನೋವು ಆತನ ಮುಖದ ಮೇಲೆ ಸ್ಪಷ್ಟವಾಗಿ ಕಾಣಿಸಿತು. ಆತ ಸುಮ್ಮನಾದದ್ದನ್ನು ನೋಡಿ ವಿಷಯ ಬದಲಾಯಿಸಲೆಂದು ಯಶೋಮತಿ ಕೇಳಿದಳು :

" ಯಾಕೆ ? ಇಂದು ವರ್ಮಾ ಬರುವುದಿಲ್ಲ ಎಂದಿದ್ದಾನೆಯೆ ? "

" ಅವನಿಗೇನೋ ಮೈಯಲ್ಲಿ ಸ್ವಸ್ಥವಾಗಿಲ್ಲವಂತೆ. ರಜೆಗಾಗಿ ಚೀಟಿ ಕಳಿಸಿ ದ್ದಾನಂತೆ. ರಜೆಯನ್ನೂ ಕೊಡಲಾಗಿದೆಯಂತೆ—"

" ಯಾರು ಹೇಳಿದರು ಇದನ್ನು ನಿಮಗೆ ? "

" ಯಾರು ಯಾತಕ್ಕೆ ಹೇಳಬೇಕು ? ಇದೇ ಬರುವಾಗ ನಾನು ಆಫೀಸಿನಿಂದಲೆ ಬಂದೆ. ನನ್ನ ಟೇಬಲ್ ಮೇಲೆ ನೋಟ್ ಇತ್ತು "

" ಸರಿ. ಕೆಲಸ ಬೇಡವಾದರೆ ಅನುಕೂಲವಾಗಿಯೇ ವೈಯಲ್ಲಿ ಸ್ವಸ್ಥವಿಲ್ಲದಾಗುತ್ತದೆ ಈ ಜನಕ್ಕೆ."

" ಹಾಗಾದರೆ ಸುಮ್ಮನೆ ಚೀಟಿ ಕಳುಹಿಸಿದ್ದಾನೆಯೆ ? "

" ಸುಳ್ಳೋ ನಿಜವೊ. ನಾನು ಆಗಲೆ ಬರುವಾಗ ಅಲ್ಲಿಂದಲೆ ಬಂದೆ. ಆಗಂತೂ ಆತನಿಗೆ ಏನೂ ಆಗಿರಲಿಲ್ಲ. ನಾಲ್ಕು ಗಂಟೆಗೆ ಎಲ್ಲಿಯೋ ಹೋಗುವವರಿದ್ದೇವೆ ಎಂದೂ ಹೇಳಿದ."

" ಹೌದೆ ? ಯಾರಾದರೂ ಬರುವವರಿದ್ದರೆ ? "

ಯಶೋಮತಿ ಅರೆನಿಮಿಷ ತಡೆದಳು ಕೊನೆಗೆ ಇತ್ತೀಚೆಗೆ ಆಕೆಯಲ್ಲಿ ಬೆಳೆದು ನಿಂತ ವರ್ಮಾನ ಬಗೆಯಲ್ಲಿಯ ಅಸಮಾಧಾನ, ಅನುರಾಧೆಯ ಬಗೆಯಲ್ಲಿಯ ಅಸೂಯೆ ಆಕೆಯನ್ನು ಮಾತನಾಡಿಸಿತು. ಏನೂ ತಿಳಿಯದವಳೆಂಬಂತೆ ಕೇಳಿದಳು :

" ಬೇರೆ ಯಾರು ? ನಿಮ್ಮ ಮಿಸೆಸ್ ಮೂರು ಗಂಟೆಗೆ ಬರುವವರಿದ್ದಾರಂತೆ. ನಿಮಗೆ ಗೊತ್ತಿಲ್ಲವೆ ? "

" ಇಲ್ಲ—"

ಎಂದು ಆಪಟೆ ಸುಮ್ಮನಾದ. ಮುಂದೆ ಯಶೋಮತಿ ಏನೇನನ್ನೊ ಮಾತನಾಡಿದಳು—ತಾನು ಆಡಿದ ಮಾತು ಹೆಚ್ಚಾಯಿತೇನೊ ಎಂಬ ಸಂಶಯದಿಂದ. ಆದರೆ ಆಪಟೆನ ಲಕ್ಷ್ಯ ಆಕೆಯ ಮಾತಿನ ಕಡೆಗೆ ಇರಲೇ ಇಲ್ಲ. ತಾನು ಹೊರಡುವಾಗ ಆಕೆ ಉಟ್ಟ ಸೀರೆಯ ಬಗ್ಗೆ ನಡೆದ ಮಾತು ನೆನಪಾಯಿತು. 'ಸರಿ' ಎಂದು ತನ್ನಷ್ಟಕ್ಕೆಯೆ ಏನನ್ನೋ ಗಟ್ಟಿಮುಟ್ಟಾಗಿ ನಿರ್ಧಾರ ಮಾಡಿಕೊಂಡವನಂತೆ ಕನವರಿಸಿದ. ಆತನ ಮನಃಸ್ಥಿತಿಯನ್ನು ತಿಳಿದ ಯಶೋಮತಿ ಆ ವಿಷಯವನ್ನೇ ಬಿಟ್ಟು ಮತ್ತೆ ತನ್ನ ಹಾಡುಗಳ ಮಾತನ್ನೆತ್ತಿದಳು. ಆಪಟೆ ಕೇಳಿದ. " ಹೊರಡೋಣವೆ ? ಸೌಂಡ್‌ಸ್ಟುಡಿಯೋಕ್ಕೆ ? ಇದ್ದಷ್ಟು ಕೆಲಸವನ್ನಾದರೂ ಮುಗಿಯಿಸಿ ಬಿಡೋಣ—" ಎಂದು. ಆದರೆ ಆತನ ಯೋಚನೆ ಬೇರೆಡೆಯಲ್ಲಿಯೆ ಓಡುತ್ತಿತ್ತೆಂಬುದನ್ನು ಆ ಕ್ಷಣಕ್ಕೆ ಆತನನ್ನು ನೋಡಿದ ಯಾರಾದರೂ ಹೇಳಬಹುದಿತ್ತು ಸೌಂಡ್‌ಸ್ಟುಡಿಯೋದಲ್ಲಿ ಯಶೋಮತಿ ಎರಡೂ

ರಾಗಗಳಲ್ಲಿ ಹಾಡನ್ನು ಹಾಡಿ ತೋರಿಸಿದಳು. ಹಾಡುಗಾರಿಕೆ ಚೆನ್ನಾಗಿಯೆ ಇದ್ದಿತು ಆದರೆ ಆಪಟೆ ಹಾಡನ್ನು ಕೇಳಿರಲೇ ಇಲ್ಲ. "ಯಾವ ರಾಗ ಎಂದಾಯಿತು?" ಎಂದು ಯಶೋಮತಿ ಕೇಳಿದಾಗ "ಎರಡನ್ನೂ ಈಗ ರೆಕಾರ್ಡ್ ಮಾಡಿಬಿಟ್ಟು ಆಮೇಲೆ ಯಾವುದನ್ನು ಉಪಯೋಗಿಸುವುದು ನೋಡೋಣವಂತೆ. ಎರಡೂ ಚೆನ್ನಾಗಿವೆ" ಎಂದು ಧ್ವನಿಮುದ್ರಕರಿಗೆ ಅದೇ ರೀತಿಯಾಗಿ ಸೂಚನೆ ಹೇಳಿದ.

ಮುಂದಿನ ಒಂದು ಒಂದೂವರೆ ಗಂಟೆ ಕಾಲವನ್ನು ಆಪಟೆ ಹೇಗೆ ಕಳೆದ ನೆಂಬುದು ಆತನಿಗೇ ತಿಳಿಯದು. ಧ್ವನಿಮಂದಿರದಿಂದ ಬಂದವ ನೇರವಾಗಿ ತನ್ನ ಕೋಣೆಗೆ ಹೋಗಿ ವಿರಾಮಕುರ್ಚಿಯಲ್ಲಿ ಬಿದ್ದುಕೊಂಡ. ಎದುರಿನ ಗೋಡೆಯ ಮೇಲಿನ ಗಡಿಯಾರದಲ್ಲಿಯ ಮುಳ್ಳು ಸರಿಯುವುದನ್ನೇ ನಿಟ್ಟಿಸು ತ್ತಿದ್ದ ನೂರು ಯೋಚನೆಗಳಿಂದ ಮನಸ್ಸು ಸಂಕಟಪಡುತ್ತಿತ್ತು 'ಏನಿದು? ನಾನು ಮಾಡುತ್ತಿರುವುದು ಏನು? ಅನುರಾಧೆ ಹೀಗಾಗಿಬಿಟ್ಟಳಲ್ಲ!' ಎಂದು ಒಂದು ಸಲವಾದರೆ 'ಇದೆಲ್ಲ ಆ ವರ್ಮಾನ ಪ್ರಲೋಭನೆಯ ಪರಿಣಾಮ. ಎಲ್ಲಿ ಹೋದರೂ ಇಂಥ ಕತೆಗಳನ್ನು ಕಟ್ಟಿಕೊಂಡೇ ಬಂದವ ಆತ ಅನುರಾಧೆಗೆ ಸ್ಟೂಡಿಯೋದ ವರೆಗೆ ಬರಗೊಟ್ಟಿದ್ದೆ ತಪ್ಪಾಯಿತು ಆಕೆಗೆ ಚಿತ್ರದಲ್ಲಿ ಕೆಲಸ ಮಾಡಲು ತಾನು ಅನುಮತಿಸಿದ್ದು ಇನ್ನೂ ತಪ್ಪು' ಎಂದು ತನ್ನನ್ನೇ ದೂಷಿಸಿ ಕೊಳ್ಳುತ್ತಿದ್ದ. ಗಡಿಯಾರದ ಮುಳ್ಳು ನಿಧಾನವಾಗಿ ಸರಿಯುತ್ತಿದ್ದಿತು. ಸರಿಯು ತ್ತಿದ್ದ ಮುಳ್ಳು ಮೂರಕ್ಕೆ ಸಮೀಪಿಸುತ್ತಿದ್ದಹಾಗೆ ಆಪಟೆನ ಮನಸ್ಸಿನ ಉದ್ವೇಗ ಬೆಳೆಯತೊಡಗಿತು. ಆ ಉದ್ವೇಗದೊಡನೆ ಮುಂದುಗಾಣದ ಆವೇಶವೊಂದು ಆತನನ್ನು ಆವರಿಸುತ್ತಿತ್ತು. ಮುಂದಿನ ಹದಿನೈದು ನಿಮಿಷಗಳಂತೂ ಆತನಿಗೆ ಪೂರ್ತಿಯಾಗಿ ಎಚ್ಚರವಿದ್ದಹಾಗೆ ಇರಲಿಲ್ಲ ಮೂರೂ ಕಾಲಾಯಿತು, ಮೂರೂ ಇಪ್ಪತ್ತಾಯಿತು. ಯಾವುದೋ ಒಂದು ಶಕ್ತಿಯ ಅಂಕಿತಕ್ಕೆ ಒಳಗಾದವನಂತೆ ತನ್ನ ಕೋಣೆಯಿಂದ ಹೊರಟ ವರ್ಮಾನ ಮನೆಗೆ ಹೋಗತಕ್ಕದ್ದು, ಅನುರಾಧೆ ಅಲ್ಲಿಗೆ ಬಂದದ್ದು ನಿಜವೆ ಎಂಬುದನ್ನು ತಿಳಿಯತಕ್ಕದ್ದು ಎಂಬೆರಡು ಯೋಚನೆ ಗಳ ಹೊರತು ಬೇರೆ ಯಾವುದೂ ಆ ಕ್ಷಣಕ್ಕೆ ಆತನಲ್ಲಿರಲಿಲ್ಲ. ತನ್ನ ಕಾರಿನಲ್ಲಿ ಹೋಗಬಹುದಾಗಿದ್ದ ಆತ ಕಾರನ್ನೂ ಮರೆತಿದ್ದ. ಹೇಗೋ ಹೆಜ್ಜೆ ಹಾಕು ತ್ತಿದ್ದ ಆತನ ತಲೆಯಲ್ಲಿ ಒಮ್ಮೊಮ್ಮೆ ವಿಚಾರ ಸುಳಿಯುತ್ತಿತ್ತು. ನಿಜವಾಗಿಯೂ

ಅನುರಾಧೆ ಅಲ್ಲಿ ಇದ್ದರೆ ? ಮುಂದೆ ?—ಮುಂದೆ ಎಲ್ಲವೂ ಮಸಕುಮಸಕಾಗಿ, ಬುದ್ಧಿ ದಾರಿಗಾಣದಾಗುತ್ತಿತ್ತು ಸಂತಾಪದಿಂದ ಮೈಯೆಲ್ಲ ಉರಿದು, ಕಡಿದು ಬೀಳುವಂತಾಗುತ್ತಿತ್ತು.

ಮೂರೂ ಮುಕ್ಕಾಲಾಗಿರಬೇಕು—ಆಪಟೆ ವರ್ಮಾನ ಬಾಗಿಲನ್ನು ತಟ್ಟಿದಾಗ. ತಟ್ಟಿದ ಬಾಗಿಲು ಕೂಡಲೆ ತೆರೆಯಲಿಲ್ಲ. ಒಂದೆರಡು ನಿಮಿಷ ಮಾತ್ರವೆ ಆಪಟೆನಿಗೆ ತಡೆಯಬೇಕಾಗಿದ್ದರೂ ಆ ಒಂದೆರಡು ನಿಮಿಷ ಯುಗ ಪ್ರಾಯವಾಗಿ ಕಂಡವು ಆ ಒಂದೆರಡು ನಿಮಿಷಗಳಲ್ಲಿ ಹತ್ತಾರು ಬೀಭತ್ಸ ಭೀಕರ ಚಿತ್ರಗಳು ಕಣ್ಣೆದುರು ನಿಂತುಹೋದವು ಮತ್ತೊಮ್ಮೆ ಬಾಗಿಲನ್ನು ತಟ್ಟುವುದಕ್ಕೂ ವರ್ಮಾ ಬಂದು ಬಾಗಿಲು ತೆರೆಯುವುದಕ್ಕೂ ಸರಿಹೋಯಿತು.

ಬಾಗಿಲೆದುರು ಬಂದು ನಿಂತವ ಆಪಟೆ ಎಂಬುದನ್ನು ನೋಡಿದಾಗ ವರ್ಮಾ ಒಂದು ಕ್ಷಣ ಬೆಚ್ಚಿದನಾದರೂ ಅಭಿನಯ ಸ್ವಭಾವಗತವಾಗಿಬಿಟ್ಟಿದ್ದ ಆತನಿಗೆ ಮುಖದಲ್ಲಿ ಯಾವುದನ್ನೂ ತೋರಗೊಡದಿರುವುದು ಅಸಾಧ್ಯವಾಗಲಿಲ್ಲ. ಹಾಸಿಗೆಯಲ್ಲಿ ಮಲಗಿದವ ಅದೇ ಎದ್ದು ಬಂದಹಾಗಿತ್ತು. ಸೋಗಿನ ವಿನಯ ಸೌಜನ್ಯಗಳನ್ನು ಬೀರುತ್ತ ಹೇಳಿದ: "ಬನ್ನಿ, ಬನ್ನಿ. ಅದೇನು, ಹೀಗೆ ಬಂದುಬಿಟ್ಟರಿ. ಬನ್ನಿ—" ಎಂದು ಹೇಳಿದರೂ ಆತ ಬಾಗಿಲಲ್ಲಿಂದ ಅರೆನಿಮಿಷ ಸರಿಯದಿದ್ದುದು ಆಪಟೆನಿಗೆ ಸಂಶಯವನ್ನುಂಟುಮಾಡಿತು. ಆದರೆ ಆತ ನಾಲ್ಕು ಹೆಜ್ಜೆ ಮುಂದೆ ಬಂದು ಕೋಣೆಯಲ್ಲಿ ನೋಡಿದಾಗ ಇನ್ನಾರೂ ಇದ್ದಹಾಗೆ ಕಾಣಲಿಲ್ಲ. ಎದುರಿನ ಕೋಣೆಯ ಬಾಗಿಲು ಮುಂದೂಡಲ್ಪಟ್ಟಿತ್ತು. ಬಾಗಿಲು ಮಾತ್ರ ಪೂರ್ತಿಯಾಗಿ ಮುಚ್ಚಿರಲಿಲ್ಲ. ಒಂದು ಕ್ಷಣ ಆಪಟೆನಿಗೆ ಸಮಾಧಾನ ವೆನಿಸಿತು. ಆ ಸಮಾಧಾನದ ಮೂಲಕವೆ ತಾನು ಬಂದುದಕ್ಕೆ ಏನಾದರೊಂದು ಕಾರಣವನ್ನು ಹೇಳುವುದು ಸಾಧ್ಯವಾಯಿತು. "ಏನಿಲ್ಲ, ಸುಮ್ಮನೆ ಬಂದೆ. ಮೈಯಲ್ಲಿ ಸರಿಯಾಗಿಲ್ಲವೆಂದು ಬರೆದಿದ್ದಿರಿ. ಈ ಕಡೆ ಇನ್ನೆಲ್ಲಿಯೊ ಹೊರಟಿದ್ದೆ. ಒಂದು ನಿಮಿಷ ನೋಡಿಕೊಂಡು—" ಆಪಟೆ ಅರ್ಧಕ್ಕೆಯೆ ತಡೆದ. ಆತನ ಲಕ್ಷ್ಯ ಎದುರಿನ ಮೇಜಿನ ಕಡೆಗೆ ಹೋಗಿತ್ತು. ಅದರ ಮೇಲಿದ್ದ ಪರ್ಸ್‌ನ ಮೇಲೆ ನೆಟ್ಟಿತ್ತು. ನಿಸ್ಸಂದೇಹವಾಗಿಯೂ ಅದು ಅನುರಾಧೆಯದು. ತಾನು ಮನೆಯಿಂದ ಹೊರಡುವಾಗ ತನ್ನ ಮೇಜಿನ ಮೇಲೆ ಇದ್ದಿತು. ಆಪಟೆನಿಗೆ ಮನವರಿಕೆಯಾಯಿತು. ಗಾಳಿಯ ಒಂದು ಜುಳುಕು ಬೀಸಿತು. ಎದುರಿನ

ಕೋಣೆಯ ಬಾಗಿಲು ಇನ್ನಿಷ್ಟು ತೆರೆದದ್ದರಿಂದ ಆಪಟೆ ಆ ಕಡೆಗೆ ನೋಡಿದ. ನೋಡಿದವ ಕುರ್ಚಿಯಿಂದ ಎದ್ದೇ ನಿಂತ ಅರೆತೆರೆದ ಬಾಗಿಲಾಚೆ ಕಾಣುತ್ತಿದ್ದ ವರ್ಮಾನ ಕಾಟಿನ ಮೇಲೆ ಒಂದು ಸೀರೆ ಬಿದ್ದಹಾಗಿತ್ತು—ಮಧ್ಯಾಹ್ನ ಅನುರಾಧೆ ಉಟ್ಟ ಸೀರೆಯಂಥದು! ಆಪಟೆ ಪರ್ಸನ್ನು ನೋಡಿದಾಗಲೆ ವರ್ಮಾನಿಗೆ ಪೂರ್ತಿಯಾಗಿ ಸನ್ನಿವೇಶ ಅರ್ಥವಾಗಿತ್ತು. ಆತ ಸಿದ್ಧನಾಗಿಯೇ ಇದ್ದ. ಆದರೆ ತಾನಾಗಿಯೆ ಯಾವುದಕ್ಕೂ ಆಸ್ಪದ ಕೊಡದಂತೆ—ಯಾವ ವಿಶೇಷವೂ ನಡೆದಿರದಿದ್ದಂತೆ—ಆಪಟೆನಿಗೆಂದ·

"ಹೊರಟೇಬಿಡುತ್ತೀರಾ?—"

ಆಪಟೆ ಮಾತನಾಡಲಿಲ್ಲ. ಆತನಿಗೆ ಆವೇಶದಿಂದ ಬಾಯಿ ಕಟ್ಟಿದ ಹಾಗಿತ್ತು. ಕೊನೆಗೆ ತಡೆಯಲಾರದಾಗಿ ಕಿಡಿ ಸಿಡಿದಂತೆ ನುಡಿದ:

"ನಾನು ಹೊರಡುವುದಿಲ್ಲ, ತಿಳಿಯಿತೆ? ಇದು ಏನು ಎಂದು ಇತ್ಯರ್ಥ ಮಾಡದ ಹೊರತು ಹೊರಡುವುದಿಲ್ಲ. ತಿಳಿಯಿತೆ?—"

"ಏನು, ಏನು ಮಾತಿದು? ಏನು ಇತ್ಯರ್ಥ?—"

"ಆಚೆಯ ಕೋಣೆಯಲ್ಲಿ ಯಾರಿದ್ದಾರೆ?"

ವರ್ಮಾ ಒಂದು ನಿಮಿಷ ತಡೆದ. ಇದುವರೆಗೆ ತಾನು ಅಭಿನಯಿಸಿದ ಪಾತ್ರ ತನ್ನೆದುರಿನ ಸನ್ನಿವೇಶಕ್ಕೆ ಹೊಂದದು ಎಂಬುದನ್ನು ತಿಳಿದು ಆವೇಶದಿಂದಲೇ ಹೇಳಿದ:

"ಯಾರೋ ಇದ್ದಾರೆ? ಅದನ್ನು ನೀವು ಕೇಳಬೇಕಿಲ್ಲ"

"ಯಾರಿದ್ದಾರೆ?" ಆಪಟೆ ಹೆಚ್ಚುಕಡಿಮೆ ಚೀರಿದ

"ಇದು ನೋಡಿರಿ, ಮಿಸ್ಟರ್ ಆಪಟೆ. ನನ್ನ ಮನೆಯಲ್ಲಿ ನೀವಾಗಿಯೆ ಬಂದು ಈ ರೀತಿ ಗಲಾಟೆ ಮಾಡಬೇಕಿಲ್ಲ ಸುಮ್ಮನೆ ಇಲ್ಲಿಂದ ಬಂದ ಹಾಗೆ ಹೊರಟುಹೋಗಿರಿ."

"ಹೋಗುವುದಿಲ್ಲ. ಅಲ್ಲಿ ಯಾರಿದ್ದಾರೆ ಎಂಬುದು ತಿಳಿಯದಹೊರತು—"

ಎಂದವನೆ ಆಚೆಯ ಕೋಣೆಯ ಕಡೆಗೆ ಸರ್‍ರನೆ ಸರಿದ. ಆದರೆ ವರ್ಮಾ ನಡುವೆಯೆ ನಿಂತುಬಿಟ್ಟಿದ್ದನಾದ್ದರಿಂದ ಆಪಟೆನ ತೋಳು ಆತನ ಕೈಗೆ ಸಿಕ್ಕಿತು. ಆತನನ್ನು ಬಾಗಿಲಿಂದ ಈಚೆಗೆ ಹೆಚ್ಚುಕಡಿಮೆ ಎಳೆದುಕೊಂಡೇ ಬಂದು ವರ್ಮಾ ಗಟ್ಟಿಯಾಗಿ ಹೇಳಿದ:

" ಈ ಗಲಾಟೆ ಇಲ್ಲಿ ನಡೆಯಲಾರದು ಎಂದು ಹೇಳಿದ್ದೇನೆ ಇದಕ್ಕೂ ಹೆಚ್ಚಿಗೆ ಏನಾದರೂ ಮಿಸುಕಿದರೆ ಪರಿಣಾಮ ಚೆನ್ನಾಗಲಿಕ್ಕಿಲ್ಲ—"

ಆತನ ಈ ಎಚ್ಚರದ ಮಾತುಗಳಿಗಿಂತ ವರ್ಮಾನಿಂದ ಬಿಗಿಯಾಗಿ ಹಿಡಿಯಲ್ಪಟ್ಟ ತೋಳು ಆಪಟೆನಿಗೆ ಎಚ್ಚರವನ್ನು ಹೇಳುತ್ತಿತ್ತು. ವರ್ಮಾ ನನ್ನು ಕೈ ಹಿಡಿದು ಮಣಿಸುವುದು ಸಾಧ್ಯವಿಲ್ಲವೆಂಬುದನ್ನು ಯಾವಾಗಲೊ ತಿಳಿದಿದ್ದ ಆಪಟೆ ಸುಮ್ಮನೆ ಒದ್ದಾಡುತ್ತಿದ್ದ. ಕೊನೆಗೆ ಹತಾಶನಾಗಿ ಒದರಿದ

" ನಿಮಗೆ ನಾಚಿಕೆಯಾಗಬೇಕು, ಈ ರೀತಿ—"

" ಇಲ್ಲಿ ಒದರಬೇಡಿ. ನೆರೆಯವರು ಬರುವಷ್ಟರಲ್ಲಿ ನಿಮ್ಮ ಜೀವವೇ ಹೋದೀತು, ಜೋಕೆ. ನಾಚಿಕೆಯಾಗಬೇಕಂತೆ, ನಾಚಿಕೆ. ಇಲ್ಲಿಯ ವರೆಗೆ ಬರಲಿಕ್ಕೆ ನಿಮಗೆ ನಾಚಿಕೆಯಾಗಬೇಕಿತ್ತು."

" ಇದರ ಪರಿಣಾಮ ಸರಿಯಾಗಲಿಕ್ಕಿಲ್ಲ—"

" ಏನಾದದ್ದು ಆದೀತು ಅದನ್ನು ನೀವು ಹೇಳಬೇಕಾದದ್ದಿಲ್ಲ."

" ಈಗ ಹೇಳುವುದಿಲ್ಲ. ಹೇಳಬೇಕಾದಾಗ ಹೇಳುತ್ತೇನೆ."

" ಹೇಳುವಿರಂತೆ. ಈಗಂತೂ ಇಲ್ಲಿಂದ ಹೊರಡಿರಿ—"

" ಹೊರಡುವುದಿಲ್ಲ!"

" ಹಾಗಿದ್ದರೆ ನಿಮ್ಮನ್ನು ಹೊರಗೆ ದೂಡಬೇಕಾಗುತ್ತದೆ. ನಾಲ್ಕು ಜನ ಬಂದರೆ ಅದರ ಅವಮಾನ ನಿಮಗೆ—ಇನ್ನು ನೀವು ಇಲ್ಲಿ ಉಳಿಯುವುದು ಕ್ಷೇಮವಲ್ಲ."

ಆಗಲೆ ಆದಷ್ಟು ಅವಮಾನ ಆಪಟೆನಿಗೆ ಸಾಕಾಗಿತ್ತು. ಯಾವುದ ರಿಂದಲೂ ಪ್ರಯೋಜನ ಕಾಣದಾಗಿ ತೀರ ಬೇಸರಗೊಂಡು ಒಂದು ಮಾತನ್ನೂ ಆಡದೆ ಅಲ್ಲಿಂದ ಹೊರಬಿದ್ದ. ಹೋಗುತ್ತಿದ್ದಾಗ " ಇದಕ್ಕಾಗಿ ನೀವು ತುಂಬಾ ಎಚ್ಚರದಿಂದ ಇರಬೇಕಾದೀತು ಜೋಕೆ" ಎಂಬ ಮಾತನ್ನು ಹೇಳಿದ. ಆದರೆ ವರ್ಮಾನ ಲಕ್ಷ್ಯ ಆತನ ಮಾತಿನ ಕಡೆಗಿರಲಿಲ್ಲ. ಆಪಟೆ ಹೊರಬೀಳುತ್ತಲೆ ಧಡಾಲ್ರೆಂದು ಬಾಗಿಲನ್ನು ಹಾಕಿದ. ಆ ಸದ್ದಾದರೂ ಸಂಪೂರ್ಣವಾಗಿ ಬಧಿರ ವಾಗಿದ್ದ ಆಪಟೆನ ಚೇತನವನ್ನು ತಲಪಿತೊ ಇಲ್ಲವೊ.

ವರ್ಮಾ ಆಪಟೆಯವರ ನಡುವೆ ನಡೆದ ಮಾತನ್ನು ಕೇಳಿ ಅನುರಾಧೆ ನಡುಗಿ ನೆಲಕ್ಕೆ ಕುಸಿದಿದ್ದಳಾದರೂ ತಾನು ಅಲ್ಲಿದ್ದ ಬಗ್ಗೆ ಆಪಟೆನಿಗೆ ಪೂರ್ತಿ

ಯಾಗಿ ಮನವರಿಕೆಯಾಗಿತ್ತೆಂಬುದನ್ನು ತಿಳಿಯಲಾಗಲಿಲ್ಲ. ಏನೋ ವಿಪರೀತ ವಾಗಿ ಸಂಶಯಗೊಂಡು ಬಂದಿದ್ದನೆಂದೇ ಭಾವಿಸಿದಳು ಸಂಪೂರ್ಣವಾಗಿ ಅನರ್ಥದಲ್ಲಿಯೆ ಕೊನೆಗೊಳ್ಳಬಹುದಾಗಿದ್ದ ಸನ್ನಿವೇಶ ನೇರವಾಗಿ ಆತನ ಕೈಗೆ ಸಿಕ್ಕದೆ ತಾನು ಪಾರಾದದ್ದು ವರ್ಮಾನ ಧೈರ್ಯದಿಂದಲೆ ಎಂದು ಸಮಾಧಾನ ಹೇಳಿಕೊಳ್ಳಲೆತ್ನಿಸುತ್ತಿದ್ದಳಾದರೂ ಮನೆಗೆ ಹೋಗುವ, ಹೋದನಂತರ ಆಪಟೆ ನನ್ನು ಎದುರಿಸುವ ಧೈರ್ಯ ಆಕೆಯಲ್ಲಿ ಎಷ್ಟು ಮಾತ್ರವೂ ಉಳಿದಿರಲಿಲ್ಲ. ಏನಿದ್ದರೂ ಸಾಯಂಕಾಲ ವಿಷಯ ನಿಷ್ಕರ್ಷೆಗೆ ಬಂದೇ ಬರುವುದೆಂದೂ, ಅದು ಕೊನೆಗೊಳ್ಳುವ ಬಗೆಯಾದರೂ ತನಗೆ ಸುಖವಾಗಿರಲಾರದೆಂದೂ ತಿಳಿದವಳಾದ್ದ ರಿಂದ ಹಾಗೂ ಹೀಗೂ ಕಾಲೆಳೆಯುತ್ತ ಮನೆಯನ್ನು ಸೇರಿದ್ದಳು. ಹತ್ತಾರು ಬಗೆಯಲ್ಲಿ ವರ್ಮಾ ಹೇಳಿದ ಸಮಾಧಾನದ ಮಾತು ಎಲ್ಲಿಯೂ ನಿಲುಕಲಿಲ್ಲ. ಹೀಗಾಗಿ ಅನುರಾಧೆ ಮನೆಗೆ ಬಂದಾಗ ಜೀವನ್ಮೃತಳೆಂಬಂತಿದ್ದಳು. ಕೈಕಾಲು ಗಳಲ್ಲಿಯ ಶಕ್ತಿಯೆ ಇಲ್ಲದಂತಾಗಿತ್ತು. ಎದೆಯಲ್ಲಿಯ ಧೈರ್ಯ ಯಾವಾಗಲೊ ಮಾಯವಾಗಿತ್ತು. ಬಾಯಿಗೆ ಮಾತಿಲ್ಲದಾಗಿತ್ತು. ಬುದ್ಧಿ ಯಾವುದನ್ನೂ ಮುಂದುಗಾಣದಾಗಿತ್ತು. ಬಂದಾಗಿನಿಂದ ಹಾಸಿಗೆಯಲ್ಲಿ ಬಿದ್ದುಕೊಂಡೇ ಇದ್ದಳು. ಅಡಿಗೆಯವಳು ಬಂದು ವಿಚಾರಿಸಿದಾಗ ಕೂಡ ಏನೋ ಮಾತು ಹೇಳಿ ಆಪಟೆನ ಬರವನ್ನೆ ಇದಿರು ನೋಡುತ್ತ ಕಂಗೆಟ್ಟು ವೇಳೆಯನ್ನು ತಳ್ಳು ತ್ತಿದ್ದಳು. ಆಗೀಗ ತೀರ ಅಸಹಾಯಳಾಗಿ ಅತ್ತುಬಿಡುತ್ತಿದ್ದಳು.

ಆಪಟೆ ಮನೆಗೆ ಬಂದಾಗ ರಾತ್ರಿ ಒಂಬತ್ತು ಗಂಟೆಯಾಗಿತ್ತು.

ಬಂದವನೆ ಮೊದಲು ಅಡಿಗೆಯವಳಿಗೆ ತಾವಿಬ್ಬರೂ ಊಟ ಮಾಡುವುದಿಲ್ಲ ವೆಂದೂ ಆಕೆ ತನ್ನ ಕೆಲಸ ತೀರಿಸಿಕೊಂಡು ಹೊರಟುಬಿಡಬಹುದೆಂದೂ ಸೂಚನೆ ಕೊಟ್ಟು ಹೊರಕೋಣೆಯಲ್ಲಿಯ ಸೋಫಾದ ಮೇಲೆ ಮೈ ಚೆಲ್ಲಿದ. ಹಾಸಿಗೆ ಯಲ್ಲಿಯೆ ಬಿದ್ದುಕೊಂಡಿದ್ದ ಅನುರಾಧೆಯ ಯೋಚನೆ ಯಾವ ದಿಕ್ಕಿನಲ್ಲಿಯೂ ಸರಿಯಾಗಿ ನಡೆಯದಷ್ಟು ದುರ್ಬಲವಾಗಿ ಹೋಗಿತ್ತು. ಅರ್ಧ ಗಂಟೆಯಾಗಿ ಹೋಯಿತು. ಅಡಿಗೆಯವಳು ತನ್ನ ಕೋಣೆಗೆ ಹೋದಳೆಂದು ತಿಳಿದಾಗ ಆಪಟೆ ಕೂಗಿದ.

"ಅನುರಾಧಾ!"

ಅನುರಾಧೆಗೆ ಮೈ ಜುಮ್ಮೆಂದಿತು, ತಲೆ ತಿರುಗಿದಂತಾಯಿತು. ಆದರೆ

ಅಲ್ಲಿಂದ ಮಿಸುಕುವ ಧೈರ್ಯವಾಗಲಿಲ್ಲ. ಕಾಲುಗಳಲ್ಲಿ ಶಕ್ತಿಯೂ ಇರಲಿಲ್ಲ. ಆಪಟೆ ಮತ್ತೆ ಕೂಗಿದ:

" ಅನುರಾಧಾ—"

ಅನುರಾಧೆ ಮೊದಲ ಕರೆಗೆ ಹೊರಗೆ ಬಂದಿದ್ದರೆ ಆಪಟೆ ಮೆತ್ತಗಾಗಿ ಮಾತನಾಡಬಹುದಿತ್ತು. ಮೂರು ನಾಲ್ಕು ಬಾರಿ ಕರೆದರೂ ಬಾರದಿದ್ದಾಗ ಮಾತ್ರ ಆತನ ತಾಳ್ಮೆ ಕುಸಿಯಿತು. ಐದನೆಯ ಬಾರಿ ಕರೆದ—ಕರೆಯೊಡನೆ ತಾನೂ ಬಂದ. ಅನುರಾಧೆ ಗಡಗಡನೆ ನಡುಗಿದಳು. ಆದರೆ ಬಂದವನೇ ಒಂದೇಟಿಗೆ ಆಕೆಯನ್ನು ಹಾಸಿಗೆಯಿಂದ ಸೆಳೆದು ತೆಗೆದು ಹೊರಕೋಣೆಯ ವರೆಗೆ ದಡದಡನೆ ನೂಕಿಕೊಂಡೇ ಬಂದು ಒಂದು ಕುರ್ಚಿಯಲ್ಲಿ ತಳ್ಳಿದ. ಅದಕ್ಕೆ ಇದಿರಾಗಿ ಬೇರೊಂದು ಕುರ್ಚಿಯನ್ನೆಳೆದುಕೊಂಡು ಕುಳಿತ. ಅನುರಾಧೆಯ ಮುಖ ಬಣ್ಣಗೆಟ್ಟು—ಬಿಳುಪೇರಿಹೋಗಿತ್ತು. ಎಡಗೈಯ ಬೆರಳುಗಳಿಂದ ತನ್ನ ಎರಡೂ ಕಣ್ಣುಗಳನ್ನು ಮುಚ್ಚಿಕೊಂಡಿದ್ದಳು. ಆಗ ಆಪಟೆ ಗುಡುಗಿನಂತೆ ಗದ್ದರಿಸಿದ:

" ಇಂದು ಮಧ್ಯಾಹ್ನ ಎಲ್ಲಿಗೆ ಹೋಗಿದ್ದೆ ? ಹೇಳು—"

ಅನುರಾಧೆ ಮಾತನಾಡಲಿಲ್ಲ, ಮಿಸುಕಲಿಲ್ಲ ಸಹ.

" ಇಂದು ಮಧ್ಯಾಹ್ನ ಎಲ್ಲಿಗೆ ಹೋಗಿದ್ದೆ ? ಹೇಳು—" ಆಪಟೆನ ದನಿ ಇನ್ನೂ ಮೇಲಕ್ಕೇರಿತ್ತು. ಕ್ಷಣಕ್ಷಣಕ್ಕೆ ಆವೇಶದಿಂದ ಕಂಪಿಸುತ್ತಿತ್ತು. ಮತ್ತೆ ಎರಡು ಬಾರಿ ಕೇಳಿದ. ಅನುರಾಧೆಯ ತುಟಿ ಅಲುಗಾಡಿದವು. ದನಿ ಬರಲಿಲ್ಲ.

" ಎಲ್ಲಿಗೆ ಹೋಗಿದ್ದೆ ? ಹೇಳು—"

" ಎಲ್ಲಿಗೂ-ಇ-ಲ್ಲ—"

" ಎಲ್ಲಿಗೂ ಇಲ್ಲವೆ " ಎಂದವನೆ ಕೆನ್ನೆಯ ಮೇಲೆ ಒಂದೇಟನ್ನು ಬಲವಾಗಿ ಬೀಸಿ ಕೊಟ್ಟ. ಆ ಒಂದೇ ಏಟಿಗೆ ಅನುರಾಧೆ ಮುದ್ದೆಯಾಗಿಬಿಟ್ಟಳು. ಆದರೆ ಆಕೆಯ ಸ್ಥಿತಿಯನ್ನು ಗಮನಿಸುವ ಸ್ಥಿತಿಯಲ್ಲಿ ಆಪಟೆ ಇರಲಿಲ್ಲ. ಮತ್ತೆ ಎರಡು ಏಟು ಮುಖದ ಮೇಲೆ ಹೊಡೆದ. ಆಕೆ ಕುರ್ಚಿಯಿಂದ ಉರುಳಿ ನೆಲಕ್ಕೆ ಬಿದ್ದರೂ ಆತನ ಉದ್ವೇಗ ತಗ್ಗಲಿಲ್ಲ. ಅಲ್ಲಿ ಇಲ್ಲಿ ಎಲ್ಲ ಕಡೆಯಲ್ಲಿಯೂ ಬಿಗಿದ. ಮೊದಲಿನ ಮೂರು ನಾಲ್ಕು ಏಟುಗಳು ಬಿದ್ದಾಗ ಮಾತ್ರ ಅನುರಾಧೆ ನರಳಿದ್ದಳು. ಮುಂದೆ ಸ್ತಬ್ಧಳಾಗಿದ್ದಳೆಂಬುದು ಹೇಗೋ ಆತನ ಲಕ್ಷ್ಯಕ್ಕೆ

ಬಂದಿತು. ನೋಡುತ್ತಾನೆ, ಬಾಯಿಂದ ರಕ್ತ ಸುರಿಯುತ್ತಿದೆ. ಎಚ್ಚರವಿಲ್ಲ. ಆಪಟೆನಿಗೆ ಎಚ್ಚರವಾಯಿತು. ಗಾಬರಿಯೂ ಆಗಿರಬೇಕು ಕೂಡಲೆ ಹೋಗಿ ನೀರು ತಂದು ಚಿಮುಕಿಸಿದ. ಬಾಯಿ ಮುಖ ನೀರಿನಿಂದ ಒರಸಿದ. ಮೂರು ನಾಲ್ಕು ನಿಮಿಷಗಳಲ್ಲಿ ಅನುರಾಧೆ "ಹಾಂ" ಎಂದಳು ನಿಧಾನವಾಗಿ ಆಕೆ ಯನ್ನು ಎತ್ತಿಕೊಂಡು ಹೋಗಿ ಹಾಸಿಗೆಯಲ್ಲಿ ಮಲಗಿಸಿದ ಎಚ್ಚರ ಬಂದ ಹಾಗೆ ಅನುರಾಧೆ ನರಳತೊಡಗಿದಳು. ಆಪಟೆ ಹೊರಕೋಣೆಗೆ ಬಂದು ತಲೆಯನ್ನು ಕೈಗಳಲ್ಲಿ ಹಿಡಿದುಕೊಂಡು ಸೋಫಾದಲ್ಲಿ ಕುಳಿತ

೨೩

ಮೇಲಿನ ಸಂಗತಿ ನಡೆದು ಎಂಟು-ಹತ್ತು ದಿನಗಳಾದರೂ ಆಪಟೆಯ ಯೋಚನೆ ಬಗೆಹರಿಯಲಿಲ್ಲ. ಆತನಿಗೆ ಎಲ್ಲವೂ ಬೇಡವಾಗಿತ್ತು, ಮತ್ತೆ ಸ್ಟೂಡಿಯೋಕ್ಕೆ ಹೋಗಿ ಚಿತ್ರವನ್ನು ನಿರ್ದೇಶಿಸುವುದು ಸಾಧ್ಯವಿಲ್ಲವೆನಿಸಿತ್ತು ಆದರಲ್ಲಿಯೂ ಚಿತ್ರದ ಉಳಿದ ಭಾಗದಲ್ಲಿ ವರ್ಮಾನದೇ ಮುಖ್ಯವಾಗಿ ಕೆಲಸ ಇದ್ದಿತು. ಆತನಿಂದ ಕೆಲಸವನ್ನು ಮಾಡಿಸುವ ವಿಷಯದಲ್ಲಿ ತೀರ ಬೇಸರ ಪಟ್ಟವನಾದ್ದರಿಂದ ಸ್ಟೂಡಿಯೋದ ಕಡೆಗೆ ಹೋಗಿರಲೂ ಇಲ್ಲ ಮನೆಯಲ್ಲಿಯೆ ಇದ್ದರೂ ಅದೂ ಒಂದು ತೆರನಾಗಿಯೆ. ಮೊದಲು ಮೂರು ನಾಲ್ಕು ದಿನ ಆತ ಅನುರಾಧೆಯ ಕೂಡ ಒಂದು ಮಾತನ್ನೂ ಆಡಿರಲಿಲ್ಲ ಆದರೆ ಇತ್ತೀಚಿನ ವಾರದಲ್ಲಿ ಆಕೆ ಮಾತನಾಡಿಸಿದಾಗ ಅದಕ್ಕೆ ಒಂಟಿಮಾತಿನ ಉತ್ತರ ಹೇಳುತ್ತಿದ್ದ ತನ್ನ ಮತ್ತು ವರ್ಮಾನ ನಡುವೆ ನಡೆದ ಸನ್ನಿವೇಶದಿಂದಾಗಿ 'ಶಾಕುಂತಲ' ಚಿತ್ರವನ್ನು ತಾನು ಮುಗಿಯಿಸುವುದು ಅಸಾಧ್ಯವೆಂದು ಮನಗಂಡಿದ್ದನಾದ್ದರಿಂದ ಶಾರದಾ ಸ್ಟೂಡಿಯೋದ ಸಂಬಂಧ ಬಹಳ ದಿನದ್ದಲ್ಲವೆಂಬುದನ್ನೂ ತಿಳಿದಿದ್ದ. ಹೀಗಾಗಿ ಒಂದೆಡೆ ಮನಸ್ಸು ಮದನಲಾಲನ ಕಡೆಗೆ ಹರಿಯುತ್ತಿತ್ತಾದರೆ ಇನ್ನೊಂದೆಡೆ ಅನುರಾಧೆಯ ಯೋಚನೆ ಬಂದು ಯಾವುದೂ ಬೇಡವೆನಿಸು ತ್ತಿತ್ತು. ಹೀಗಿರುವಾಗ ಮಾರ್ಚ್ ತಿಂಗಳ ಕೊನೆಯ ದಿನ ರಂಗನಾಥನ್‌ನಿಂದ ಒತ್ತಾಯದ ಕರೆ ಬಂದಿತು. ಅದರ ಅರ್ಥವೇನೆಂದು ತಿಳಿದ ಆಪಟೆ ಎಲ್ಲದಕ್ಕೂ ಸಿದ್ಧನಾಗಿಯೆ ಹೋದ. ರಂಗನಾಥನ್ ತಡೆಹಿಡಿದ ಸಿಡುಕಿನಿಂದಲೆ ಮಾತ ನಾಡುತ್ತಿದ್ದನೆಂಬುದು ಸ್ಪಷ್ಟವಾಗಿಯೆ ಇದ್ದಿತು.

"ಏನು, ಈಗ ಎಂಟು ಹತ್ತು ದಿನ ಸ್ಟೂಡಿಯೋಕ್ಕೆ ಬರಲೆ ಇಲ್ಲವಲ್ಲ?"

"ಹೌದು, ಬರಲಾಗಲಿಲ್ಲ—"

"ಚಿತ್ರಪಟದ ಕೆಲಸ ಮುಗಿದುಹೋಯಿತೆ?"

"ನನ್ನ ಮಟ್ಟಿಗೆ ಮುಗಿದಹಾಗೆಯೆ."

"ಅಂದರೆ?"

"ಅಂದರೆ ನನ್ನಿಂದ ಅದನ್ನು ಮುಗಿಯಿಸುವುದಾಗುವುದಿಲ್ಲ."

"ಅದೇನು ಆಪಟೆ, ಹೀಗೆ ಹೇಳುತ್ತಿದ್ದೀರಿ. ಹೀಗೆ ನಡುವೆಯೇ

ಒಮ್ಮಿಂದೊಮ್ಮೆ ಕೈಬಿಟ್ಟರೆ—"

"ಅದಕ್ಕೆ ನಾನೇನು ಮಾಡಲಿ? ಮುಖ್ಯ, ಕೆಲಸ ಮಾಡುವವರೆಲ್ಲ ಸಹಕರಿಸದಿದ್ದರೆ ನಾನೊಬ್ಬನೆಏನು ಮಾಡುವುದಕ್ಕಿದೆ? ಅಲ್ಲದೆ, ಅವರೆಲ್ಲರಿಗೂ ನಿಮ್ಮಿಂದ—"

"ನಮ್ಮಿಂದ ಏನಾಯಿತು?"

"ಅವರಿಗೆ ಬೇಕಾದಾಗ ರಜೆ, ಬೇಕಾದ ಸವಲತ್ತು ನೀವು ಕೊಡುತ್ತಿರುವಾಗ ಚಿತ್ರ ಹೇಗೆ ಮುಗಿಯುತ್ತದೆ? ಅಲ್ಲದೆ ನೀವೇ ಅವರು ಹೇಳಿದ ಹಾಗೆ ನಡೆದು ಅವರ ಕೈಯಲ್ಲಿರುವಾಗ ನನ್ನ ಮಾತು ಹೇಗೆ ನಡೆಯಬೇಕು?—"

"ಇದೆಲ್ಲ ಇಲ್ಲದ ಮಾತು, ಆಪಟೆ. ಇಷ್ಟು ದಿನ ಎಲ್ಲವೂ ಸರಿಯಾಗಿ ಇದ್ದದ್ದು ಈಗ ಒಮ್ಮೆಲೆ ಏನಾಯಿತು?"

"ಏನಾಯಿತು—ನಿಮಗೆ ಎಲ್ಲವೂ ಗೊತ್ತಿದೆ. ಸುಮ್ಮನೆ ಯಾಕೆ ಮತ್ತೆ ಮತ್ತೆ ಆ ಮಾತು?"

"ನನಗೆ ಯಾವುದೂ ಗೊತ್ತಿಲ್ಲ ಗೊತ್ತಾಗಬೇಕಾದದ್ದೂ ಇಲ್ಲ ನನಗೆ ಗೊತ್ತಿದ್ದದ್ದು ಒಂದೇ. ಈಗ ತಿಂಗಳ ಹಿಂದೆಯೆ ಮುಗಿಯಬೇಕಾಗಿದ್ದ ಚಿತ್ರ ಇಂದಿಗೂ ಅರ್ಧಮರ್ಧವಾಗಿ ಉಳಿದಿದೆ ಎಂಬುದು ಒಂದು ತಿಂಗಳ ವೆಚ್ಚವೆಲ್ಲ ವ್ಯರ್ಥವಾಗಿ ಮೈಮೇಲೆ ಬಿದ್ದಿದೆ—"

"ಅದಕ್ಕೆ ನಾನೇನು ಮಾಡಬಹುದು?"

"ನೀವೇನು ಮಾಡಬಹುದೆ? ಪೂರ್ತಿಯಾಗಿ ಚಿತ್ರದ ಹೊಣೆಯನ್ನು ತೆಗೆದುಕೊಂಡದ್ದು ಜ್ಞಾಪಕವಿದೆಯಷ್ಟೆ?"

ಮೊದಲೇ ತೀರ ಬೇಸರಗೊಂಡಿದ್ದ ಆಪಟೆ ರಂಗನಾಥನ್‌ನ ಮಾತಿನ ರೀತಿಯಿಂದ ಕೆರಳುತ್ತಿದ್ದ. ಆದರೂ ನೇರವಾದ ಜಗಳ ಬೇಡವೆಂದು ಶಾಂತನಾಗಿಯೇ ಹೇಳಿದ:

"ಹೌದು, ಜ್ಞಾಪಕವಿದೆ. ಆದರೆ ಇನ್ನುಮುಂದೆ ನನಗೆ ಸಾಧ್ಯವಿಲ್ಲ. ಆ ವರ್ಮಾನಿಂದ ಕೆಲಸ ಮಾಡಿಸುವುದು ಸಾಧ್ಯವಿಲ್ಲ. ಅಲ್ಲದೆ ಆತನಿರುವ ವರೆಗೆ ಕೆಲಸದ ಹೊಣೆಯನ್ನು ತೆಗೆದುಕೊಳ್ಳುವುದೂ ನನ್ನಿಂದಾಗುವುದಿಲ್ಲ."

"ಹಾಗಿದ್ದರೆ ಆತನನ್ನು ಬಿಡಿಸಿ ಚಿತ್ರವನ್ನು ಮತ್ತೆ ಮೊದಲಿನಿಂದ ಪ್ರಾರಂಭಿಸಬೇಕಾಯಿತು, ಅಲ್ಲವೆ? ಇದು ನೋಡಿ, ಆಪಟೆ, ನಿಮ್ಮ ವೈಯಕ್ತಿಕ

ವಿಷಯಗಳನ್ನು ಇಲ್ಲಿಯ ವ್ಯವಹಾರದಲ್ಲಿ ತೊಡಕಿಸಿ ಇಲ್ಲದ ತೊಂದರೆಯನ್ನು ಮಾಡಬೇಡಿರಿ, ದಯವಿಟ್ಟು—"

" ಈಗಿನ ಸಂದರ್ಭದಲ್ಲಿ ಅದು ನನ್ನಿಂದ ಸಾಧ್ಯವಿಲ್ಲ—"

" ನನಗೆ ಕೈತುಂಬ ಬೇರೆಯಾದ ಕೆಲಸಗಳಿದ್ದ ಸಂಧಿಯನ್ನು ಸಾಧಿಸಿ ನನ್ನನ್ನು ತೊಂದರೆಯಲ್ಲಿ ಸಿಕ್ಕಿಸಬೇಕೆಂದಲ್ಲವೆ ಈ ಎಲ್ಲ ಹಂಚಿಕೆ ?"

" ಅಂಥ ಯಾವ ಹಂಚಿಕೆಯನ್ನೂ ನಾನು ಹೂಡಿಲ್ಲ ನನ್ನಿಂದ ಈ ಚಿತ್ರಪಟದ ಕೆಲಸ ಇನ್ನುಮುಂದೆ ಸಾಧ್ಯವಿಲ್ಲ. ಇಷ್ಟೆ "

" ಹೌದೆ ? ಹಾಗಿದ್ದರೆ—"

ರಂಗನಾಥನ್ ತಡೆದ, ಹೇಳಬೇಕಾದ ಮಾತು ಕೊನೆಯ ಮಾತೇ ಆಗಿದ್ದರಿಂದ. ಹಣಕಾಸಿನ ವಿಚಾರದಲ್ಲಿ ತಮ್ಮಿಬ್ಬರ ನಡುವೆ ಬೆಳೆದಿದ್ದ ವಿರಸ-ವೈಮನಸ್ಯಗಳು ಆ ಕ್ಷಣಕ್ಕೆ ಮೊನೆಯಾಗಿ ಬಂದು ಎಲ್ಲವನ್ನೂ ಮುಗಿಸಿಯೆ ಬಿಡಬೇಕೆಂಬ ನಿರ್ಧಾರದಿಂದ ಹೇಳಿದ

" ಹಾಗಿದ್ದರೆ ನಿಮ್ಮ ಇಲ್ಲಿಯ ಎಲ್ಲ ಹಿತಸಂಬಂಧಗಳನ್ನೂ ಕಡಿದುಕೊಳ್ಳಬೇಕಾಗುತ್ತದೆ."

" ಆಗಬಹುದು ! ಅಷ್ಟನ್ನು ನಾನು ಎಂದಿಗೋ ತಿಳಿದಿದ್ದೇನೆ."

ಆಪಟೆನ ಮೊದಲಿಕೆಯ ಉತ್ತರದಿಂದ ರಂಗನಾಥನ್ ರೇಗಿದ, ಆದರೆ ಆಡಿ ತೋರಿಸಲಿಲ್ಲ. ಆತ ರೇಗಿದ್ದು ಆಪಟೆ ಹಾಗೆ ಉತ್ತರ ಹೇಳಿದನೆಂದಲ್ಲ, ಆತ ಬಿಟ್ಟು ಹೋಗುತ್ತಾನೆಂದೂ ಅಲ್ಲ. ಆತ ಹೊರಟುಹೋಗುವುದರಿಂದ—ಅದೂ ಒಂದು ಒಳ್ಳೆಯದಾದ ಚಿತ್ರಪಟವನ್ನು ಮುಕ್ಕಾಲುವಾಸಿ ಮುಗಿಯಿಸಿ ಅಷ್ಟಕ್ಕೆ ಬಿಟ್ಟು ಹೋಗುವುದರಿಂದ ತನಗಾಗಬಲ್ಲ ತೊಂದರೆ ನಷ್ಟಗಳ ಯೋಚನೆಯಿಂದಾಗಿ. ಆದರೆ ಆಪಟೆನ ನಿರ್ಧಾರವನ್ನು ಮನವೊಲಿಸಿ ಕದಲಿಸುವುದು ಸಾಧ್ಯವಾಗಿ ಕಾಣಲಿಲ್ಲ. ಮನವೊಲಿಸುವ ಮನಃಸ್ಥಿತಿಯಲ್ಲಿ ರಂಗನಾಥನ್‌ನೂ ಇರಲಿಲ್ಲ. ಆದರೆ ಒಂದು ನಿಮಿಷ ಆತ ಹೊರಟುಹೋಗುವುದರಿಂದ ಒದಗಬಹುದಾದ ಅನಾನುಕೂಲ-ತೊಂದರೆಗಳ ಯೋಚನೆಯಿಂದ ರೇಗಿಕೊಂಡಿದ್ದನಾದರೂ ಮರುಕ್ಷಣವೆ ಆತನಲ್ಲಿಯ ಹೆಮ್ಮೆ-ಆತ್ಮವಿಶ್ವಾಸಗಳು ಜಾಗೃತವಾಗಿ 'ಹೋದರೆ ಹೋಗಲಿ. ಹಗಲು ರಾತ್ರಿ ದುಡಿದು ಚಿತ್ರವನ್ನು ಮುಗಿಯಿಸುವೆ' ಎಂದುಕೊಂಡು ಕೊನೆಯಾಗಿ ಆತನನ್ನು ಕೇಳಿದ :

" ಇದೇ ನಿಮ್ಮ ಕೊನೆಯ ನಿರ್ಣಯವೆ ? "

" ನಾನೇನು ಹೇಳಲಿ ? "

" ಮತ್ತೆ ಯಾರು ಹೇಳಬೇಕು ? ನಾನು ಒಂದೇ ಮಾತನ್ನು ಹೇಳುವೆ. ಈ ಚಿತ್ರಪಟವನ್ನು ನೀವು ಮುಗಿಸುವಹಾಗಿಲ್ಲದಿದ್ದರೆ ನಾವು ಬಿಡುಗಡೆಯಾಗುವುದೇ ಒಳ್ಳೆಯದು. ಈಗಿದ್ದ ಹಾಗೆ ಇದ್ದುಕೊಂಡು ಸುಮ್ಮನೆ ಇಬ್ಬರೂ ಒದ್ದಾಡುವುದರಿಂದ ಯಾರಿಗೂ ಸುಖವಿಲ್ಲ "

" ಬಿಡುಗಡೆಯಾಗಲೇಬೇಕೆಂದಿದ್ದರೆ ಆಗಬಹುದು "

" ಆಗಲೇಬೇಕಾದದ್ದು ನಿಮ್ಮ ಮೂಲಕವೆ."

" ಯಾರ ಮೂಲಕವೇ ಯಾಕಾಗಲೊಲ್ಲದು—"

ಮುಂದೆ ಮಾತನಾಡಿ ಇಬ್ಬರಿಗೂ ಪ್ರಯೋಜನ ಕಾಣಲಿಲ್ಲ ಒಂದು ವಾರದ ಅವಧಿಯಲ್ಲಿ ಎಲ್ಲ ಲೆಕ್ಕಪತ್ರಗಳನ್ನೂ ಸಿದ್ಧಗೊಳಿಸಿ ಇಡುವುದಾಗಿ ರಂಗನಾಥನ್ ತಿಳಿಸಿದ. ಒಂದು ಮಾತನ್ನೂ ಆಡದೆ ಆಪಟೆ ಅಲ್ಲಿಂದ ಹೊರಬಿದ್ದ. ಶಾಕುಂತಲ ಚಿತ್ರದ ಯೋಜನೆಯನ್ನು ಮಾಡಿದಾಗಿನ ಆತನ ಉತ್ಸಾಹ ಎದೆಯನ್ನು ಕೊರೆಯಿತು. ಅದು ಹೀಗೆ ಕೊನೆಗೊಳ್ಳಬಹುದೆಂದು ಆತ ಎಂದಿಗೂ ಎಣಿಸಿರಲಿಲ್ಲ. ' ಏನಾದದ್ದು ಆಯಿತು, ಆದದ್ದೆಲ್ಲವೂ ಒಳ್ಳೆಯದಕ್ಕಾಗಿಯೆ ಆಗುತ್ತದೆ. ಈತನ ಹೊರತು ನನಗೇನು ಬೇರೆ ಗತಿಯೆ ಇಲ್ಲವೆ ? ಬೇರೆ ದಾರಿಗಳೆ ಇಲ್ಲವೆ ? ' ಎಂಬ ಆತ್ಮಾಭಿಮಾನದಲ್ಲಿಯೆ ಅಲ್ಲಿಂದ ಕಾಲ್ತೆಗೆದ.

ರಂಗನಾಥನ್‌ನ ಜೊತೆಯಲ್ಲಿ ಮಾತನಾಡಲು ಬರುವ ಮುಂಚಿತವಾಗಿ ಆಪಟೆ ಮದನಲಾಲಸ ಯೋಜನೆಯನ್ನು ಕಾರ್ಯರೂಪಕ್ಕಿಳಿಸುವ ನಿರ್ಧಾರದಿಂದಲೆ ಬಂದವನಾದ್ದರಿಂದ ಅಷ್ಟೊಂದು ಆತ್ಮವಿಶ್ವಾಸದಿಂದ, ನಿಶ್ಚಿಂತೆಯಿಂದ ಮಾತನಾಡುವುದು ಸಾಧ್ಯವಾಗಿತ್ತು. ಮಾತು ಮುಗಿದಾಗ ಮುಂದೆ ಮಾಡಬೇಕಾದ ಕೆಲಸಗಳಿಗೆ ತೊಡಗುವುದೇ ಸರಿಯೆಂದುಕೊಂಡು ಸ್ಟುಡಿಯೋದಿಂದ ಹೊರಬೀಳುವ ಮೊದಲು ಚಿತ್ರಸಂಯೋಜಕನಾದ ಕಾಮತ್‌ನನ್ನೂ, ಚಿತ್ರಗ್ರಾಹಕ(ಕ್ಯಾ ಮೆ ರಾ ಮ ನ್)ನಾದ ಚೌಧರಿಯನ್ನೂ ಕಂಡು ಆ ದಿನ ಸಾಯಂಕಾಲವೇ ಅವರಿಬ್ಬರೂ ತಪ್ಪದೆ ತನ್ನ ಮನೆಗೆ ಬರಬೇಕೆಂದು ಹೇಳಿ ಹೊರಟಿದ್ದ. ಅವರಿಬ್ಬರೂ ಉತ್ತಮ ಕೆಲಸಗಾರರು, ಅವರಿಬ್ಬರು ತನ್ನೆಡೆಗೆ ಬರುವುದಾದರೆ ಎಷ್ಟೋ ಕೆಲಸವಾಯಿತೆಂದುಕೊಂಡಿದ್ದ ಆಪಟೆಗೆ ಅವರು

ಕೆಲಮಟ್ಟಿಗೆ ಎಂದಿನಿಂದಲೂ ಹಸ್ತಕರಾಗಿಯೆ ಇದ್ದುದರಿಂದ ಅವರನ್ನು ಮಾತನಾಡಿಸುವುದು ಕಷ್ಟವಾಗಿರಲಿಲ್ಲ ಇದಕ್ಕೆ ಮುಖ್ಯವಾದ ಕಾರಣಗಳೆಂದರೆ ಕಾಮತ್ ತೀರ ನೇರವಾದ ಮನುಷ್ಯ, ಸರಲ ಸ್ವಭಾವದವ. ರಂಗನಾಥನ್‌ನ ಅಂಕು ಡೊಂಕು ದಾರಿಗಳನ್ನು ಒಪ್ಪಲಿಕ್ಕೂ ಆಗದೆ, ತಡೆಯಲಿಕ್ಕೂ ಆಗದೆ ನಿರ್ವಾಹವಿಲ್ಲದೆ ಕೆಲಸ ಮಾಡುತ್ತಿದ್ದ. ಅಲ್ಲದೆ, ದೊಡ್ಡ ಸಂಸಾರ—ಅದಕ್ಕೆ ಹೊಂದಿಕೊಂಡಿದ್ದ ನೂರಾರು ತಾಪತ್ರಯಗಳು. ಹೀಗಾಗಿ ಆಪಟೆನಿಂದ ಹತ್ತಾರು ಸಂದರ್ಭಗಳಲ್ಲಿ ಸಹಾಯ ಪಡೆದಿದ್ದ ಕಾಮತ್ ಸಂಸಾರದ ತಾಪತ್ರಯಗಳಿಂದಾದರೆ ಚೌಧರಿ ತನ್ನ ನೂರಾರು ವ್ಯಸನಗಳಿಂದಾಗಿ ಆಪಟೆನ ಹಂಗಿನಲ್ಲಿದ್ದ ಉತ್ತಮ ಕೆಲಸಗಾರ. ಒಂದು ರಾತ್ರಿಯ ಕುಡಿತಕ್ಕೆ ಬೇಕಾದ ದುಡ್ಡನ್ನು ಒದಗಿಸಿದರೆ ಬೇಕಾದುದನ್ನು ಮಾಡಬಲ್ಲವನಾಗಿದ್ದ ಆತ ಸದಾ ಆಪಟೆನಿಗಾಗಿ ದುಡಿಯಲು ಸಿದ್ಧ. ಹೀಗಾಗಿ ಅವರಿಬ್ಬರೂ ಆಪಟೆನ ಸೂಚನೆಯನ್ನು ಕೂಡಲೆ ಒಪ್ಪಿದರು. ಒಳಗಿನಿಂದಲೆ ಆಪಟೆ ರಂಗನಾಥನ್‌ರ ನಡುವೆ ನಡೆದಿದ್ದ ತಿಕ್ಕಾಟದ ಸಮಾಚಾರ ಅವರಿಗೆ ತಿಳಿಯದ ವಿಷಯವಾಗಿರಲಿಲ್ಲವಾದ್ದರಿಂದ ತಮಗಾದರೂ ಇದೊಂದು ಒಳ್ಳೆಯ ಸಂಧಿ ಎಂದೂ ನಂಬಿರಬಹುದು. ಕಾಮತ್ ಅಲ್ಲದಿದ್ದರೂ ಚೌಧರಿ ಖಂಡಿತವಾಗಿಯೂ ಹಾಗೆ ತಿಳಿದಿದ್ದ.

'ಮದನ್ ಪಿಕ್ಚರ್ಸ್' ಯೋಜನೆಯಲ್ಲಿ ಮುಳುಗಿದ ಆಪಟೆ ಮುಂದಿನ ಹತ್ತು ಹನ್ನೆರಡು ದಿನಗಳಲ್ಲಿ ಎಲ್ಲವನ್ನು ಹೆಚ್ಚುಕಡಿಮೆ ಸಿದ್ಧಗೊಳಿಸಿದ. ಚೌಧರಿ ಕಾಮತರು ಬಂದು ಬಿಡಲು ಒಪ್ಪಿದ್ದರು. ಅಲ್ಲದೆ ಇನ್ನೂ ನಾಲ್ಕಾರು ಜನರನ್ನು ಹುರಿದುಂಬಿಸಿ ಕರೆದುಕೊಂಡು ಬರುವುದಾಗಿಯೂ ಮಾತು ಕೊಟ್ಟಿದ್ದರು. ಮದನಲಾಲನ ಉತ್ಸಾಹಕ್ಕಂತೂ ಪಾರವೇ ಉಳಿದಿರಲಿಲ್ಲ ವಿಲೆಪಾರ್ಲೆಯಲ್ಲಿ ತಾನಿರುತ್ತಿದ್ದ ಬಂಗಲೆಗೆ ಸಮೀಪವಾಗಿಯೆ ಇದ್ದ ತನ್ನ ಒಂದು ಗೋಡೌನನ್ನು ಉಪಯೋಗಿಸಿಕೊಂಡು ಎಲ್ಲವನ್ನು ಏರ್ಪಾಡು ಮಾಡಿಕೊಳ್ಳುವ ತನಕ ಬೇರೆ ಸ್ಟುಡಿಯೋದಲ್ಲಿ ಬಾಡಿಗೆಯಿಂದ ಕೆಲಸ ಮಾಡಿಸತಕ್ಕದ್ದೆಂದು ನಿರ್ಣಯವಾಗಿತ್ತು. ಆದರೆ ತನ್ನದೇ ಸ್ಟುಡಿಯೊ ಸ್ಥಾಪಿಸದ ಹೊರತು ಆಪಟೆನಿಗೆ ಸಮಾಧಾನವಿರಲಿಲ್ಲ. ಬೇರೆಯವರಲ್ಲಿ ಬಾಡಿಗೆಯಿಂದ ಕೆಲಸ ಮಾಡಿಸಿಕೊಂಡರೆ ವ್ಯರ್ಥವಾಗಿ ದುಡ್ಡು ಹಾಳಾಗುವುದಲ್ಲದೆ ವೇಳೆಗೆ ಸರಿಯಾಗಿ ಕೆಲಸಗಳೂ ನಡೆಯುವುದಿಲ್ಲವೆಂದು ಮುಂತಾಗಿ ಮದನಲಾಲನಿಗೆ ತಿಳಿಸಿ ಹೇಳಿ ಆತನಿಂದ ಹಣದ

ಭರವಸೆಯನ್ನು ಪಡೆದು ಯಂತ್ರೋಪಕರಣಗಳಿಗಾಗಿ ಓಡಾಡಿದ. ಒಮ್ಮೆ ಮದ್ರಾಸ್, ಕಲಕತ್ತೆಯ ವರೆಗೆ ಹೋಗಿಯೂ ಬರಬೇಕಾಗಿದ್ದಿತು. ಈ ಎಲ್ಲ ಓಡಾಟ ಉತ್ಸಾಹಗಳಲ್ಲಿ ಅನುರಾಧೆಯ ಪ್ರಕರಣ ಎಷ್ಟೋ ಮಟ್ಟಿಗೆ ಮನಸ್ಸಿನಿಂದ ಮರೆಯಾಗಿತ್ತು ಇಲ್ಲವೆಂದರೂ ಮನೆಯಲ್ಲಿ ಆಕೆ ಎದುರಿಗಿದ್ದಾಗ ಮನಸ್ಸು ಮುದುಡಿಕೊಳ್ಳುತ್ತಿತ್ತು. ಮೊದಲಿನ ಸರಸವಂತೂ ಎಲ್ಲಿಯೊ ಮಾಯವಾಗಿತ್ತು ಕೈತುಂಬ ಕೆಲಸಗಳು ಇದ್ದದ್ದು ಆತನಿಗೆ ಅನುಕೂಲವೆ ಆಗಿತ್ತು ಅದಕ್ಕೆಂದು ಆತ ಬೇರೊಂದು ಯೋಚನೆಯನ್ನು ಹೂಡಿದ ಎಲ್ಲವೂ ಸಿದ್ಧವಾಗಬೇಕಾದರೆ ಕನಿಷ್ಠ ಜೂನ್ ತಿಂಗಳ ವರೆಗಾದರೂ ವೇಳೆ ಬೇಕು ಅಲ್ಲಿಯವರೆಗೆ ತನಗೆ ಅಲ್ಲಿ ಇಲ್ಲಿ ಹೋಗಬೇಕಾಗುತ್ತದೆಯಾದ್ದರಿಂದ ಅನುರಾಧೆ ಒಂದೆರಡು ತಿಂಗಳು ತನ್ನ ತವರಿಗೆ ಹೋಗಬೇಕೆಂದು ಹೇಳಿದ. ಈ ಮಾತು ಮೊದಲು ಬಂದಾಗ ಅನುರಾಧೆ ಗಾಬರಿಯಾಗಿದ್ದಳು—ಆಪಟೆ ತನ್ನನ್ನು ಬಿಟ್ಟೇ ಬಿಡುವನೊ ಎಂದು ಆದರೆ ತಿಳಿಹೇಳಿದನಂತರ ಒಪ್ಪಿದಳು. ಅಂದಿನ ಪ್ರಸಂಗದನಂತರ 'ಮೆತ್ತಗಾಗಿ' ಹೋಗಿದ್ದ ಆಕೆ ಆಪಟೆ ಏನು ಹೇಳಿದರೂ ಕೇಳಬೇಕಾಗಿದ್ದಿತು, ಕೇಳುತ್ತಿದ್ದಳು. ಹೀಗಾಗಿ ಮುಂದೆ ಒಂದೆರಡು ದಿನಗಳಲ್ಲಿ ಅನುರಾಧೆ ಮುಂಬಯಿಯಿಂದ ಹೊರಟುಹೋಗಿದ್ದಳು ಈ ಸಮಾಚಾರ ಮೋಹಿನಿಗೆ ತಿಳಿದದ್ದು ಆಕೆ ಹೊರಟುಹೋದ ಮರುದಿನ. ಅದೂ ಆಪಟೆ ಆಕೆಗೆ ಬರೆದ ಒಂದು ಕಾಗದದಿಂದ.

ಆ ಕಾಗದವನ್ನು ತೆಗೆದುಕೊಂಡು ಮರುದಿನ ಮುಂಜಾನೆ ಸ್ಟುಡಿಯೋಕ್ಕೆ ಬಂದಾಗ ರಂಗನಾಥನ್ ತುಂಬಾ ಯೋಚನೆಯಲ್ಲಿ ಮುಳುಗಿದ ಹಾಗಿದ್ದ. ಆಪಟೆ ಬಿಟ್ಟುಹೋದಂದಿನಿಂದ 'ಶಾಕುಂತಲ'ವನ್ನು ಕೂಡಲೆ ತನ್ನ ಕೈಯಲ್ಲಿ ತೆಗೆದುಕೊಂಡು ಹೆಚ್ಚುಕಡಿಮೆ ಮುಗಿಯಿಸುವುದರಲ್ಲಿದ್ದ. ಕೈತುಂಬ ಕೆಲಸ ವಿದ್ದಾಗ ಆತ ಎಂದಿಗೂ ತಲೆ ಹಿಡಿದು ಕುಳಿತಿರುವವನಲ್ಲವೆಂಬುದನ್ನು ತಿಳಿದ ಮೋಹಿನಿ ಬಂದ ಕೂಡಲೆ ತನ್ನ ಸಮಸ್ಯೆಯನ್ನು ಮರೆತು ಕೇಳಿದಳು :

" ಏನು ತೊಂದರೆ ? ಗಾಢ ಯೋಚನೆಯಲ್ಲಿ ಮುಳುಗಿದ ಹಾಗಿದೆ—"

" ಬಂದೆಯಾ ? ಗುಡ್. ಅದನ್ನೇ ಯೋಚಿಸುತ್ತಿದ್ದೆ."

" ಏನಾಯಿತು ಈಗ ? "

" ಅನುರಾಧೆ ಕೆಲಸ ಮಾಡಿದ ಭಾಗದಲ್ಲಿಯ ಮೂರು ನಾಲ್ಕು ಶಾಟ್ಸ್

ಪೂರ್ತಿಯಾಗಿ ಪ್ರೊಸೆಸಿಂಗ್‌ನಲ್ಲಿ ಕೆಟ್ಟುಹೋಗಿವೆ ಎಂದು ಕಾಮತ್ ರಿಪೋರ್ಟ್ ಮಾಡಿದ್ದಾನೆ."

"ಹಾಗಾದರೆ—"

"ಹಾಗಾದರೆ ಏನು? ಅವನ್ನೆಲ್ಲ ಮತ್ತೊಮ್ಮೆ ತೆಗೆದುಕೊಳ್ಳಬೇಕು"

"ಆದರೆ ಅನುರಾಧೆ ಎಲ್ಲಿದ್ದಾಳೆ? ಆಕೆ ಮೊನ್ನೆಯೇ ಊರಿಗೆ ಹೊರಟು ಹೋದಳಂತೆ ಅಲ್ಲದೆ ಆಕೆ ಇಲ್ಲಿ ಇದ್ದರೂ ಮತ್ತೆ ಬಂದು ಕೆಲಸ ಮಾಡುವುದೂ ಸಾಧ್ಯವಿಲ್ಲ."

"ಅದೇ ನನಗೀಗ ಯೋಚನ ಅನುರಾಧೆಯ ಬದಲಾಗಿ ಬೇರೆಯೊಬ್ಬ ರನ್ನು ಹುಡುಕಿ ಮತ್ತೆ ಮೊದಲಿನಿಂದ ಅಷ್ಟೂ ಭಾಗ ಶೂಟ್ ಮಾಡಬೇಕಾ ಯಿತು."

"ಮಾಡಬಹುದಲ್ಲವೆ? ಹಾಗೆಷ್ಟು ಶಾಟ್ಸ್ ಇದೆ ಹೆಚ್ಚಾದರೆ ಹದಿನೈದು ಇಪ್ಪತ್ತಾಗಬಹುದು."

"ಅದು ದೊಡ್ಡ ಮಾತೇನೂ ಅಲ್ಲ ಆದರೆ ಇದು ಹೇಗೆ ನಡೆಯಿತು? ಇಲ್ಲಿ ಯಾವುದೊ ಸಂಚು ನಡೆದಹಾಗಿದೆ ಈ ಮೊದಲು ಪ್ರೊಸೆಸಿಂಗ್‌ನಲ್ಲಿ ಎಂದಿಗೂ ಕೆಡದೆ ಇದ್ದದ್ದು ಈಗಲೆ ಹೇಗೆ ಕೆಟ್ಟುಹೋಯಿತು? ಅದೂ ಅನುರಾಧೆ ಇದ್ದ ಭಾಗಗಳೇ ಕೆಡಬೇಕೆಂದರೆ? ಇದೆಲ್ಲ ಆಪಟೆಯ ಕಾರಸ್ಥಾನ. ನೀನು ನೋಡು ತ್ತಿರು ಬೇಕಾದರೆ. ಇನ್ನು ತಿಂಗಳೊಪ್ಪತ್ತಿನಲ್ಲಿ ನಮ್ಮಲ್ಲಿಯ ನಾಲ್ಕಾರು ಕೆಲಸಗಾರರು ಬಿಟ್ಟುಹೋಗುತ್ತಾರೆಯೊ ಇಲ್ಲವೊ—"

"ಬಿಟ್ಟುಹೋಗುತ್ತಾರೆಯೆ? ಅದೇಕೆ?"

"ಆಪಟೆ ಬೇರೆ ಕಂಪನಿ ತೆಗೆಯುವುದರಲ್ಲಿದ್ದಾನೆ ನಮ್ಮಲ್ಲಿಂದ ನಾಲ್ಕಾರು ಜನರನ್ನು ಸಹಜವಾಗಿಯೆ ಆತ ಹಾರಿಸಿಕೊಂಡು ಹೋಗಬಹುದು. ಅದರಲ್ಲಿ ಆ ಚೌಧರಿ, ಧ್ವನಿಲೇಖಕ ದಾಂಡೇಕರ್, ಮೇಕಪ್‌ನಲ್ಲಿ ಒಬ್ಬಿಬ್ಬರು, ಪ್ರೊಸೆಸಿಂಗ್‌ನಲ್ಲಿಯ ಕುಲಕರ್ಣಿ ಇವರು ಎಂದಿಗೂ ಆತನ ಹಿಂದೆಯೆ ಇರು ತ್ತಾರೆ. ಈಗ ಅನುರಾಧೆಯ ಶಾಟ್ಸ್ ಕೆಟ್ಟದ್ದು ಆ ಕುಲಕರ್ಣಿಯಿಂದಲೆ— ಮಾಡಲಿ ನೋಡುವ, ಏನೇನು ಮಾಡುತ್ತಾರೆ. ನಾನೂ ಹದಿನೈದು ವರ್ಷ ಹಾಕಿದ್ದೇನೆ ಈ ವ್ಯವಸಾಯದಲ್ಲಿ."

ರಂಗನಾಥನ್‌ನ ಈ ಎಲ್ಲ ತೊಂದರೆಗಳಲ್ಲಿ ಮೋಹಿನಿಗೆ ತನಗೆ ಬಂದ

ತೊಂದರೆ ದೊಡ್ಡದಾಗಿ ಕಾಣಲಿಲ್ಲ. ಆದರೂ ತಕ್ಷಣ ಅದರ ನಿವಾರಣೆಯಾಗಲೇ ಬೇಕಿತ್ತು. ಹೀಗೆಂದೇ ಒಂದೆರಡು ನಿಮಿಷ ಸುಮ್ಮನಾಗಿದ್ದು ಅದನ್ನು ಹೇಳ ಬೇಕೆಂದು ದಾರಿ ಕಡಿಯತೊಡಗಿದಳು.

" ಅಂತೂ ಆಪಟೆ ಬಿಟ್ಟುಹೋದದ್ದು ಸ್ವಲ್ಪದರಲ್ಲಿಯೆ ಮುಗಿಯುವ ಹಾಗೆ ಕಾಣುವುದಿಲ್ಲ."

" ಏನು ಮಾಡುತ್ತಾನೆ ? ಹೆಚ್ಚಾದರೆ ನಾಲ್ಕು ಜನರನ್ನು ಹಾರಿಸಿಕೊಂಡು ಹೋಗಬಹುದು. ಹೋಗಬೇಕು ಎಂದು ಮನಸ್ಸಿದ್ದವರನ್ನು ಇಲ್ಲಿಯೆ ಕಟ್ಟಿಟ್ಟು ಸರಿಯಾಗಿ ಕೆಲಸ ತೆಗೆದುಕೊಳ್ಳುವುದು ಸಾಧ್ಯವೆ ? ದುಡ್ಡಿನ ಆಸೆಗಾಗಿ ಬೇಕಾದಲ್ಲಿ ಹೋಗಲು ಸಿದ್ಧರಿದ್ದವರು ಇದ್ದೇ ಇರುತ್ತಾರೆ ಅದರಲ್ಲಿಯೂ ಈ ನಮ್ಮ ವ್ಯವಸಾಯಕ್ಕೆ ಅಂಟಿಕೊಂಡ ಸಾಂಕ್ರಾಮಿಕ ಜಾಡ್ಯ ಇದು—"

" ಇಲ್ಲಿಯಕಿಂತಲೂ ಹೆಚ್ಚಿಗೆ ದುಡ್ಡು ಕೊಡುತ್ತಾರೆಯೆ ? "

" ಅಂತೆಯೆ ಅವರು ಹೋಗುವುದು. ಹೋಗದಿರುತ್ತಾರೆಯೆ ? ಈಗ ವರ್ಮಾ ಯಶೋನುತಿಯರನ್ನು ನಾವು ತಂದದ್ದು ಹೇಗೆ ? ಇದೆಲ್ಲ ನಡೆಯ ತಕ್ಕದ್ದೆ. ನಿತ್ಯವ್ಯವಹಾರ—"

ಎಂದು ಒಂದರೆನಿಮಿಷ ತಡೆದು ನಕ್ಕು ಹೇಳಿದ

" ನಾಳೆ ಒಂದೆರಡು ಚಿತ್ರಗಳಲ್ಲಿ ಕೆಲಸ ಮಾಡಿ ಸ್ಟಾರ್ ಎಂದು ಹೆಸರು ಗಳಿಸಿದೆಯೆಂದರೆ ನೀನಾದರೂ ಹಾಗೆಯೆ ಮಾಡಬಹುದು—"

ಮಾತನ್ನು ರಂಗನಾಥನ್ ನಕ್ಕು ಹೇಳಿರದಿದ್ದರೆ ಮೋಹಿನಿ ನೊಂದು ಕೊಳ್ಳಬಹುದಿತ್ತು. ಆದರೆ ತಾನು ಅಂಥ ಪದವಿಗೇರಬಹುದೆಂಬ ವಿಶ್ವಾಸ ಆಗಲೆ ಆಕೆಯಲ್ಲಿ ಮೂಡಿದ್ದರೂ ಅದೆಲ್ಲವೂ ಸಾಧ್ಯವಾದದ್ದು ರಂಗನಾಥನ್‌ನ ಆಸ್ಥೆಯಿಂದಲೆ ಎಂಬುದನ್ನು ಗಟ್ಟಿಯಾಗಿ ತಿಳಿದುಕೊಂಡಿದ್ದರಿಂದ ತಾನು ಎಂದಿಗೂ ಅಷ್ಟು ಕೃತಘ್ನಳಾಗಿ ನಡೆದುಕೊಳ್ಳಲಾರೆ ಎಂಬುದನ್ನು ಹೇಳ ಬೇಕೆಂದೊ ತನ್ನ ವಿಷಯವನ್ನು ಪ್ರಸ್ತಾಪಿಸಲು ಅವಕಾಶ ದೊರಕಿತೆಂದೊ ಮೋಹಿನಿ ಹೇಳಿದಳು

" ನಾನು ಸ್ಟಾರ್ ಎಂದು ಮೆರೆಯಬಹುದಾದಾಗ ಅದನ್ನು ಯೋಚನೆ ಮಾಡೋಣ ಈಗ ಸದ್ಯಕ್ಕೆ ಬೇರೆಯಾದ ಯೋಚನೆಯೊಂದನ್ನು ಅರ್ಜೆಂಟಾಗಿ ಮಾಡಬೇಕಾಗಿದೆ."

" ಏನು? ಆಪಟೆ ನಿನ್ನನ್ನು ಸೆಕ್ರೆಟರಿಯಾಗಬೇಕೆಂದಿದ್ದಾನೆಯೆ ?"

" ಸರಿ. ಸೆಕ್ರೆಟರಿಯಾಗಬೇಕೆಂದು ಕೇಳಿಲ್ಲ. ಕೂಡಲೆ ಮನೆಯಿಂದ ಹೊರಡಬೇಕು ಎಂದು ಹೇಳಿದ್ದಾನೆ" ಎಂದು ಆಪಟೆ ಬರೆದ ಕಾಗದವನ್ನು ಕೈಗಿತ್ತಳು. ಮಾಮೂಲಿಯಾಗಿ ಬರೆದ ಕಾಗದ ಅದು. ಎರಡು ಮೂರು ತಿಂಗಳು ಅನುರಾಧೆ ಊರಲ್ಲಿರುವುದಿಲ್ಲವೆಂದೂ, ಆಕೆ ಇಲ್ಲದೆ ಮೋಹಿನಿ ಅಲ್ಲಿರುವುದು ತನಗೆ ಸರಿಯೆನಿಸುವುದಿಲ್ಲವಾದ್ದರಿಂದ ಕೂಡಲೆ ಕೋಣೆಯನ್ನು ಬಿಡುವ ಏರ್ಪಾಡು ಮಾಡಬೇಕೆಂದೂ ಬರೆದಿದ್ದ. ಆ ಕಾಗದವನ್ನೋದಿ ರಂಗನಾಥನ್ ಮೋಹಿನಿಯ ಮುಖವನ್ನು ನೋಡಿ ಮುಗುಳುನಗೆ ನಕ್ಕ. ಆ ನೋಟದ ಅರ್ಥ ಮೋಹಿನಿಗೆ ಆಗದಿರುವುದು ಅಸಾಧ್ಯವಿತ್ತು. ಆ ನೋಟವೇ ಮಾತಾಗಿ ಬಂದಂತೆ ಹೇಳಿದ:

" ದ್ಯಾಟ್ಸ್ ಗುಡ್ ನ್ಯೂಸ್ ! "

" ಹೌದೆ ? ನನ್ನ ತೊಂದರೆಗಳೆಲ್ಲ ಯಾವಾಗಲೂ ನಿಮಗೆ ಗುಡ್ ನ್ಯೂಸ್ ಎಂದು ಕಾಣುತ್ತದೆ ! "

" ಯಾಕೊ ? ಅಂಥದೇನಾಯಿತು, ಈಗ ? "

" ಆ ದಿನ ನನ್ನ ಶಾಲೆಯ ಕೆಲಸ ಹೋಯಿತು ಎಂದಾಗಲೂ ಹೀಗೆಯೇ ಹೇಳಿದ್ದಿರಿ."

" ಹೇಳಿದ್ದಕ್ಕೆ ಕೆಡಕೇ ಆಯಿತಲ್ಲವೆ ನಿನಗೆ ? ನೂರಿಪ್ಪತ್ತಕಾಗಿ ಹಗಲು ರಾತ್ರಿ ದುಡಿದು, ಅನ್ನಿಸಿಕೊಂಡು, ಗೋಳಾಡುತ್ತಿದ್ದವಳು ಏನೋ ಅದು ಇದು ಎಂದು ಕೆಲಸ ಮಾಡಿಕೊಂಡು ತಿಂಗಳಿಗೆ ಮುನ್ನೂರು ಹೊಡೆಯುತ್ತೀ. ಅಲ್ಲದೆ, ಚಿತ್ರದಲ್ಲಿ ಕೆಲಸ ಮಾಡುತ್ತಿದ್ದ ನೆಪಕ್ಕಾಗಿ ಮುನ್ನೂರು ಬೇರೆ—"

" ಮುನ್ನೂರಾಯಿತು, ಆರು ನೂರಾಯಿತು, ಇರಲಿಕ್ಕೊಂದು ಮನೆ ಇಲ್ಲದಿದ್ದರೆ ಏನು ಮಾಡುವುದು ಅದನ್ನೆಲ್ಲ ತೆಗೆದುಕೊಂಡು? ಮೂರು ದಿನದಲ್ಲಿ ಆಪಟೆ ನನ್ನ ಸಾಮಾನು ಹೊರಗೆ ಸಾಗಿಸುತ್ತಾನೆ ಆಗ ತಿಳಿಯುತ್ತದೆ ಈ ಆರುನೂರಿನ ಬೆಲೆ ! "

" ಆಪಟೆ ತಾನಾಗಿಯೇ ನಿನ್ನ ಸಾಮಾನು ಸಾಗಿಸುತ್ತಾನೆಯೆ ? "

ರಂಗನಾಥನ್‌ನ ಮಾತಿನ ಹೊಳವು ಮೋಹಿನಿಗೆ ತಿಳಿಯಲಿಲ್ಲ. ಅಂತೆಯೆ ಹೇಳಿದಳು :

" ಸಾಗಿಸುತ್ತಾನೆ ಎಂದರೆ ಮನೆಯಿಂದ ಹೊರಗಿಡುತ್ತಾನೆ. ಆಮೇಲೆ—"

" ಆಮೇಲೆ ಏನೂ ತೊಂದರೆಯಿಲ್ಲ ನಾನು ಒಂದು ವಿಳಾಸ ಕೊಡುತ್ತೇನೆ. ಹೊರಗಿಡುವುದರ ಬದಲು ಆ ವಿಳಾಸಕ್ಕೆ ಸಾಗಿಸಿಬಿಡು ಎಂದು ಹೇಳು!" ಎಂದು ಗಟ್ಟಿಯಾಗಿ ನಕ್ಕ. ಸ್ಟುಡಿಯೋದ ಎಲ್ಲ ತೊಂದರೆ-ತಂಟೆಗಳನ್ನು ರಂಗನಾಥನ್ ಆ ಕ್ಷಣಕ್ಕೆ ಮರೆತಿದ್ದ ಮೋಹಿನಿಗೆ ಆತನ ಮಾತಿನ ಅರ್ಥವಾಯಿತು. ಆದರೂ ತಿಳಿಯದವಳೆಂಬಂತೆ ನಟಿಸಿ ಕೇಳಿದಳು.

" ಯಾವ ವಿಳಾಸ ಅದು?"

" ಯಾವ ವಿಳಾಸ ಗೊತ್ತಿಲ್ಲವೆ?"

" ನಿಮ್ಮ ಮನಸ್ಸಿನಲ್ಲಿಯದು ನನಗೆ ಹೇಗೆ ಗೊತ್ತಾಗಬೇಕು?"

" ಅಬ್ಬಾ! ಎಲ್ಲವೂ ಗೊತ್ತಾಗುತ್ತದೆ ಇಷ್ಟು ಗೊತ್ತಾಗುವುದಿಲ್ಲವೆ?"

" ಇಲ್ಲ, ನಿಜವಾಗಿಯೂ ಗೊತ್ತಾಗಲಿಲ್ಲ"

" ಆದೀತು, ಆದೀತು, ತಾನಾಗಿಯೆ" ಎಂದು ಮತ್ತೆ ಅದೇ ನೋಟ, ಅದೇ ನಗೆಯನ್ನು ಬೀರಿದ

" ಹೇಳಬಾರದೆ?" ಎಂದು ಮೋಹಿನಿಯು ಹುಸಿಮುನಿಸು

" ಹೇಳಲೆ?—"

" ಹೇಳಬೇಡಿ. ನ ನ ಗೆ ಬೇರೆ ಎಲ್ಲಿಯಾದರೂ ಮನೆ ಸಿಕ್ಕುವ ವರೆಗೆ ಕೆಲಸಕ್ಕೆ ಮಾತ್ರ ಬರುವುದಾಗುವುದಿಲ್ಲ ಹಾಗಿದ್ದರೆ."

" ಎಷ್ಟು ದಿವಸ ಆಗಬಹುದು?"

" ಯಾರಿಗೆ ಗೊತ್ತು? ಮುಂಬಯಿಯಲ್ಲಿ ಮನೆ ಸಿಕ್ಕುವುದು ಅಷ್ಟೇನೂ ಸುಲಭವಲ್ಲ."

" ಮತ್ತೆ ಆಪಟೆ ಮೂರು ದಿನದಲ್ಲಿ ಹೊರಡಬೇಕು ಎಂದಿದ್ದಾನಲ್ಲವೆ?"

" ಅದಕ್ಕೇ ತಮ್ಮನ್ನು ಕೇಳಿದ್ದು—ಹೇಗೆ ಎಂದು!"

" ಅದಕ್ಕೇ ತಮಗೆ ಹೇಳಿದ್ದು—ಹೀಗೆ ಎಂದು!"

" ಏನದು ತಾವು ಹೇಳಿದ್ದು?"

" ತಮ್ಮ ಸಾಮಾನುಗಳನ್ನು ವಿನ್ಸೆಂಟ್ ರೋಡನಲ್ಲಿಯ ಪ್ರಿಮ್‌ರೋಜ್ ವಿಲ್ಲಾಕ್ಕೆ ಸಾಗಿಸಬೇಕು ಎಂದು."

" ಹೇಳಿದಿರಾ ಹಾಗೆ?"

"ಹೇಳದಿದ್ದರೂ ತಿಳಿಯಬೇಕಿತ್ತು."

"ತಿಳಿಯಿತು. ಆದರೂ—"

"ಆದರೂ ಏನು ? ನನ್ನಲ್ಲಿಯೂ ಒಂದು ಗೆಸ್ಟ್‌ರೂಮ್ ಇದೆ."

"ಗೆಸ್ಟ್‌ರೂಮ್ ಇದ್ದರೂ 'ಅನುರಾಧೆ' ಇಲ್ಲವಲ್ಲ."

"ಆದರಿಂದೇನು ಅನಾನುಕೂಲವಾಗಬೇಕಿದೆ ? ಇದ್ದರೆಯೆ ಅನಾನುಕೂಲ ! "

"ಅಲ್ಲವೆ ? "

ಎಂದು ಕೈಯಲ್ಲಿದ್ದ ಯಾವುದೊ ಒಂದು ಕಾಗದವನ್ನು ರಂಗನಾಥನ್‌ನ ಮೈಮೇಲೆ ಎಸೆದಳು. ಆದರ ಅರ್ಥವನ್ನು ರಂಗನಾಥನ್‌ನಿಗೆ ಬಿಡಿಸಿ ಹೇಳಬೇಕಿರಲಿಲ್ಲ. ಕಳೆದ ಮೂರು ನಾಲ್ಕು ತಿಂಗಳ ಅವಧಿಯಲ್ಲಿ ಮೋಹಿನಿ ಬೇಕಾದಷ್ಟು ಸಮಿಾಪ ಬಂದಿದ್ದರೂ, ಬೇಕಾದಷ್ಟು ಸಲ ಚಿತ್ರಮಂದಿರಗಳಿಗೆ, ಪಾರ್ಟಿಗಳಿಗೆ ಅವನ ಜೊತೆಯಲ್ಲಿ ಹೋಗಿ ನಡುರಾತ್ರಿಯ ವರೆಗೆ ಸ್ವಚ್ಛಂದವಾಗಿ ತಿರುಗಾಡುವಷ್ಟು ಸಲಿಗೆ ಬೆಳೆದಿದ್ದರೂ ಆತನಿದ್ದಲ್ಲಿಗೆ ತಾನು ಇರಹೋಗುವುದಕ್ಕೆ ಮನಸ್ಸು ಕೂಡಲೆ ಒಪ್ಪಲಿಲ್ಲ ಇದ್ದಲ್ಲಿಂದಂತೂ ಕೂಡಲೆ ಹೊರಡಬೇಕಾಗಿದ್ದಿತು. ಆದರೂ ಅದೊಂದು ತಾತ್ಪೂರ್ತಿಕವಾದ ವ್ಯವಸ್ಥೆ ಎಂಬುದನ್ನು ರಂಗನಾಥನ್ ತಿಳಿಯಬೇಕೆಂದು ಕೇಳಿದಳು :

"ನಾನು ಹೀಗೆ ಬಂದುಬಿಟ್ಟರೆ ಅದು ಸರಿಯಾಗಿರುತ್ತದೆಯೆ ? "

"ಏನದು ಸರಿಯಾಗಿರುವುದು ? ನೀನು ನನಗೆ ಸೆಕ್ರೆಟರಿಯಲ್ಲವೆ ? "

"ಸೆಕ್ರೆಟರಿ ಆಫೀಸ್‌ನಲ್ಲಿ—'ಪ್ರೈವೇಟ್' ಅಲ್ಲ ! "

"ಇಬ್ಬರೂ ಬೇರೆ ಬೇರೆ ಏನು ? "

"ಅದು ಹೇಗೂ ಇರಲಿ. ನನಗೇನೊ ಇದು ಅಷ್ಟು ಸರಿಯಾಗಿ ಕಾಣುವುದಿಲ್ಲ. ಸದ್ಯದ ಮಟ್ಟಿಗೆ ಆಗಬಹುದು. ಆದರೆ ಬೇರೆ ಜಾಗದ ಏರ್ಪಾಡು ಮಾಡಲೇಬೇಕು."

"ಮಾಡದೆ ಇರುತ್ತೇನೆಯೆ ? ಅಷ್ಟೂ ತಿಳಿಯುವುದಿಲ್ಲವೆ ನನಗೆ ? ನೋಡುವಾ, ಇಲ್ಲಿಯೇ ಕಿಂಗ್ಸ್ ಸರ್ಕಲ್ ಹತ್ತಿರ ಒಂದು ಫ್ಲಾಟ್ ತೆರವಾಗಿ ಇರಬೇಕು. ಈಗ ಒಂದೆರಡು ತಿಂಗಳಿಂದಲೇ ನಾನು ಅದಕ್ಕಾಗಿ ಪ್ರಯತ್ನ ಮಾಡುತ್ತಿದ್ದೇನೆ."

"ಈಗಾಗಲೆ ಪ್ರಯತ್ನ ಮಾಡಿದ್ದೀರಾ?"

"ಹೌದು—"

"ಯಾರಿಗಾಗಿ?"

"ಮತ್ತೆ ಯಾರಿಗಾಗಿ? ಆಪಟಿನ ಮನೆಯಿಂದ ನಿನ್ನನ್ನು ಬಿಡಿಸಬೇಕೆಂದು ನಾನೇ ಅಂದುಕೊಂಡಿದ್ದೆ. ಈಗ ತಾನಾಗಿಯೆ ಸಂಧಿ ಒದಗಿದೆ. ನೋಡುವಾ, ಸಾಧ್ಯವಾದರೆ ಒಂದು ವಾರದಲ್ಲಿಯೆ—ನಾಳೆ ಫಸ್ಟ್‌ನಿಂದಲೆ—ಗೊತ್ತುಮಾಡಿಬಿಡುವಾ."

"ಕೂಡಲೆ ಸಿಕ್ಕುತ್ತದೆಯೆ?"

"ಅದು ತೆರವಾಗಿದ್ದರೆ ಸಿಗುವುದು ದೊಡ್ಡ ಮಾತಲ್ಲ. ಹೆಚ್ಚಾದರೆ ಇನ್ನೂ ಒಂದು ಇಪ್ಪತ್ತೈದು ರೂಪಾಯಿ ಬಾಡಿಗೆ ಏರಿಸಿದರಾಯಿತು."

"ಈಗ ಎಷ್ಟಿದೆ?"

"ಎಪ್ಪತ್ತೈದು!"

"ನೂರು ರೂಪಾಯಿ ಬಾಡಿಗೆ ಕೊಡಬೇಕೆ? ಬೇಡ ಮಹಾರಾಯರೆ, ನನ್ನಿಂದಾಗದು!"

"ನಿನಗೇಕೆ ಅದರ ಯೋಚನೆ? ಮೊದಲು ಆ ಜಾಗ ಸಿಕ್ಕಾದರೂ ಸಿಗಲಿ. ಆಮೇಲೆ ಮುಂದಿನ ಮಾತು. ಬಹಳ ಸೊಗಸಾಗಿದೆ ಜಾಗ ಮಾತ್ರ. ನೀನಿರಬೇಕಾದದ್ದು ಅಂಥ ಜಾಗದಲ್ಲಿಯೆ!"

"ಹೌದೆ?" ಎಂದು ಕತ್ತು ಕೊಂಕಿಸಿ ಓರೆಯಾಗಿ ರಂಗನಾಥನ್‌ನನ್ನು ನೋಡಿದಳು. "ಆಯಿತು, ಬಂದಾಗಿನಿಂದ ಬರೀ ಹರಟೆ. ಬೇಕಾದಷ್ಟು ಕೆಲಸಕಾದಿದೆ"

ಎಂದವಳೆ ಬದಿಯಲ್ಲಿಯ ತನ್ನ ಕೋಣೆಯ ಕಡೆಗೆ ಹೊರಟಳು. ರಂಗನಾಥನ್ ಹೇಳಿದ .

"ಬರೀ ಹರಟೆ ಏಕೆ? ಬೇಕಾದಷ್ಟು ಕೆಲಸವಾಯಿತು" ಎಂದು ನಕ್ಕು ಮುಂದುವರಿದ "ಈಗಲೆ ಮಾಡಬೇಕಾದದ್ದೆಂದರೆ ನಮ್ಮಲ್ಲಿಯ ಎಕ್ಸಟ್ರಾಸ್‌ನಲ್ಲಿ ಅನುರಾಧೆಯ ಕೆಲಸವನ್ನು ಯಾರು ಮಾಡಬಹುದು ಎಂಬುದನ್ನು ಗೊತ್ತುಮಾಡಿಬಿಡುವುದು. ಅವರು ಆಗಲೆ ಬಂದಿರಬಹುದು. ಆದರೆ ಹೋಗುವ ಮೊದಲು 'ಶಾಕುಂತಲ'ದ ಡಿಸ್ಟ್ರಿಬ್ಯೂಶನ್‌ದ ಕಾಗದಗಳನ್ನು ಕೊಟ್ಟುಬಿಡು."

ರಂಗನಾಥನ್ ಬೇಡಿದ ಕಾಗದಗಳನ್ನು ಕೊಟ್ಟು ಮೋಹಿನಿ ಮತ್ತೆ ತನ್ನ

ಕೋಣೆಗೆ ಹೋಗಿ ಕುಳಿತಳು ಮಾಡಬೇಕಾದ ಕೆಲಸಗಳು ಬೇಕಾದಷ್ಟಿದ್ದರೂ ಮನಸ್ಸು ಒಂದೇ ಯೋಚನೆಯ ಸುತ್ತ ತಿರುಗುತ್ತಿತ್ತು. ಅದೆಂದರೆ ತಾನು ಅಂದೇ ಸಾಯಂಕಾಲದಿಂದ ರಂಗನಾಥನ್ ಒಟ್ಟಿಗೆ—ಒಂದೇ ಮನೆಯಲ್ಲಿ—ಇರುವುದು ಒಂದು ದೃಷ್ಟಿಯಿಂದ ಅಲ್ಲಿಗೆ ಹೋಗುವುದು ಅನಿವಾರ್ಯವಾಗಿದ್ದಿತು. ಅದೇಕ ? ಆಪಟೆನಿಗೆ ಒಂದು ಮಾತನ್ನು ಹೇಳಿದರೆ ಆಗದೆ ? ಇನ್ನು ಹತ್ತು ಹದಿನೈದು ದಿನ—ಕಿಂಗ್ಸ್‌ಸರ್ಕಲ್‌ನ ಜಾಗ ಗೊತ್ತಾಗುವ ವರೆಗೆ—ಅಲ್ಲಿಯೇ ಇರುತ್ತೇನೆಂದು ಹೇಳಿದರೆ ಬೇಡ ಎನ್ನುತ್ತಾನೆಯೆ ? ಯಾರು ಬಲ್ಲರು ? ತನ್ನನ್ನು ಅಲ್ಲಿಂದ ಬಿಡಿಸುವುದಕ್ಕೆ ಅನುರಾಧೆ ಊರಿಗೆ ಹೋದದ್ದು ಒಂದೇ ಕಾರಣವಾಗಿರದೆ ಆಪಟೆನಲ್ಲಿ ರಂಗನಾಥನ್‌ನ ವಿಷಯದಲ್ಲಿ ಬೆಳೆದಿದ್ದ ದ್ವೇಷವೂ ಕಾರಣವಾಗಿತ್ತೆಂದು ಬಲ್ಲ ಮೋಹಿನಿಗೆ ಆ ವಿಷಯದಲ್ಲಿ ಆಪಟೆನನ್ನು ಮತ್ತೆ ಮಾತನಾಡಿಸುವುದು ಬೇಡವೆನಿಸಿತು ಅಲ್ಲದೆ ಒಂದು ವೇಳೆ ಆಪಟೆ ಒಪ್ಪಿದರೂ ಅದರಿಂದ ಪ್ರಯೋಜನವೇನು ? ಇಂದಿಲ್ಲ ನಾಳೆ ಬೇರೆಯಾಗಿ ಇರಲೇಬೇಕು ಬೇರೆಯಾಗಿದ್ದರೂ ರಂಗನಾಥನ್‌ನ ಆಶ್ರಯದಲ್ಲಿಯೆ ಅಲ್ಲವೆ ? ಹೀಗಿದ್ದಮೇಲೆ ಈಗಲೆ ಹೋಗಿ ಇದ್ದರೆ ಏನಾಗಬೇಕು ?

ಏನಾಗಬೇಕು ? ಎಂದು ಸಮಾಧಾನ ತಂದುಕೊಂಡವಳ ಯೋಚನೆ ಏನಾಗಬಹುದು ಎಂಬುದರ ಕಡೆಗೆ ತಟ್ಟನೆ ಹರಿಯಿತು ಏನಾಗಬಹುದೆಂಬುದರಲ್ಲಿ ಅನಿರೀಕ್ಷಿತವಾದ ಯಾವ ವಿಶೇಷವಾದ ಅಂಶವೂ ಇರಲಿಲ್ಲ ಕಳೆದ ಒಂದು ತಿಂಗಳಲ್ಲಿ ತನ್ನನ್ನು ಬೇಕಾದ ಹಾಗೆ ವ್ಯೆಮುಟ್ಟುವಷ್ಟು ಅವಕಾಶವನ್ನು ತನ್ನ ಸಲಿಗೆಯ ನಡೆನುಡಿಗಳಿಂದ ರಂಗನಾಥನ್ ನಿಧಾನವಾಗಿ ಪಡೆದಿದ್ದ ಮೋಹಿನಿಯ ಮನಸ್ಸಾದರೂ ವಸಂತನಿಂದ ಅನಿವಾರ್ಯವಾಗಿ ತಿರುಗಿದಾಗಿನಿಂದ ಅಲ್ಲಿ ಪಡೆಯಲಾಗದ್ದನ್ನು ಇಲ್ಲಿ ಬಯಸುವಂತಾಗಿತ್ತು. ಹತ್ತಾರು ದಾರಿಗಳಲ್ಲಿ ಯೋಚಿಸಿದ್ದಳು ಯೋಚಿಸಿ ಒಂದು ನಿರ್ಧಾರಕ್ಕೆ ಬಂದಿದ್ದಳು

ಕೋಣೆಯಲ್ಲಿ ಬಂದು ಕುಳಿತಾಗಿನಿಂದ ಮೋಹಿನಿ ಮತ್ತೆ ಯೋಚನೆಗಳಲ್ಲಿ ಸಿಲುಕಿದಳು. ಇಂದು ಸಾಯಂಕಾಲ ರಂಗನಾಥನ್ ಸಾಮಾನುಗಳನ್ನು ತನ್ನ ಮನೆಗೆ ಸಾಗಿಸುವ ಏರ್ಪಾಡನ್ನು ಮಾಡಿಬಿಟ್ಟಿದ್ದಾನೆ ಸಾಯಂಕಾಲ ತಾನೂ ಹೋಗಬೇಕು, ಅಲ್ಲಿಯೇ ಇರಬೇಕು. ಮುಂದೆ ? ಅದನ್ನು ಯೋಚಿಸಬೇಕಾಗಿಯೆ ಇಲ್ಲ. ಆ ಯೋಚನೆ ಎಂದಿಗೂ ಕೊನೆಗಂಡಿತ್ತು. ತಾನು ಈ

ಕೆಲಸವನ್ನು ಒಪ್ಪಿಕೊಂಡ ದಿನವೆ ಗ್ರೀನ್ಸ್‌ನಲ್ಲಿ ಊಟ ಮಾಡಿಕೊಂಡು ಒರು ವಾಗ, ಬಂದನಂತರದಲ್ಲಿ, ಆ ಬಗೆಯಲ್ಲಿ ಎಷ್ಟು ಬಾರಿ ಹಿಂದುಮುಂದುಗಳನ್ನೆಲ್ಲ ವಿಚಾರಿಸಿ ಒಂದು ಬಗೆಯ ನಿರ್ಧಾರಕ್ಕೆ ಬಂದಿರಲಿಲ್ಲ ? ' ನನಗೆ ನಾನೇ ನಾನಾಗಿ ಯಾರ ಹಂಗೂ ಇಲ್ಲದೆ ಹೆದರಿಕೆ ಇಲ್ಲದೆ ಇರಬೇಕಾಗಿದೆ ನನ್ನ ಬದುಕು ನನ್ನದು ಅದನ್ನು ನನಗೆ ತಿಳಿದ ಹಾಗೆ ನಡೆಸಿಕೊಂಡು ಹೋಗುವ ಅಧಿಕಾರ ನನಗಿರಬೇಕು ಅದಿಲ್ಲದ ಸ್ವಾತಂತ್ರ್ಯಕ್ಕೆ ಬೆಲೆಯಿಲ್ಲ ನನಗೆ ಸರಿಯೆಂದು ತೋರಿದ ದಾರಿಯಲ್ಲಿ ನಾನಿಂದು ಮುಂದರಿಯುತ್ತಿದ್ದೇನೆ ಈ ಮುನ್ನಡೆ ಸುಗಮವಾಗಿ ಸಾಗಬೇಕಾದರೆ ಹಿಂದಿನದರ ಹೊರೆಯನ್ನೆಲ್ಲ ನಾನು ಕಿತ್ತೊಗೆ ಯಲೇಬೇಕು ಕೇವಲ ನನ್ನ ವೈಯಕ್ತಿಕ ಜೀವನದಲ್ಲಿ ನಡೆದ ಘಟನೆಗಳನ್ನಲ್ಲದೆ —ಆ ಘಟನೆಗಳಿಗೆ ಹಿನ್ನೆಲೆಯಾಗಿ, ಪೂರಕ ಶಕ್ತಿಗಳಾಗಿ ನಿಂತ ವಿಚಾರ ಸಂಪ್ರದಾಯಗಳನ್ನು ಕೂಡ ಕಿತ್ತೊಗೆಯಲೇಬೇಕು ಹುಟ್ಟಿ ಬದುಕಿದ ಪ್ರತಿ ಯೊಂದು ವ್ಯಕ್ತಿಗೆ ಸುಖವಾಗಿರಬೇಕೆಂಬ ಆಸೆ ಇದ್ದೇ ಇರುತ್ತದೆ ಆ ಸುಖ ವನ್ನು ಪಡೆಯುವ ಅಧಿಕಾರವೂ ಆತನಿಗಿರಬೇಕು ಇಂದು ನೂರಾರು, ಸಾವಿರಾರು ಹೆಂಗಳೆಯರ ಜೀವನದಲ್ಲಿ ಅಂಥ ಅಧಿಕಾರ ಇಲ್ಲದಾಗಿದೆ. ಅಧಿ ಕಾರವಿಲ್ಲದಕ್ಕಾಗಿ ತಾವು ಸುಖವಾಗಿರಬೇಕೆಂಬ ಆಸೆಯೂ ಕಮರಿಹೋಗಿದೆ. ಪಾಲಿಗೆ ಬಂದದ್ದು ಪಂಚಾಮೃತವೆಂಬ ಅಲ್ಪಸಂತುಷ್ಟ ವೃತ್ತಿಯಿಂದಾಗಿ ಹೆಂಗಸು ಗಂಡಸಿಗೆ ದಾಸಿಯಾಗಿದ್ದಾಳೆ ಆತನ ಕಾಮತೃಪ್ತಿಗೊಂದು ಸಾಧನ ವಾಗಿದ್ದಾಳೆ ಗಂಡಸಿನಂತೆಯೆ ಹೆಂಗಸು ಮನುಷ್ಯಪ್ರಾಣಿಯಾಗಿ ಹುಟ್ಟಿದ ಮಾತ್ರದಿಂದಲೆ ಪ್ರಾಪ್ತವಾಗಿರಬೇಕಾದ ಅಧಿಕಾರವನ್ನು ಆಕೆಯಿಂದ ಕಸಿದು ಕೊಂಡು, ಆಕೆಯ ಎದೆಯಲ್ಲಿಯ ಆಸೆಯನ್ನು ಕೊಂದುಹಾಕಿದವರು ಯಾರು ? ಆಕೆಯ ಹೃದಯ ಯಾವ ಹಿರಿಯ ಭಾವನಗಳಿಗಾಗಲಿ ಆಕಾಂಕ್ಷೆಗಳಿಗಾಗಲಿ ತವರಾಗಿರದೆ ಆಕೆಯ ದೇಹ ದುಡಿಯಬೇಕಾದ್ದರಿಂದ ಆ ದುಡಿತಕ್ಕೆ ಅಗತ್ಯ ವಾದ ರಕ್ತಸ್ರಾವವನ್ನು ನಡಸುವ ಯಂತ್ರವಾಗಿದೆ. ಇದನ್ನು ಮಾಡಿದವರು ಯಾರು ? ಗಂಡಸಿನ ಹೆಮ್ಮೆ ಯಾವ ಸಮರ್ಥನೆಯೂ ಇಲ್ಲದ ಆತನ ಸ್ವಪ್ರಣೀತವಾದ ಹಿರಿತನ ಆ ಹೆಮ್ಮೆಹಿರಿತನಗಳನ್ನೆ ಪ್ರತಿಪಾದಿಸುವ ಸಮಾ ಜದ ನೀತಿ-ನಿಯಮ-ಸಂಪ್ರದಾಯಬುದ್ಧಿ. ಯಾವುದೊ ಒಂದು ಕಾಲಕ್ಕೆ ಅನ್ವಯಿಸಬಹುದಾಗಿದ್ದ ಬಂಧನಗಳು. ಕಾಲ ಬದಲಾಯಿಸಿದಂತೆ ಈ ನೀತಿ

ನಿಯಮ ಸಂಪ್ರದಾಯಗಳು ಬದಲಾಗಬೇಡ್ವೆ? ಬದಲಾಗುವುದು ಗಂಡಸಿಗೆ ಬೇಡವಾಗಿದೆ ಅದರಿಂದ ಆತನ ಹೆಗ್ಗಳಿಕೆಗೆ ಚ್ಯುತಿ ಬರುತ್ತದೆ. ಆತ ಹೆಂಗಸಿಗೆ ಸಮಾನನಾಗುತ್ತಾನೆ! ಅದನ್ನು ಆತ ಹೇಗೆ ಒಪ್ಪಿಯಾನು? ಆದರೆ ಆತನನ್ನು ಒಪ್ಪಿಸಲೇಬೇಕು ಮನವೊಲಿಸಿ ಮಾಡಿಕೊಳ್ಳಬೇಕಾದ ಕೆಲಸವಿದಲ್ಲ ಒಲವಿನಿಂದಾಗದಿದ್ದರೆ ಒತ್ತಾಯದಿಂದಲೇ ಸಾಧಿಸಬೇಕು. ಯಾವ ಮಾರ್ಗವಾದರೂ ಸರಿ. '

'ನನಗೆ ಸಾಧಿಸಬೇಕಾದದ್ದು ಏನು? ನನ್ನ ಆತ್ಮವಿಕಾಸ—ನನಗೆ ಸ್ವಭಾವ ಸಿದ್ಧವಾದ ಪ್ರತಿಯೊಂದು ಸಾಮರ್ಥ್ಯದ ಪರಿಪೂರ್ಣವಾದ ಬೆಳವಣಿಗೆ—ನನಗೆ ರಕ್ತಗತವಾದ, ಮಾನವಸಹಜವಾದ, ದೇಹಮನಸ್ಸುಗಳೆರಡೂ ಬೇಡಬಹುದಾದ ಸುಖ—ಸಾಧ್ಯವಾದರೆ ಈ ಎಲ್ಲವುಗಳ ಪರಮಾವಧಿ. ಇವೆಲ್ಲವನ್ನು ಸಾಧಿಸುವುದು ಸಾಧ್ಯವಿದೆ. ಯಾವುದೋ ಒಂದು ಬಗೆಯ ಕಟ್ಟುಗಳಿಗೆ ನೇತು ಬಿದ್ದು ಸಾಧ್ಯವಿಲ್ಲ ಎಂದು ಕೈಚೆಲ್ಲಿದರೆ ಏನಾಗಬೇಕು? ನನಗೆ ಸಿದ್ಧಿ ಮುಖ್ಯ—ಸಾಧನ ಯಾವುದಾದರೂ ಸರಿ. ಪರಿಶುದ್ಧ ಸಾಧನಗಳನ್ನು ಬಳಸದೆ ಸಾಧಿಸಿದ ಸಿದ್ಧಿ ಸಿದ್ಧಿಯಲ್ಲ ಎಂದು ಹೇಳುವುದು ಶುದ್ಧ ತಪ್ಪು! ಈ ಪರಿಶುದ್ಧಿಗೆ ಅಳತೆಗೋಲು ಯಾವುದು? ಮತ್ತೆ ಸಮಾಜ ಹೇಳಿದ ನಿಯಮ! ನಿಸರ್ಗ ವಿರುದ್ಧವಲ್ಲದ್ದು ಶುದ್ಧ—ನಿಸ್ಸಂದೇಹವಾಗಿ ನಾನಿಂದು ಬಯಸುತ್ತಿರುವುದು ಖಂಡಿತವಾಗಿಯೂ ನಿಸರ್ಗವಿರುದ್ಧವಾಗಿಲ್ಲ. ಯೌವನದ ಕುಲುಮೆ ಹೊತ್ತಿ ಹೃದಯದಲ್ಲಿ ಬೇಗೆಯಾಗಿ ಉರಿಯುತ್ತಿರುವಾಗ ಅದನ್ನು ಈ ನೀತಿಯೆಂಬ ತಣ್ಣೀರಿನಿಂದ ಆರಿಸಲೆ? ಅದರಿಂದ ಬಂದುದೇನು? ಅದು ಆರಿಹೋದರೆ ಅಲ್ಲಿ ಉಳಿಯುವುದು ಬೂದಿ! ಅಲ್ಲದೆ ಇಂಥ ನೀರಿನ ಚಿರಂತನ ಪ್ರವಾಹವನ್ನು ಹರಿಯಿಸಿದರೂ ನಂದಲಾರದ ಬೇಗೆ ಅದು. ಮಾನವನ ನಾಡಿಗಳಲ್ಲಿ ರಕ್ತ ಹರಿಯುವವರೆಗೂ ಆ ರಕ್ತದ ಅಂಶವಾಗಿ ಕುದಿಯುವ, ಕಂಗೆಡಿಸುವ ಬಿಸಿ ಅದು. ಇಂದು ಸುಖ ನನ್ನ ಅಂಗೈಯಲ್ಲಿದೆ. ಇಂದಿನ ಸುಖವಲ್ಲದೆ ಮುಂದಿನ ಭರವಸೆಯಿದೆ. ಇಂದಿನ ಸುಖಕ್ಕೆ, ಮುಂದಿನ ಭರವಸೆಗೆ ನನ್ನ ಮತ್ತು ರಂಗನಾಥನ್ ನಡುವಿನ ಸ್ನೇಹಸಂಬಂಧ ಒಂದು ಸಂಕೇತದಂತಿದೆ. ಅಂಗೈಯಲ್ಲಿಯದನ್ನು ಎಸೆದು 'ಇಲ್ಲ'ವೆಂದು ಗೋಳಾಡಿದರೆ ಅದಕ್ಕೆ ಯಾರು ಹೊಣೆ?—'

ಸಾಯಂಕಾಲದ ಐದು ಗಂಟೆಯಾದರೂ ಮೋಹಿನಿಯ ವಿಚಾರಚಕ್ರ

ತಿರುಗುತ್ತಲೇ ಇತ್ತು. ಕೊನೆಗೆಂದುಕೊಂಡಳು : ' ಇಷ್ಟು ಯೋಚನೆಯೂ ಸಲ್ಲದು. ಇದುವರೆಗೆ ನಾನು ನಡೆದುಬಂದ ದಾರಿಯೆ ಮುಂದಿನ ದಾರಿ. ಹಿಂದಿರುಗುವುದಾದರೆ ಮುಂದೆ ಹೋಗುವ ಯೋಚನೆಯನ್ನೇ ಕಟ್ಟಿಕೊಂಡಿರಬಾರದಿತ್ತು. ಹಿಂದಿರುಗುವುದೆ ? ಸಾಧ್ಯವಿಲ್ಲ—'

ಸಾಧ್ಯವಿಲ್ಲ ಎಂಬ ಮಾತನ್ನು ಮೋಹಿನಿ ಹೆಚ್ಚುಕಡಿಮೆ ಗಟ್ಟಿಯಾಗಿಯೆ ಹೇಳಿದಳು. ಬಾಗಿಲಲ್ಲಿ ಆದೇ ಬಂದ ರಂಗನಾಥನ್‌ನಿಗೆ ಅದು ಕೇಳಿಸದಿರುವುದು ಸಾಧ್ಯವಿರಲಿಲ್ಲ. ಆ ಮಾತನ್ನು ಕೇಳಿ ಆತ ದಿಗಿಲುಗೊಂಡಿರಬೇಕು. ಅಂತೆಯೆ ಕೇಳಿದ

" ಸಾಧ್ಯವಿಲ್ಲ ? ಏನದು ?—ಒಬ್ಬಳೇ ಮಾತನಾಡುತ್ತಿದ್ದ ಹಾಗಿದೆ ! "

" ಆಂ ? " ಮೋಹಿನಿ ಎಚ್ಚತ್ತಳು.

" ಏನು, ಕುಳಿತಲ್ಲಿಯೇ ನಿದ್ರೆಮಾಡುತ್ತಿದ್ದೆಯಾ ? "

" ಯಾಕೆ ? "

" ಕನಸಿನಲ್ಲಿ ಮಾತನಾಡುತ್ತಿದ್ದ ಹಾಗಿತ್ತು "

" ಏನೆಂದೆ ನಾನು ? "

" ಸಾಧ್ಯವಿಲ್ಲ—ಸಾಧ್ಯವಿಲ್ಲ ! ಏನು ಸಾಧ್ಯವಿಲ್ಲ ? "

" ಏನೊ ! "

" ಪ್ರಯತ್ನಮಾಡದೆ ಸಾಧ್ಯವಿಲ್ಲ ಎಂದು ಹೇಳುವವಳು ನೀನು ! "

" ಯಾವುದಕ್ಕೆ ಪ್ರಯತ್ನ ? "

" ಯಾವುದಕ್ಕೆ ಸಾಧ್ಯವಿಲ್ಲ ಎಂದು ನೀನು ಹೇಳಿದೆಯಲ್ಲ, ಅದು "

" ಯಾವುದು ಅದು ? "

" ನನಗೇನು ಗೊತ್ತು ? ಸಾಧ್ಯವಿಲ್ಲ ಎಂದು ಹೇಳಿದವಳು ನೀನು."

" ಆದರೂ ಗೊತ್ತಿದ್ದವರ ಹಾಗೆಯೆ ಹೇಳುತ್ತಿದ್ದೀರಿ ! "

" ಹೌದು, ಒಂದು ಗೊತ್ತಿದೆ ನನಗೆ. ಖಂಡಿತವಾಗಿಯೂ ಗೊತ್ತಿದೆ ಅದೆಂದರೆ ಈ ನೀನು ಯಾವುದಕ್ಕೆ ಮನಸ್ಸು ಮಾಡಿದರೂ ಅದು ಯಾವಾಗಲೂ ಸಾಧ್ಯ ಎಂಬುದು ! "

ರಂಗನಾಥನ್ ಆಗಲೆ ಆಕೆ ಕುಳಿತಿದ್ದ ಕುರ್ಚಿಯ ಬದಿಯಲ್ಲಿ ಬಂದಿದ್ದ. ' ಈ ನೀನು ' ಎಂದಾಗ ಆತನ ಎರಡೂ ಅಂಗೈಗಳು ಆಕೆಯ ಎರಡು

ಗಲ್ಲಗಳಿಗೆ ಅಂಟಿಕೊಂಡಿದ್ದವು. ಆ ಕೈಗಳನ್ನು ಬಿಡಿಸಿಕೊಳ್ಳುತ್ತ ಮೋಹಿನಿ ಕೇಳಿದಳು .

" ಅದು ಹೇಗೂ ಆದೀತು. ಈಗ ಏನು ? ನನಗಂತೂ ತುಂಬಾ ಬೇಸರ ವಾಗಿದೆ."

" ಅದಕ್ಕೆ ? "

" ಅದಕ್ಕೆ, ಮನೆಗೆ ಹೊರಟುಬಿಡಬೇಕೆಂದಿದ್ದೇನೆ."

" ಮನೆಗೆ ಹೋದರೆ ಬೇಸರ ಕಳೆಯುತ್ತದೆಯೆ ? "

" ಅದಕ್ಕೇನು ಮಾಡುವುದು ? ಜಾಗವಾದರೂ ಬದಲು."

" ಹಾಗೇನೂ ಬೇಡ. ಕೋಣೆಯಲ್ಲಿ ನಿನ್ನ ಸಾಮಾನು ಬಹಳ ವಾಗಿದೆಯೆ ? "

" ಬಹಳ ಏನಿರಬೇಕು ? "

" ಹಾಗಿದ್ದರೆ ಇಲ್ಲಿಂದ ಯಾರನ್ನಾದರೂ ಕರೆದುಕೊಂಡು ಕಾರ್‌ನಲ್ಲಿ ಹೋಗಿಬಿಟ್ಟು ಒಂದರ್ಧ ಗಂಟೆಯಲ್ಲಿ ಬಂದುಬಿಡು "

" ಆಮೇಲೆ ? "

" ಆಮೇಲಿನ ಯೋಚನೆ ಈಗ ಯಾಕೆ ? "

" ಯೋಚನೆ ಮಾಡಬೇಡವೆ ? "

" ಮಾಡಬೇಕಾದದ್ದೇ ಇಲ್ಲ ! "

ರಂಗನಾಥನ್ ಕೊನೆಯ ಮಾತನ್ನು ನಕ್ಕು ಹೇಳಿದಾಗ ಮೋಹಿನಿ ನಸುನಗುತ್ತ ಆತನ ಮುಖವನ್ನೇ ನೋಡುತ್ತಿದ್ದಳು ಇಬ್ಬರ ಮನಸ್ಸುಗಳೂ ಪೂರ್ತಿಯಾಗಿ ಶ್ರುತಿಗೊಂಡ ಹಾಗಿದ್ದವು. ಆ ಶ್ರುತಿಯ ಮಾಧುರ್ಯ, ಏಕ ತಾನತೆ ಎರಡೂ ಹೃದಯಗಳಲ್ಲಿ ದುಮುದುಮಿಸುತ್ತಿದ್ದವು. ಹೀಗೆಂದೇ ರಂಗ ನಾಥನ್‌ನ ಸೂಚನೆ ಮೋಹಿನಿಗೆ ಸರಿಯೆನಿಸಿತು.

" ಸರಿ. ಹಾಗಿದ್ದರೆ ಕಾರ್ ಹೇಳಿಬಿಡಿರಿ ಆದರೆ ನನಗೆ ಒಂದೇ ಯೋಚನೆ. ಈಗ ಆಪಟೆ ಮನೆಯಲ್ಲಿರುತ್ತಾರೆಯೊ ಇಲ್ಲವೊ ? "

" ಯಾಕೆ, ಅವನಿಂದ ಬೀಳ್ಕೊಡುವ ಸಮಾರಂಭ ಏರ್ಪಾಡಾಗ ಬೇಕೇನು ? "

" ಬೀಳ್ಕೊಡುವ ಸಮಾರಂಭ ಏನು ಬಂತು ? ಬೀಗದಕೈಯನ್ನು ಕೊಡು

ವುದಾದರೂ ಜ್ಞಾಪಕವೆ? ಅದೂ ತೊಂದರೆಯೆ, ಅವರಿಲ್ಲದಿದ್ದರೆಯೆ ವಾಸಿ."

"ಅಷ್ಟೊಂದು ಹೆದರಿದ್ದೀಯಾ?"

"ಹೆದರಿಕೆ ಎಂದಲ್ಲ, ಆದರೂ ಅದೇನೊ—"

"ಏನೂ ಇಲ್ಲ. ನಾನಾಗಲೆ ಹೇಳಲಿಲ್ಲವೆ? ಯಾವ ಯೋಚನೆಯೂ ಬೇಡ. ಸುಮ್ಮನೆ ನೇರವಾಗಿ ಹೋಗಿ ನಿನ್ನ ಸಾಮಾನುಗಳನ್ನು ಸಾಗಿಸಿಕೊಂಡು ಬಂದುಬಿಡು."

"ಕೋಣೆಯನ್ನು ಹಾಗೆಯೆ ಬಿಟ್ಟು ಬರುವುದೆ?"

"ಬೀಗ ಹಾಕಿಕೊಂಡೇ ಬಾ. ನಾಳೆ ಒಂದು ಕಾಗದ ಬರೆದು ಯಾರ ಕೈಲಾದರೂ ಕಳಿಸಿದರೆ ಆಯಿತು ಅದು ಯಾವ ದೊಡ್ಡ ಮಾತು?"

"ಆದರೂ ಆಪಟೆ ಏನೆಂದುಕೊಳ್ಳುತ್ತಾರೊ. ಇಷ್ಟು ದಿನ ಎಷ್ಟೊ ಪರಿಯಿಂದ ಸಹಾಯ ಮಾಡಿದರು."

"ಆಯಿತು ಕಾಗದದಲ್ಲಿ ಕೃತಜ್ಞತೆಯನ್ನು ಉದ್ದವಾಗಿ ಬರೆಯೋಣ. ಆಗಬಹುದೆ?"

"ಇದ್ದರೂ ಇರಲಿ. ಇದ್ದರೆ ನೇರವಾಗಿ ಭೆಟ್ಟಿಯಾಗಿ ಹೇಳಿಯೇ ಬರುತ್ತೇನೆ. ಕೋಣೆ ಬಿಟ್ಟು ಹೊರಡಬೇಕೆಂದು ಅವರಾಗಿಯೇ ಹೇಳಿದಾಗ ನಾನಾದರೂ ಯಾತಕ್ಕೆ ಹೆದರಬೇಕು?"

"ಎಲ್ಲಿಗೆ ಹೋಗುತ್ತೀ ಎಂದು ಕೇಳಿದರೆ?—"

ಎಂದು ರಂಗನಾಥನ್ ನಕ್ಕ.

"ಅದನ್ನೇತಕ್ಕೆ ಕೇಳುತ್ತಾರೆ?"

"ಕೇಳಿದರೆ?"

"ಬೇರೆ ಮನೆಯನ್ನು ಹುಡುಕಿಕೊಂಡಿದ್ದೇನೆ ಎನ್ನುತ್ತೇನೆ!"

"ಅಥವಾ ಬೇರೆ ಮನೆ ಸಿಕ್ಕಿದೆ ಎಂದೊ?"

"ಎರಡೂ ಒಂದೇ ಅಲ್ಲವೆ?"

ಎರಡೂ ಮನಸ್ಸುಗಳ ಅದೇ ತಾಲ, ಅದೇ ಶ್ರುತಿ ಕೊನೆಯ ಮಾತುಗಳಲ್ಲಿ ಮಿಡಿಯುತ್ತಿದ್ದವು. ಮೋಹಿನಿ ಕಾರ್‌ನಲ್ಲಿ ಕೋಣೆಗೆ ಬಂದಾಗ ಕೇಳುವ ಹೇಳುವ ಸಂದರ್ಭವೆ ಒದಗಲಿಲ್ಲ. ಆಪಟೆ ಮನೆಯಲ್ಲಿ ಇರಲೂ ಇಲ್ಲ. ಅಡಿಗೆಯವಳೂ ಇರಲಿಲ್ಲ. ಅನುರಾಧೆ ಊರಿಗೆ ಹೋದಂದಿನಿಂದ ಆಕೆಗೂ 'ರಜೆ'

ಕೊಡಲಾಗಿತ್ತೆಂಬಂತಿತ್ತು. ಹತ್ತಿಪ್ಪತ್ತು ನಿಮಿಷಗಳಲ್ಲಿ ಮೋಹಿನಿ ತನ್ನ ಇದ್ದ ಬಿದ್ದ ಕೆಲವು ಸಾಮಾನುಗಳನ್ನು ಕಾರಿಗೆ ಸಾಗಿಸಿದಳು. ಸ್ಟುಡಿಯೋದಲ್ಲಿಯ ಇಬ್ಬರು ಸೇವಕರು ಜೊತೆಯಲ್ಲಿದ್ದುದರಿಂದ ಅರ್ಧ ಗಂಟೆಯಲ್ಲಿ ಮೋಹಿನಿ ಅಲ್ಲಿಂದ ಹೊರಟುಬರುವುದು ಸಾಧ್ಯವಾಯಿತು. ಕಾರು ಮೋಹಿನಿಯನ್ನು ಸ್ಟುಡಿಯೋದಲ್ಲಿ ಬಿಟ್ಟು ಸಾಮಾನುಗಳೊಂದಿಗೆ ರಂಗನಾಥನ್ ಮನೆಯೆಡೆಗೆ ಹೋಯಿತು.

ಮೋಹಿನಿ ಮತ್ತೆ ತನ್ನ ಕುರ್ಚಿಯಲ್ಲಿ ಬಂದು ಕುಳಿತಾಗ ಮಧ್ಯಾಹ್ನದ —ಹಾಗೆ ನೋಡಿದರೆ ಇತ್ತೀಚಿನ ನಾಲ್ಕಾರು ತಿಂಗಳುಗಳ—ಯೋಚನೆ ಬಗೆ ಹರಿದಿತ್ತು. ತನ್ನ ಬದುಕು ತಾನಾಗಿಯೆ ಆಶೋತ್ತರಗಳನ್ನು ರೂಪಿಸಿ, ಸುಖ ಸೌಲಭ್ಯದ, ಸ್ವಾತಂತ್ರ್ಯದ ದಾರಿಯನ್ನು ಕೈಹಿಡಿದು ತೋರಿಸಿ ಮುಂದರಿಸು ತ್ತಿರುವಾಗ ತಾನೇಕೆ ಹಿಂದುಳಿಯಲು ಬಯಸಬೇಕು ? ತನ್ನ ಸಾಮಾನುಗಳು ಆಪಟೆನ ಮನೆಯಿಂದ ಹೊರಟಾಗಿನಿಂದ ಮೋಹಿನಿಯ ಮನಸ್ಸು ಯಾವುದೊ ಒಂದು ಹೊಸ ಉತ್ಸಾಹದ ಹೊನಲಲ್ಲಿ ತೇಲುತ್ತಿದ್ದಂತಿತ್ತು ಯಾವುದೊ ಒಂದು ಹೊಸ ಬಾಳಿನ ಹೊಸ್ತಿಲಲ್ಲಿ ನಿಂತು ಎಲ್ಲ ವಿವೇಚನೆ-ವಿಚಾರಗಳನ್ನು ಬದಿಗಿರಿಸಿ ಹೃದಯವನ್ನು ಬಂಧಿಸಿದ ಹೊಸ ಭಾವನೆಯ ಆವೇಗಕ್ಕೆ ಒಳಗಾ ದಂತಿತ್ತು. ಆನಂದನನ್ನು ಮದುವೆಯಾದ ದಿನ, ಆತನನ್ನು ತಾನು ಕೂಡ ಬೇಕಾದ ಸಾಯಂಕಾಲ ಇಂಥದೇ ಆವೇಗಕ್ಕೆ ಗುರಿಯಾಗಿದ್ದಳೆಂಬುದನ್ನು ಆಕೆ ಇಂದಿನ ಸಂದರ್ಭದಲ್ಲಿ ನೆನೆಯುವುದು ಸಾಧ್ಯವಿರಲಿಲ್ಲ. ಹಿಂದಿನದೆಲ್ಲ ಮಾಯವಾಗಿತ್ತು , ಮುಂಬರುವುದೆಲ್ಲ ಈಡೇರಬಹುದಾದ ಬಯಕೆಗಳ ಬಣ್ಣ ಬೆಡಗುಗಳಿಂದ ಕೂಡಿ ಕೈಬೀಸಿ ಕರೆಯುತ್ತಿತ್ತು.

ವೇಳೆ ಆರೂವರೆಯಾದರೂ ರಂಗನಾಥನ್ ಕೆಲಸದಲ್ಲಿಯೆ ತೊಡಗಿದ್ದ. ಬರುವ ಎರಡು ಮೂರು ವಾರಗಳಲ್ಲಿ ಶಾಕುಂತಲವನ್ನು ಮುಗಿಸಿಯೆ ಬಿಡುವು ದೆಂದು ಅದರ ಏರ್ಪಾಡುಗಳನ್ನು ಮಾಡುವುದರಲ್ಲಿದ್ದ. ಆಗಲೆ ಕಾಮತ್, ಚೌಧರಿ, ದಾಂಡೇಕರ್, ಕುಲಕರ್ಣಿ ಎಲ್ಲರನ್ನೂ ಕರೆಯಿಸಿ ಅವರೆಲ್ಲರೂ ಮಾಡಬೇಕಾದ ಕೆಲಸಗಳನ್ನು ಹೆಚ್ಚುಕಡಿಮೆ ನಿಷ್ಠುರವಾಗಿಯೆ ವಿವರಿಸಿ ಕೊಟ್ಟಿದ್ದ. ಮರುದಿನವೆ ಶೂಟಿಂಗ್ ಪ್ರಾರಂಭವಾದ್ದರಿಂದ ವರ್ಮಾ ಯಶೋ ಮತಿಯರಿಗೆ ಕೂಡಲೆ ಬಂದು ಮುಂದಿನ ಹದಿನೈದು ದಿನಗಳ ಕಾರ್ಯಕ್ರಮಗಳ

ವಿವರಗಳನ್ನು ನೋಡಿಕೊಳ್ಳಬೇಕೆಂದು ಒತ್ತಾಯದ ಪರಿಪತ್ರವನ್ನು ಕಳಿಸಿಯಾಗಿತ್ತು. ಆರೂವರೆಯಾಗಿಹೋದರೂ ಮರುದಿನ ಬೇಕಾಗುವ 'ಸೆಟಿಂಗ್' ಸಿದ್ಧವಾಗದ ಹೊರತು ಯಾರೂ ಹೋಗಕೂಡದೆಂದು ವಿಧಿಸಿ, ತಾನಾಗಿಯೆ ನಿಂತು ಕೆಲಸಗಳನ್ನು ಮಾಡಿಸುತ್ತಿದ್ದ.

ಕೊನೆಗೊಮ್ಮೆ ಮೋಹಿನಿ ಒಂದು ನೋಟ್ ಬರೆದು ಕಳಿಸಿದಳು. 'ಇದೇ ಬಂದೆ' ಎಂದು ಉತ್ತರ ಬಂದರೂ ಮುಂದೆ ಹದಿನೈದು ನಿಮಿಷಗಳ ನಂತರವೇ ಬಂದ ಬಂದಾಗ ಮೋಹಿನಿ ರಂಗನಾಥನ್ ಕೋಣೆಯಲ್ಲಿಯ ವಿರಾಮ ಕುರ್ಚಿಯಲ್ಲಿ ವೈಚೆಲ್ಲಿದ್ದಳು

"ಓ! ಇಲ್ಲಿದ್ದೀಯಾ? ನಾನು ನಿನ್ನ ಕೋಣೆಯಲ್ಲಿ ನೋಡಿದೆ. ಹೊರಟೇಹೋದೆಯೇನೊ ಎಂದಿದ್ದೆ"

"ಹೊರಟುಹೋಗುವುದೆ? ಎಲ್ಲಿಗೆ?"

"ಎಲ್ಲಿಗೇನು, ಮನೆಗೆ!"

"ನಾನೊಬ್ಬಳೇ ಹೋಗುವುದೆ, ಮನೆಗೆ?"

"ಒಬ್ಬಳೇ ಏಕೆ? ನಾನೂ ಬರುವೆ. ಸಂಭ್ರಮದ 'ಗೃಹಪ್ರವೇಶ'ವೆ ಆಗಲಿ!"

"ಗೃಹಪ್ರವೇಶವೆ?"

"ಗೃಹಪ್ರವೇಶ ಅಂದರೆ ಮನೆಯಲ್ಲಿ ಕಾಲಿಡುವುದು!"

"ಹೌದು ಅಷ್ಟು ಸಂಸ್ಕೃತ ನನಗೆ ತಿಳಿಯುತ್ತದೆ. ಆದರೆ ಆ ಮಾತಿಗೆ ಬೇರೆಯಾದ ಒಂದು ಅರ್ಥವೂ ಇದೆ."

"ಬೇರೆಯಾದದ್ದೇನು? ಅದೂ ಮನೆಯಲ್ಲಿ ಕಾಲಿಡುವುದೇ!"

"ಮಾಡುವ ಕೆಲಸ ಒಂದೇ ಆದರೂ ಸಂದರ್ಭ ಬೇರೆ."

"ಸಂದರ್ಭವೂ ಬೇರೆಯಲ್ಲ!"

"ಆ-ಯಿ-ತು—"

ಆತನ ಮುಖವನ್ನೇ ನೆಟ್ಟನೋಟದಿಂದ ನೋಡಿ, ಕಿರುನಗೆ ಬೀರಿ ಮೋಹಿನಿ ಆ ಮಾತನ್ನು ಹೇಳಿದ ಬಗೆಯಲ್ಲಿ, 'ಹೌದು, ಸಂದರ್ಭವೂ ಬೇರೆಯಲ್ಲ' ಎಂಬ ಭಾವವೇ ವ್ಯಕ್ತವಾಗುತ್ತಿತ್ತು ರಂಗನಾಥನ್‌ನಿಗೆ ಇಂಥ ಸೂಚನೆಗಳು ತಿಳಿಯದಿರುವುದು ಸಾಧ್ಯವಿರಲಿಲ್ಲ. ಅವನೆಂದ:

" ಅಂತೂ ನಿನ್ನ ಗೃಹಪ್ರವೇಶ ಸೆಲಿಬ್ರೇಟ್ ಮಾಡಬೇಕಾಯಿತು ! "

" ಅದನ್ನೇನು ಸೆಲಿಬ್ರೇಟ್ ಮಾಡುವುದು ? "

" ಅಂದರೆ ಸುಮ್ಮನೆ ಮನೆಗೆ ಹೋಗಿ ಕುಳಿತಿರುವುದೆ ? "

" ಕುಳಿತಿರಬೇಕೇಕೆ ? ಊಟ ಮಾಡಬಹುದು—"

" ಊಟ ಮನೆಯಲ್ಲಿಯೆ ? ಅದೂ ಇಂದಿನ ಸಂದರ್ಭದಲ್ಲಿ ? "

" ದಿನಾಲು ಎಲ್ಲಿ ನೀವು ಊಟ ಮಾಡುವುದು ? "

" ಎಲ್ಲಿ ಎಂದೇನೂ ಇಲ್ಲ, ಇದ್ದಲ್ಲಿಯೆ ಊಟ ! "

" ಹಾಗಿದ್ದರೆ ಇಂದು ಇಲ್ಲಿಯೇ ಆಗಬೇಕಾಯಿತಲ್ಲ ? "

" ಇಂದು ಇಲ್ಲಿಯೆ ? ಇಂದು—ಹುಂ ಅದೆಲ್ಲ ಯಾಕೆ ? ನೀನು ಹೊರಡಲು ಸಿದ್ಧಳಾಗು. ಹತ್ತು ನಿಮಿಷಗಳಲ್ಲಿ ಹೊರಟುಬಿಡುವ. ಆಗಲೇ ಏಳೂವರೆಯಾಗುತ್ತ ಬಂದಿದೆ "

" ನಾನೇನು ಸಿದ್ಧಳಾಗುವುದು ? ಕಾದು ಕಾದು ಸಾಕಾಗಿಹೋಯಿತು. ಸಿದ್ಧಳಾಗಿಯೇ ಇಲ್ಲಿ ಬಿದ್ದುಕೊಂಡಿದ್ದೇನೆ."

" ಸರಿ. ಹೀಗೆಯೇ ನೀನು ನನ್ನ ಜೊತೆಯಲ್ಲಿ ಬರುವುದು ? "

" ಮತ್ತೆ ? "

" ಗ್ರೀನ್ಸ್ ಡ್ರೆಸ್ ? "

" ಹಾಗಿದ್ದರೆ ಎಲ್ಲಿಯೋ ಊಟಕ್ಕೆ ಹೋಗುವುದು ಎಂದಾಯಿತು "

" ಇನ್ನೂ ಕೇಳುವುದರಲ್ಲಿಯೆ ಇದ್ದೀಯ ? ಏಳಬಾರದೆ ? "

" ಎಲ್ಲಿಗೆ ಹೋಗುವುದು—ಹೇಳಿದರೆ ಏಳುತ್ತೇನೆ."

" ಹೋದಮೇಲೆ ತಾನಾಗಿಯೆ ಗೊತ್ತಾಗುತ್ತದೆ ಏಳಬಾರದೆ ? "

ಮೋಹಿನಿ ಏಳದಿದ್ದುದನ್ನು ನೋಡಿ ಕುರ್ಚಿಯ ಎದುರಿಗೆ ಬಂದು ಆಕೆಯ ಎರಡೂ ಕೈಗಳನ್ನೆತ್ತಿಕೊಂಡು ಮುಂದಕ್ಕೆ ಸೆಳೆದ. ಕುರ್ಚಿಯ ಉದ್ದಕ್ಕೆ ಮೈಚೆಲ್ಲಿದವಳು ಹಾಗೆಯೆ ಎದ್ದು ನಿಂತಳು. ಹೆಚ್ಚುಕಡಿಮೆ ಆತನ ಮೈಯೊರಸಿ ನಿಂತೇ ಮತ್ತೆ ತೀರ ದಣಿದವಳಂತೆ ಕೇಳಿದಳು .

" ಎಲ್ಲಿಗೆ ಹೋಗುವುದು ? "

" ತಾಜ್—"

" ಛೀ, ಬೇಡ. ತುಂಬ ಬೇಸರವಾಗಿದೆ. ಮನೆಗೆ ಹೋಗಿಬಿಡುವಾ."

" ನನಗಾಗಿಲ್ಲವೇನೊ ! ಬೇಸರ ಎಂದೇ ತಾಜ್‌ಗೆ ಹೋಗುವುದು ! "

" ಹೋಗಿ ತಲಪುವಷ್ಟರಲ್ಲಿಯೆ ಕಾರ್‌ನಲ್ಲಿ ನಾನು ನಿದ್ರೆ ಹೋಗಬಹುದು."

" ಆಗಬಹುದು. ಎಚ್ಚರಿಸಲು ನಾನಿದ್ದೇ ಇರುತ್ತೇನೆ ! ಹುಂ, ಹತ್ತು ನಿಮಿಷ. ಹತ್ತು ನಿಮಿಷದಲ್ಲಿ ಕಾರಿನಲ್ಲಿರಬೇಕು."

ಹೇಳಿದಂತೆ ಹತ್ತು ನಿಮಿಷಗಳಲ್ಲಿ ಕಾರಿನಲ್ಲಿ ಕಾಲಿಡುವುದಕ್ಕೆ ಮೋಹಿನಿ ಸಿದ್ಧಳಾಗಿ ನಿಂತಿದ್ದಳು. ರಂಗನಾಥನ್‌ನೆ ಒಂದೆರಡು ನಿಮಿಷ ತಡವಾಗಿ ಬಂದ. ಗುಲಾಬಿಯ ಬದಲಾಗಿ ತಿಳಿಹಸಿರು ಬಣ್ಣದ ನವಿಲುಗಣ್ಣಿನ ಪತ್ತಲವನ್ನುಟ್ಟು ಅದಕ್ಕೆ ಒಪ್ಪುವ ಇಳಿಕೊರಳಿನ ಜಂಪರ್ ಹಾಕಿದ್ದಳು ರಂಗನಾಥನ್ ಬಂದವನೆ,

" ಸರಿ—" ಎಂದ.

" ಏನು ? "

" ಏನೂ ಇಲ್ಲ ! "

" ಹೇಳದಿದ್ದರೆ ನಾನು ಬರುವುದೇ ಇಲ್ಲ ! " ಎಂದು ಹುಸಿಮುನಿಸಿನ ವೈಯಾರ ಬೀರಿದಳು. ಮೊದಲೆ ಆಕೆಯ ಚೆಲುವಿನಿಂದ ಸೂರೆಗೊಂಡಿದ್ದ ರಂಗನಾಥನ್ ಆಕೆ ಆ ಕ್ಷಣಕ್ಕೆ ಏನು ಹೇಳಿದರೂ ಮಾಡುವ ಮನಃಸ್ಥಿತಿಯಲ್ಲಿದ್ದ. ಆದರೂ ಹೇಳಿದ ಬೇಕೆಂತಲೆ :

" ಆಮೇಲೆ ಹೇಳುವೆ, ಈಗ ಬೇಡ "

" ಈಗಲೇ ಹೇಳಿ—"

" ಶಾಕುಂತಲದಲ್ಲಿ ದುಷ್ಯಂತ ಶಕುಂತಲೆಯನ್ನು ನೋಡಿದಾಗ ಒಂದು ಮಾತು ಹೇಳುತ್ತಾನೆ. ಜ್ಞಾಪಕವಿದೆಯೆ ? "

" ಏನು ಹೇಳುತ್ತಾನೆ ? " ಎಂದು ಕತ್ತು ಕೊಂಕಿಸಿದಳು.

" ಕಿಮಿವ ಹಿ ಮಧುರಾಣಾಮ್—"

" ಕೆಲಸವಿರಲಿಲ್ಲ ಆ ದುಷ್ಯಂತನಿಗೆ—"

" ಅಂತೆಯೇ ಆಶ್ರಮಕ್ಕೆ ಬಂದ, ಬಂದದ್ದೇ ಒಂದು ಕೆಲಸವಾಯಿತು ! "

ಮುಂದೆ ಐದು ನಿಮಿಷಗಳಲ್ಲಿ ಕಾರಿನಲ್ಲಿ ಮೋಹಿನಿ ನಿದ್ರೆಯ ಸೋಗನ್ನು ನಟಿಸಿ ರಂಗನಾಥನ್ ಬದಿಯಲ್ಲಿ ಒರಗಿದ ಹಾಗಿದ್ದಳು ಆ ಸಾನ್ನಿಧ್ಯವನ್ನು

ತಪ್ಪಿಸುವುದೇಕೆಂದು ಆತ ಸುಮ್ಮನಾಗಿಯೆ ಇದ್ದ. ತಾಜ್‌ದೆದುರು ಕಾರು ನಿಂತಾಗ ಮಾತ್ರ ಮೋಹಿನಿ ತನ್ನನ್ನು ರಂಗನಾಥನ್ ಆಗಲೆ ಮೈದಡವಿ ಎಬ್ಬಿಸ ಬಹುದೆಂದುಕೊಂಡವಳು ತಾನಾಗಿಯೆ ಏಳಬೇಕಾಯಿತು.

" ನಿದ್ರೆ ಮುಗಿಯಿತೆ ? " ಎಂದ ರಂಗನಾಥನ್.

" ಮತ್ತಿನ್ನೇನು ಮಾಡುವುದು ? ನನ್ನನ್ನು ಇಲ್ಲಿಯೇ ಕಾರ್‌ನಲ್ಲಿ ಬಿಟ್ಟು ನೀವೊಬ್ಬರೆ ಊಟ ಮಾಡಿಬಂದರೆ ಏನು ಎಂದು ಎದ್ದೆ—"

" ಅಂತೂ ಚೆನ್ನಾಗಿದೆ ನಿನ್ನ ನಿದ್ರೆ—ನಿದ್ರೆಯಲ್ಲಿಯೂ ಇಷ್ಟೆಲ್ಲ ಯೋಚನೆ ಮಾಡುವಿ ಎಂದಮೇಲೆ. ಅಲ್ಲದೆ ಮಲಗಿದವರನ್ನು ಏಳಿಸಬಾರದು ಎನ್ನುತ್ತಾರೆ. ನೈಕಂ ಸುಪ್ತೇಷು ಜಾಗ್ರಯಾತ್—"

ರಂಗನಾಥನ್ ಸೀಟ್‌ಗಳನ್ನು ಮಧ್ಯಾಹ್ನದಲ್ಲಿಯೇ ಫೋನ್ ಮೇಲಿಂದ ಕಾದಿರಿಸಿದ್ದನಾದ್ದರಿಂದ ಹತ್ತು ನಿಮಿಷಗಳಲ್ಲಿ ಇಬ್ಬರೂ ಊಟದಲ್ಲಿ ತೊಡ ಗಿದ್ದರು. ರಂಗನಾಥನ್‌ನ ನಯವಾದ ಮಾತುಗಾರಿಕೆ ನಿತಾಂತವಾಗಿ ನಡೆದೇ ಇತ್ತು.

" ಇಂದಿನ ಪೇಪರ್ ನೋಡಿದ್ದೀಯಾ ? "

" ಇಲ್ಲ. ಯಾಕೆ ? "

" ಸರಿ. ಒಳ್ಳೆ ಸೆಕ್ರೆಟರಿ ನೀನು. ಕೊಟ್ಟ ಜಾಹೀರಾತು ಬಂದಿತೊ ಇಲ್ಲವೊ ನೋಡುವ ಹಾಗಿಲ್ಲವೆ ? "

" ಅದೆಲ್ಲ ಅಕೌಂಟೆಂಟ್ ಕೆಲಸ."

" ಸರಿ. ಆದರೆ ಕೊಟ್ಟಿದ್ದು ಏನು, ಯಾವ ಜಾಹೀರಾತು ಅದನ್ನಾದರೂ "

" ನೋಡಲೇ ಇಲ್ಲ. ಇಡೀ ಮಧ್ಯಾಹ್ನ ಇಂದು ಹೇಗೆ ಕಳೆಯಿತೊ! ನಿಜವಾಗಿಯೂ ಏನೂ ಕೆಲಸ ಮಾಡಿಯೇ ಇಲ್ಲ. ಸುಮ್ಮನೆ ಕುಳಿತಿದ್ದೆ. ಏನದು ಜಾಹಿರಾತು ? "

ರಂಗನಾಥನ್ ವೇಟರನಿಗೆ ಅಂದಿನ 'ಟೈಮ್ಸ್' ತರಹೇಳಿದ ಒಂದೆರಡು ನಿಮಿಷಗಳಲ್ಲಿ ಅರ್ಧ ಪುಟವನ್ನೆ ಆಕ್ರಮಿಸಿದ ಶಾಕುಂತಲದ ಭವ್ಯವಾದ ಜಾಹೀರಾತು ಆಕೆಯ ಕಣ್ಣೆದುರಿನಲ್ಲಿತ್ತು. ಯಶೋಮತಿ, ಮೋಹಿನಿಯರ ಚಿತ್ರಗಳನ್ನು ಬೇರೆಬೇರೆಯಾಗಿ ಕೊಡಲಾಗಿತ್ತು. ಕೆಳಗಿನ ವಿವರಣೆಯಲ್ಲಿ 'ಸೂತ್ರದ ಬೊಂಬೆ'ಯನ್ನು ಮುನ್ನೋಡಬೇಕೆಂದು ದಪ್ಪನಾಗಿ ಮುದ್ರಿತ

ವಾಗಿದ್ದು, ಮೋಹಿನಿಯೆ ಮುಖ್ಯ 'ಸ್ಟಾರ್' ಎಂದು ಕಣ್ಣು ಕುಕ್ಕುವಂತೆ ಸಾರಲಾಗಿತ್ತು. ಮೋಹಿನಿ ಕೇಳಿದಳು.

"ಜೂನ್ ಒಂದಕ್ಕೆ ಶಾಕುಂತಲದ ಉದ್ಘಾಟನೆ ಎಂದಿದ್ದೀರಲ್ಲ, ಅಷ್ಟರಲ್ಲಿ ಸಿದ್ಧವಾಗುತ್ತದಯೆ ? ಇನ್ನೂ ಬೇಕಾದಷ್ಟು ಕೆಲಸವಿದೆ"

"ನೋಡುವಿಯಂತೆ. ಇನ್ನು ಇಪ್ಪತ್ತು ದಿನದಲ್ಲಿ ಮುಗಿಯಿಸುತ್ತೇನೆ ಡಬಲ್ ಶಿಫ್ಟಿನ ಏರ್ಪಾಡು ಮಾಡಿಬಿಟ್ಟಿದ್ದೇನೆ—"

"ಆದಾಯಿತು. ಆದರೆ ಇದೇನು 'ಸೂತ್ರದ ಬೊಂಬೆ'ಯ ಜಾಹೀರಾತು —ಈಗಲೆ ?"

"ಶಾಕುಂತಲ ಪ್ರಾರಂಭವಾದ ದಿನ ಅದರ ಮೊದಲ ಶಾಟ್ ಶೂಟಿಂಗ್!"

"ಭಾರಿಯಾಯಿತು ಆದರೆ ಮುಖ್ಯ ಕೆಲಸ ಮಾಡುವವರನ್ನು ಒಂದು ಮಾತನ್ನೂ ಕೇಳದೆ ಹೀಗೆ ಪ್ರಕಟಿಸಬಹುದೆ ?"

"ನಿನ್ನನ್ನು ಕೇಳಬೇಕ—ನಾನು ?"

"ನನ್ನ ಪರವಾಗಿ ಎಲ್ಲ ಯೋಚನೆಯನ್ನೂ ನೀವೇ ಮಾಡುತ್ತಿದ್ದ ಹಾಗಿದೆಯಲ್ಲ ?"

"ಸರಿ. ತಪ್ಪೇನು ?"

"ಹೆಲ್ಮರ್ ಯಾರು ಮಾಡುತ್ತಾರೆ ?"

"ನೀನು ನೋರಾ ಎಂದಮೇಲೆ ಹೆಲ್ಮರ್ ಯಾರಾಗಬೇಕು ? ಹೇಳು."

"ನನಗೇನು ಗೊತ್ತು, ಯಾರನ್ನು ಗೊತ್ತುಮಾಡಿದ್ದೀರಿ!"

"ಬೇರೆ ಯಾರನ್ನಾದರೂ ಗೊತ್ತುಮಾಡುವುದೆ ?"

"ನೀವು ಮಾಡುತ್ತೀರಾ ?"

"ಯಾಕೆ ? ನನ್ನಿಂದ ಅಷ್ಟು ಅಭಿನಯ ಆಗದು ಅನ್ನುತ್ತೀಯಾ ?"

"ಆಗದೆ ? ಈ ಜಾಹೀರಾತಿನಲ್ಲಿ ಅದನ್ನು ನೀವು ಕಾಣಿಸಿಲ್ಲ. ಅದಕ್ಕಾಗಿ ಕೇಳಿದೆ."

"ಅದನ್ನು ಈಗಲೆ ಜಾಹೀರಾತು ಮಾಡುವ ಹಾಗಿಲ್ಲ—"

ಊಟ ನಡೆದೇ ಇತ್ತು, ಮಾತಿನಂತೆ ಸರಾಗವಾಗಿ. ಊಟ ಮುಗಿದಾಗ ಮೋಹಿನಿ ಕೇಳಿದಳು :

"ಹೊರಡುವುದಲ್ಲವೆ ಇನ್ನು ?"

" ಇಷ್ಟು ಬೇಗ? ಇದೀಗ ಒಂಬತ್ತುಕಾಲು. ಅಲ್ಲದೆ—"

" ಅಲ್ಲದೆ ಏನು?"

" ಇನ್ನೂ ನನ್ನ ಬೇಸರ ಕಳೆಯಲಿಲ್ಲ. ಊಟದ ಕಾರ್ಯಕ್ರಮ ಇನ್ನೂ ಮುಗಿಯಲಿಲ್ಲ!"

" ಹೊಟ್ಟೆ ತುಂಬಲಿಲ್ಲವೆ? ನನಗಂತೂ—"

" ಹೊಟ್ಟೆ ತುಂಬಿದೆ ಬೇಸರಕ್ಕೊಂದು ಔಷಧ—"

" ಅಂಥದೇನೂ ಬೇಡ. ದಯವಿಟ್ಟು—"

" ಸರಿ. ಹಾಗಿದ್ದರೆ ತಾಜ್‌ಗೆ ಯಾತಕ್ಕೆ ಬರಬೇಕು? ಅಲ್ಲಿಯೆ ಎಲ್ಲಾದರೂ ಒಂದು ಇರಾಣೀ ಹೋಟಲಿನಲ್ಲಿ ತಿಂದಿದ್ದರೂ ಆಗುತ್ತಿತ್ತಲ್ಲ!"

" ನೀವೇನು ಬೇಕಾದದ್ದು ತೆಗೆದುಕೊಳ್ಳಿ ನನ್ನಿಂದ ಸಾಧ್ಯವಿಲ್ಲ!"

" ರುಚಿಯಾದರೂ ನೋಡು—ಹೇಗಿರುತ್ತದೆ"

" ಹೇಗೇನಿರುವುದು—ಕಹಿ"

" ಸಿಹಿಯಾದದ್ದೂ ಇರುತ್ತದೆ. ನೋಡುವಿಯಂತೆ"

" ನನಗೆ ಬೇಡ—"

ಆದರೆ ರಂಗನಾಥನ್ ಆಗಲೆ ವೇಟರ್‌ನನ್ನು ಕರೆದು ಪೇಯಗಳ ಕಾರ್ಡನ್ನು ಕೇಳಿದ್ದ. ವೇಟರ " ಆಜ್ ನಹಿ ಸಾಹೇಬ್, ಡ್ರಾಯ್ ಡೇ" ಎಂದಾಗ ಆತನಿಗೆ ತುಂಬಾ ನಿರಾಶೆಯಾಯಿತು. ಆದರೆ ಮರುಕ್ಷಣದಲ್ಲಿಯೆ ಬೇರೆ ಏನೋ ಯೋಚನೆ ಹೊಳೆಯಿತು. ಮೋಹಿನಿಗೆಂದ:

" ನೋಡಿದೆಯಾ? ನೀನು ಬೇಡ ಅಂದುದಕ್ಕೆ ಸರಿಯಾಗಿ ಆತ ಇಲ್ಲ ಎಂದೇ ಹೇಳಿದ."

" ಸರಿ ಮತ್ತೆ. ಒಳ್ಳೆ ಪಾರಾದೆ."

" ಪಾರಾದೆಯಾ? ಅಂಥದೇನು ದೊಡ್ಡ ಪ್ರಸಂಗ ಬಂದದ್ದು? ಹಾಗೆ ನೋಡಿದರೆ ಪಾರಾಗುವುದೇ ಇಲ್ಲ. ನೋಡುವಿಯಂತೆ."

ಮುಂದೆ ಅರ್ಧ ಗಂಟೆಯಲ್ಲಿ ಪ್ರಿಮ್‌ರೋಜ್‌ವಿಲ್ಲಾದ ಎದುರು ಮೋಹಿನಿ ರಂಗನಾಥನ್ ಇಳಿದು ಮನೆಯ ಪಾವಟಿಗೆಗಳನ್ನು ಏರುತ್ತಿದ್ದರು. ಒಂದೆರಡು ನಿಮಿಷಗಳಲ್ಲಿ ಇಬ್ಬರೂ ತಿಳಿಬೆಳಕಿನಿಂದ ರಂಜಿತವಾದ ನಡುವಿನ ಕೋಣೆಯಲ್ಲಿ ಒಂದು ಮೆತ್ತನ್ನ ಸೋಫಾದಲ್ಲಿ ಮೈಚೆಲ್ಲುತ್ತಿರುವಾಗ ಮೋಹಿನಿ ಕೇಳಿದಳು:

" ಚೆನ್ನಾಗಿದೆ, ನಿಮ್ಮ ಫ್ಲಾಟ್. ಎಷ್ಟು ಕೋಣೆಗಳಿವೆ ? "

" ಐದು."

" ನನ್ನ ಕೋಣೆ ಯಾವುದು ? "

" ನಿನಗೊಂದು ಬೇರೆಯಾದ ಕೋಣೆ ಆಗಬೇಕೆ ? "

" ಬೇಡವೆ ? ನನ್ನ ಸಾಮಾನುಗಳು ಎಲ್ಲಿ ? "

" ಏನು ಬೇಕಾಯಿತು, ಈಗಾಗಲೆ ? "

" ಬಟ್ಟೆ ಬದಲಾಯಿಸಬೇಡವೆ ? "

" ಏನಂಥ ಅವಸರ ? ಹಾಗೆಯೆ ಇರು. ಆಮೇಲೆ ಬದಲಾಯಿಸು ವಿಯಂತೆ ! "

" ಗೆಸ್ಟ್‌ರೂಮ್ ಎಂದಿರಲ್ಲ—ಎಲ್ಲಿದೆ ? "

" ಅದೇ—ಎದುರಿನದು ! "

" ಹೌದೆ ? "

ಎಂದು ಮೋಹಿನಿ ನಕ್ಕಳು. ' ಅದು ನನಗೆ ಗೊತ್ತು. ಆದರೆ ಅದು ಗೆಸ್ಟ್‌ರೂಮ್ ಅಲ್ಲ ' ಎಂದು ಹೇಳಿದ ಹಾಗಿತ್ತು ನಗೆ. ಇದಕ್ಕೆ ಕಾರಣ ವೆಂದರೆ ರಂಗನಾಥನ್ ಎದುರಿನ ಕೋಣೆಯನ್ನು ನಿರ್ದೇಶಿಸಿದಾಗ ಮೋಹಿನಿ ಸರಕ್ಕನೆ ಮುಖ ತಿರುವಿ ನೋಡಿದ್ದಳು. ಅದು ರಂಗನಾಥನ್‌ನ ಮಲಗುವ ಕೋಣೆ ಎಂದು ಬೇರೆಯಾಗಿ ಹೇಳಬೇಕಾದುದಿರಲಿಲ್ಲ. " ಅಲ್ಲವೇನೊ ? " ಎನ್ನುವಾಗ ರಂಗನಾಥನ್ ಮೋಹಿನಿ ಬದಿಗೆ ಬಂದು ಕುಳಿತು ಆಕೆಯ ಕೆನ್ನೆಗೆ ಕೆನ್ನೆಯನ್ನಿಟ್ಟಿದ್ದ. ಮೋಹಿನಿ ಮಾತನಾಡಲಿಲ್ಲ. " ಯಾಕೆ ? ಅಲ್ಲವೆ ? " ಎಂದು ರಂಗನಾಥನ್ ಮತ್ತೆ ಕೇಳಿದ. ಮೂರನೆಯ ಬಾರಿ ಕೇಳುತ್ತಿರುವಾಗ ಮೋಹಿನಿ ಆತನ ತೋಳಸೆರೆಯಲ್ಲಿದ್ದಳು. ಒಂದೆರಡು ನಿಮಿಷ ಆಕೆ ಮಾತ ನಾಡದಿದ್ದರೂ ಆಕೆಯನ್ನು ಸರಿಯಾದ ರೀತಿಯಲ್ಲಿ ಮಾತನಾಡಿಸುವುದು ರಂಗ ನಾಥನ್‌ನಿಗೆ ಕಷ್ಟವಾಗಲಿಲ್ಲ. ಹಾಗೆ ಮೊದಲಾದ ಮಾತು ಮುಗಿದಾಗ ರಾತ್ರಿಯ ಒಂದು ಗಂಟೆಯಾದರೂ ಆಗಿಹೋಗಿರಬೇಕು !

ಏನಿದ್ದರೂ ಜೂನ್ ಒಂದಕ್ಕೆ ಶಾಕುಂತಲವನ್ನು ಮುಗಿಯಿಸಿ ಪ್ರದರ್ಶಿಸಿಯೆ ಬಿಡುವೆನೆಂಬ ರಂಗನಾಥನ್‌ನ ಹಟ ಸ್ಟೂಡಿಯೋದಲ್ಲಿಯ ಕೆಲಸಗಾರರಿಂದ ಸರಿಯಾದ ಸಹಕಾರವಿಲ್ಲದ್ದಕ್ಕಾಗಿ ಎಲ್ಲಿಯೂ ನಿಲುಕಲಿಲ್ಲ. ಶೂಟಿಂಗ್ ಕೆಲಸವೇನೊ ಮುಗಿಯುವುದರಲ್ಲಿತ್ತು ಆದರೆ ಅದಾದಮೇಲೆ ಮುಂದೆ ನಡೆಯಬೇಕಾದ ಯಾಂತ್ರಿಕ ವಿಧಾನಗಳು, ಸಂಪಾದನೆ, ಗೀತಸಂಯೋಜನೆಗಳು, ಎಲ್ಲವನ್ನು ಹೊಂದಿಸಿಕೊಂಡು ಮುಗಿದಮೇಲೆ ಸೆನ್ಸಾರ್ ಬೋರ್ಡಿನೆದುರು ಪೂರ್ವ ಪ್ರದರ್ಶನ, ಇವೆಲ್ಲ ಮುಗಿಯಬೇಕಾದರೆ ಕನಿಷ್ಟ ಜೂನ್ ಹದಿನೈದಾದರೂ ಬರಬಹುದೆಂದು ರಂಗನಾಥನ್ ಅಂದಿಗಾದರೂ ಚಿತ್ರವನ್ನು ಸಿದ್ಧಗೊಳಿಸುವುದೆಂದು ನಿಜವಾಗಿಯೂ ಹಗಲು ರಾತ್ರಿ ದುಡಿಯುತ್ತಿದ್ದ ಜೂನ್ ಹದಿನೈದಕ್ಕೆ ಶಾಕುಂತಲದ ಉದ್ಘಾಟನೆಯೆಂದೂ, ಮುಂದೆ ಕೆಲವೇ ದಿನಗಳಲ್ಲಿ 'ಸೂತ್ರದ ಬೊಂಬೆ'ಯೆಂದೂ ಜೂನ್ ಒಂದರಿಂದಲೆ ಪ್ರತಿನಿತ್ಯವೂ ದಿನಪತ್ರಿಕೆಗಳಲ್ಲಿ ಭವ್ಯವಾಗಿ ಜಾಹೀರಾತುಗಳನ್ನು ಪ್ರಕಟಿಸುತ್ತಿದ್ದ ಒಂದು ದಿನ ಯಶೋಮತಿಯದಾದರೆ ಮರುದಿನ ಮೋಹಿನಿಯ ಚಿತ್ರಗಳು ಅರ್ಧ ಪುಟ, ಮುಕ್ಕಾಲು ಪುಟದ ಜಾಹೀರಾತುಗಳಲ್ಲಿ ಕಣ್ಣು ಸೆಳೆಯುತ್ತಿದ್ದವು "ಪೇಪರುಗಳು ನಿಮ್ಮವೇ ಇದ್ದ ಹಾಗೆ ಎಷ್ಟು ಪರಿ ಜಾಹೀರು ಮಾಡುತ್ತಿದ್ದೀರಲ್ಲ? ಎಷ್ಟು ದುಡ್ಡು, ಏನು ಕತೆ?" ಎಂದು ಒಂದು ಸಲ ಮೋಹಿನಿಯೆ ಕೇಳಿದಾಗ ರಂಗನಾಥನ್ ಹೇಳಿದ್ದ: "ಈ ಲೆಕ್ಕ ನಿನಗೇನು ಗೊತ್ತಾದೀತು? ಚಿತ್ರ ಹೇಗಿದ್ದರೂ ಜಾಹೀರಾತಿನ ಬಲದಮೇಲೆ ಕೆಲಕಾಲವಾದರೂ ನಿಲ್ಲಬಹುದು, ನಿಲ್ಲುತ್ತದೆ. ಮನಸೆಳೆಯಬಲ್ಲ ಜಾಹೀರಾತಿಗೆ ಜನ ಮೋಸಹೋಗುವ ತನಕ ಅದರ ಪ್ರಯೋಜನವನ್ನು ನಾವು ಪಡೆಯಬೇಕಾದದ್ದೆ. ಒಂದು ವೇಳೆ ಚಿತ್ರ ಕೆಟ್ಟು ಹೋಗಿದ್ದರೆ ಅಥವಾ ಜನರನ್ನು ಹಿಡಿಯದಿದ್ದರೆ, ಜನ ಅಷ್ಟನ್ನು ತಿಳಿಯುವಷ್ಟರಲ್ಲಿ ನಮ್ಮ ಕೆಲಸ ಮುಕ್ಕಾಲುಮೂರುವೀಸೆ ಮುಗಿದು ಹೆಚ್ಚುಕಡಿಮೆ ವೆಚ್ಚಮಾಡಿದ ಹಣ ನಮ್ಮ ಕೈಸೇರಿರುತ್ತದೆ" ಎಂದು ಮುಂತಾಗಿ ವಿವರಿಸಿದ್ದ. ಮೋಹಿನಿಗೆ ಮಾತ್ರ ತನ್ನ ಭಾವಚಿತ್ರಗಳು ದಿನಕ್ಕೊಂದು ರೀತಿಯಲ್ಲಿ ಪ್ರಕಟವಾಗುತ್ತಿದ್ದುದನ್ನು ನೋಡಿ ಆತ್ಮಾಭಿಮಾನ ಬೆಳೆಯುತ್ತಿದ್ದಿತಲ್ಲದೆ ಒಂದೊಂದು

ಸಲ ತನ್ನ ಬಾಳು ಯಾವ ಚಿತ್ರವಿಚಿತ್ರವಾದ ರೀತಿಯಲ್ಲಿ ರೂಪುಗೊಳ್ಳುತ್ತಿದೆ ಯಲ್ಲ ಎಂದು ಬೆರಗುಪಡುವಂತಾಗುತ್ತಿದ್ದಿತು.

ಹೀಗೆ ಆಕೆಯ ಚಿತ್ರದ ಜಾಹೀರಾತುಗಳನ್ನು ನೋಡಿ ಬೆರಗುಪಟ್ಟವರಲ್ಲಿ ವಸಂತನೂ ಒಬ್ಬ ನಾಲ್ಕಾರು ಬಾರಿ ನೋಡಿದ್ದನಾದರೂ ಕೆಲಸದ ಒತ್ತಡದಲ್ಲಿ ಆ ಕಡೆಗೆ ವಿಶೇಷವಾಗಿ ಆತನ ಗಮನ ಹರಿದಿರಲಿಲ್ಲ. ಆದರೆ ಜೂನ್ ತಿಂಗಳ ಮೊದಲ ವಾರದಲ್ಲಿ—ಚಿತ್ರ ಪ್ರದರ್ಶಿತವಾಗುವುದಕ್ಕೆ ಸುಮಾರು ಏಳೆಂಟು ದಿನ ವಿದ್ದಾಗ—ಒಂದು ಶನಿವಾರ ಆಫೀಸಿನಿಂದ ಬೇಗನೆ ಮನೆಗೆ ಬಂದಿದ್ದನಾದ್ದರಿಂದ ಶಕುಂತಲೆ ಒಳಗಡೆ ಕಾಫಿ ತಯಾರಿಸುತ್ತಿದ್ದಾಗ—ಮತ್ತೆ ಆತನ ಲಕ್ಷ್ಯ ಅದೇ ಜಾಹೀರಾತುಗಳ ಕಡೆಗೆ ಹರಿಯಿತು ಶಕುಂತಲೆಯೊಡನೆ ಎಷ್ಟು ಸರಸವಾಡಿ ದರೂ ಕಡಿಮೆಯಾಗಿಯೊ ಅಥವಾ ಆಕೆಯನ್ನು ಎಲ್ಲಿಯಾದರೂ ಕರೆದು ಕೊಂಡು ಹೋಗಬೇಕೆಂಬ ಹಂಚಿಕೆಯಿಂದಲೊ ದಿನಪತ್ರಿಕೆಯಲ್ಲಿಯ ದೊಡ್ಡ ದಾದ ಚಿತ್ರವಿದ್ದ ಪುಟವೊಂದನ್ನೆತ್ತಿಕೊಂಡು ಅಡಿಗೆಮನೆಯೆಡೆಗೆ ಬರುತ್ತ ಕೇಳಿದ

" ಏನು, ಭಾರಿಯಾಯಿತು ಬಿಡು ನಿನ್ನದೂ. ಅಲ್ಲ, ಇಷ್ಟು ದೊಡ್ಡದಾಗಿ ಪೇಪರಿನಲ್ಲಿ ನಿನ್ನ ಚಿತ್ರ ಬಂದರೂ ನನಗೆ ಹೇಳಬಾರದೆ ? "

" ಪೇಪರಿನಲ್ಲಿ ನನ್ನ ಚಿತ್ರವೆ ! "

" ಅಲ್ಲವೆ ? ಇದು ನೋಡು—"

ಎಂದು ಪುಟವನ್ನು ಎದುರಿಗೆ ಹಿಡಿದ. ಶಕುಂತಲೆ ಆ ಮೊದಲು ಪೇಪರನ್ನು ನೋಡಿರಲೇ ಇಲ್ಲ ಒಂದು ಕ್ಷಣ ದಿಗಿಲೆನಿಸಿತು. ಆದರೆ ಆ ಚಿತ್ರ ಯಾರದಿರಬಹುದೆಂದು ಊಹಿಸಲು ವೇಳೆ ಹಿಡಿಯಲಿಲ್ಲ. ಚೇಷ್ಟೆಗೆ ಪ್ರತಿಯಾಗಿ ಚೇಷ್ಟೆಯೆಂದು ಹೇಳಿದಳು :

" ನೀವಾಗಿಯೆ ಚಿತ್ರವನ್ನು ಕಳಿಸಿ ಅಚ್ಚು ಮಾಡಿಸುತ್ತಿರುವುದನ್ನು ನಾನೇನು ನಿಮಗೆ ಹೇಳುವುದು ? ನೀವು ಮಾಡುತ್ತಿರುವುದು ನಿಮಗೇ ತಿಳಿಯದೆ ? "

" ನಾನೇ ಅಚ್ಚು ಮಾಡಿಸುತ್ತಿದ್ದೇನೆಯೆ ? "

" ಹೌದು. ಚೆನ್ನಾಗಿ ಜ್ಞಾಪಿಸಿಕೊಳ್ಳಿ—"

" ನನಗಂತೂ ಗೊತ್ತಾಗುವುದಿಲ್ಲ—"

" ಆಗಲಿಕ್ಕಿಲ್ಲ. ಹೇಗಾದೀತು ? ಮದುವೆಯಾದ ಹದಿನೈದು ದಿನಗಳಲ್ಲಿ 'ಇಲಸ್ಟ್ರೇಟೆಡ್ ವೀಕ್ಲಿ 'ಯಲ್ಲಿ ಯಾರು ಹಾಕಿಸಿದ್ದರು ಚಿತ್ರವನ್ನ ? "

" ಓ, ಅದೇ ? ಅಷ್ಟು ಮಾಡಿದ್ದು ನಿಜ ! "

" ಅಷ್ಟು ಮಾಡಿದವರಿಗೆ ಇಷ್ಟೂ ಆಗಬಹುದು. ಚಿತ್ರ ಕಂಡರೆ ಬಹಳ ಆಸೆಯೇನೊ ! ನಾನೇ ಎದುರಿನಲ್ಲಿರುವಾಗ ಚಿತ್ರ ನೋಡುವ ಆಸೆ ಯಾಕೊ ? " ಎಂದು ನಕ್ಕು " ಅದು ನನ್ನ ಚಿತ್ರವಲ್ಲ. ನನ್ನಂಥವರ ಬೇರೆ ಯಾರದೊ ಚಿತ್ರ! " ಎಂದಳು.

" ನಿನ್ನದಲ್ಲವೆ ಈ ಚಿತ್ರ ? "

" ಅಲ್ಲ ! "

" ಹಾಗಾದರೆ ಯಾರದು ? "

" ನಾನೇತಕ್ಕೆ ಹೇಳಬೇಕು ಗೊತ್ತಿದ್ದೂ ಕೇಳುವವರಿಗೆ—"

" ನಿನಗೆ ಗೊತ್ತಿಲ್ಲ ಎಂದು ಹೇಳಲಾರದ್ದಕ್ಕೆ ಅಲ್ಲವೆ ಇಷ್ಟು ಮಾತು ? "

" ಗೊತ್ತಿಲ್ಲವೆ ನನಗೆ ? ಎಲ್ಲಾ ಗೊತ್ತಿದೆ ! "

" ಯಾರದು ? ಹೇಳು ನೋಡುವ—"

" ಯಾಕೆ ಅದೆಲ್ಲ—"

" ಯಾರದು ಹೇಳಬಾರದೆ ? "

" ಸರಿ. ಆ ಹೆಸರು ಕೇಳಿದರೆ ಸಂತೋಷ ಎಂದು ಕಾಣುತ್ತದೆ ? "

" ಯಾವ ಹೆಸರು ? "

" ಯಾವುದೇನು ? ಆ ನಿಮ್ಮ ಮೋಹಿನಿ ! "

" 'ಆ ನಿಮ್ಮ' ಎಂದರೇನು ? ಬಹಳ ತುಂಟಿಯಾಗುತ್ತಿದ್ದೀಯ ನೀನು ಇತ್ತೀಚೆಗೆ ! "

" ಆ ನಿಮ್ಮ ಎಂದರೆ ನಿಮ್ಮ ಆ—"

" ಸಾಕು, ಸಾಕು—"

ಎಂದು ವಸಂತ ಸರಕ್ಕನೆ ಆಕೆಯ ಬಾಯನ್ನು ಮುಚ್ಚಿಬಿಟ್ಟು ಆಕೆ " ಬಿಡಬಾರದೆ ? ಇದೇನು, ಎಲ್ಲಾದರೂ—" ಎನ್ನುವಂತೆ ಮಾಡಿದ. ಇಂಥ ಸರಸ ನಿತ್ಯವೂ ನಡೆಯುತ್ತಿದ್ದಿತು. ಆಫೀಸು ಮುಗಿದಮೇಲೆ ಅಲ್ಲಿ ಇಲ್ಲಿ ಅಲೆದಾಡಿ, ಯಾವಾಗಲೊ ಮನೆಯನ್ನು ಸೇರುತ್ತಿದ್ದ ವಸಂತ ಮದುವೆಯಾ

ದಾಗಿನಿಂದ ನೇರವಾಗಿ ಮನೆಗೆ ಬರುತ್ತಿದ್ದನಲ್ಲದೆ ಸಾಯಂಕಾಲಗಳನ್ನು ಶಕುಂತಲೆಯೊಡನೆ ಹರಟೆಯಲ್ಲಿಯೆ ಕಳೆಯುತ್ತಿದ್ದ. ಅಂದು ಸಾಯಂಕಾಲವೂ ಅಷ್ಟೆ ವಸಂತನೆಂದ

" ನೋಡಿದೆಯಾ, ಆಕೆ ಹೇಗೆ 'ಮುಂದೆ' ಬಂದಿದ್ದಾಳೆ. ನೀನೂ ಗ್ರಾಜುಯೇಟ್, ಆಕೆಯೂ ಗ್ರಾಜುಯೇಟ್—"

" ಅಂದರೆ ನಾನೂ ಆಕೆಯ ಹಾಗೆ ಫಿಲ್ಮ್ ಕಂಪನಿ ಸೇರಬೇಕಾಗಿತ್ತೆ ? "

" ಆಕೆಯ ಹಾಗೆ ಅಂದರೆ ? "

" ಅಂದರೆ ಗಂಡನನ್ನು ಬಿಟ್ಟು ! "

" ಗಂಡನನ್ನು ಬಿಡಬೇಕಾಗಿಲ್ಲ, ಫಿಲ್ಮ್ ಕಂಪನಿಯನ್ನು ಸೇರಬೇಕಾಗಿಲ್ಲ. ಆದರೆ ನಿನ್ನ ಹಾಗೆ ಮನೆಹಿಡಿದುಕೊಂಡು ಕೂಡಬೇಕೂ ಇಲ್ಲ ಅದಕ್ಕೆ ಹೇಳಿದೆ."

" ಸರಿ ನಿಮ್ಮ ಮಾತು ಗೊತ್ತಿಲ್ಲವೆ ನನಗೆ ? ನಾನೆಲ್ಲಾದರೂ ಕೆಲಸ ಹಿಡಿಯಬೇಕು ಎಂದಲ್ಲವೆ ನಿಮ್ಮ ಅಭಿಪ್ರಾಯ ? "

" ನನ್ನದೇನು ಹಟವಿಲ್ಲ ಮುಂಜಾನೆಯಿಂದ ಸಂಜೆಯವರೆಗೆ ಮನೆಯಲ್ಲಿ ಒಬ್ಬಳಾಗಿಯೇ ಇರಬೇಕಾಗುತ್ತದೆ ಏನಾದರೂ ಒಂದಿಷ್ಟು ಕೆಲಸ ಮಾಡಿದರೆ ಬೇಸರ ಕಳೆಯುವುದಲ್ಲದೆ ನಾಲ್ಕು ಕಾಸೂ ಕೈಗೆ ಬರುತ್ತದೆ."

" ಸರಿ ಆ ಕಾಸೂ ಬೇಡ, ಯಾವ ಕೆಲಸವೂ ಬೇಡ ನನಗೆ. ನನಗೇನೂ ಮನೆಯಲ್ಲಿ ಕೆಲಸ ಕಡಿಮೆಯಾಗಿಲ್ಲ. ಮಾಡಿದರೆ ಬೇಕಾದಷ್ಟು ಕೆಲಸ ಇರುತ್ತದೆ ಮನೆಯಲ್ಲಿ."

" ನಿನ್ನ ಮಾತು ಕೇಳಿದರೆ ನೀನು ಕಾಲೇಜ್ ಓದಿದ್ದೇ ಸುಳ್ಳು ಎಂದು ತೋರುತ್ತದೆ ! "

" ಸುಳ್ಳಾದರೆ ಸುಳ್ಳು. ಮನೆಯನ್ನಾದರೂ ಸರಿಯಾಗಿ ಸಾಗಿಸಿಕೊಂಡು ಹೋಗುತ್ತೇನೆಯೊ ಇಲ್ಲವೊ ? "

" ಮನೆಯನ್ನೇನು ಸರಿಯಾಗಿಸಾಗಿಸಿಕೊಂಡು ಹೋಗುವುದು ? ಮದುವೆ ಯಾದ ಯಾವಳೂ ಮಾಡಿಕೊಂಡು ಹೋಗಬಹುದು. ಅದರಲ್ಲೇನು ವಿಶೇಷ ? "

" ಏನು ವಿಶೇಷವೆ ? ನಿಮ್ಮ ಸ್ಟಾರ್‌ನ ಕೇಳಿ—"

" ಮತ್ತೆ—"

" ಅಲ್ಲ. ನಿಮ್ಮ ಮಾತಿಗೆ ನಿಮಗೆ ಗೊತ್ತಿದ್ದ ಉದಾಹರಣೆ. ಅದಕ್ಕೆಂದೆ "

ಮೋಹಿನಿಯನ್ನು ಕುರಿತು ಹೇಳಬಹುದಾದ ವಿವರಗಳನ್ನು ವಸಂತ ಶಕುಂತಲೆಗೆ ಹೇಳಿದ್ದ. ಮದುವೆಯ ದಿನ ಆಕೆ ಕೊಟ್ಟ ಗಡಿಯಾರ, ಸಿಲ್ಕ್ ಸೀರೆ ನಾಲ್ಕೆಂಟು ದಿನಗಳಲ್ಲಿ ಒಮ್ಮೆಯಾದರೂ ಆಕೆಯ ನೆನಹನ್ನು ತಂದುಕೊಡುತ್ತಿದ್ದವು. ಇದರಿಂದಾಗಿ ಮದುವೆಯಾಗಿ ಶಕುಂತಲೆ ವಸಂತನೊಡನೆ ಇರಬಂದ ಹೊಸದರಲ್ಲಿಯೇ ಆಕೆಯ ವಿಚಾರವಾಗಿ ಎಷ್ಟೋ ವಿವರಗಳನ್ನು ತಿಳಿದಿದ್ದಳು. ತನ್ನ ಆಕೆಯ ಆತ್ಮೀಯವಾದ ಸಂಬಂಧಗಳನ್ನು ಕುರಿತು ವಸಂತ ಸ್ಪಷ್ಟವಾಗಿ ಮಾತನಾಡಿರುವುದು ಸಾಧ್ಯವಿರದಿದ್ದರೂ ವಸಂತ ಯಾವಾಗಲೂ ಆಕೆಯ ಬಗೆಯಲ್ಲಿ ಆಸ್ಥೆಯಿಂದ ಮಾತನಾಡುತ್ತಿದ್ದುದರ ಮೇಲಿಂದ ಶಕುಂತಲೆ ಕೆಲವೊಂದು ವಿಷಯಗಳನ್ನು ಊಹಿಸಬಲ್ಲವಳಾಗಿದ್ದಳು. ಅಲ್ಲದೆ, ಸ್ವಭಾವಕ್ಕೆ ಸರಿಯಾಗಿಯೆಂದೊ, ನೇರವಾಗಿ ಮಾತನಾಡುವುದು ಯುಕ್ತವಲ್ಲವೆಂಬ ವಿವೇಕದಿಂದೊ, ಶಕುಂತಲೆ ಮೋಹಿನಿಯನ್ನು ಉದ್ದೇಶಿಸಿ ಹೆಚ್ಚಾಗಿ ಮಾತುಗಳನ್ನೆ ಎತ್ತುತ್ತಲೆ ಇರಲಿಲ್ಲ. ಇಲ್ಲವೆಂದರೂ ವಸಂತನನ್ನು ಗೇಲಿ ಮಾಡಬೇಕನಿಸಿದಾಗ ಮೋಹಿನಿಯ ಸಮಾಚಾರವನ್ನೆತ್ತಿ ಆತನನ್ನು ಸರಸದಿಂದೆಂಬಂತೆ ಸುಮ್ಮನಾಗಿಸುತ್ತಿದ್ದಳು. ಆದರೆ ಮದುವೆಯನಂತರದಲ್ಲಿ ತಾನು ಮತ್ತು ವಸಂತ ಒಂದು ಸಲ ತಮಗಾಗಿ ಆಕೆ ಏರ್ಪಡಿಸಿದ ಪಾರ್ಟಿಗೆ ಹೋದಾಗ ವಸಂತನೊಡನೆ ಆಕೆ ನಡೆದುಕೊಂಡ ವಿಶೇಷ ವಿಶ್ವಾಸದ ಬಗೆ ಶಕುಂತಲೆಯಲ್ಲಿ ಏನೇನೋ ವಿಚಾರತರಂಗಗಳನ್ನೆಬ್ಬಿಸಿದ್ದವು. ಸಮಯ ಬಂದಾಗ ಕೇಳಿದರಾಯಿತು ಎಂದುಕೊಂಡವಳು ಮದುವೆಯಾದಂದಿನಿಂದಲೂ ಇಂದಿನವರೆಗೆ ಅಖಂಡವಾಗಿ ನಡೆದ ಸರಸಗಳಲ್ಲಿ ಆ ವಿಷಯವನ್ನು ಕುರಿತು ಹೆಚ್ಚಾಗಿ ಯೋಚಿಸುವುದನ್ನೇ ಮರೆಯುತ್ತಿದ್ದಳು. ಆದರೆ ಬೀಳ್ಕೊಡುವಾಗ 'ಮತ್ತೆ ಯಾವಾಗ ಬರುತ್ತೀರಿ? ಬರುವುದಿಲ್ಲವೆ? ಬರಲೇಬೇಕು ಇಲ್ಲ ಎಂದರೆ ನಾನೇನೂ ಕೇಳುವಹಾಗಿಲ್ಲ!' ಎಂದು ಮುಂತಾಗಿ ಮೋಹಿನಿ ಹೇಳಿದ್ದನ್ನು, ಆ ಮಾತುಗಳನ್ನು ಹೇಳುವ ಆಕೆಯ ರೀತಿಯನ್ನು ನೆನೆದಾಗಲೆಲ್ಲ ಮತ್ತೊಮ್ಮೆ ಆ ಕಡೆಗೆ ಹೋಗುವಹಾಗಿಲ್ಲ ಎಂದು ಶಕುಂತಲೆ ನಿರ್ಧಾರ ಮಾಡಿಕೊಂಡಹಾಗಿತ್ತು. ಹೀಗೆಂದೇ ಕಳೆದ ಎರಡು ಮೂರು ತಿಂಗಳಲ್ಲಿ ಆಕೆಯಿಂದ ಎರಡು ಮೂರು ಸಲ ಅದಕ್ಕೆ ಇದಕ್ಕೆ ಎಂದು ಆಮಂತ್ರಣಗಳು ಬಂದಿದ್ದರೂ, ವಸಂತ ಹೋಗಿಬರೋಣವೆಂದಾಗಲೂ ಉಪಾಯವಾಗಿ ಮಾತು ಜಾರಿಸಿ ಹೋಗುವ ಸಂದರ್ಭಗಳನ್ನು ತಪ್ಪಿಸಿದ್ದಳು.

'ಹೋಗಬೇಕು' ಎಂದು ವಸಂತನಿಗೆ ಆಗೀಗ ಅನಿಸುತ್ತಿದ್ದರೂ ಶಕುಂತಲೆಯೊಡನೆಯ ತನ್ನ ಹೊಸ ಬಾಳಿನ ಸರಸಗಳಲ್ಲಿ ಆ ಇಚ್ಛೆ ಬಲಗುಂದುತ್ತಿತ್ತು. ಇತ್ತೀಚೆಗಂತೂ 'ಹೋಗಿಯಾದರೂ ಏನು?' ಎಂದುಕೊಳ್ಳುವಂತಾಗಿದ್ದ. ಅಲ್ಲದೆ ಆಕೆಯನ್ನು ಕಾಣುವುದು ಶಕುಂತಲೆಗೆ ಅಷ್ಟೇನೂ ಇಷ್ಟವಿರಲಿಲ್ಲವೆಂಬುದನ್ನು ತಿಳಿದು ಇಲ್ಲದ ಸಂಶಯಕ್ಕಾಗಲಿ ಮನಸ್ತಾಪಕ್ಕಾಗಲಿ ಯಾಕೆ ಎಡೆಕೊಡಬೇಕೆಂದೂ ಸುಮ್ಮನಾಗಿರುತ್ತಿದ್ದ.

ಆದರೆ ಶಾಕುಂತಲ ಚಿತ್ರದ ಉದ್ಘಾಟನೆ ಮೂರು ದಿನವಿರುವಾಗ ಮತ್ತೊಂದು ಒತ್ತಾಯದ ಕಾಗದ ಬಂದಿತು. ಒಂದು ವಾರ ಮೊದಲಿಗೆ ಬಂದ ಒಂದು ಕಾಗದಕ್ಕೆ ವಸಂತ 'ಆದರೆ ಬರುತ್ತೇನೆ. ಕೆಲಸ ಬಹಳವಾಗಿದೆ' ಎಂದು ಬರೆದದ್ದಕ್ಕೆ ಪ್ರತಿಯಾಗಿ ಮತ್ತೊಂದು ಕಾಗದ ಬಂದಿತ್ತು. ಅದರಲ್ಲಿಯ ಒತ್ತಾಯದ ಕರೆಯನ್ನು ದುರ್ಲಕ್ಷಿಸಲಾಗದೆ ಶಕುಂತಲೆ ಒಪ್ಪಿದರೆ ಹೋದರಾಯಿತೆಂದು ಆಕೆಯನ್ನು ಕೇಳಿದ:

"ಮೋಹಿನಿಯಿಂದ ಕಾಗದ ಬಂದಿದೆ. ಹತ್ತೊಂಬತ್ತನೆಯ ದಿನಾಂಕ ಶಾಕುಂತಲದ ಉದ್ಘಾಟನೆಯಂತೆ, ಏನಿದ್ದರೂ ಬಂದೇ ತೀರಬೇಕೆಂದು ಬರೆದಿದ್ದಾಳೆ—"

"ಹೋಗಿರಲ್ಲ—"

"ಅಂದರೆ, ನೀನು ಬರುವುದಿಲ್ಲವೆ? ಆಕೆ ಕರೆದದ್ದು ಇಬ್ಬರನ್ನೂ—"

"ಕರೆದದ್ದು ಇಬ್ಬರನ್ನೂ ಇರಬಹುದು. ಆದರೆ ನೀವು ಒಬ್ಬರೇ ಹೋದರೇನೆ ಒಳ್ಳೆಯದು—"

"ಯಾರಿಗೆ?"

"ನನಗೆ—ಅಥವಾ ಆಕೆಗೆ!"

"ಹೌದೆ?"

ಎಂದು ವಸಂತ ಸುಮ್ಮನಾಗಿಬಿಟ್ಟ. ಅರೆನಿಮಿಷ ತಡೆದು ಹೇಳಿದ:

"ಸರಿ. ಹಾಗಿದ್ದರೆ ಯಾರೂ ಹೋಗುವುದೇ ಬೇಡ. ನಾವು ಹೋಗದಿದ್ದರೆ ಏನಾಗಬೇಕು? ಉದ್ಘಾಟನೆ ನಿಂತುಹೋಗುವುದಿಲ್ಲವಲ್ಲ! ಏನೊ ಬಹಳ ಒತ್ತಾಯಪಡಿಸಿ ಬರೆದಿದ್ದಾಳೆ. ಅದಕ್ಕೆ ಹೇಳಿದೆ."

ತನ್ನ ಮಾತು ವಸಂತನನ್ನು ನೋಯಿಸಿತ್ತೆಂಬುದು ಶಕುಂತಲೆಗೆ ತಟ್ಟನೆ

ಹೊಳೆಯಿತು. ವಸಂತ ಆ ರೀತಿ ಅಸಮಾಧಾನಪಡುವುದು ಆಕೆಗೆ ಎಂದಿಗೂ ಬೇಡವಾಗಿರುತ್ತಿತ್ತು. ವಸಂತ ಮೋಹಿನಿಯರ ಪೂರ್ವಾಪರಗಳ ವಿಚಾರದಲ್ಲಿ ಆಕೆ ಏನೇ ತಿಳಿದುಕೊಂಡಿದ್ದರೂ ಒಂದು ಸಮಾಧಾನವನ್ನು ಆಕೆ ತನ್ನಷ್ಟಕ್ಕೆ ಹೇಳಿಕೊಳ್ಳುತ್ತಿದ್ದಳು. 'ಯಾವುದೂ ಗೊತ್ತಿಲ್ಲದಾಗ ಇಲ್ಲದ ಸಂಶಯದ ಬೀಜಗಳನ್ನು ಮನಸ್ಸಿನಲ್ಲಿ ಬಿತ್ತಿಕೊಂಡು ಒದ್ದಾಡುವುದು ಮೂರ್ಖತನ. ಅಂಥ ವಿಷಬೀಜಕ್ಕೆ ಆಸ್ಪದ ಕೊಡವುದೇ ತಪ್ಪು' ಎಂದು. ಅಂತೆಯೆ ನೊಂದ ದನಿಯಲ್ಲಿ ಹೇಳಿದಳು.

"ನಾನೀಗ ಹೋಗುವುದಕ್ಕೆ ಬೇಡ ಎಂದೆನೆ? ಯಾಕೆ ಸುಮ್ಮನೆ ಅಸಮಾಧಾನ?"

"ಬೇಡ ಎನ್ನಲಿಲ್ಲ. ಬೇಕಾದರೆ ನೀವು ಹೋಗಿರಿ ಎಂದೆ. ಅಲ್ಲವೆ?"

"ನಾನು ಬರುವುದಿಲ್ಲ ಎಂದೆನೆ?"

"ಹಾಗೆ ಸ್ಪಷ್ಟವಾಗಿ ಹೇಳಲಿಲ್ಲ, ನಿಜ—"

ಎಂದು ವಸಂತ ಸುಮ್ಮನಾದ. ಶಕುಂತಲೆಯ ಮನಃಸ್ಥಿತಿಯನ್ನು ವಸಂತ ತಿಳಿಯದೆ ಹೋದ. ಶಕುಂತಲೆ ಸುಮ್ಮನಾದಳು. ವಸಂತನಿಗಾದ ಅಸಮಾಧಾನದಿಂದ ಆಕೆಯ ಬಾಯಿ ಕಟ್ಟಿದಂತಾಗಿತ್ತು. ಆತನ ಮುಖವನ್ನೇ ಒಂದರೆಕ್ಷಣ ನಿಟ್ಟಿಸಿ ನೋಡಿದಳು. ಆ ನೋಟದಲ್ಲಿ ಯಾವ ಬೇಡಿಕೆಯಿದ್ದಿತೊ! 'ಅಯ್ಯೊ' ಇಂಥ ಒಂದು ಚಿಕ್ಕ ಮಾತಿಗಾಗಿ ನಿಮ್ಮನ್ನು ನೋಯಿಸಿದೆನೆ!' ಎಂದು ತನ್ನನ್ನೆ ದೂಷಿಸಿಕೊಳ್ಳುತ್ತಿರುವವಳ ಮುದ್ರೆ ಇದ್ದಿತು. ವಸಂತ ಇನ್ನೊಂದು ಮಾತನ್ನು ಆಡಿದ್ದರೆ ಆಕೆಯ ಕಣ್ಣಂಚಿನಲ್ಲಿ ತುಯ್ಯುತ್ತಿದ್ದ ನೀರ ಹನಿ ಕೆಳಗಿಳಿಯುತ್ತಿದ್ದಿತು. ಅದನ್ನು ಗುರುತಿಸಿದ ವಸಂತನ ಮನಃಸ್ಥಿತಿ ತಟ್ಟನೆ ಬದಲಾಯಿಸಿತು. ತನಗಾಗಿ ಸರ್ವಸ್ವವನ್ನೂ ಸೂರೆಮಾಡಿದ ಶಕುಂತಲೆಯ ಭಾವನೆಯ ಆಳವನ್ನು ತಿಳಿಯುವಂತಾಗಿ ಸುಮ್ಮನಾದ—ಆಕೆ ಹೇಗೆ ಹೇಳುತ್ತಾಳೆಯೋ ಹಾಗೆ ಆಮೇಲೆ ನಿರ್ಣಯಿಸಿದರಾಯಿತು ಎಂದು ವಸಂತನಲ್ಲಿಯ ಮಾರ್ಪಾಟು ಆಕೆಗೆ ಹೇಗೆ ತಿಳಿಯಿತೊ! ಮದುವೆಯಾದ ಹೊಸದರಲ್ಲಿ ಗಂಡಹೆಂಡಿರು ಮಾತಿಗಿಂತಲೂ ಹೆಚ್ಚಾಗಿ ಮುಖಭಾವಗಳ ಮೇಲಿಂದಲೆ ಒಬ್ಬರೊಬ್ಬರನ್ನು ಹೆಚ್ಚಾಗಿ ತಿಳಿಯುತ್ತಾರೆ. ಹೀಗೆಂದು ಸಂದರ್ಭ ಸಿಕ್ಕಾಗಲೆಲ್ಲ ಮಾತಿಗೇನೂ ಕಡಿಮೆಯಾಗುವುದಿಲ್ಲ! ವಿಷಯ ಬದಲಾಯಿಸಲೆಂದೊ, ಬರಕೂಡದೆಂದು ತಾನೇನೂ

ಹಟ ಹಿಡಿದಿಲ್ಲವೆಂಬುದನ್ನು ತೋರಿಸಲೆಂದೊ ಶಕುಂತಲೆ ನಸುನಕ್ಕು ಕೇಳಿದಳು :

"ಎಲ್ಲಿದೆ ಆ ಕಾಗದ ?"

"ಯಾವುದು ?"

"ಆಕೆಯಿಂದ ಬಂದದ್ದು ?"

"ಸರಿ. ಅದೆಲ್ಲಾ ಬೇಡ. ಆಮೇಲೆ ನೋಡೋಣವಂತೆ—"

"ಆಮೇಲೇನು ನೋಡುವುದು ? ಕಾಗದ ಕೊಡಬಾರದೆ ?"

ಎಂದು ವಸಂತನ ಕೋಟಿನ ಜೇಬಿಗೆ ಕೈಹಾಕಿದಳು ಆಕೆಯನ್ನು ಹೇಗಾದರೂ ಸಮಾಧಾನ ಪಡಿಸಬೇಕೆಂದಿದ್ದ ವಸಂತನಿಗೆ ಸುಮ್ಮನಿರದ ಹೊರತು ಬೇರೆ ಮಾರ್ಗವಿರಲಿಲ್ಲ ಆದರೆ ಅದನ್ನು ಆಕೆ ಓದಿರದಿದ್ದರೆಯೆ ಚೆನ್ನಾಗಿತ್ತೆಂಬುದು ಆ ಕ್ಷಣಕ್ಕೆ ಆತನಿಗೆ ಹೊಳೆಯಲಿಲ್ಲ. ಶಕುಂತಲೆ ಕಾಗದವನ್ನು ಬಿಡಿಸಿ ಓದಿದಳು : "ವಸಂತರಾಯರಿಗೆ ವಂದನೆಗಳು. ನಿಮ್ಮ ಉತ್ತರವನ್ನು ಓದಿ ತುಂಬಾ ಅಸಮಾಧಾನವಾಯಿತು 'ಕೆಲಸ ಬಹಳವಾಗಿದೆ' ಎಂದು ಬರೆದಿದ್ದೀರಿ. ನಾನು ಕರೆದಾಗಲೆಲ್ಲ ನಿಮಗೆ ಕೆಲಸ ಬಹಳವಾಗಿಯೆ ಇರುತ್ತದೆಯೆ ? ಅದೇನೂ ಇಲ್ಲ. ನೀವಿಬ್ಬರೂ ಹತ್ತೊಂಬತ್ತನೆಯ ದಿನಾಂಕ ಬೆಳಿಗ್ಗೆಯೆ ಬರಬೇಕು. ಬರಲೇಬೇಕು ಹತ್ತು ಗಂಟೆಗೆ 'ಸೂತ್ರದ ಬೊಂಬೆ'ಯ ಮುಹೂರ್ತ. ಮಧ್ಯಾಹ್ನ ನಮ್ಮಲ್ಲಿ ಊಟ. ಆಮೇಲೆ ಮೂರು ಗಂಟೆಗೆ ಶಾಕುಂತಲ. ಈ ಕಾರ್ಯಕ್ರಮ ನಿಶ್ಚಿತ. ನೀವು ಬರಲೇಬೇಕು ಎಂದು ಎಷ್ಟು ಬಾರಿ ಹೇಳಿದರೂ ನನಗೆ ಸಮಾಧಾನವಿಲ್ಲ ಬರುವಿರಲ್ಲವೆ ? ನನ್ನ ಕೈಯಿಂದ ಇಷ್ಟೊಂದು ಪರಿಯಾಗಿ ಹೇಳಿಸಿಕೊಳ್ಳಬೇಕೆ ? ಅಷ್ಟು ದೂರವಾಗಿಬಿಟ್ಟೆನೆ ?—" ಇತ್ಯಾದಿ. ಕಾಗದವನ್ನು ತಾನು ಓದಬಾರದಾಗಿತ್ತೆನಿಸಿತು ಶಕುಂತಲೆಗೆ. ಕಾಗದದಲ್ಲಿಯ ಮೊದಲ ಮತ್ತು ಕೊನೆಯ ಮಾತುಗಳು ಆಕೆಯನ್ನು ನೋಯಿಸಿದ್ದವು. ಈ ಕಾಗದ ವಸಂತ ಆಕೆಗೆ ಉತ್ತರವಾಗಿ ಬರೆದುದಕ್ಕೆ ಉತ್ತರ. ಮೊದಲು ಆಕೆಯಿಂದ ಕಾಗದ ಬಂದಿತ್ತೆಂದಾಗಲಿ, ಅದಕ್ಕೆ ಉತ್ತರ ಬರೆದದ್ದಾಗಲಿ ತನಗೆ ಹೇಳಲಿಲ್ಲವೇಕೆ ? ಆದರೆ ಬರಲಾಗುವುದಿಲ್ಲವೆಂದು ಬರೆದುದನ್ನು ಹೇಳುವುದೇನು, ಎಂದು ಹೇಳಿರಲಿಕ್ಕಿಲ್ಲವೆಂದು ಸಮಾಧಾನ ಹೇಳಿಕೊಂಡಳು. ಆದರೆ ಇದಕ್ಕಿಂತ ಹೆಚ್ಚಿನದು ಕೊನೆಯ ಮಾತು. ಏನದರರ್ಥ ? ಹಾಗಿದ್ದರೆ ಎಷ್ಟು ಸಮೀಪವಾಗಿದ್ದಳು ?— ಅಥವಾ ಸಮೀಪವಾಗಿರಬೇಕು ? ಬೇಡವಾದ ಈ ಯೋಚನೆಗಳಿಂದ ದೂರ

ಓಡಬೇಕೆಂದರೂ ಮನಸ್ಸಿಗೆ ಸಾಧ್ಯವಾಗಲಿಲ್ಲ—ದುಃಸ್ವಪ್ನದ ಅಂಕಿತಕ್ಕೆ ನಮ್ಮ ಚೇತನ ಒಳಪಟ್ಟಾಗ, ಎಷ್ಟು ಬೇಡವೆಂದರೂ ಎಂಥ ಪ್ರಯತ್ನ ಮಾಡಿದರೂ ಅದು ಕಣ್ಣಮರೆಯಾಗದಂತೆ ಅದೇ ಯೋಚನೆ, ಅದಕ್ಕೆಯೆ ಹೊಂದಿಕೊಂಡು ಅದನ್ನೇ ವಿವರವಾಗಿ ತೋರಿಸುವಂಥ ಕೆಲವೊಂದು ಚಿತ್ರಗಳು ಶಕುಂತಲೆಯ ಕಣ್ಣೆದುರು ಕುಣಿದವು ಆದರೆ ಯಾವುದನ್ನೂ ಮುಖದ ಮೇಲೆ ತೋರಗೊಡದೆ ಕಾಗದವನ್ನು ಯಾಂತ್ರಿಕವಾಗಿ ಎಂಬಂತೆ ಮಡಿಸಿ ವಸಂತನ ಕೈಗಿತ್ತು ಸರಕ್ಕನೆ ಒಳಗೆ ಹೋದಳು. ಆಕೆ ಕಾಗದವನ್ನು ಮಡಿಸುತ್ತಿರುವಾಗಲೆ—ಅದಕ್ಕೂ ಮೊದಲೆ—ಇದೆಲ್ಲವನ್ನು ತಿಳಿದ ವಸಂತ ಆಕೆಯ ಬೆನ್ನ ಹಿಂದೆಯೆ ಹೋದ. ಆಕೆ ಒಂದನ್ನೂ ಆಡದಿದ್ದಾಗ ಏನೆಂದು ಹೇಳುವುದು ? ಶಕುಂತಲೆ ನೇರವಾಗಿ ಬಚ್ಚಲುಮನೆಗೆ ಹೋಗಿ ಮುಖ ತೊಳೆದುಕೊಳ್ಳುವುದರಲ್ಲಿದ್ದಳು. ಏನಾದರೊಂದು ಮಾತು ಎಂದು—ಅಥವಾ ಆಕೆಯ ಮನಸ್ಸನ್ನು ತಿಳಿಯೋಣ ಎಂದು ವಸಂತ ಕೇಳಿದ :

"ಇಂದು ಎಲ್ಲಾದರೂ ಅಡ್ಡಾಡಿಕೊಂಡು ಬರೋಣವೆ ?"

"ಅದೇನು ಇಂದು—"

"ಏನೋ ಸುಮ್ಮನೆ—ತಿಂಗಳಿಗೊಮ್ಮೆಯಾದರೂ ನಾವು ಇಬ್ಬರೂ ಕೂಡಿ ಇದ್ದದ್ದು ಜನ ನೋಡಲಿ. ಅಂದರೆ ನಮಗೆ ಮದುವೆಯಾಗಿದೆ, ನಾವು ಇದೇ ಊರಲ್ಲಿ ಇದ್ದೇವೆ ಎಂಬುದೂ ತಿಳಿದೀತು" ಎಂದು ನಗೆಯಾಡಬೇಕೆಂದ. ಆದರೆ ಮಾತು ಹುಸಿ ಹೋಯಿತು.

"ಜನ ನೋಡದಿದ್ದರೆ ನಿಮಗೆ ಸಂತೋಷವಿಲ್ಲವೇನೊ !"

"ನೋಡಿದರೆ ಇನ್ನೂ ಸಂತೋಷ, ಇಷ್ಟೆ—"

"ಹಾಗಿದ್ದರೆ ಪ್ರತಿನಿತ್ಯವೂ ಹೋಗಬೇಕಾಯಿತಲ್ಲ ?"

"ಪ್ರತಿನಿತ್ಯ ಬೇಡ. ಇಂದು ಹೋದರೆ ಸಾಕು."

"ಏನು ವಿಶೇಷ ?"

"ವಿಶೇಷವೇನು ? ಹೋಗುವುದೇ ಒಂದು ವಿಶೇಷ !"

"ಇಲ್ಲಿಯೆ ಇದ್ದು ಸುಮ್ಮನೆ ಹರಟೆ ಹೊಡೆದರಾಗದೆ ?"

"ನಿನಗೆ ಯಾವಾಗಲೂ ಮನೆಯಲ್ಲಿದ್ದು ಬೇಸರವಾಗುವುದಿಲ್ಲವೆ ?"

"ಹೆಂಗಸಿಗೆ ಮನೆ ಬೇಸರವಾದರೆ—" ಎಂದು ನಕ್ಕಳು.

" ಏನಾಗುತ್ತದೆ ? "

" ಗಂಡಸು ಮನೆಗೆ ಬರಬೇಕಾದದ್ದೇ ಇಲ್ಲ ! "

" ಚೆನ್ನಾಗಿದೆ ಹೋಗಲಿ ಚಹವನ್ನಾದರೂ ಮಾಡು—"

" ನಾನು ಹೆರಳು ಹಾಕಿಕೊಳ್ಳಬೇಕಲ್ಲ ! "

" ಅಂದರೆ ಸ್ಟವ್ ನಾನೇ ಹೊತ್ತಿಸಬೇಕು, ಇಷ್ಟೇ ಅಲ್ಲವೆ ಅದರರ್ಥ ? "

" ಬೇಡ, ಬೇಡ. ನಾನೇ ಇವೇ ಬಂದೆ—" ಎಂದು ನಾಲಗೆ ಕಚ್ಚಿ ನಸು ನಕ್ಕಳು.

" ಸಾಕು, ಸಾಕು. ಯಾಕೆ ಇದೆಲ್ಲ? ನನಗೆ ಅಷ್ಟೂ ಗೊತ್ತಾಗುವುದಿಲ್ಲವೆ ? "

ಎಂದು ಚಹದ ಸಿದ್ಧತೆಗೆ ತೊಡಗಿದ ಶಕುಂತಲೆ ಸಮಾಧಾನದಲ್ಲಿದ್ದುದನ್ನು ನೋಡಿ ಗೆಲುವೆನಿಸಿತು ಆದರೆ ಶಕುಂತಲೆಗೆ ಮಾತ್ರ ಆ ಮಾತು ಮರೆತಿರಲಿಲ್ಲ ಅದರ ಸುತ್ತಲೆ ಒಳ ಮನಸ್ಸು ಸುತ್ತಾಡುತ್ತಿತ್ತು 'ಅಷ್ಟು ದೂರವಾಗಿಬಿಟ್ಟೆನೆ?' ಎಂದು ಬರೆಯಬೇಕಾದರೆ ಎಷ್ಟೊ ಸಮೀಪವಾಗಿದ್ದಿರಬೇಕಲ್ಲವೆ? ಸರಿ ಯಾಕೆ ಅದೆಲ್ಲ ಎಂದುಕೊಂಡಳು ಒಂದು ಕ್ಷಣ. ಆದರೆ ಕೂದಲುಗಳನ್ನು ಬಾಚುವ ಕೈ ಒಮ್ಮೊಮ್ಮೆ ನಡುವೆಯೆ ತಡೆಯುತ್ತಿದ್ದಿತು. ಕುಂಕುಮದ ತಿಲಕವನ್ನಿಟ್ಟುಕೊಳ್ಳುವಾಗ ತನ್ನ ಮುಖವನ್ನೇ ನೋಡುತ್ತಿದ್ದವಳು ಕನ್ನಡಿಯಲ್ಲಿ ತನ್ನ ಪ್ರತಿಬಿಂಬದ ಬದಲಾಗಿ ಮೋಹಿನಿಯ ಚಿತ್ರವನ್ನು ಕಾಣುತ್ತಿದ್ದಳು. ಚಹ ಎರಡು ಕಪ್ಪುಗಳಲ್ಲಿ ಸಿದ್ಧವಾಗಿ ಕುಳಿತರೂ ಆಕೆಯ ಪ್ರಸಾಧನ ನಡೆದೇ ಇದ್ದುದನ್ನು, ಆಕೆ ಆಚೆ ಒಮ್ಮೆ ಈಚೆ ಒಮ್ಮೆ ಕತ್ತು ಕೊಂಕಿಸಿ ತನ್ನನ್ನು ತಾನೇ ಮೋಹಿಸಿದಂತೆ ನೋಡುತ್ತಿದ್ದವಳನ್ನು ಗಮನಿಸಿ ಹಿಂದೆಯೆ ಎರಡೂ ಕಪ್ಪುಗಳನ್ನೆತ್ತಿಕೊಂಡು ಬಂದು ವಸಂತ ನಿಧಾನವಾಗಿ ಕೇಳಿದ.

" ಚಹ ತೆಗೆದುಕೊಳ್ಳುತ್ತೀರಾ ? "

" ಛೀ. ಇದೇನು ಹೀಗೆ ಮಾಡುವುದು—"

" ಅಲ್ಲ, ಚಹ ಸಿದ್ಧವಾಗಿದೆ, ಅದಕ್ಕೆಂದೆ "

ಎಂದು ಮತ್ತೆ ಅದೇ ಸೋಗಿನ ವಿನಯ ಅದರ ಸರಸವನ್ನು ಬಲ್ಲ ಶಕುಂತಲೆ ಹಿಂದಿರುಗಿ ಒಳ್ಳೆ ರೀವಿಯಲ್ಲಿ ಸೆಟೆದು ನಿಂತು ಯಜಮಾನಿಯ ಆಢ್ಯತೆಯಿಂದ ಕೇಳಿದಳು.

"ಸರ್ವೆಂಟ್ ಚಹವನ್ನು ಹೀಗೆ ಕೈಯಲ್ಲಿ ಕೊಡಬರಬೇಕೆ? ಅಲ್ಲಿ ಟೀಪಾಯ್ ಮೇಲೆ ಇಡಬೇಕು. ಇಟ್ಟ ಮೇಲೆ ಬಂದು ಮೆತ್ತಗಾಗಿ ಚಹವನ್ನು ಇರಿಸಿದ್ದೇನೆ ಎಂದು ಹೇಳಬೇಕು ಇಷ್ಟೂ ತಿಳಿಯುವುದಿಲ್ಲವೆ?"

"ತಪ್ಪಾಯಿತು—ದೇವಿಯವರೆ"

ಎಂದು ವಸಂತ ನೊಂದ ಸೇವಕನಂತೆ ಮುಂದಿನ ಕೋಣೆಯ ಕಡೆಗೆ ಹೊರಟ. ಶಕುಂತಲೆ ಗಟ್ಟಿಯಾಗಿ ನಕ್ಕು ಆತನ ಬೆನ್ನ ಹಿಂದೆಯೆ ಓಡಿ ಆತನ ಕೈಯಿಂದ ಕಪ್ಪುಗಳನ್ನೆತ್ತಿಕೊಂಡು ಇದುವರೆಗೆ ವಸಂತ ನಟಿಸಿದ ಪಾತ್ರವನ್ನು ಆತನಿಗಿಂತಲೂ ಚೆನ್ನಾಗಿ ಅಭಿನಯಿಸಿದಳು ನಗೆನಲಿದಾಟಗಳು ನಡೆದಿರುವಾಗಲೆ ಯಾರೋ ಹೊರಬಾಗಿಲನ್ನು ತಟ್ಟಿದ ಶಬ್ದವಾಯಿತು ಶಕುಂತಲೆ ಕಪ್ಪು ಬಸಿಗಳನ್ನೆತ್ತಿಕೊಂಡು ಒಳಗೆ ಹೋಗುತ್ತಿರುವಾಗ ವಸಂತ ಬಾಗಿಲು ತೆರೆದ. ಬಂದವ—ಆನಂದ! ವಸಂತನಿಗೆ ಆಶ್ಚರ್ಯವಾಯಿತು

ವಸಂತನಿಗೆ ಆಶ್ಚರ್ಯವೆನಿಸಿದ್ದು ಆನಂದ ಬಂದನೆಂದಲ್ಲ, ಹೀಗೆ ಅನಿರೀಕ್ಷಿತವಾಗಿ ಬಂದ ಎಂದು. ತನಗೆ ಮದುವೆಯಾದನಂತರ, ಶಕುಂತಲೆ ಮನೆಗೆ ಬಂದ ಕೆಲವೇ ದಿವಸಗಳಲ್ಲಿ ಬಂದು ಮಾತನಾಡಿ ಹೋದವ ಮುಂದಿನ ಒಂದೆರಡು ತಿಂಗಳಲ್ಲಿ ನಾಲ್ಕಾರು ಬಾರಿ ಬಂದು ಹೋಗಿದ್ದ. ಆದರೆ ಇತ್ತೀಚಿನ ಎರಡು ತಿಂಗಳಲ್ಲಿ ವಸಂತ ಆತನನ್ನು ನೋಡಿರಲೆ ಇಲ್ಲವಾದ್ದರಿಂದ ಈ ದಿನ ಹೀಗೆ ಬಂದುದಕ್ಕೆ ವಿಶೇಷವಾದ ಕಾರಣಗಳೇನಾದರೂ ಇರಲೇಬೇಕೆಂದು ತವಕಪಡುವಂತಾದ.

ವಸಂತನ ಮದುವೆಯ ಮಂಟಪದಲ್ಲಿ ನೋಡಿದನಂತರ ಮೋಹಿನಿಯನ್ನು ಆನಂದ ಕಣ್ಣಾರೆ ನೋಡಿರದಿದ್ದರೂ ಇತ್ತೀಚಿನ ವಾರದಲ್ಲಿ ದಿನಪತ್ರಿಕೆಯಲ್ಲಿ, ಅದಕ್ಕೂ ಮೊದಲು ಬೀದಿಗಳ ಮೂಲೆಗಳಲ್ಲಿ, ರೈಲ್ವೆ ಪ್ಲಾಟ್‌ಫಾರ್ಮುಗಳಲ್ಲಿ, ಹೆಚ್ಚುಕಡಿಮೆ ಮುಂಬಯಿಯ ಉದ್ದಕ್ಕೂ ಎಲ್ಲಿ ನೋಡಿದಲ್ಲಿ, ಭವ್ಯವಾದ ಜಾಹೀರಾತಿನ ಚಿತ್ರಗಳಲ್ಲಿ ಆಕೆಯನ್ನು ನೂರಾರು ಬಾರಿ ಕಂಡಿದ್ದ ಅಂಥ ಚಿತ್ರಗಳನ್ನು ಮೊದಲ ಸಲ ನೋಡಿದಾಗಿನಿಂದ ಇಂದಿನ ವರೆಗೆ ಆತನ ಮನಸ್ಸು ವಸಂತನ ಮದುವೆಯ ಸುಮಾರಿಗೆಯೆ ಗಟ್ಟಿಮಾಡಿಕೊಂಡ ನಿರ್ಧಾರವನ್ನು ಕೊನೆಗಾಣಿಸುವುದು ಹೇಗೆ ಎಂಬ ಯೋಚನೆಯಲ್ಲಿಯೆ ಇದ್ದಿತು. ಬಿಡುಗಡೆಯ ಹೊರತು ಬೇರೆ ಮಾರ್ಗ ಆತನಿಗೆ ಮೊದಲಿಗೆಯೆ ಕಾಣುತ್ತಿರಲಿಲ್ಲ. ಅದರಲ್ಲಂತೂ

ಆಕೆ ಈ ಪರಿಯಾಗಿ ಚಿತ್ರಪಟ ತಾರೆಯಾಗಿ, ಸಾವಿರ ಜನ ಯುವಕರ, ಕುಹಕರ, ಕಾಮುಕರ ಕಣ್ಣುಗೊಂಬೆಯಾಗಿ ಮೆರೆಯುವಂತಾದಾಗಿನಿಂದಂತೂ ಆತ ಮಾತ್ರ ಮೋಹಿನಿಯ ಆಸೆಯನ್ನು ಪೂರ್ತಿಯಾಗಿ ಬಿಟ್ಟಿದ್ದ. ಬೇರೊಂದು ಮದುವೆಯ ಯೋಚನೆಯನ್ನು ಆತನ ಅಕ್ಕ ಸ್ಪಷ್ಟವಾಗಿಯಾದರೆ, ನಾರಾಯಣರಾಯರು ಸುತ್ತುಸುತ್ತಾಗಿ ಮುಂದರಿಸಿದ್ದರೂ ಆನಂದನಿಗೆ ಯಾವುದೂ ತೋಚದಾಗುತ್ತಿತ್ತು. ಅಂಥ ಮದುವೆಗಿಂತ ಹೆಚ್ಚಾಗಿ ತಾನು ಇಂಥವಳ ಗಂಡ ಎಂದು ಜನ ಆಡಿಕೊಳ್ಳುವುದು ಬೇಡವಾಗಿತ್ತು. ತನ್ನ ವೈವಾಹಿಕ ಜೀವನ ಜನರಿಗೊಂದು ಕತೆಯಾಯಿತೆಂಬುದನ್ನು ಆತ ಎಂದಿಗೋ ತಿಳಿದಿದ್ದರೂ ಹಳೆಯ ಕತೆ ಹೊಸ ರೀತಿಗಳಲ್ಲಿ ಜನರ ಬಾಯಲ್ಲಿ ಬೆಳೆಯುತ್ತಿದ್ದುದರಿಂದ ಆ ಕತೆಯಲ್ಲಿ ತಾನೊಂದು ಅನುಕಂಪನೀಯವಾದ ಪಾತ್ರವಾಗಿರುವುದು ಆತನಿಗೆ ಇನ್ನೂ ಬೇಡವಾಗಿತ್ತು. ಹೀಗೆಂದೇ ಬಿಡುಗಡೆಯ ದಾರಿಗಳನ್ನು ಹುಡುಕುತ್ತಿದ್ದನಲ್ಲದೆ ಇಷ್ಟು ಪರಿಯಾಗಿ ತನ್ನನ್ನು ಅವಮಾನಕ್ಕೆ, ನೋವಿಗೆ ಗುರಿಮಾಡಿದ ಆಕೆಯನ್ನು ಹೇಗಾದರೂ ದಂಡಿಸಬೇಕು, ನೋಯಿಸಬೇಕು ಎನ್ನುವ ಮನಃಸ್ಥಿತಿಯಲ್ಲಿದ್ದ.

"ಓಹೊ, ಬನ್ನಿ, ಬನ್ನಿ. ಇದೇನು ಬಹಳ ಅಪರೂಪ ಮಾಡಿಬಿಟ್ಟಿರಿ, ಬನ್ನಿ—"

ಎಂದು ವಸಂತ ಸ್ವಾಗತಿಸಿದ, ಚಹ ಮಾಡಹೇಳಿದ.

"ಎಲ್ಲೋ ಹೊರಟಹಾಗಿದೆಯಲ್ಲ ?"

ಯಾವುದಕ್ಕೊ ಅಲ್ಲಿ ಬಂದು ಸುಳಿದು ಹೋದ ಶಕುಂತಲೆಯ ವೇಷ ಪ್ರಸಾಧನಗಳಿಂದಾಗಿ ಆನಂದ ಆ ರೀತಿ ಕೇಳಿದ್ದ. ವಸಂತ ಹೇಳಿದ

"ಎಲ್ಲಿಗೆ ಹೋಗುವುದು ? ಮನೆಯಲ್ಲಿಯೇ ಇದ್ದು ಬೇಸರವೆನಿಸಿತ್ತು. ಇಲ್ಲಿಯೇ ಎಲ್ಲಾದರೂ ಸುತ್ತಾಡಿಕೊಂಡು ಬರೋಣ ಎಂದಿದ್ದೆ. ಅದೇನು, ಹೋದರೂ ಅಷ್ಟೆ, ಇಲ್ಲದಿದ್ದರೂ ಅಷ್ಟೆ—"

"ಹಾಗಿದ್ದರೆ ನಾನು ಸುಮ್ಮನೆ ಅಭ್ಯಂತರ ಮಾಡಿದ ಹಾಗಾಯಿತು—"

"ಸರಿ. ನೀವು ಬರುವುದು ಹೆಚ್ಚೋ—ಅದೇನು ಈಗ ಎರಡು ತಿಂಗಳು ಈಚೆ ಸುಳಿಯಲೆ ಇಲ್ಲವಲ್ಲ ? ಊರಲ್ಲಿರಲಿಕ್ಕಿಲ್ಲವೆಂದೆ ಎಲ್ಲಿಯೂ ನಾನು ನಿಮ್ಮನ್ನು ನೋಡಿಯೇ ಇಲ್ಲ."

"ಕಳೆದ ತಿಂಗಳು ಮೈಯಲ್ಲಿ ಅಷ್ಟೊಂದು ಸ್ವಸ್ಥವಾಗಿರಲಿಲ್ಲವೆಂದು ರಜೆ

ಪಡೆದು ಮನೆಯಲ್ಲಿಯೆ ಇರುತ್ತಿದ್ದೆ. ಇತ್ತೀಚೆ ಆಫೀಸಿನಲ್ಲಿ ತುಂಬ ಕೆಲಸ. ತೀರ ಬೇಸರವಾಗಿಬಿಟ್ಟಿದೆ ”

ಕೊನೆಯ ಮಾತು ನಿಜವಾಗಿಯೂ ಅನ್ವರ್ಥಕವಾಗಿತ್ತು. ಯಾವುದಕ್ಕೂ ಮನಸ್ಸಾಗುತ್ತಿರಲಿಲ್ಲವೆಂದೇ ಆತ ಆಗೀಗ ಕಿರುಕುಳ ಅಸ್ವಾಸ್ಥ್ಯಗಳಿಗೆ ಈಡಾಗುತ್ತಿದ್ದ. ಈ ‘ ಬೇಸರ ’ದ ಕಾರಣವನ್ನು ಆತ ವಸಂತನಿಗೆ ವಿವರಿಸಬೇಕಾಗಿಯೆ ಇರಲಿಲ್ಲ. ಶಕುಂತಲೆ ಚಹ ತರುವ ವರೆಗೆ ಅದು ಇದು ಎಂದು ಮಾತು ನಡೆದಿತ್ತು. ಚರ್ಚಿಸಬೇಕಾದ ವಿಷಯವನ್ನು ಹೇಗೆ ನೇರವಾಗಿ ಮೊದಲುಮಾಡಬೇಕೆಂಬುದು ಆನಂದನಿಗೆ ಬಗೆಹರಿಯದಾಗಿತ್ತು ಕೊನೆಗೆ ಹೇಳಿದ

“ ಈಗ ನಿಮ್ಮಿಂದ ಒಂದು ಕೆಲಸ ಆಗಬೇಕಾಗಿದೆ, ವಸಂತರಾವ್—”

“ ಏನು ಹೇಳಿ. ಅದಕ್ಕೇಕೆ ಇಷ್ಟು ಸಂಕೋಚ. ನನ್ನಿಂದ ಆಗುವ ಹಾಗಿದ್ದರೆ, ಬೇಕಾದುದನ್ನು ಹೇಳಿ—”

“ ನಿಮ್ಮ ಫ್ರೆಂಡ್ ಒಬ್ಬರು ಯಾರೋ ಈ ಊರಲ್ಲಿ ಒಳ್ಳೆಯ ಲಾಯರ್ ಆಗಿದ್ದಾರಂತಲ್ಲ—”

“ ಲಾಯರೇ ? ”

“ ಹುಂ. ಗಿರಗಾಂವ್‌ನಲ್ಲಿದ್ದಾರಂತೆ—”

“ ಓ, ನಮ್ಮ ದೇವನೂರಿನ ರಾಮಚಂದ್ರರಾವ್ ಅವರೆ ? ”

“ ಅವರು ನಿಮಗೆ ಗೊತ್ತಿಲ್ಲವೆ ? ”

“ ಗೊತ್ತೆ ? ಒಳ್ಳೆ ಫ್ರೆಂಡು ಯಾಕೆ, ಲಾಯರ್ ಕಡೆಗೆ ಏನಾಗಬೇಕು ?”

ಆನಂದ ಅನುಮಾನಿಸಿದ—ನೋವಿನಿಂದ. ಆದರೂ ತನ್ನಲ್ಲಿಯ ಈ ವಿಚಾರ ಹೇಳದೆಯೆ ವಸಂತನಿಗೆ ಹೇಗೆ ಗೊತ್ತಾಗಬೇಕು ? ಆದರೆ ಹೇಳುವುದು ಹೇಗೆ ? ಅಲ್ಲದೆ ಶಕುಂತಲೆ ಒಳಗಿನಿಂದ ಕೇಳುತ್ತಿದ್ದರೆ ? ಆದರೇನಾಯಿತು, ಮಾಡಲೇಬೇಕಾದ ಕೆಲಸ, ಎಂದುಕೊಂಡು ಹೇಳಿದ :

“ ಒಂದು ವಿಷಯದಲ್ಲಿ ಸಲಹೆ ಪಡೆದು ಕೆಲಸ ನಡಸಬೇಕಾಗಿದೆ ”

“ ಏನು, ಮನೆತನದ ವಿಷಯವೆ ? ” ವಸಂತ ಕೇಳಿದ ತಿಳಿಯದೆ

“ ಮನೆತನದ ವಿಷಯ ಏನು ಬಂತು ? ನಿಮಗೆ ಯಾವುದು ಗೊತ್ತಿಲ್ಲ ? ಇತ್ತೀಚೆ ಪೇಪರುಗಳಲ್ಲಿ, ಪೋಸ್ಟರುಗಳಲ್ಲಿ ನೋಡಿಲ್ಲವೆ ? ನನಗೆ ಸಾಕು, ಈಗ ಆದಷ್ಟು ಅವಮಾನ—”

ಎಂದು ಸುಮ್ಮನಾದ—ಮುಂದೆ ಮಾತನಾಡಲಾಗದವನಂತೆ. ವಸಂತನೂ ಸುಮ್ಮನಾದ. ಆತನಾದರೂ ಏನು ಹೇಳಬೇಕು ? ತನ್ನ ಮದುವೆಯ ಸುಮಾರಿಗಲ್ಲದೆ, ಅನಂತರದಲ್ಲಿ ಆನಂದ ತನ್ನೆಡೆಗೆ ಬಂದಾಗಲೆಲ್ಲವೂ ಆಡಿದ ಮಾತುಗಳ ರೀತಿಯನ್ನು ನೆನೆದರೆ ಇಂದಿಗೆ ಆತ ಇಷ್ಟಕ್ಕೆ ಉದ್ಯುಕ್ತನಾಗುವುದು ದೊಡ್ಡ ವಿಷಯವಾಗಿರಲಿಲ್ಲ ಮೋಹಿನಿಯಿಂದ ಆತ ಬಿಡುಗಡೆಯಾಗಬೇಕೆಂದು ನಿರ್ಧರಿಸಿದುದನ್ನು ಎಂದಿಗೊ ತಿಳಿದಿದ್ದ ಒಂದು ಕಾಲಕ್ಕೆ ಅವರಿಬ್ಬರನ್ನು ಕೂಡಿಸಿ ಮುರಿದ ಅವರ ಮನೆಯನ್ನು ಮತ್ತೆ ಕಟ್ಟುವ ಕೆಲಸದಲ್ಲಿ ಸಹಾಯಕನಾಗಬೇಕೆಂದಿದ್ದ ತಾನೇ ಆ ಮುರಿದ ಮನೆಯನ್ನು ನಾಮಾವಶೇಷವಾಗಿ ಮಾಡುವ ಕೆಲಸದಲ್ಲಿಯೂ ಸಹಾಯಕನಾಗಬೇಕಾಗಿ ಬಂದಿತೆ ಎಂದು ವಿಪರೀತ ವ್ಯಥೆಪಟ್ಟ ಆದರೆ ಮೋಹಿನಿಯನ್ನು ಕುರಿತು ಆತನಿಗೆ ಸಮಾಧಾನ ಹೇಳುವುದಕ್ಕೆ ಯಾವ ಅವಕಾಶ ಉಳಿದಿದ್ದಿತು ? ತಾನು ಹೊಸ ಮನೆಯನ್ನು ಕಟ್ಟಬೇಕೆಂಬ ಹವ್ಯಾಸದಲ್ಲಿ ಹಳೆಯದರ ನೆನಹು ಕೂಡ ಬೇಡವೆಂಬಂತೆ ಹಟ ಹಿಡಿದು ಮೋಹಿನಿ ಮುಂದರಿಯುತ್ತಿದ್ದಾಗ ಏನು ಮಾಡುವುದಕ್ಕಿತ್ತು ? ಇತ್ತೀಚೆ ಮೋಹಿನಿ ಮುಂದರಿಯುತ್ತಿದ್ದ ರೀತಿ ವಸಂತನಿಗೂ ಒಪ್ಪಿಗೆಯಾಗಿರಲಿಲ್ಲ. ಹೊಂದಿಕೆ ಸಾಧ್ಯವಿಲ್ಲವೆಂದಮೇಲೆ ಬಿಡುಗಡೆ ಅನಿವಾರ್ಯ ತನ್ನ ಹೊಸ ನೀತಿಯಿಂದಲೊ ಅನೀತಿಯಿಂದಲೊ ಮೋಹಿನಿಗೆ ತೊಡಕುಗಳೇ ಇಲ್ಲದ ಹಾಗಿತ್ತು. ಆಕೆ ಸುಖವಾಗಿಯೆ ಇದ್ದಳು. ಆದರೆ ಆನಂದ ? ಬಿಡುಗಡೆಯಾಗದೆ ಆತನಿಗೆ ಸುಖದ ದಾರಿ ಇರಲಿಲ್ಲ, ನಿಜ. ಆದರೆ—ಅದೇಕೋ ಆನಂದನ ಬಗೆಯಲ್ಲಿ ವಿಪರೀತ ಕೆಡಕೆನಿಸಿತು. ಅಂತೆಯೆ,

" ತೀರ ಅನ್ಯಾಯವಾಯಿತು—"

ಎಂದು ಉಸಿರಿದ.

" ಸರಿ, ಅನ್ಯಾಯವೆಂದಿಗೊ ಮುಗಿದುಹೋಗಿದೆ. ಈಗ ನನಗೆ ತಡೆಯಬೇಕಾದದ್ದು ಅವಮಾನದ ಕತೆಯನ್ನು. ಆಕೆ ಬೇಕಾದುದನ್ನು ಮಾಡಲಿ. ಅದರಿಂದ ನನಗೇನಾಗಬೇಕು ? ಆದರೆ ಅದರ ಅವಮಾನ ನನಗೆ ತಗಲಬೇಕಾಗಿಲ್ಲ. ಇಷ್ಟಕ್ಕಾಗಿಯಾದರೂ ನಾನಿಂದು ಕೋರ್ಟಿಗೆ ಅನಿವಾರ್ಯವಾಗಿ ಹೋಗಬೇಕಾಗಿದೆ."

" ಕೋರ್ಟಿಗೆ ? "

" ಬೇರೆ ಮಾರ್ಗವೇ ಇಲ್ಲ. ನನಗೆ ಗೊತ್ತಿದ್ದ ಒಬ್ಬಿಬ್ಬರನ್ನು ಕೇಳಿದೆ. ಕಾನೂನಿಗೆ ಸರಿಯಾಗಿ ಇಬ್ಬರೂ ಒಪ್ಪಿಕೊಂಡು, ಬಿಡುಗಡೆಯಾಗಿ ಬೇರೆ ಯಾದರೂ ಇರಬೇಕು , ಇಲ್ಲವೆ ' ವಿಚ್ಛೇದ 'ವೆ ಆಗಬೇಕು. ಯಾವುದಕ್ಕೂ ಕೋರ್ಟಿಗೆ ಹೋಗಬೇಕು."

" ಇಬ್ಬರೂ ಒಪ್ಪಿಕೊಂಡು ಬೇರೆಯಾದರೆ—"

" ಅದರಿಂದಲೂ ಪ್ರಯೋಜನವಿಲ್ಲ, ವಸಂತರಾವ್. ನಾನೆಲ್ಲವನ್ನೂ ಯೋಚಿಸಿದ್ದೇನೆ. ಹಾಗೆ ಬೇರೆಯಾದರೆ ಆಕೆ ನನ್ನ ಹೆಂಡತಿ ಎಂಬ ಮಾತು ತಪ್ಪುವುದಿಲ್ಲ. ಆಕೆಗೆ ವೇತನವನ್ನು ಕೊಡಬೇಕಾಗಲೂ ಬಹುದು. ಅಲ್ಲದೆ ನನಗೆ ಬೇರೆಯಾಗಿ ಮದುವೆ ಮಾಡಿಕೊಳ್ಳಲೂ ಬರುವುದಿಲ್ಲ."

ವಸಂತ ಸುಮ್ಮನಾದ—ಆನಂದನ ಯೋಚನಗಳನ್ನು ನೆನೆದು ಆನಂದ ಬೇರೆ ಮದುವೆಯಾಗುವ ಯೋಚನೆಯಲ್ಲಿದ್ದಾನೆಯೆ? ' ಯಾಕೆ ಇರಬಾರದು ?' ಎಂದು ಒಂದು ಮನಸ್ಸು. ' ಏನು ಅನ್ಯಾಯ ? ' ಎಂದು ಇನ್ನೊಂದು ಮೋಹಿನಿಯ ಬಗೆಯಲ್ಲಿಯ ಆತನ ಸಹಾನುಭೂತಿ ಅಂಥ ಯೋಚನೆಯ ಇಬ್ಬಣಕ್ಕೆ ತೊಡಗಿಸುತ್ತಿತ್ತು ಆದರೆ ಇತ್ತೀಚೆಗೆ ಆ ಸಹಾನುಭೂತಿಯೂ ಬಣ್ಣಗೆಟ್ಟಿತ್ತು ಆಕೆಗಿಂತ ಹೆಚ್ಚಾಗಿ ಆನಂದನೆ ಸಹಾನುಭೂತಿಗೆ ಅರ್ಹನೆಂಬ ಭಾವನೆ ಬೆಳೆಯುತ್ತಿದ್ದಿತಾದ್ದರಿಂದಲೆ ಆತನ ಈ ನಿಷ್ಠುರ ನಿರ್ಧಾರಗಳನ್ನು ಶಾಂತವಾಗಿ ಯಲ್ಲದಿದ್ದರೂ ಅಶಾಂತನಾಗದೆ ಕೇಳುವುದು ಸಾಧ್ಯವಾಗಿತ್ತು ಅದು ಹೇಗಿದ್ದರೂ ಈ ' ವಿಚ್ಛೇದ 'ಕ್ಕೂ ತಾನು ಸಹಕಾರಿಯಾಗಬೇಕಾಗಿ ಬಂದದ್ದು ಎಂಥ ವಿಪರ್ಯಾಸದ ವಿಲಾಸ ಎಂದುಕೊಂಡ. ವಸಂತ ಸುಮ್ಮನಾದುದನ್ನು ನೋಡಿ ಆತ ಅನುಮಾನಿಸುತ್ತಿರಬೇಕೆಂದು ಆನಂದ ಹೇಳಿದ :

" ನಿಮಗೇನೊ ಅನುಮಾನ ಎಂದು ಕಾಣುತ್ತದೆ. ಆದರೆ ನಿಮಗೆ ಎಲ್ಲವೂ ಗೊತ್ತಿದೆ. ನಾವು ಹೊಂದಿಕೊಂಡು ಸರಿಪಡಿಸಿಕೊಂಡಿರಬೇಕಿತ್ತು ಎಂದು ನೀವು ಪ್ರಯತ್ನಿಸಿದ್ದು ನನಗೂ ಗೊತ್ತು. ಆದರೆ ಯಾವ ಪ್ರಯೋಜನವೂ ಆಗಲಿಲ್ಲ. ಇನ್ನು ಮೇಲಂತೂ ಸಾಧ್ಯವೇ ಇಲ್ಲ ನಾನಾದರೂ ಎಷ್ಟು ದಿನ ಎಂದು ಕೊರಳಿಗೆ ಈ ಉರುಲು ಕಟ್ಟಿಕೊಂಡು ಒದ್ದಾಡಬೇಕು ? ಯಾತಕ್ಕಾಗಿ ? ನನಗೂ ಸುಖವಾಗಿ ಇರಬೇಕಾಗಿದೆ. ನನ್ನದು ಇಂಥದು ತಪ್ಪು ಎಂದು ನೀವು ಹೇಳಬಹುದೆ ? "

" ತಪ್ಪು ಒಪ್ಪು ಎಂದಲ್ಲ ನಾನು ಯೋಚಿಸುತ್ತಿರುವುದು. ಇದೆಲ್ಲ ಎಂಥ ವಿಪರೀತಕ್ಕೆ ಬಂದುಬಿಟ್ಟಿತಲ್ಲ ಎಂದು—"

" ಅದಕ್ಕೆ ಯಾರೇನು ಮಾಡುವುದು ? ಮುಖ್ಯ ನನ್ನ ದುರ್ದೈವ. ತಾನಾಗಿಯೆ ಅದು ಮುಗಿಯುವ ಹಾಗೆ ಕಾಣುವುದಿಲ್ಲ ನಾನಾಗಿಯೆ ಮುಗಿಯಿಸಿ ಒಂದು ನಿಲುಗಡೆಗೆ ಬರಲೇಬೇಕಾಗಿದೆ "

" ಅದು ಸರಿ. ಆದರೆ—"

" ಏನು ಅನುಮಾನ ? "

" ಅನುಮಾನವೇನೂ ಇಲ್ಲ. ಆದರೆ ಕೋರ್ಟಿಗೆ ಹೋದರೆ ಎಂಥ ಅವಮಾನ ? "

" ಈಗಾದದ್ದೇನೂ ಕಡಿಮೆಯಾಗಿಲ್ಲವಲ್ಲ ನಾನು ಸುಮ್ಮನೆ ಹೀಗೆಯೆ ಉಳಿದರೆ ಅದೇನೂ ಕಡಿಮೆಯಾಗುವುದಿಲ್ಲ, ಹೆಚ್ಚಾಗುತ್ತದೆ. ಅಲ್ಲದೆ ಇಂದಿನ ಕಾನೂನಿಗೆ ಸರಿಯಾಗಿ ಕೋರ್ಟಿನ ಹೊರತು ಬೇರೆ ಮಾರ್ಗವೇ ಇಲ್ಲವಂತೆ."

" ಅದನ್ನೆಲ್ಲ ಆಗಲೆ ವಿಚಾರಿಸಿದ್ದೀರಾ ? "

" ಅಂತೆಯೆ ಈ ಮಾತು ವಿಚ್ಛೇದದ ಹೊರತು ಬೇರೆ ದಾರಿಯಿಲ್ಲ. ಇಲ್ಲದಿದ್ದರೆ ಆಕೆಯ ಗಂಡ ನಾನು ಎಂದು ಒಪ್ಪಿಕೊಂಡಿರಬೇಕು. ಅಲ್ಲದೆ ಹೆಂಡತಿಯಿಲ್ಲದ ಗಂಡನಾಗಿ ಉಳಿದು, ಆಕೆಯ ಪ್ರತಿಯೊಂದು ಕೃತಿಯ ಅವಮಾನವನ್ನು ನನ್ನ ತಲೆಯ ಮೇಲೆ ಹೊತ್ತು ತಿರುಗಬೇಕು. ಕೋರ್ಟಿಗೆ ಹೋದರೆ ಆಗುವ ಅವಮಾನ ಒಂದೇಟಿಗೆ ಮುಗಿದಾದರೂ ಹೋದೀತು—"

" ಈ ವಿಚಾರ ನಿಮ್ಮ ಮನೆಯವರಿಗೆ ತಿಳಿದಿದೆಯೆ ? "

" ಆಕೆಗೇನು ತಿಳಿಸುವುದು ? ಲಾಯರ್ ನೋಟೀಸ್ ಹೋದಮೇಲೆ ತಾನಾಗಿಯೆ ತಿಳಿಯುತ್ತದೆ."

ಆನಂದ ಎಲ್ಲವನ್ನೂ ಗೊತ್ತುಮಾಡಿಕೊಂಡೇ ಇದ್ದ. ಹಾಗಿದ್ದರೆ ತಾನೇನು ಮಾಡುವುದು ? ಆತನನ್ನು ಏನೆಂದು ಮನವೊಲಿಸುವುದು ಸಾಧ್ಯ ? ಆತ ಹೇಳುತ್ತಿದ್ದ ಪ್ರತ್ಯಂಶವೂ ಸತ್ಯವಾಗಿತ್ತು. 'ಬೇಗನೆ ಒಂದು ನಿಲುಗಡೆಗೆ ಬರಲೇಬೇಕಾಗಿದೆ' ಎಂಬ ಆತುರವೂ, ಆ ಆತುರದ ಹಿಂದೆ ಅಡಗಿದ ಆತನ ನೋವು ಅವಮಾನಗಳೂ ಸ್ಪಷ್ಟವಾಗಿದ್ದವು. ಒಂದು ಕಾಲಕ್ಕೆ ತನ್ನ ಸಹಾನುಭೂತಿ ಮೋಹಿನಿಗಾಗಿ ಸೂರೆಯಾಗಿತ್ತು. ಇಂದು ಅದೇ, ಅಂಥದೇ ಸಹಾನು

ಭೂತಿ ಸಹಾಯಗಳನ್ನು ಆನಂದ ಬೇಡುತ್ತಿದ್ದ. ಆತನಿಗೆ ಬೇಕಾದವನಾಗಿ ಇದ್ದುದಕ್ಕಾಗಿಯೊ, ಇದ್ದವನಂತೆ ನಟಿಸಿದುದಕ್ಕಾಗಿಯೊ ಆತನಿಗೆ ಸಹಾಯ ಒದಗಿಸುವುದು ಅನಿವಾರ್ಯವೇ ಇದ್ದಿತು. ಅಂದಮೇಲೆ—ಏನು ಹೇಳ ಬೇಕೆಂಬುದು ತಿಳಿಯದೆ,

" ಹಾಗಿದ್ದರೆ—" ಎಂದು ತಡವರಿಸಿದ

" ನಾನು ನಿಮ್ಮ ಆಫೀಸಿನ ಕಡೆಗೆ ಯಾವಾಗ ಬರಲಿ ಹೇಳಿ, ಅಂದರೆ ಇಬ್ಬರೂ ಸೇರಿಯೆ ಹೋಗಿ ಬಂದುಬಿಡುವ. ಜೊತೆಯಲ್ಲಿ ನೀವಿದ್ದರೆ ನನಗೂ ಎಷ್ಟೋ ಧೈರ್ಯ ನಾಳಿನ ಶನಿವಾರ ಮಧ್ಯಾಹ್ನ ಬರಲಾ ? "

" ನಾಳಿನ ಶನಿವಾರ—ಬೇಡ ಇನ್ನೆಲ್ಲಿಯೊ ಹೋಗಬೇಕಾಗಿದೆ "

ಇನ್ನೆಲ್ಲಿಯೊ ಹೋಗಬೇಕಾಗಿದೆ ! ಅಂದೇ ಅಲ್ಲವೆ 'ಶಾಕುಂತಲ'ದ ಉದ್ಘಾಟನೆ ? ಅಂದೇ ಅಲ್ಲವೆ ಆಕೆ ತಮ್ಮಿಬ್ಬರನ್ನೂ ಒತ್ತಾಯದಿಂದ ಬರ ಹೇಳಿದ್ದು ? ಛೆ, ಎಂಥ ವಿಪರೀತ, ಎಂಥ ವಿಧಿವಿಡಂಬನೆ ಇದು ! ಎಂದುಕೊಂಡ ಆನಂದನೆಂದ .

" ನಿಮಗೆ ಅವರ ಮನೆ ಗೊತ್ತಿದ್ದರೆ ಭಾನುವಾರ ಮಧ್ಯಾಹ್ನ ಹೋದರೂ ಆದೀತು—"

" ನಾನೊಂದು ಪರಿಚಯದ ನೋಟ್ ಕೊಟ್ಟರೆ ಆಗದೆ ? "

" ಬೇಡ. ನೀವು ಬಂದರೆ ವಾಸಿ. ನಿಮ್ಮೆದುರೇನೋ ನಾನು ಬಾಯಿ ಬಿಚ್ಚಿ ಈ ವಿಷಯ ಮಾತನಾಡುತ್ತೇನೆ ಇನ್ನೊಬ್ಬರೆದುರು ಹೇಳಲು ನಾಲಗೆ ಏಳುವುದಿಲ್ಲ. ಏನಿದ್ದರೂ ನೀವು ಬರಲೇಬೇಕು."

ವಸಂತನಿಗೆ ಕೊನೆಗೆ ಅನಿವಾರ್ಯವಾಗಿ ಒಪ್ಪಲೇಬೇಕಾಯಿತು. ಮತ್ತೆ ಹತ್ತಿಪ್ಪತ್ತು ನಿಮಿಷ ಆನಂದ ಮಾತಾಡುತ್ತ ಕುಳಿತೇ ಇದ್ದ. ಕತ್ತಲಾಗುತ್ತ ಬಂದಿತ್ತು. ಭಾನುವಾರ ಮಧ್ಯಾಹ್ನಕ್ಕೆ ಬರುತ್ತೇನೆಂದು ಹೇಳಿ ಆನಂದ ಅಲ್ಲಿಂದ ಹೊರಟಾಗ ವಸಂತನಿಗೆ ಮಾತಿಲ್ಲದಾಗಿತ್ತು. " ಆಗಲಿ " ಎಂದು ಆತನನ್ನು ಬೀಳ್ಕೊಟ್ಟು ಮತ್ತೆ ಕುರ್ಚಿಯಲ್ಲಿ ಕುಸಿದ. ಸಂಜೆಯ ಧೂಳಿಯಲ್ಲಿ, ಎಲ್ಲಿಂದಲೊ ಇಳಿದುಬರುವ ಕತ್ತಲೆಯ ಮಬ್ಬಿನಲ್ಲಿ ಸಂಧ್ಯಾಸಮಯದ ಸೌಂದ ರ್ಯದ ನೂರು ನಿಲುವುಗಳು ಮುಳುಗುತ್ತಿದ್ದ ಹಾಗೆ ವಸಂತನ ಮನಸ್ಸಿನಲ್ಲಿಯ ಆನಂದ-ಮೋಹಿನಿಯರನ್ನು ಕುರಿತಾದ ಆಸೆಗಳು, ಅಪೇಕ್ಷೆಗಳು, ಬಣ್ಣಗಟ್ಟಿ

ನಿರಾಶೆಯ ಕಗ್ಗವಿಯನ್ನು ಸೇರುತ್ತಿದ್ದವು. ಶಕುಂತಲೆ ದೀಪವನ್ನು ರಿಸಿ ಹತ್ತಿರ ದಲ್ಲಿ ಬಂದುದನ್ನೂ ಆತ ಗಮನಿಸಲಾರದಷ್ಟು ದೀರ್ಘವಾದ ಯೋಚನೆಯಲ್ಲಿ ಮುಳುಗಿದ್ದ ಅವರಿಬ್ಬರ ಮಾತುಗಳನ್ನು ಒಳಗಿನಿಂದ ಕೇಳಿದ ಆಕೆಗೆ ಒಂದು ದೃಷ್ಟಿಯಿಂದ ಸಮಾಧಾನವೇ ಆಗಿದ್ದಿತು ಆನಂದ ತನ್ನ ಗಂಡನಲ್ಲಿ ಇಷ್ಟೊಂದು ವಿಶ್ವಾಸವಿಡಬಹುದಾದರೆ ವಸಂತ-ಮೋಹಿನಿಯರ ಸಂಬಂಧಗಳು ಸಂಶಯಾಸ್ಪದವಾಗಿರುವುದು ಸಾಧ್ಯವಿಲ್ಲವೆಂದೆನಿಸಿ ತಾನು ಸುಮ್ಮನೆ ಏನಾದ ರೊಂದು ಭಾವಿಸಿಕೊಂಡು ತೊಳಲಾಡಿದೆನೆಂದುಕೊಂಡು ಗೆಲುವಾದಳು. ಆದರೂ ಕಾಗದದಲ್ಲಿಯ ಮಾತು ಮನಸ್ಸಿನಿಂದ ಮರೆಯಾಗಲಿಲ್ಲ. ಆಕೆ ಹಾಗೇಕೆ ಬರೆಯಬೇಕು ? ಅದನ್ನು ಓದಿದ ಕ್ಷಣದಲ್ಲಿ ಆಕೆಯ ಮನಸ್ಸನ್ನಾವರಿ ಸಿದ ವ್ಯಗ್ರತೆ ಬಹುಮಟ್ಟಿಗೆ ಆನಂದ ಮತ್ತು ವಸಂತನ ನಡುವೆ ನಡೆದ ಮಾತು ಗಳಿಂದಾಗಿ ದೂರವಾಯಿತೆಂದೇ ಶಕುಂತಲೆ ಕೇಳಿದಳು

"ಅಂತೂ ಶನಿವಾರ ಹೋಗುವುದು ಎಂದಾಯಿತಲ್ಲ!"

"ಯಾರು ಹೇಳಿದರು ?"

"ನೀವೇ ಹೇಳಿದಿರಲ್ಲ, ಅವರ ಜೊತೆಗೆ ಬರಲಾಗುವುದಿಲ್ಲ, ಇನ್ನೆಲ್ಲಿಯೊ ಹೋಗುವುದಿದೆ ಎಂದು"

"ಹೌದು ಇನ್ನೆಲ್ಲಿಯೊ ಅಂದರೆ ಅಲ್ಲಿಗೇ ಎಂದು ಯಾಕೆ ತಿಳಿಯ ಬೇಕು ?" ಎಂದು ವಸಂತ ನಕ್ಕಾಗ ಆ ಮಾತಿನ ಅರ್ಥ ಶಕುಂತಲೆ ಗ್ರಹಿಸಿ ದಂತೆಯೆ ಇದ್ದಿತೆಂಬುದು ಸ್ಪಷ್ಟವಾಯಿತು.

"ಅಲ್ಲವಾದರೆ ಬಿಡಿ. ನನಗೇನು ? ಹೊರಡುವುದು ಎಂದರೆ ಹೊರಡು ವುದು. ಬೇಡ ಎಂದರೆ ಬಿಡುವುದು. ಕೊನೆಗೆ ನಿಮ್ಮ ನಿರ್ಣಯ ಏನಾದರೂ ದಯವಿಟ್ಟು ನನಗೆ ಮೊದಲೇ ತಿಳಿಸಿರಿ. ಆಯತ ವೇಳೆಗೆ ಹೊರಡು ಎಂದರೆ ನನ್ನಿಂದಾಗದು."

"ಯಾಕೆ ? ಅಂಥದೇನು ಸಿದ್ಧತೆ ?"

"ಆಕೆಯ ಮನೆಗೆ ಹೋಗುವುದೆಂದರೆ ಒಂದಿಷ್ಟು ಶಿಸ್ತಾಗಿಯೇ ಹೋಗ ಬೇಕು. ಇಲ್ಲದಿದ್ದರೆ—"

"ಯಾಕೊ ?"

"ಆಕೆ ನೋಡಿದರೆ ಮುಹಾ—"

" ಮಹಾ ಏನು ? "

" ಅಲ್ಲ, ಅಂದರೆ ಒಳ್ಳೆ ಸುಧಾರಿಸಿದವಳು, ಅಚ್ಚುಕಟ್ಟಿನವಳು. ಎಲ್ಲೋ ಹಳ್ಳಿಗಾಡಿನ ಹಾಗೆ ಹೋದರೆ ಏನಾದರೊಂದು ಮಾತು ತೆಗೆದು ' ನೀವೆಲ್ಲ ಶಾಲೆ ಕಾಲೇಜು ಕಲಿತದ್ದೇ ವ್ಯರ್ಥ ' ಎಂದು ಹೇಳಿಬಿಡುವವಳು ! "

" ಸುಳ್ಳೇ ಆಕೆ ಹೇಳುವುದು ? ಮನೆ ಬಿಟ್ಟು ಹೊರಗೆ ಬಂದರೆ ಜೀವ ರಾಣೆ. ಒಂದು ದಿನ ಹೊರಗೆ ಹೊರಡುವುದೆಂದರೆ ಹತ್ತು ದಿನ ಹರಕೆ ಹಾಕ ಬೇಕು ನಿಮಗೆ ! "

" ಹೌದು, ಹೌದು ಹೊರಗೆ ಹೋಗೋಣ ಎಂದು ನಮಗೆ ಹರಕೆ ಹಾಕಬೇಕಾದರೆ ಅಂಥವರಿಗೆ ಹೊರಗೆ ಹೋದವರು ಹೇಗಾದರೂ ಮಾಡಿ ಹಿಂದಿರುಗಿ ಮನೆಗೆ ಬನ್ನಿ ಎಂದು ಹರಕೆ ಹಾಕಬೇಕಾಗುತ್ತದೆ ! "

" ಏನಿದ್ದರೂ ಗಂಡಸಿಗೆ ಹೆಂಗಸಿನ ಹೆಸರಿನಲ್ಲಿ ಹರಕೆ ಹಾಕುತ್ತ ಕೂತಿರುವುದು ತಪ್ಪಿದ್ದಲ್ಲ, ಅನ್ನು. ಹೌದೆ ? "

" ಹೋಗಲಿ ಅದೆಲ್ಲ. ಈಗ ಏನು ಕಾರ್ಯಕ್ರಮ ? "

" ನಿತ್ಯದ ಕಾರ್ಯಕ್ರಮ ! "

" ಅಂದರೆ ಅಡಿಗೆಯದು, ಅಲ್ಲವೆ ? "

" ಅಡಿಗೆಯೇನು, ನಿಧಾನವಾಗಿ ಮಾಡಿದರೆ ಆಯಿತು ! "

" ಅಂದರೆ ಈಗ ? "

" ಈಗ ಸುಮ್ಮನೆ ಕೋಚ್‌ಮೇಲೆ ಕುಳಿತುಕೊಂಡಿರುವುದು ! "

" ಸುಮ್ಮನೆಯೆ ? "

" ಸುಮ್ಮನೆ ಎಂದರೆ—"

" ಸರಿಯಾಯಿತಲ್ಲ ! "

ಮಾತು ನಡೆದೇ ಇತ್ತು—ಎಂದಿನಂತೆ. ಶಕುಂತಲೆಯ ಸಾನ್ನಿಧ್ಯದಲ್ಲಿ ಆನಂದನ ಸಮಸ್ಯೆಯಾಗಲಿ, ಅದರಿಂದಾಗಿ ತನ್ನಲ್ಲಿ ಮೂಡಿದ ದುಗುಡವಾಗಲಿ ವಸಂತನ ಹತ್ತಿರಕ್ಕೆ ಸುಳಿಯುವ ಹಾಗಿರಲಿಲ್ಲ. ಹೀಗೆಂದೇ ತಮ್ಮಿಬ್ಬರ ಮಟ್ಟಿಗೆ ಶನಿವಾರದ ಕಾರ್ಯಕ್ರಮವನ್ನು ಒಪ್ಪಿಕೊಂಡಿದ್ದರೂ ತನಗೆ ಆ ದಿನ ಆಫೀಸ್ ಇದೆಯೆಂದಾಗಲಿ, ಅದರಿಂದಾಗಿ ' ಉದ್ಘಾಟನೆ 'ಗೆ ಮಾತ್ರ ಹೋಗುವುದು ಸಾಧ್ಯವೆಂದಾಗಲಿ ಆತ ನೆನೆಯಲೆ ಇಲ್ಲ. ಶಕುಂತಲೆ ಜ್ಞಾಪಿಸಿದಳು .

" ಶನಿವಾರ ನಿಮಗೆ ಆಫೀಸಿಲ್ಲವೆ ? "

" ಇರದೆ ಏನು ? "

" ಹಾಗಿದ್ದರೆ ಬೆಳಿಗ್ಗೆ ಹೋಗುವುದು ಸಾಧ್ಯವಿಲ್ಲ ಎಂದಾಯಿತು."

" ಹೌದು, ಮರೆತೇ ಇದ್ದೆ. ಹಾಗಾದರೆ ಹೀಗೆ ಮಾಡುವ. ಮುಂಜಾನೆಯ ಕಾರ್ಯಕ್ರಮಕ್ಕಾಗಲಿ, ಮಧ್ಯಾಹ್ನದ ಊಟಕ್ಕಾಗಲಿ ಬರಲಾಗುವುದಿಲ್ಲ, ಎರಡೂವರೆಯ ಸುಮಾರಿಗೆಯೆ ಬಂದುಬಿಡುತ್ತೇವೆ—ಎಂದು ಕಾಗದ ಬರೆದುಬಿಡಬೇಕು."

" ಅಷ್ಟರಲ್ಲಿ ಮನೆಗೆ ಬಂದು ಹೋಗಲಿಕ್ಕಾಗುತ್ತದೆಯೆ ನಿಮಗೆ ? "

" ನಾನು ಯಾತಕ್ಕೆ ಬರಬೇಕು ? ನೇರವಾಗಿ ನೀನೇ ಎರಡು ಗಂಟೆಗೆ ಕಿಂಗ್ಸ್‌ಸರ್ಕಲ್ ನಿಲ್ದಾಣಕ್ಕೆ ಬಂದರಾಯಿತು. ಆಗಬಹುದೆ ? "

" ಆಗದೇನು ? "

" ಯಾರಿಗೆ ಗೊತ್ತು ? ಬಾಂದ್ರಾಕ್ಕೆ ಗಾಡಿ ಬದಲಾಯಿಸದೆ ಚರ್ಚ್‌ಗೇಟ್ ಬಂದರೂ ಕಿಂಗ್ಸ್ ಸರ್ಕಲ್ ಬರಲೇ ಇಲ್ಲವಲ್ಲ ಎಂದು ಕುಳಿತುಬಿಟ್ಟರೆ ? "

" ಸಾಕು, ಸಾಕು ! "

" ಸಾಕೇನು ? ಹಿಂದಿನ ಅನುಭವದಮೇಲಿಂದ—"

" ಹಿಂದಿನ ಅನುಭವ ಹಿಂದಿನದು, ಎಂದಿನದೊ "

" ಅಂತೂ ಈಗ ಜಾಣೆಯಾಗಿದ್ದೀ ಎನ್ನಬಾರದೆ ? "

" ಏನಾಗಿದ್ದೇನೊ ನಿಮಗೇ ಗೊತ್ತು ! "

* * *

ಶನಿವಾರ ಬೆಳಿಗ್ಗೆ ವಸಂತ ಆಫೀಸಿಗೆ ಹೋಗುವಾಗ ಶಕುಂತಲೆ ಮಧ್ಯಾಹ್ನದಲ್ಲಿ ಬರಬೇಕಾದ ಸ್ಥಳಕಾಲಾದಿಗಳನ್ನು ವಿವರವಾಗಿ ಹೇಳಿ ಹೋಗಿದ್ದ. ಮೋಹಿನಿ ಮದುವೆಯ ಕಾಲಕ್ಕೆ ಉಡುಗೊರೆಯಾಗಿ ಕೊಟ್ಟ ಸಿಲ್ಕ್ ಸೀರೆಯನ್ನು ಉಡಬೇಕೆಂದೂ ಹೇಳಿದ್ದ. ಆ ಸೀರೆ ವಸಂತನ ಟ್ರಂಕಿನಲ್ಲಿದ್ದಿತು. ಆದ್ದರಿಂದ ಹನ್ನೊಂದು ಗಂಟೆಯ ಸುಮಾರಿಗೆ ಆ ಸೀರೆಯನ್ನು ಹೊರಗೆ ತೆಗೆಯಬೇಕೆಂದು ಆತನ ಟ್ರಂಕನ್ನು ತೆರೆದಾಗ ಅದರಲ್ಲಿಯ ಕೆಲವೊಂದು ಬಟ್ಟೆಬರೆಗಳು ಅಸ್ತವ್ಯಸ್ತವಾಗಿ ಬಿದ್ದುದನ್ನು ನೋಡಿ ಸರಿಯಾಗಿಸೋಣವೆಂದು ಎಲ್ಲವನ್ನೂ

ಬಿಡಿಸಿ ಹೊರಗೆ ತೆಗೆದಳು. ಕೆಳಗಡೆಯಲ್ಲಿ ದಪ್ಪನಾದ ಕಾಗದದ ಲಕ್ಕೋಟೆ ಒಂದು ಕಣ್ಣಿಗೆ ಬಿದ್ದಿತು ಏನಿದ್ದಿರಬೇಕೆಂಬ ಕುತೂಹಲದಿಂದ ಬಿಡಿಸಿ ನೋಡಿದಳು ಮೋಹಿನಿಯ—ಪರಿಚಯದ ಹೆಣ್ಣು ಕೈಯ—ಅಕ್ಷರ ಕುತೂಹಲ ಇನ್ನೂ ಬೆಳೆಯಿತು. ಹಾಳೆಗಳನ್ನು ತಿರುವಿಹಾಕುತ್ತಿದ್ದ ಹಾಗೆ ಅವೆಲ್ಲವೂ ಮೋಹಿನಿಯಿಂದ ತನ್ನ ಮದುವೆಗೆ ಮೊದಲು ಬಂದ ಕಾಗದಗಳೆಂದು ಗೊತ್ತಾಯಿತು. ಓದಲೊ ಬೇಡವೊ ಎಂದು ಒಂದು ಕ್ಷಣ ಮನಸ್ಸು ಹಿಮ್ಮೆಟ್ಟಿತು. ಹೃದಯದ ಯಾವುದೊ ಒಂದು ಮೂಲೆಯಲ್ಲಿ ತಡೆಯಲಾಗದ ಕುತೂಹಲವೇ ನೋವಾಗಿ ಚುಚ್ಚುವಂತಾಯಿತು. ಸರಿಯಾಗಿಡಬೇಕೆಂದಿದ್ದ ಬಟ್ಟೆಗಳೆಲ್ಲವೂ ಹಾಗೆಯೇ ಉಳಿದುವು. ಏನಿದ್ದರೂ ಇದುವರೆಗೆ ವಸಂತ ಅವನ್ನು ತನಗೆ ತಾನಾಗಿಯೇ ತೋರಿಸಲಿಲ್ಲವೆಂದಮೇಲೆ ಅದನ್ನು ಕದ್ದು ಓದಬಾರದೆನ್ನುವಷ್ಟರಲ್ಲಿಯೆ ಆಕೆಗೆ ತಿಳಿಯದಲೆ ಆಕೆಯ ಕಣ್ಣುಗಳು ಕೆಲವಾರು ವಾಕ್ಯಗಳನ್ನು ಗ್ರಹಿಸುತ್ತಿದ್ದವು ಓದಿದರೂ ಏನು? ಎಂದುಕೊಂಡಳು ಏನೋ ಎಂದಿಗೊ ಬಂದ ಕಾಗದಗಳು, ಅವನ್ನು ತನಗೆ ತೋರಿಸಿಯಾದರೂ ಏನು ಎಂದು ತೋರಿಸಿರಲಿಕ್ಕಿಲ್ಲ. ಹೀಗೆಂದು ಪುಟಗಳನ್ನು ತಿರುವಿಹಾಕಿದಳು. ಮೂರು ಕಾಗದಗಳಿದ್ದವು ಮೂರೂ ಆಕೆಯವೇ. ಮೊದಲನೆಯದು, ಮೂರನೆಯದು ಪುಣೆಯಿಂದ ಬರೆದವುಗಳಾಗಿದ್ದವು. ಎಲ್ಲವನ್ನು ಮರೆತು ಶಕುಂತಲೆ ಓದಿಯೇ ಓದಿದಳು·

"ಬದುಕಿನಲ್ಲಿಯ ಯಾವ ಶಕ್ತಿ ನನ್ನನ್ನು ನಿಮ್ಮ ಕಡೆಗೆ ಎಳೆಯಿತೊ ನಾನರಿಯೆ. ನಿಮ್ಮ ಸಹಾನುಭೂತಿ ನನ್ನನ್ನು ಸೆರೆಹಿಡಿಯಿತು ಆ ಸಹಾನುಭೂತಿಗಾಯೆ ನಾನು ಹಾತೊರೆಯುತ್ತಿದ್ದೆ ಅದರ ಫಲವಾಗಿಯೆ ನಿಮ್ಮೆದುರು ಇನ್ನಾರೆದುರೂ ಆಡದ, ಆಡಕೂಡದ, ಮಾತುಗಳನ್ನಾಡಿದ್ದೇನೆ. ಈಗ ನನ್ನ ಹೃದಯವನ್ನು ಬಿಚ್ಚಿ ತೋರಿಸುತ್ತಿದ್ದೇನೆ. ಆದ್ದರಿಂದಲೆ ಅಲ್ಪಾವಧಿಯಲ್ಲಿಯೆ ಒಂದು ಬಗೆಯ ಸೌಹಾರ್ದ ನಮ್ಮಲ್ಲಿ ಬೆಳೆಯಿತು. ಆದರೆ ಕ್ಷಣಕ್ಷಣಕ್ಕೂ ಒಂದು ಮಾತನ್ನು ನಾನು ಕೇಳಿಕೊಳ್ಳುತ್ತಿದ್ದೆ: ಈ ಸೌಹಾರ್ದ ನನ್ನನ್ನು ಇನ್ನಾವ ವಿಪರೀತ ಮಾರ್ಗಕ್ಕಾದರೂ ಎಳೆಯುವಂತಾದರೆ? ಎಂದು. ನಿಮ್ಮ ಜೊತೆಯಲ್ಲಿದ್ದಾಗ ನಾನು ಖಡ್ಗಧಾರೆಯ ಮೇಲೆ ನಡೆಯುತ್ತಿರುವಂತೆ ಇದ್ದೆ. ಕೊನೆಯ ದಿನ ಸಮುದ್ರದ ದಂಡೆಯಲ್ಲಿ ಕುಳಿತಾಗ ಮನಸ್ಸು ಮೇರೆ ತಪ್ಪುವುದರಲ್ಲಿತ್ತು. ಜುಹುವಿನ ಕನಸನ್ನು ಕಂಡ ಮಾತನ್ನು ಹೇಳಿದ್ದೇನೆ. ಮೇರೆ

ತಪ್ಪುತ್ತಿದ್ದ ಮನಸ್ಸಿನ ಪ್ರತೀಕ ಆ ಕನಸು. ನಿಮ್ಮೆದುರು ಸ್ಪಷ್ಟವಾಗಿ ಹೇಳು ತ್ತೇನೆ ಆ ಕನಸಿನಲ್ಲಿಯ ನಮ್ಮ ವಿಹಾರ ರತಿಯನ್ನೂ ನಾಚಿಸಬೇಕು, ಕಾಮ ದೇವನೇ ಪಾರ ಕಲಿಯಬೇಕು, ಎನ್ನುವಂತಿತ್ತು ಇದನ್ನು ಹೇಳಲು ತುಂಬಾ ನಾಚಿಕೆಯಾಗುತ್ತದೆ. ಆದರೆ ಕನಸು ವಿವೇಕದ ಹಿಡಿತವನ್ನು ಮೀರಿದ ಮನೋ ವ್ಯಾಪಾರ ಅದರ ಬಗೆಯಲ್ಲಿ ನಾನು ನಿರುಪಾಯಳಾಗಿದ್ದೆ ಆದರೆ ನನ್ನ ಹೃದಯ ಆ ಬಗೆಯ ಸುಖಾತಿಶಯವನ್ನು ಬಯಸುತ್ತಿತ್ತೆಂಬುದನ್ನು ಅಲ್ಲಗಳೆಯ ಲಾರೆ ಮೊನ್ನೆ ನಡೆದ ದುರ್ಘಟನೆ ನಮ್ಮ ಸೌಹಾರ್ದಕ್ಕೆ ಎಚ್ಚರದ ಮಾತನ್ನು ಹೇಳಿತು ಸುದೈವದಿಂದ ಅದಕ್ಕೆ ತಡೆಯನ್ನುಂಟುಮಾಡಿತು. ಕಾಲು ಜಾರು ವುದರಲ್ಲಿ ಎಚ್ಚರ ಹೇಳಿದಂತಾಯಿತು! ಒಂದಿಲ್ಲೊಂದು ದಿನ ಆ ಆಸೆ ಅನಿ ವಾರ್ಯವಾಗಬಹುದಿತ್ತೇನೊ? ಚೆಲುವಿನ ಈ ನನ್ನ ದೇಹದಲ್ಲಿಯ ನೆತ್ತರ ಇನ್ನೂ ಬಿಸಿ! ಕಾಮ ಬಿಡಲಿಲ್ಲ! ಸೌರಭದ ಆಸೆ ತೋರಿಸಿ ನೆಳೆಯುವುದರ ಲ್ಲಿದ್ದ! ಮಣ್ಣಿನಿಂದ ಮೇಲೆದ್ದ ಗಿಡ ಇದು! ಆ ಮಣ್ಣಿನಂಶ ಅಂಟಿಕೊಳ್ಳದಿ ದ್ದೀತೆ? ನನ್ನಲ್ಲಿ ನಾನು ಗುರುತಿಸಿದ ಈ ಮಾರ್ಪಾಟನ್ನು ನಾನು ನಿಮ್ಮಲ್ಲಿಯೂ ಕಂಡಿದ್ದೇನೆ. ಮೊದಲಿನ ಸೌಹಾರ್ದ ನನ್ನಲ್ಲಿಯಂತೆಯೇ ನಿಮ್ಮಲ್ಲಿಯೂ ಭಾವನಾಪರವಾಗತೊಡಗಿತ್ತು ಕಾಮದ ವಾಸನೆ ಉನ್ಮಾದಗೊಳಿಸುವುದ ರಲ್ಲಿತ್ತು. ಆದರೆ ಸುದೈವದಿಂದ ಎಳೆತನದಲ್ಲಿ ಅಗಲಿದೆವು ."

ಎರಡನೆಯ ಕಾಗದ ಇನ್ನೂ ಇತ್ತೀಚಿನದಾಗಿತ್ತು ತನ್ನ ಮದುವೆ ಗೊತ್ತಾದಮೇಲಿನದು. ಅಕ್ಟೋಬರ್ ರಜೆಯಲ್ಲಿ ಮೋಹಿನಿ ಪುಣೆಗೆ ಹೋದಾಗ ಅಲ್ಲಿ ತಾನು ಅನುಭವಿಸುತ್ತಿದ್ದ ಬೇಸರ, ಬಿರುನುಡಿ, ಪಿಸುಮಾತುಗಳನ್ನೆಲ್ಲ ವರ್ಣಿಸಿ ಕೊನೆಯಲ್ಲಿ ಬರೆದಿದ್ದಳು

" ತಿರುಗಿ ಮುಂಬಯಿಗೆ ಬರುವ ಆತುರ ದಿನದಿನಕ್ಕೂ ಬಲಿಯುತ್ತಿದೆ. ನಿಮ್ಮ ಸಹವಾಸದಲ್ಲಿ ನನಗೆ ಸಿಕ್ಕುವ ಸುಖ ನನಗೆ ಬೇರೆ ಎಲ್ಲಿಯೂ ಸಾಧ್ಯವಿಲ್ಲದಾ ಗಿದೆ. ನೀವು ಮುಂಬಯಿಯಲ್ಲಿರದಿದ್ದರೆ ನನ್ನ ಬಾಳು ಹೇಗೆ ಮುಂದರಿಯಬಹು ದಿತ್ತೊ ಹೇಳಲಾರೆ. ಮನಸ್ಸು ತುಂಬ ವ್ಯಗ್ರವಾಗಿದೆ. ನಿಮ್ಮ ಹತ್ತಿರ ಬಾರದ ಹೊರತು ಈ ದುಗುಡ ಸರಿಯುವುದಿಲ್ಲ. ನನ್ನವರೇ ನನಗೆ ದೂರವಾಗುತ್ತಿ ದ್ದಾಗ ನಿಮ್ಮ ಹೊರತು ನನಗೆ ಯಾರಿದ್ದಾರೆ? ನನ್ನ ಎಲ್ಲ ಆಸೆ ಆಕಾಂಕ್ಷೆ ಗಳೂ ನಿಮ್ಮನ್ನು ಕೂಡಿವೆ. ಶಾಲೆ ಪ್ರಾರಂಭವಾಗುವ ದಿನವನ್ನು ಮುನ್ನೋಡು

ತ್ತಿದ್ದೇನೆ. ಶಾಲೆಗಾಗಿ ಅಲ್ಲ—ನಿಮ್ಮನ್ನು ಕಾಣುವ ಆತುರಕ್ಕಾಗಿ, ಹಂಬಲಕ್ಕಾಗಿ—" ಇತ್ಯಾದಿ.

ಮುಂದೆ ಶಕುಂತಲೆಗೆ ಓದುವುದಾಗಲಿಲ್ಲ. ಕಣ್ಣೀರು ಧಾರೆಯಾಗಿ ಹರಿಯುತ್ತಿದ್ದಿತು. ಕೆಲವು ದಿವಸಗಳಿಂದ ಆಕೆಯ ಹೃದಯದಲ್ಲಿ ಮೂಡಿ ನಿಂತ ಕೆಲವೊಂದು ವಿಚಾರಗಳು ಸ್ಪಷ್ಟವಾದವು. ವಸಂತ-ಮೋಹಿನಿಯರ ಸಂಬಂಧ ನಿಚ್ಚಳವಾಯಿತು. ಅದರಿಂದಾಗಿ ವಿಪರೀತ ದುಃಖವಾಯಿತು. ದುಃಖಕ್ಕಿಂತಲೂ ಹೆಚ್ಚಾಗಿ ಹೆದರಿಕೆಯಾಯಿತು—ತನ್ನ ಗತಿಯೇನು ? ಎಂದು. ಮೊದಲನೆಯ ಕಾಗದದಲ್ಲಿಯ 'ಎಳೆತನದಲ್ಲಿ ಅಗಲಿದೆವು' ಎಂದು ಓದಿದಾಗಿನ ಸಮಾಧಾನ 'ನಿಮ್ಮನ್ನು ಕಾಣುವ ಆತುರಕ್ಕಾಗಿ, ಹಂಬಲಕ್ಕಾಗಿ' ಎಂದು ಓದಿದಾಗ ಮತ್ತೆ ಮಾಯವಾಯಿತು. ಈ ಎರಡನೆಯ ಕಾಗದ ತನ್ನ ಮದುವೆ ಗೊತ್ತಾದನಂತರದ್ದೆಂಬುದನ್ನು ನೆನೆದಾಗ ಆಕೆಯ ಅಸಮಾಧಾನ ಇನ್ನೂ ಹೆಚ್ಚಿತು ಪರಿಪರಿಯಾಗಿ ಸಮಾಧಾನ ಹೇಳಿಕೊಂಡಳು. ಎಂದಿನದೊ ಕತೆ ಈಗ ಯಾಕೆ ಸುಮ್ಮನೆ ಸಂಕಟ ಪಡಬೇಕು? ಎಂದಿನದೊ ಯಾಕೆ? ಮೊನ್ನೆ ತಾನೆ ಬಂದ ಕಾಗದದಲ್ಲಿ ಏನೆಂದಿದ್ದಳು : 'ಅಷ್ಟು ದೂರವಾದೆನೆ ?' ಎಂದು ಕೇಳಿದ್ದಳು. ಒಂದು ಕಾಲಕ್ಕೆ ಸಮೀಪವಾಗಿದ್ದಳೆಂಬುದು ಸ್ಪಷ್ಟವಾದಾಗ ಇನ್ನೂ ಸಮೀಪವಾಗಿಯೆ ಇರಬೇಕೆನ್ನುತ್ತಿದ್ದಳೆಂಬುದು ಹೆಚ್ಚಿನ ನೋವನ್ನುಂಟುಮಾಡಿತು. ಸರಿ. ಇದೆಲ್ಲ ಆಕೆಯ ಯೋಚನೆ. ಆಕೆಯ ಹಂಬಲ. ಅದಕ್ಕೆಲ್ಲಕ್ಕೂ ವಸಂತ ಯಾವ ರೀತಿಯಾಗಿ ಓ ಕೊಟ್ಟಿದ್ದಾನೆ, ಯಾವ ರೀತಿಯಾಗಿ ನಡೆದುಕೊಂಡಿದ್ದಾನೆ ? ನಡೆದುಕೊಳ್ಳುತ್ತಿದ್ದಾನೆ ? ಮದುವೆಯಾಗಿ ತಾನು ಬಂದಂದಿನಿಂದ ಇಂದಿನವರೆಗಿನ ಎಲ್ಲ ಸನ್ನಿವೇಶಗಳೂ ಕಣ್ಣೆದುರು ಹಾಯ್ದುಹೋದವು ವಸಂತ ತನಗೆ ತೋರುತ್ತಿದ್ದ ಪ್ರೀತಿವಿಶ್ವಾಸಗಳಲ್ಲಿ ಕೊರತೆ ಕಾಣುವಂಥ ಒಂದು ಸನ್ನಿವೇಶವೂ ಆಕೆಯ ಕಣ್ಣೆದುರು ಬರಲಿಲ್ಲ. ಅದಕ್ಕೆ ಪ್ರತಿಯಾಗಿ ನೂರು ಬಗೆಯಲ್ಲಿ, ಸಾವಿರ ಬಗೆಯಲ್ಲಿ ತನ್ನ ಹೃದಯವನ್ನೇ ಸೂರೆಮಾಡಿದ ವಸಂತನೇ ಆಕೆಯ ಕಣ್ಣೆದುರು ನಿಂತ. ಹೀಗಿರುವಾಗ ತಾನೇಕೆ ಮರುಗಬೇಕು ? ಯಾಕೆ ವ್ಯಥೆಪಡಬೇಕು ? ಮೋಹಿನಿಯ ಮಾತು ಬಂದಾಗಲೆಲ್ಲ ಒಂದಿಲ್ಲೊಂದು ಬಗೆಯಲ್ಲಿ ವಸಂತ ಸಂಕೋಚಪಟ್ಟುಕೊಂಡು ಆ ವಿಷಯವನ್ನು ತೇಲಿಸಿಬಿಡುತ್ತಿದ್ದುದು ಶಕುಂತಲೆಯ ಗಮನಕ್ಕೆ ಬಂದಿತು. ಸರಿಯೆ ಇಲ್ಲದ ಹಳೆಯ ಕತೆಯನ್ನು ಬಿಚ್ಚಿ ತನಗೆ

ನೋವುಮಾಡಬಾರದೆಂದೇ ಅಲ್ಲವೆ ಆತ ಮೋಹಿನಿಯನ್ನು ಕುರಿತು ಹೆಚ್ಚಾಗಿ ಮಾತನಾಡದಿದ್ದುದು? ತನ್ನಿಂದ ಮರೆಮಾಚಿ ಆಕೆಯೊಡನೆ ಗುಪ್ತವಾಗಿ ಪ್ರೀತಿಯ ಸಂಬಂಧವನ್ನು ಬೆಳೆಯಿಸುವಂಥ ಮೋಸಗಾರನೆ ವಸಂತ? ಸಾಧ್ಯವೇ ಇಲ್ಲ ಎಂದು ಸಾಕ್ಷಿ ಹೇಳಿತು ಶಕುಂತಲೆಯ ಹೃದಯ. ಆ ಹೃದಯಸಾಕ್ಷಿ ಬೇಕಾದ ಸಮಾಧಾನವನ್ನು ಹೇಳುತ್ತಿರುವಾಗ ಬೇರೆ ಯೋಚನೆ ಯಾಕೆ? ಆದರೂ ಅದೆಲ್ಲಿಯೊ ಎದೆ ಅಳುಕುತ್ತಿದ್ದಿತು. ಹೀಗಾಗಬಾರದಿತ್ತು, ಹೀಗಿರ ಬಾರದು ಎಂದು ಬಯಸುತ್ತಿದ್ದಿತು. ಕೊನೆಗೆ ಇನ್ನೂ ಮುಂದೆ ಸಾಗಿ, ಇದ್ದ ರೇನು? ಅದರಿಂದ ತನಗೇನಾಗಬೇಕಾಗಿದೆ? ತನಗೆ ಸರ್ವಸ್ವವನ್ನೇ ಸೂರೆ ಮಾಡುತ್ತಿದ್ದಾಗ, ತನಗೆ ಯಾವುದನ್ನೂ ಕಡಿಮೆ ಮಾಡದಿದ್ದಾಗ, ತಾನು ಯಾಕೆ ಚಿಂತಿಸಬೇಕು? ತನಗೆ ಯಾವುದು ಕಡಿಮೆಯಾಗಿದೆ? ಆದರೂ—

ಶಕುಂತಲೆಯ ಯೋಚನೆ ನಡೆದೇ ಇತ್ತು ವೇಳೆ ಒಂದಕ್ಕೆ ಸಮಾಪಿಸಿತ್ತು ಒಂದು ಕ್ಷಣ ಮೋಹಿನಿಯ ಮೇಲೆ ವಿಪರೀತ ಸಿಟ್ಟು ಬಂದಿತು. ಹೀಗೆಂದೆ ಅಂಥ ಸೀರೆಯನ್ನು, ಆ ಗಡಿಯಾರವನ್ನು ಆಕೆ ಓದಿಸಿದ್ದು? ಸರಿ. ಯಾವುದೋ ಒಂದು ಕಣ್ಣಿಗೆ ಕಾಣದ, ಹೃದಯಕ್ಕೆ ಮಾತ್ರ ಗೋಚರವಾಗ ಬಹುದಾದ ಕಲಂಕ ಆ ಉಡುಗೊರೆಗಳಿಗೆ ಅಂಟಿಕೊಂಡಂತೆ ಶಕುಂತಲೆಗೆ ಭಾಸವಾಯಿತು. ಆ ಸೀರೆಯನ್ನು ಉಡುವುದೇ ಬೇಡ ಎಂದುಕೊಂಡಳು ಎಂಥ ಕಾರ್ಪಣ್ಯ ಇದು ಎಂದುಕೊಂಡಳು ಮರುಕ್ಷಣ. ತನ್ನ ಪತಿಯನ್ನು ಮೋಹಿನಿ ಒಲಿದರೆ ಅದಕ್ಕೆ ಆತನೇನು ಮಾಡಬೇಕು. ಮೊದಲ ಸಲ ಆತನನ್ನು ನೋಡಿ ದಾಗ ತನ್ನ ಹೃದಯವೂ ಆತನೆಡೆಗೆ ಒಲಿಯಲಿಲ್ಲವೆ? ಹಾಗೆ ನೋಡಿದರೆ ತನ ಗಿಂತಲೂ ಮೊದಲಿಗೆ ಆತನನ್ನು ಬಯಸಿದವಳು, ಆತನ ಸಾನ್ನಿಧ್ಯದಲ್ಲಿ ಎದೆಯ ಹಂಬಲವನ್ನು ತೋಡಿಕೊಂಡವಳು ಆಕೆ. ಆಕೆಗೆ ಮದುವೆಯಾಗಿರದಿದ್ದರೆ ಖಂಡಿತವಾಗಿಯೂ ಆಕೆ ವಸಂತನನ್ನು ಪಡೆಯುತ್ತಿದ್ದಳು! ಆಗ ತನಗೆಲ್ಲಿ ವಸಂತ ಸಿಕ್ಕುತ್ತಿದ್ದ?—

ಹೋಗಲೇಬಾರದು ಎಂದುಕೊಂಡಳು. ಈಗ ತಾನು ಹೋಗಬೇಕಾಗು ವುದು ಆಕೆಯಲ್ಲಿಗೆ। ಹೋಗದಿದ್ದರೆ ವಸಂತ ಕಾಯುತ್ತಾನೆ, ಬೇಸರಪಡುತ್ತಾನೆ. ಅಲ್ಲದೆ ಹೋದರೆ ಅದರಿಂದ ಏನಾಗಬೇಕು? ವಸಂತನ ಹೃದಯದೊಲುಮೆಯ ಭರವಸೆ ತನ್ನ ಹೃದಯಕ್ಕೆ ಇರುವ ತನಕ ಏನಾದರೇನು? ಆ ಒಂದು ಭರವಸೆ

ಯಲ್ಲಿ ಎಲ್ಲವನ್ನೂ ಮನಸ್ಸಿನಿಂದ ದೂರಮಾಡುವುದು ಸಾಧ್ಯ ಎನಿಸಿತು. ಆ ಒಂದು ಭರವಸೆಯ ಮಡಿಲಲ್ಲಿ, ಅದರ ಆಶ್ರಯದಲ್ಲಿ ಬದುಕನ್ನು ಸುಖದ ಸಮೃದ್ಧಿಯಲ್ಲಿಯೆ ಕಳೆಯಬಹುದು ಎಂದು ತೋರಿತು. ಸರಿ. ಇಲ್ಲದ ಸಂಶಯ ಸಂಕೋಚಗಳಿಗೆ ಎಡೆಕೊಟ್ಟು ಇದ್ದುದನ್ನು ಹಾಳುಮಾಡಿಕೊಳ್ಳುವುದು ಮೂರ್ಖತನವೆಂದು ತೋರಿತು. ಆ ವಿಚಾರದ ಆವೇಗದಲ್ಲಿ, ವಸಂತನನ್ನು ನೆನೆಯುವುದರಲ್ಲಿ, ಆಕೆಗೆ ಬೇರೆ ಯಾವುದೂ ಕಾಣಲಿಲ್ಲ ಆ ಆವೇಗದಲ್ಲಿಯೇ ಅವಸರವಸರವಾಗಿ ಟ್ರಂಕಿನಲ್ಲಿ ಆ ಕಾಗದಗಳನ್ನು ಹಾಗೆಯೇ ಇಟ್ಟು ಬಟ್ಟೆಗಳನ್ನು ಸರಿಯಾಗಿರಿಸಿ ಹೊರಡುವ ಸಿದ್ಧತೆಗಳನ್ನು ಮಾಡತೊಡಗಿದಳು

ವೇಷಭೂಷಣಾದಿಗಳನ್ನು ಮುಗಿಯಿಸಿ, ಕೊನೆಯಾಗಿ, ಓರೆಯಾಗಿ ನಿಂತು ಕನ್ನಡಿಯಲ್ಲಿ ನೋಡಿಕೊಳ್ಳುತ್ತಿದ್ದಾಗ ' ಮೋಹಿನಿಗಿಂತ ಯಾವುದರಲ್ಲಿ ನಾನು ಕಡಿಮೆಯಾಗಿದ್ದೇನೆ ? ' ಎಂಬ ಅಭಿಮಾನ ಸುಳಿದುಹೋಯಿತು ಆದರೆ ಈ ಅಭಿಮಾನವಾದರೂ ಯಾಕೆ? ಆ ಭಾವನೆಗೆ ಅವಕಾಶವೇ ಇಲ್ಲ, ಅದರ ಅಗತ್ಯವೂ ಇಲ್ಲ ತನ್ನ ರೂಪ ಮೋಹಿನಿಯ ರೂಪದಂತೆಯೆ ಇದ್ದುದರಿಂದಲೇ ವಸಂತ ತನ್ನನ್ನು ವರಿಸಿದ್ದರೂ ಇರಬಹುದು ಎಂದು ಯೋಚಿಸಿದಳು. ಯಾರಿಗೆ ಗೊತ್ತು ? ಆ ಯೋಚನೆಯ ಪ್ರಯೋಜನವಾದರೂ ಏನು ? ವರಿಸಿದ್ದು ಮುಖ್ಯ. ವಸಂತ ತನ್ನವನಾದದ್ದು ಮುಖ್ಯ. ವಸಂತ ತನ್ನ ಪತಿಯಾದುದಕ್ಕೆ, ತನ್ನನ್ನು ಒಪ್ಪಿ ಮದುವೆಯಾದುದಕ್ಕೆ ಅದಾವ ಕಾರಣಕ್ಕಾಗಿಯೋ ಶಕುಂತಲೆಯ ಹೃದಯ ಆ ಕ್ಷಣಕ್ಕೆ ಕೃತಜ್ಞತೆಯಿಂದ ತುಂಬಿ ಹರಿಯಿತು. ಆ ಕೃತಜ್ಞತೆಯೇ ಕಣ್ಣಂಚಿನಲ್ಲಿ ನೀರಾಗಿ ನಿಂತಿತು. ಅಷ್ಟು ಪರಿಯಾಗಿ ವಸಂತನಿಂದ ಆಕೆಯ ಹೃದಯ ಸೂರೆಗೊಂಡಿತ್ತು. ರೈಲಿನಲ್ಲಿ ಬಂದು ಕುಳಿತಾಗ ಮತ್ತೊಂದು ಯೋಚನೆ. ಆ ಕಾಗದಗಳನ್ನು ತಾನು ಓದಿದೆನೆಂದು ಹೇಳಿ ಇದೆಲ್ಲ ಏನು ಎಂದು ಕೇಳಿಬಿಡೋಣ ಎಂದು ಆದರೆ ಕೇಳಿ ಆತನ ಮನಸ್ಸನ್ನು ನೋಯಿಸುವುದು ಬೇಡವೆನಿಸಿತು. ಇಂದಿಲ್ಲ ನಾಳೆ ತಾನಾಗಿಯೆ ಹೇಳಬಹುದು ಕೇಳಿ ಆತನನ್ನೇಕೆ ಆತಂಕಪಡಿಸಬೇಕು? ತಾನು ಆ ಕಾಗದಗಳನ್ನು ನೋಡಬಾರದೆಂದಿದ್ದರೆ ಹಾಗೇಕೆ ಅವುಗಳನ್ನು ಟ್ರಂಕಿನಲ್ಲಿ ಬಿಟ್ಟುಬಿಡುತ್ತಿದ್ದ ? ತನ್ನಿಂದ ಅವುಗಳನ್ನು ಬಚ್ಚಿಡಬೇಕಿದ್ದರೆ ಬೇರೆ ಎಲ್ಲಿಯಾದರೂ ಇಡುತ್ತಿದ್ದ. ಹರಿದಾದರೂ ಹಾಕುತ್ತಿದ್ದ. ಆತನ ದೃಷ್ಟಿಯಲ್ಲಿ ಅವಕ್ಕೆ ಯಾವ ಮಹತ್ವವೂ ಇರಲಿಲ್ಲವೆಂದೇ

ನಿರ್ಲಕ್ಷ್ಯವಾಗಿ ಹಾಗೆ ಎಸೆದಿದ್ದ. ಅಲ್ಲದೆ ಏನು? ಉಳಿದ ನೂರಾರು ಕಾಗದಗಳು ಅಲ್ಲಿ ಇಲ್ಲಿ ಮನೆಯಲ್ಲಿ ಬಿದ್ದಿರಲಿಲ್ಲವೆ? ಹೀಗೆಂದು ಮನಸ್ಸನ್ನು ಸ್ತಿಮಿತದಲ್ಲಿಟ್ಟುಕೊಳ್ಳುವ ಯತ್ನದಲ್ಲಿಯೆ ಇದ್ದಳು. ಆದರೆ ಈ ಯೋಚನೆಗಳು ಆಕೆಗೆ ತಗಲದಿದ್ದರೆ ಮುಖದಲ್ಲಿ ಗೆಲುವು ಕುಣಿಯಬಹುದಾಗಿತ್ತು. ಆದರೆ ಇಂದು ನಿತ್ಯದ ಸಂತೋಷಗಳು ಅಲ್ಲಿ ಕಾಣುತ್ತಿರಲಿಲ್ಲ ಸಹಜಸುಂದರವಾಗಿ ತುಟಿಗಳಂಚಿನಲ್ಲಿ ಮಿನುಗುವ ಕಿರುನಗೆ ಎಲ್ಲಿಯೊ ಮಾಯವಾಗಿದ್ದಿತು.

ಮಾತುಕೊಟ್ಟಂತೆ ಕಿಂಗ್ಸ್‌ಸರ್ಕಲ್ ನಿಲ್ದಾಣದಲ್ಲಿ ವಸಂತ ಕಾಯುತ್ತಿದ್ದ. ಶಕುಂತಲೆ ರೈಲಿನಿಂದಿಳಿದಾಗ ಎರಡು ಗಂಟೆಗೆ ಐದು ನಿಮಿಷ ಕಡಿಮೆ ಇದ್ದಿತು. ತಾನಾಗಿಯೆ ಕೇಳಿದಳು

" ಬಂದೆನೆ ಸರಿಯಾಗಿ? ಗಾಬರಿಯಾಗಿತ್ತಲ್ಲವೆ ನಿಮಗೆ?"

" ಗಾಬರಿ ಏನು ಬಂತು? ವೇಳೆಗೆ ಸರಿಯಾಗಿ ಬರಬೇಕೆಂದು ಹೇಳಿದೆ."

ವಸಂತ ಶಕುಂತಲೆಯನ್ನು ನೋಡಿದ ಮುಖದಲ್ಲಿ ಏನೋ ಒಂದು ಬಗೆಯ ಅಶಾಂತತೆಯನ್ನು, ತನಗೆ ಪರಿಚಿತವಾದ ನಗೆ ಇಲ್ಲದುದನ್ನು, ದಾರಿಯುದ್ದಕ್ಕೂ ನಡೆಯುತ್ತಿದ್ದಾಗ ಆಕೆ ಹೆಚ್ಚಿಗೆ ಮಾತನಾಡದಿದ್ದುದನ್ನು ಗುರುತಿಸಿದ, ಮತ್ತೊಮ್ಮೆ ಆಕೆಯನ್ನು ದಿಟ್ಟಿಸಿ ನೋಡಿದ—ಕೈ ಮುಟ್ಟಿದ.

" ಏನು?" ಎಂದ.

" ಮೈಯಲ್ಲಿ ಸರಿಯಾಗಿಲ್ಲವೆ?"

" ಸರಿಯಾಗಿದೆಯಲ್ಲ—"

" ಕಣ್ಣೇಕೆ ಇಷ್ಟು ಕೆಂಪಗಾಗಿವೆ?"

" ಸರಿ—ಕೆಂಪೇನು ಬಂತು?"

" ನನಗೆ ಅಷ್ಟು ಗೊತ್ತಾಗುವುದಿಲ್ಲವೆ? ಏನಾಗಿದೆ?"

" ಏನೂ ಇಲ್ಲ. ಮಧ್ಯಾಹ್ನ ಏನೋ ಒಂದು ತರಹ. ಆಮೇಲೆ ವಿಪರೀತ ತಲೆನೋವು!"

" ಹಾಗಿದ್ದರೆ ಇಂಥ ಬಿಸಿಲಲ್ಲಿ ಯಾತಕ್ಕೆ ಬಂದೆ? ಮನೆಯಲ್ಲಿದ್ದರೆ ಆಗುತ್ತಿರಲಿಲ್ಲವೆ?"

" ಆಯಿತು. ನೀವಿಲ್ಲಿ ಕಾಯುತ್ತಿರಬೇಕು—"

" ಅದೇನು ಮಹಾ. ಅರ್ಧ ಗಂಟೆ ದಾರಿ ನೋಡಿ ನಾನೂ ಬಂದುಬಿಡು

ತ್ತಿದ್ದೆ. ಇನ್ನೂ ತಲೆ ನೋಯುತ್ತಿದೆಯೆ? ಹಾಗಿದ್ದರೆ ಸುಮ್ಮನೆ ಮನೆಗೆ ಹೋಗಿಬಿಡೋಣ."

"ಈಗೇನಿಲ್ಲ. ಎರಡು 'ಆಸ್ಪ್ರೊ' ತೆಗೆದುಕೊಂಡಿದ್ದೇನೆ."

"ಗಾಡಿ ಮಾಡಿಕೊಂಡು ಹೋಗೋಣವೆ?"

"ಬಹಳ ದೂರವೆ ಇಲ್ಲಿಂದ?"

"ದೂರವೇನೂ ಇಲ್ಲ, ಇನ್ನು ಹತ್ತು ನಿಮಿಷ ಆದೀತು. ಆದರೆ ಬಿಸಿಲು ತುಂಬ, ಅದಕ್ಕೆಂದೆ"

"ಬೇಡ, ಈಗ ಸರಿಯಾಗಿದೆ—"

ನಿಧಾನವಾಗಿ ಹೆಜ್ಜೆ ಹಾಕುತ್ತಿದ್ದರು ಜೂನ್ ತಿಂಗಳ ಇಳಿಬಿಸಿಲಿನ ಚುರುಕು ಎಲ್ಲ ಕಡೆಯಿಂದಲೂ ಹವೆಯಲ್ಲಿ ಸೂಸಿಬರುತ್ತಿತ್ತು ಆದರೆ ಆಗಿನ ಅವರಿಬ್ಬರ ಮನಃಸ್ಥಿತಿಯಲ್ಲಿ ಬಿಸಿಲ ಬೇಗೆ ಅವರನ್ನು ತಟ್ಟುವಂತಿರಲಿಲ್ಲ ತನಗೆ ಕಾಯಬೇಕಾಗಬಹುದು ಎಂಬ ಚಿಕ್ಕ ಮಾತಿಗಾಗಿ ತಲೆನೋವಿದ್ದರೂ ಬಿಸಿಲಲ್ಲಿ ಬಳಲುತ್ತ ಬಂದಳಲ್ಲಾ ಎಂದು ವಸಂತನಿಗೆ, ತಲೆನೋವು ಎಂದ ಮಾತಿಗೆ ಎಷ್ಟು ಪರಿಯಿಂದ ಅಕ್ಕರೆಯನ್ನು, ಅನುರಾಗವನ್ನು ಸೂರೆಮಾಡು ತ್ತಿದ್ದಾನಲ್ಲಾ ಎಂದು ಶಕುಂತಲೆಗೆ ಎದೆ ತುಂಬಿಬಂದಂತಾಯಿತು. ಒಬ್ಬರನ್ನೊಬ್ಬರು ಆ ಭಾವನೆಯಿಂದಲೆ ಎಷ್ಟು ಬಾರಿ ಕಣ್ಣುಬಿಟ್ಟು ನೋಡಿದರೊ! ಹಾಗೆ ನೋಡುತ್ತಿದ್ದಾಗ ಶಕುಂತಲೆಯ ದುಗುಡ ಎಲ್ಲಿಯೊ ಮಾಯವಾಗಿತ್ತೆಂದು ಬೇರೆ ಹೇಳಬೇಕೆ? ಹತ್ತು ನಿಮಿಷಗಳಲ್ಲಿ ಕಿಂಗ್ಸ್ ಸರ್ಕಲ್ ಹತ್ತಿರ ಮೋಹಿನಿಯಿದ್ದ 'ಭಾಮಿನೀವಿಲಾಸ'ದ ಪಾವಟಿಗೆಗಳನ್ನೇರುತ್ತಿದ್ದರು. ಅವರಿಗಾಗಿ ಮೋಹಿನಿ ಕಾಯುತ್ತಲೇ ಇದ್ದಳು. ಕೆಳಗಡೆಯಲ್ಲಿ ಹೊಚ್ಚ ಹೊಸದಾದ ಕಾರು, ಆಕೆಗಾಗಿ, ಅವರಿಬ್ಬರಿಗಾಗಿ ಕಾಯುತ್ತಿದ್ದ ಹಾಗಿತ್ತು. ಕಾರಿನ ಡ್ರೈವರ್‌ನೇ ಅವರಿಬ್ಬರಿಗೂ ಮುಂದಾಗಿ ಹೋಗಿ ಮೋಹಿನಿಗೆ ಅವರು ಬಂದ ಸೂಚನೆಯನ್ನು ಕೊಟ್ಟ

ಮೋಹಿನಿ ಅವರಿಬ್ಬರ ಸ್ವಾಗತಕ್ಕೆ ಸಿದ್ಧಳಾಗಿಯೇ ಇದ್ದಳು. ವಸಂತ ಇನ್ನೂ ಕೋಣೆಯಲ್ಲಿ ಕಾಲಿಡುತ್ತಿರುವಾಗಲೇ ಕೇಳಿದಳು

"ಕೊನೆಗೂ ತಪ್ಪಿಸಿದಿರಲ್ಲವೆ ಬರುವುದನ್ನು?"

"ಬರಲಿಲ್ಲವೇ ಈಗ?"

"ಈಗಲ್ಲ, ನಾನು ಹೇಳಿದ್ದು. ಬೆಳಿಗ್ಗೆ ಬಂದಿದ್ದರೆ ಏನಾಗುತ್ತಿತ್ತೊ?

ಓಹ್, ನೀವು ಬೆಳಿಗ್ಗೆ ಬರಲೇಬೇಕಿತ್ತು. 'ಸೂತ್ರದ ಬೊಂಬೆ'ಯ ಓಪನಿಂಗ್ ಶಾಟ್ ನೋಡಲಿಕ್ಕೆ ಸಿಕ್ಕುತ್ತಿತ್ತು—"

ಮೋಹಿನಿ ತನ್ನ ಬೇರೆಯಾದ ಪ್ರಪಂಚದಲ್ಲಿಯೇ ಇದ್ದ ಹಾಗೆ ಮಾತನಾಡುತ್ತಿದ್ದಳು. ಚಿತ್ರದ ಪ್ರಾರಂಭದಲ್ಲಿ 'ಮುಹೂರ್ತ'ವೆಂದು ಒಂದು ಒಳ್ಳೆಯದಾದ ಸನ್ನಿವೇಶವನ್ನು ಆಯ್ದುಕೊಂಡು ರಂಗನಾಥನ್ ಅದನ್ನೇ ಹತ್ತಿಪ್ಪತ್ತು ಬಾರಿ ರಿಹರ್ಸ್‌ ಮಾಡಿಸಿದ್ದನಾದ್ದರಿಂದ ಆ ಒಂದು ಸನ್ನಿವೇಶದಲ್ಲಿ ಮೋಹಿನಿ ನಿಜವಾಗಿಯೂ ಉತ್ತಮವಾಗಿ ಕೆಲಸ ಮಾಡಿದ್ದಳು. ನೋರಾ ತನ್ನ ಪತಿಗೆ ಕೊನೆಯಲ್ಲಿ ಹೇಳುವ 'ಕಿವಿಮಾತಿ'ನ ಸನ್ನಿವೇಶ ಅದು. ಪತಿ ತನ್ನನ್ನು ಬೊಂಬೆಯಾಗಿಸಿ, ತಾನೂ ಒಂದು ಜೀವ, ಸ್ವತಂತ್ರವಾದ ವ್ಯಕ್ತಿತ್ವವುಳ್ಳ ಮಾನವ ಪ್ರಾಣಿ ಎಂಬುದನ್ನು ನೆನೆಯದೆ ನಡಸಿಕೊಂಡುದನ್ನು ವಿವರಿಸಿ ಹೇಳುವಾಗಿನ ಮಾತುಗಳನ್ನು ಮೋಹಿನಿ ಯಥಾವತ್ತಾಗಿ ನಿರ್ವಹಿಸಿದ್ದಳು ತನ್ನ ಬದುಕಿನಲ್ಲಿ ಅಂಥ ಮಾತುಗಳನ್ನು ಬಾಯಿಂದಲ್ಲದಿದ್ದರೂ ಕೃತಿಯಿಂದ ತನ್ನ ಪತಿಗೆ—ಆತನ ಆಪ್ತಬಂಧುಗಳಿಗೆ—ಹೇಳಿದ ಮೋಹಿನಿಗೆ ಆ ಸನ್ನಿವೇಶಕ್ಕೆ ತಕ್ಕ ಭಾವಾವೇಶವನ್ನು ಎರವಲಾಗಿ ಪಡೆಯಬೇಕಾಗಿರಲಿಲ್ಲ. ಆದರಿಂದಾಗಿ, ಬೆಳಗಿನಲ್ಲಿ ತಾನು ಮಾಡಿದ ಅಭಿನಯ ತನ್ನನ್ನು ಇನ್ನು ಕೆಲವೇ ದಿನಗಳಲ್ಲಿ ಚಿತ್ರಪಟಪ್ರಪಂಚದಲ್ಲಿ ದೇದೀಪ್ಯಮಾನವಾಗಿ ಬೆಳಗಿಸಿ, ಜನರ ಹೃದಯಗಳನ್ನು ಸೂರೆಗೊಳ್ಳಬಲ್ಲ ತಾರೆಯಾಗಿಸಿ, ಮೆರೆಯಿಸಬಹುದೆಂಬ ಭರವಸೆ ಮೂಡಿತ್ತು. ರಂಗನಾಥನ್‌ನೇ ಆಕೆಯ ಅಭಿನಯಕ್ಕೆ ಬೆರಗಾಗಿದ್ದ ಮೋಹಿನಿಯಿಂದ ನೋರಾನಂಥ ಮುಖ್ಯ ಪಾತ್ರವನ್ನು ಮಾಡಿಸಬಹುದೆಂಬ ಆತನ ವಿಶ್ವಾಸ ಮುಗಿಲೆತ್ತರ ಬೆಳೆದಿತ್ತಲ್ಲದೆ ಚಿತ್ರವನ್ನು ಸಹಜವಾಗಿಯೇ ಉತ್ತಮ ತರಗತಿಯದಾಗಿಯಲ್ಲದೆ ಯಶಸ್ವಿಯಾಗಿಯೂ ಮಾಡಬಹುದೆಂಬ ಆತನ ಆಸೆ ಕುದುರಿ ನಿಂತಿತ್ತು. ಮೋಹಿನಿ ವಸಂತನೊಡನೆ ಮಾತನಾಡುತ್ತಿದ್ದಾಗಲೂ ಬೆಳಗಿನ ಈ ಭಾವತಂದ್ರಿಯಲ್ಲಿಯೇ ಇದ್ದ ಹಾಗಿತ್ತು ಭವಿಷ್ಯದಲ್ಲಿಯ ಭರವಸೆಯ ಗಾಳಿಗುದುರೆಯನ್ನೇರಿ ಭರದಿಂದ ಸಾಗಿದ ಆಕೆಯ ಕಾಲುಗಳು ಭೂಮಿಯ ಮೇಲೆ ನಿಂತಹಾಗಿರಲಿಲ್ಲ.

"ಬೆಳಿಗ್ಗೆ ಯಾಕೆ ಬರಲಿಲ್ಲ?"

"ಯಾಕೇನು? ನನಗೆ ಆಫೀಸಿಲ್ಲವೆ? ಬೆಳಿಗ್ಗೆ ಬಂದಿದ್ದರೆ ಮತ್ತೆ ರಜೆ—"

"ಮತ್ತೆ ರಜೆ ಅಂದರೆ? ರಜೆ ಪಡೆದು ಎಲ್ಲಿಯಾದರೂ ಹೋಗಿದ್ದಿರಾ?"

" ಎಲ್ಲಿ ಹೋಗುವುದಕ್ಕಿದೆ ? ಆಗ ಈಗ ಬೇಸರಕ್ಕೆಂದು ತೆಗೆದುಕೊಂಡು ಈ ವರ್ಷದ ಕ್ಯಾಜುಅಲ್ ರಜೆ ಆಗಲೇ ಮುಗಿಯುತ್ತಲೇ ಬಂದಿರಬೇಕು—"

" ಬೇಸರಕ್ಕಿರಲಿಕ್ಕಿಲ್ಲ, ಮನೆಯಲ್ಲಿರುವುದಕ್ಕೆ ರಜೆ ! ಅಲ್ಲವೆ ? "

" ಮನೆಯಲ್ಲಿರದೆ ಮತ್ತೆಲ್ಲಿ ಹೋಗುವುದು ? "

" ನನಗೆ ಅಷ್ಟೂ ಗೊತ್ತಾಗುವುದಿಲ್ಲವೆ ? ಮದುವೆಯಾದ ಹೊಸದರಲ್ಲಿ—"

ಸರಾಗವಾಗಿ ಸಾಗುತ್ತಿದ್ದ ಅವರಿಬ್ಬರ ಮಾತುಗಳನ್ನು ಶಕುಂತಲೆ ನಿರ್ವಿಕಾರವಾಗಿ ಕೇಳುತ್ತಿದ್ದಳು ಮೊದಲ ಒಂದೆರಡು ನಿಮಿಷಗಳಲ್ಲಿ ಆ ಕೋಣೆಯ ಅಂದಚೆಂದಗಳು, ವಿಲಾಸಮಯವಾಗಿ, ಅಚ್ಚುಕಟ್ಟಾಗಿ ಎತ್ತ ನೋಡಿದರೂ ಮೋಹಿನಿಯ ಸಿರಿವಂತಿಕೆಯನ್ನು ಸೂಸುವ ಸುವ್ಯವಸ್ಥೆಗಳು ಆಕೆಯ ಕಣ್ಣುಗಳನ್ನು ಸೆಳೆದಿದ್ದವು ಮರುಕ್ಷಣದಲ್ಲಿ ಮಧ್ಯಾಹ್ನದ ಮನಃಸ್ಥಿತಿ ಹೃದಯವನ್ನು ಮುದುಡಿಸಿತ್ತು. ಆದರೆ ಸಾವರಿಸಿಕೊಂಡು ಮಾತುಮಾತಿನಲ್ಲಿ ತೂರಿಬರುತ್ತಿದ್ದ ಮೋಹಿನಿಯ ಸಹಜ ಲಾವಣ್ಯವನ್ನು ಕೌತುಕದಿಂದಲ್ಲದೆ ಕುತೂಹಲದಿಂದ ನೋಡುವಲ್ಲಿ ಎಲ್ಲವನ್ನೂ ಮರೆಯುತ್ತಿದ್ದಳು ವಸಂತ ನೇರವಾಗಿ ಮಾತನಾಡುತ್ತಿದ್ದ. ಅವರಿಬ್ಬರ ಮಾತುಗಳನ್ನು ಕೇಳುತ್ತಿದ್ದ ಹಾಗೆ ಅವರಿಬ್ಬರ ಮುಖಲಕ್ಷಣಗಳನ್ನೂ ಆಕೆ ನಿರೀಕ್ಷಿಸುತ್ತಿದ್ದಳು. ಯಾವ ಸಂಕೋಚದ ಭಾವನೆಗೂ ಆಸ್ಪದ ಕಾಣಲಿಲ್ಲ. ತನಗೆ ತಿಳಿದುಬಂದ ಪೂರ್ವಾಪರಗಳನ್ನು ನೆನೆದಾಗ ಒಂದೊಂದು ಸಲ ಮೋಹಿನಿ ಒಂದು ಸಮಸ್ಯೆಯಾಗಿ ಕಾಣುತ್ತಿದ್ದಳು. ಒಂದು ಕಾಲಕ್ಕೆ ತನ್ನ ಪತಿಗೆ ಹೃದಯವನ್ನು ಮಾರುಕೊಟ್ಟವಳಾಗಿದ್ದರೂ ಸದ್ಯದಲ್ಲಿ—ಆಕೆಯ ಪರಿಸ್ಥಿತಿಯಲ್ಲಿ—ಅಂಥ ಆಸೆ ಉಳಿದ ಚಿಹ್ನೆಯಾವುದೂ ಶಕುಂತಲೆಗೆ ಕಾಣಲಿಲ್ಲ ಆಕೆಯ ಪ್ರಪಂಚವೇ ಬೇರೆ, ಆಕೆಯ ಆಶೋತ್ತರಗಳೇ ಬೇರೆ, ಆಕೆಯ ಒಲವು-ನಲಿವು-ಚೆಲುವುಗಳೇ ಬೇರೆ, ಎಂದು ತೋರಿದಾಗ ಶಕುಂತಲೆಯ ಹೃದಯ ಸಮಾಧಾನದ ನಿಟ್ಟುಸಿರನ್ನೆಳೆಯುತ್ತಿತ್ತು. ಬಂದಾಗಿನಿಂದ ಶಕುಂತಲೆ ಮಾತನಾಡದಿದ್ದುದನ್ನು ನೆನೆದು ಮೋಹಿನಿ ಕೇಳಿದಳು :

" ಇವರು ಬರದಿದ್ದರೆ ನೀವಾದರೂ ಬರಬಾರದೆ ? "

" ಒಬ್ಬಳೇ ನಾನೇನು ಬರುತ್ತೇನೆ ? "

" ಯಾಕೆ ? ಹೆದರಿಕೆಯಾಗುತ್ತದೆಯೆ ? ಬೋರಿವಲಿಯಿಂದ ಇಲ್ಲಿಗೆ ಬರುವುದೇನು ದೊಡ್ಡ ಮಾತು ? "

" ಏನೊ ! ಮುಂಬಯಿಯ ರೂಢಿಯಾಗಬೇಕಲ್ಲ."

" ಸರಿ, ಆರು ತಿಂಗಳಾಯಿತು ಮುಂಬಯಿಗೆ ಬಂದು—"

ಶಕುಂತಲೆ ಕೊನೆಯ ಮಾತನ್ನು ಕೇಳಿದ ಹಾಗಿರಲಿಲ್ಲ ಆಕೆಯ ಯೋಚನೆ ಆಗಲೆ ಬೇರೆ ದಿಕ್ಕಿನಲ್ಲಿ ಹೊರಟಿತ್ತು. ' ಬಂದಾದರೂ ಏನು ? ಬರುವುದಾದರೂ ಯಾತಕ್ಕೆ ? ನಿನ್ನ ದಾರಿ ಬೇರೆ, ನನ್ನ ದಾರಿ ಬೇರೆ. ಹೊರಗಣ್ಣಿಗೆ ನಾವಿಬ್ಬರೂ ಅಕ್ಕತಂಗಿಯರ ಹಾಗೆ ಕಂಡರೂ ಅಂತರಂಗದಲ್ಲಿ ಭೂಮ್ಯಾಕಾಶದಷ್ಟು ವ್ಯತ್ಯಾಸವಿದೆ ಮನೆಯೇ ನನಗೆ ಜಗತ್ತು ಜಗತ್ತೇ ನಿನಗೆ ಮನೆ ಹೀಗಿದ್ದಾಗ—' ಚಹದ ಟ್ರೇ ತಂದ ಸೇವಕನ ಬರವಿನಿಂದ ಶಕುಂತಲೆಯ ವಿಚಾರಮಾಲಿಕೆ ಕಡಿಯಿತು ಚಹ ಕುಡಿಯುತ್ತಿರುವಾಗಲೇ ಕೈಗಡಿಯಾರವನ್ನು ನೋಡಿ ಮೋಹಿನಿ ಹೇಳಿದಳು

" ಓಹ್, ಆಗಲೆ ಎರಡೂ ಮುಕ್ಕಾಲು ಕೂಡಲೆ ಹೊರಟುಬಿಡುವಾ "

" ಕಾರ್ ಇದೆಯಲ್ಲವೆ ? " ಎಂದ ವಸಂತ.

" ಕೆಳಗಡೆ ನೋಡಲಿಲ್ಲವೆ ? ಹೇಗಿದೆ ಕಾರು ? "

" ಹೊಸದು ಎಂದು ಕಾಣುತ್ತದೆ—"

" ಹೌದು, ಮೊನ್ನೆಯೆ ತೆಗೆದುಕೊಂಡಿದ್ದೇವೆ ತಂದಾಗಿನಿಂದ ನಾನೇ ಇಟ್ಟುಕೊಂಡಿದ್ದೇನೆ ! "

ಪ್ರತಿಯೊಂದು ಮಾತಿನಲ್ಲಿ ಮೋಹಿನಿ ತನ್ನ ಅನುಕೂಲಗಳನ್ನು, ವೈಭವವನ್ನು, ಸುಖಸಮಾಧಾನಗಳನ್ನು ವ್ಯಕ್ತಪಡಿಸುತ್ತಿದ್ದ ಹಾಗಿತ್ತು, ಅವನ್ನೆಲ್ಲ ಎತ್ತಿ ತೋರಿಸಿ ಹೇಳಬೇಕೆಂಬ ಉದ್ದಿಶ್ಯ ಮೋಹಿನಿಯದಿರದಿದ್ದರೂ ತಾನಾಗಿಯೇ ಆ ಭಾವ ಆಕೆಯ ಮಾತಿನಲ್ಲಿ ಮೂಡಿನಿಲ್ಲುತ್ತಿತ್ತು. ಚಹ ಮುಗಿದ ಮೇಲೆ ಮೋಹಿನಿ ಮತ್ತೊಂದು ರೂಮಿಗೆ ಹೋಗಿ ಮತ್ತೊಮ್ಮೆ ಸಿಂಗರಿಸಿಕೊಂಡು ಹೊರಡಲನುವಾದಳು. ಹೊರಡುವಾಗ ಆಕೆ ಮನೆಯಲ್ಲಿಯ ಸೇವಕರಿಗೆ ಸೂಚನೆಗಳನ್ನು ಕೊಡುತ್ತಿದ್ದ ಬಗೆಯನ್ನು ನೆನೆದಾಗ ಮೋಹಿನಿ ಸಿರಿವಂತಿಕೆಯನ್ನು ಎಷ್ಟು ಸಲೀಲವಾಗಿ, ಸಹಜವಾಗಿ ಅಳವಡಿಸಿಕೊಂಡಿದ್ದಾಳೆ, ಎಷ್ಟು ಬೇಗನೆ ಎಷ್ಟೊಂದು ಬದಲಾಗಿಬಿಟ್ಟಿದ್ದಾಳೆ ಎಂಬ ಭಾವನೆ ವಸಂತನ ಮನಸ್ಸಿನಲ್ಲಿಮೂಡದಿರಲಿಲ್ಲ. ಕಾರಿನಲ್ಲಿ ಕುಳಿತುಕೊಳ್ಳುವಾಗಲೂ ವಸಂತ ನಿರೀಕ್ಷಿಸಿದ ಸಮಸ್ಯೆ ಏಳಲೇ ಇಲ್ಲ. ತಾವಿಬ್ಬರೂ ಹಿಂದುಗಡೆ ಕೂಡುವುದಾಗಿಯೂ ವಸಂತ ಮುಂದಿನ

ಸೀಟನಲ್ಲಿ ಕೂಡಬೇಕೆಂದೂ ಮೋಹಿನಿ ತಾನಾಗಿಯೇ ಹೇಳಿದ್ದು ವಸಂತನಿಗೆ ಒಂದು ಕ್ಷಣ ಆಶ್ಚರ್ಯವನ್ನುಂಟುಮಾಡಿತು. ಕಾರ್ ಹೊರಡುವಾಗ ವಸಂತನಿಗೆಂದಳು : ". ನಾವಿಬ್ಬರೂ ಈ ಕಡೆ ಕುಳಿತದ್ದು ಯಾಕೆ ಗೊತ್ತೆ ? ನಮ್ಮಿಬ್ಬರಿಗೂ ಬೇರೆಯಾಗಿ ಮಾತನಾಡುವುದಿದೆ, ನೀವು ಇತ್ತಕಡೆ ಕಿವಿ ಕೊಡಬೇಡಿರಿ" ಎಂದು ನಕ್ಕು ಹೇಳಿದ ಮಾತು ಏನೋ ಒಂದು ಮಾತಲ್ಲದೆ ಬೇರೆ ಯಾವ ಅರ್ಥವುಳ್ಳದ್ದೂ ಆಗಿರಲಿಲ್ಲ

ಶಾಕುಂತಲದ ಉದ್ಘಾಟನ ಸಮಾರಂಭಕ್ಕೆ ಆಪಟೆ ಮದನಲಾಲ್‌ರಿಬ್ಬರೂ ಬಂದಿದ್ದರು. ಮುಕ್ಕಾಲು ಮೂರು ಪೀಸೆ ಚಿತ್ರಪಟವನ್ನು ತಾನೇ ನಿರ್ದೇಶಿಸಿದ್ದರಿಂದ ಮುಂದಿನ ಭಾಗ ಹೇಗೆ ನಿರ್ವಹಿಸಲ್ಪಟ್ಟಿದೆ, ಅಲ್ಲದೆ ಅನುರಾಧೆ ಕೆಲಸ ಮಾಡಿದ ಭಾಗವನ್ನು ರಂಗನಾಥನ್ ಹೇಗೆ ಸರಿಪಡಿಸಿಕೊಂಡಿರಬಹುದು ಎಂಬುದನ್ನು ನೋಡುವ ಕುತೂಹಲದಿಂದ ಆಪಟೆ ಬಂದಿದ್ದನಾದರೆ ಮೋಹಿನಿಯನ್ನು ನೋಡುವ ಕುತೂಹಲದಿಂದ ಮದನಲಾಲ್ ಬಂದಿದ್ದ. ರಂಗನಾಥನ್ ಅವರಿಬ್ಬರನ್ನೂ ಆದರದಿಂದ ಬರಮಾಡಿಕೊಂಡಿದ್ದ ತಮ್ಮಿಬ್ಬರ ನಡುವೆ ಯಾವ ವ್ಯಾವಹಾರಿಕ ವಿರಸ ನಡೆದಿದ್ದಿರದಂತೆ ನಡೆದುಕೊಂಡಿದ್ದ. ಹೀಗೆಂದೇ ಮದನಲಾಲ್‌ನಿಗೆ ಮೋಹಿನಿಯನ್ನು ಪ್ರತ್ಯಕ್ಷ ನೋಡುವುದಾಗಲಿ, ಔಪಚಾರಿಕವಾಗಿ ಪರಿಚಯ ಮಾಡಿಕೊಳ್ಳುವುದಾಗಲಿ ಆ ದಿನ ಸುಲಭಸಾಧ್ಯವಾಗಿತ್ತು. ಅಂದಿನಿಂದ ಇಂದಿನವರೆಗೆ ಮೋಹಿನಿ ಮದನಲಾಲ್‌ನ ಮನಸ್ಸನ್ನು ಸೂರೆಗೊಂಡಿದ್ದಳು ಏನಾದರೂ ಆಗಲಿ, ಬೇಕಾದಷ್ಟು ಹಣ ವೆಚ್ಚವಾದರೂ ಸರಿ, ಮೋಹಿನಿಯನ್ನು ತನ್ನ ಕಂಪನಿಗೆ, ಆಮೇಲೆ ಸಹಜವಾಗಿಯೇ ತನ್ನೆಡೆಗೆ ಸೆಳೆದುಕೊಂಡೇ ಬಿಡುವುದು ಎಂಬ ಆತನ ನಿರ್ಧಾರ ಬಲಗೊಳ್ಳುತ್ತಲಿತ್ತು. ಅಂತೆಯೇ ಈ ಮೂರು ತಿಂಗಳ್ಳಲ್ಲಿ ಆ ವಿಷಯವನ್ನು ಕುರಿತು ಆತ ಆಪಟೆನೊಂದಿಗೆ ಚರ್ಚಿಸದ ದಿವಸವೇ ಇರಲಿಲ್ಲ ಹತ್ತಾರು ಹಂಚಿಕೆಗಳನ್ನು ಹಾಕಿದ್ದ. ಆಪಟೆನನ್ನು ನೂರಾರು ಬಗೆಯಲ್ಲಿ ಹುರಿದುಂಬಿಸಿದ್ದ. ಮೋಹಿನಿಯನ್ನು ಸಾಧಿಸುವುದು ತನ್ನ ಬದುಕಿನ ಸಾರ್ಥಕ್ಯವೆನ್ನುವ ಮಟ್ಟಿಗೆ ಆತನ ಬಯಕೆ ಬೃಹದಾಕಾರ ತಾಳಿ ನಿಂತಿತ್ತು.

ಶಾಕುಂತಲವನ್ನು ನೋಡಿ ಬಂದಾಗಿನಿಂದ ಆಪಟೆನ ಅಸೂಯೆ ಮದನಲಾಲ್‌ನ ಬಯಕೆಯಂತೆಯೆ ಬೆಳೆದಿತ್ತು. ಹೆಚ್ಚುಕಡಿಮೆ ತಾನೇ ಮುಗಿಯಿಸಿದ ಚಿತ್ರಪಟದ ಶ್ರೇಯಸ್ಸು ವ್ಯರ್ಥವಾಗಿ ರಂಗನಾಥನ್‌ನ ಪಾಲಿಗೆ ಹೋಯಿತು ಎಂದು ಕಳವಳಪಡುತ್ತಿದ್ದ. ಇದರಿಂದ ಆ ಚಿತ್ರವನ್ನು ಮೀರಿಸುವಂಥ ಬೇರೊಂದು ಚಿತ್ರವನ್ನು ತಯಾರಿಸುವವರೆಗೆ ಆತನಿಗೆ ಸಮಾಧಾನವಿರಲಿಲ್ಲ. ಆತನ ಈ ಹವಣಿಕೆಯನ್ನು ಇನ್ನಿಷ್ಟು ತೀವ್ರಗೊಳಿಸಿದ ವಿಶೇಷವೆಂದರೆ ಈ ಮೂರು ತಿಂಗಳ್ಳಲ್ಲಿ ಅಧಿಕಾಧಿಕವಾಗಿ ಬೆಳೆಯುತ್ತಿದ್ದ ಮೋಹಿನಿಯ ಜನಪ್ರಿಯತೆ. ಶಾಕುಂತಲ

ದಲ್ಲಿ ಆಕೆ ವಹಿಸಿದ ಪಾತ್ರ ಚಿಕ್ಕದಾದರೂ ಅದನ್ನು ಆಕೆ ನಿರ್ವಹಿಸಿದ ಬಗೆ ಆಕೆಯ ಬಗೆಯಲ್ಲಿ ಜನರ, ಚಿತ್ರಲೋಲರ ಕುತೂಹಲವನ್ನು ಕೆರಳಿಸಿತ್ತು. ಶಕುಂತಲೆಯ ಪಾತ್ರವನ್ನು ಯಶೋಮತಿ ಚೆನ್ನಾಗಿಯೇ ನಿರ್ವಹಿಸಿದ್ದರೂ, ಮೋಹಿನಿಯೇ ಶಕುಂತಲೆಯ ಪಾತ್ರವನ್ನು ವಹಿಸಬೇಕಿತ್ತು ಎಂಬ ವಿಮರ್ಶೆ ಹತ್ತಾರು ಕಡೆ ಯಿಂದ ಬಂದಿತ್ತು. ಅನುಸೂಯೆಯ ನಯವಾದ ಮಾತುಗಾರಿಕೆಯನ್ನು ಆಕೆ ನಡಸಿಕೊಟ್ಟ ರೀತಿಯೇ ಅಂಥದಾಗಿತ್ತು. ಅಲ್ಲದೆ ಭರದಿಂದ ಸಾಗಿದ 'ಸೂತ್ರದ ಬೊಂಬೆ'ಯಲ್ಲಿ ಆಕೆ ಮುಖ್ಯಪಾತ್ರವನ್ನು ವಹಿಸುವುದಾಗಿಯೂ, ಹೊಸ ತಾರೆ ಕೆಲಸ ಮಾಡಿದ ಹೊಸ ಬಗೆಯ ಚಿತ್ರ ಬೇಗನೆ ಪ್ರದರ್ಶಿತವಾಗಲಿದೆ ಎಂದು ಮುಂತಾದ ಜಾಹೀರಾತುಗಳು ವಾರವಾರಕ್ಕೂ ದಿನಪತ್ರಿಕೆಗಳಲ್ಲಿ ಭವ್ಯವಾಗಿ ಮೋಹಿನಿಯ ರೂಪವೈಖರಿಯನ್ನೇ ಮುಂದಿಟ್ಟುಕೊಂಡು ಬರುತ್ತಿದ್ದುದರಿಂದಲೂ ಮೋಹಿನಿಯ ಹೆಸರು ಮೂರು ತಿಂಗಳ ಅಲ್ಪಾವಧಿಯಲ್ಲಿಯೇ ಎಲ್ಲ ಕಡೆ ಯಲ್ಲಿಯೂ ಕೇಳಬರುತ್ತಿತ್ತು. ಹತ್ತಾರು ಜನ ನಿರ್ದೇಶಕರ ಲಕ್ಷ್ಯವನ್ನೂ ಸೆಳೆ ದಿತ್ತು. ತೀರ ಆತುರದಿಂದ ಒಬ್ಬಿಬ್ಬರು ಮೋಹಿನಿಯನ್ನು ಕಂಡು ಮಾತನಾಡಿಸಿ ನಿರಾಶೆಗೊಂಡು ಹೋಗಿಯೂ ಇದ್ದರು!

ಶಾಕುಂತಲ ಬೇರೆ ಬೇರೆ ಊರುಗಳಲ್ಲಿ ಹತ್ತಿಪ್ಪತ್ತು ಚಿತ್ರಮಂದಿರಗಳಲ್ಲಿ ಮೆರೆಯುತ್ತಿತ್ತು. ಇದಕ್ಕೂ ಹೆಚ್ಚಾಗಿ ಮುಂಬರುವ ಚಿತ್ರದಲ್ಲಿಯ ಮೋಹಿನಿಯ ಮೋಹನಾಕೃತಿಯ ಚಿತ್ರಗಳು ನೂರಾರು ಬೀದಿಕೂಟಗಳಲ್ಲಿ ಮೆರೆಯುತ್ತಿದ್ದವು. ಇದೆಲ್ಲವೂ ಆಪಟೆಸನ್ನು ಕೆರಳಿಸಿತ್ತು. ಅಧಿಕವಾಗಿ ಕಾರ್ಯಪ್ರವೃತ್ತನನ್ನಾಗಿ ಮಾಡಿತ್ತು. ಹೀಗಾಗಿ ಮದನಲಾಲ್‌ನ ಆತುರ ಆತನಿಗೊಂದು ಉತ್ತೇಜನವೇ ಆಗುತ್ತಿತ್ತು. ಮೋಹಿನಿಯನ್ನು ತಮ್ಮ ಕಂಪನಿಗೆ ಹಾರಿಸಿಕೊಂಡು ಬರಬಾರ ದೇಕೆ—ಬಹುತರವಾಗಿ ಅನುರಾಧೆ ಆ ಕೆಲಸವನ್ನು ಸಾಧಿಸಬಲ್ಲಳು—ಎಂಬ ಯೋಚನೆಗಳು ಆತನ ಮನಸ್ಸಿನಲ್ಲಿ ಆಗೀಗ ಸುಳಿಯದಿರಲಿಲ್ಲ. ಆದರೆ ಚಿತ್ರಪಟ ಪ್ರಪಂಚದ ಸೂಕ್ಷ್ಮಗಳನ್ನು ಬಲ್ಲ ಆತ ಯಾವುದಕ್ಕೂ ದುಡುಕಿ ಪ್ರಯೋಜನ ವಿಲ್ಲವೆಂದು ತಾನೀಗ ಕೈಕೊಂಡ ಸಾಮಾಜಿಕ ಚಿತ್ರಪಟವಾದ 'ಮದಿರಾ' ಎಂಬುದನ್ನೇ ಮುಂದುವರಿಸುತ್ತಿದ್ದ. ಪಾನನಿರೋಧವನ್ನು ಹಿನ್ನೆಲೆಯಾಗಿಟ್ಟು ಕೊಂಡು ರಚಿಸಲ್ಪಡುತ್ತಿದ್ದ ತನ್ನ ಚಿತ್ರ ಒಂದಿಲ್ಲೊಂದು ಬಗೆಯಲ್ಲಿ ಸರಕಾರದ ಲಕ್ಷ್ಯವನ್ನು ಸೆಳೆಯುವುದೆಂಬ ಭರವಸೆಯನ್ನಿಟ್ಟುಕೊಂಡಿದ್ದ. ಅದಾದಮೇಲೆ

ತನ್ನ ಪ್ರೀತಿಯ ವಿಷಯವಾದ ಸಂಸ್ಕೃತ ನಾಟಕವೊಂದನ್ನು ಚಿತ್ರೀಕರಿಸುವ—ವಿಶೇಷವಾಗಿ ಶಾಕುಂತಲ ತನ್ನ ಕೈತಪ್ಪಿಹೋದನಂತರ ಮೃಚ್ಛಕಟಿಕವನ್ನು ಭವ್ಯವಾಗಿ ನಿರ್ಮಿಸುವ—ಯೋಜನೆಗಳನ್ನು ಹುಡುಕುತ್ತಿದ್ದನಾದ್ದರಿಂದಲೂ, ವಸಂತಸೇನೆಯ ಪಾತ್ರವನ್ನು ಮೋಹಿನಿ ಸರಿಯಾಗಿ ಅಭಿನಯಿಸಲಾರಳೆಂದು ಆತ ತಿಳಿದಿದ್ದನಾದ್ದರಿಂದಲೂ, ಮದನಲಾಲ್‌ನ ಬಯಕೆಗೆ ಆಪಟೆನಿಂದ ವಿಶೇಷ ವಾದ ಸಹಕಾರ ದೊರೆಯುತ್ತಿರಲಿಲ್ಲ ಮೃಚ್ಛಕಟಿಕದ ಅನಂತರದಲ್ಲಿ ತಾನು ತಯಾರಿಸಬೇಕೆಂದಿದ್ದ ಸಾಮಾಜಿಕ ಚಿತ್ರವೊಂದರಲ್ಲಿ ಮೋಹಿನಿಗೆ ಸ್ಥಾನ ದೊರೆಯಬೇಕು—ಬಹುದು—ಎಂಬ ಆಪಟೆನ ಯೋಜನೆ ಮದನಲಾಲ್‌ನಿಗೆ ಸರಿಬೀಳುವಂತಿರಲಿಲ್ಲ ತನ್ನ ಆತುರಕ್ಕೆ ಸರಿಯಾಗಿ ಮೃಚ್ಛಕಟಿಕವನ್ನೇ ಮೂರ ನೆಯದಾಗಿ ತೆಗೆದುಕೊಳ್ಳಬೇಕೆಂದು ಒತ್ತಾಯವಡಿಸುತ್ತಿದ್ದ ಬೇಕಾದಾಗ ಬೇಕಾದಷ್ಟು ಹಣವನ್ನು ಮದನಲಾಲ್ ಒದಗಿಸುತ್ತಿದ್ದನಾದ್ದರಿಂದ ಆಪಟೆನಿಗೆ ಎಲ್ಲವನ್ನೂ ತನ್ನ ಯೋಚನೆಗಳಂತೆಯೇ ಮುಂದರಿಸುವುದು ಸಾಧ್ಯವಿರಲಿಲ್ಲ ಅಂತೆಯೇ ಮದನಲಾಲ್‌ನನ್ನು ಹಲವಾರು ಯುಕ್ತಿವಾದಗಳಿಂದ ಹಿಂದೂಡಲೇ ಬೇಕಾಗುತ್ತಿದ್ದಿತು

"ಏನಾಯಿತು, ಮುಂದಿನ ಚಿತ್ರದ ಸಿದ್ಧತೆ?" ಎಂದು ಮದನಲಾಲ್.

"ಏನಾಗುವುದು? ಕೈಯಲ್ಲಿಯದಂತೂ ಮುಗಿಯಲಿ ಅವಸರ ಮಾಡಿದರೆ ಎಲ್ಲವೂ ಕೈಜಾರಿ ಹೋಗಬಹುದು ಮೋಹಿನಿಯನ್ನು ನಮ್ಮಲ್ಲಿಗೆ ಹಾರಿಸಿಕೊಂಡು ಬರುವುದು ಅಷ್ಟೇನೂ ಸಾಮಾನ್ಯ ಕೆಲಸವಲ್ಲ"

"ಅಂಥದೇನು ಮಹಾ? ನೀವು ಸುಮ್ಮನೆ ನಿಧಾನ ಮಾಡುತ್ತಿದ್ದೀರಿ. ಕೈಗೆ ಸಿಕ್ಕಿದುದನ್ನು ಬಿಡಬಾರದು ನೀವು ಚಿತ್ರವನ್ನು ಯಾವಾಗ ಪ್ರಾರಂಭ ಮಾಡಿದರೂ ಸರಿ ಆಕೆಯ ಕೂಡ ಈ ವಿಷಯ ಮಾತಾಡಿಕೊಂಡು ಬರುವುದಕ್ಕೆ ಯಾವ ಅಭ್ಯಂತರ?"

"ಅಭ್ಯಂತರವೇನೂ ಇಲ್ಲ. ಈಗ ಆಕೆ 'ಸೂತ್ರದ ಬೊಂಬೆ'ಯಲ್ಲಿ ಕೆಲಸ ಮಾಡುತ್ತಿದ್ದಾಳೆ. ಆ ಚಿತ್ರ ಮುಗಿಯುವವರೆಗಂತೂ ಆಕೆ ಬರುವುದು ಸಾಧ್ಯವಿಲ್ಲ."

"ನೀವು ಕೇಳಿದ್ದೀರಾ?"

"ಕೇಳುವುದೇನು? ದೂರದಿಂದ ಜಾಲ ಬೀಸಿ ನೋಡಿದ್ದೇನೆ. ಚಿತ್ರ

ಮುಗಿದಮೇಲೆ ಬರುವುದೇನು ಕಷ್ಟವಾಗಲಿಕ್ಕಿಲ್ಲ. ಆದರೆ ಒಂದಿಷ್ಟು ನಿಧಾನ ವಾಗಿ ಸಾಗಲಿಕ್ಕೆ ಬೇಕು ನಾವು."

" ಬರುವುದು ಕಷ್ಟವಿಲ್ಲ'ಅನ್ನುತ್ತೀರಾ ? "

" ಅದಕ್ಕೆಲ್ಲ ಬೇರೆಯಾದ ದಾರಿಯನ್ನು ಹುಡುಕಿದ್ದೇನೆ, ಸೇಠಜಿ—"

" ಏನಿದ್ದರೂ ನೀವು ಒಂದು ಸಲ ಆಕೆಯನ್ನು ಕಂಡು ಮಾತನಾಡಿಸಿ ಬಿಡಿ. ಬೇಕಾದರೆ ನಾನೂ ಬರುತ್ತೇನೆ. ಪೂರ್ವಪೀಠಿಕೆಯಾಗಿ ಮಾತಾಡಿ ಕೊಂಡು ಬಂದರೆ ಮುಂದೆ ನಮಗೇ ಅನುಕೂಲ "

ಆದರೆ ಇಂಥ ವಿಷಯಗಳನ್ನು ಹೇಗೆ ನಡಸಬೇಕೆಂಬ ಅನುಭವ ಆಪಟೆ ನಿಗೆ ಇದ್ದುದರಿಂದ ಮಾತು ಬಂದಾಗಲೆಲ್ಲ ಏನಾದರೊಂದನ್ನು ಹೇಳಿ ಮೋಹಿನಿ ಯನ್ನು ಕಾಣಹೋಗುವುದನ್ನು ಮುಂದೂಡುತ್ತಿದ್ದ ಮದನಲಾಲ್‌ನನ್ನು ಅಸಂತೋಷಗೊಳಿಸುವುದು ಆಪಟೆನಿಗೆ ಬೇಡವಾಗಿದ್ದಂತೆ ಆಪಟೆನನ್ನು ಅಸಂತೋಷಗೊಳಿಸುವುದು ಮದನಲಾಲ್‌ನಿಗೆ ಬೇಡವಾಗಿತ್ತು. ಆಪಟೆ ಸಮರ್ಥ ಕೆಲಸಗಾರನೆಂದು ಆತ ತಿಳಿದಿದ್ದನೆಂದೊ, ಆತ ಕೈಬಿಟ್ಟರೆ ಎಲ್ಲವೂ ಕೈಬಿಡಬಹು ದಲ್ಲದೆ ಹಾಕಿದ ಹಣದ ಹೋಮವಾದೀತೆಂಬ ಹೆದರಿಕೆಯಿಂದೊ, ಮದನಲಾಲ್ ಆಪಟೆನ ಮನವೊಲಿಸುವ ದಾರಿಗಳನ್ನೇ ಹಿಡಿಯುತ್ತಿದ್ದ. ಅಲ್ಲದೆ ತಾನು ಹೆಚ್ಚು ಕಡಿಮೆ ಮದನ ಪಿಕ್ಚರ್ಸ್‌ದ ಮಾಲೀಕನೇ ಆಗಿದ್ದರಿಂದ ತಾನಾಗಿಯೇ ಹೋಗಿ ಮೋಹಿನಿಯನ್ನು ಯಾಕೆ ಕಾಣಬಾರದು ಎಂದೂ ಕೇಳಿಕೊಳ್ಳುತ್ತಿದ್ದ. ಹೌದು, ಹಾಗೆಯೇ ಮಾಡಬೇಕು. ಆಪಟೆ ಜೊತೆಯಲ್ಲಿದ್ದರೆ ತನಗೂ ಸಂಕೋಚವೆನಿಸ ಬಹುದು ಎಂದು ಕೊನೆಗೆ ಹಾಗೆಯೇ ನಿರ್ಧಾರ ಮಾಡಿಕೊಂಡ. ಒಂದೆರಡು ದಿನಗಳಲ್ಲಿಯೇ ಆಕೆಯ ವಿಳಾಸವನ್ನು ತಿಳಿದುಕೊಂಡ.

ಮದನಲಾಲ್ ಮೋಹಿನಿಯ ಮನೆಗೆ ಬಂದಾಗ ಸಂಜೆಯ ಐದು ಗಂಟೆ ಯಾಗಿತ್ತು. ಇನ್ನೂ ಇಬ್ಬರು ಮೂವರು ಆಕೆಯನ್ನು ಕಾಣುವುದಕ್ಕೆಂದು ಕಾಯುತ್ತಿದ್ದರಿಂದ ಮದನಲಾಲ್‌ನಿಗಾದರೂ ಅವರಂತೆಯೇ ತನ್ನ ಕಾರ್ಡು ಕಳಿಸಿ ಹೊರಕೋಣೆಯಲ್ಲಿಯೇ ಉಳಿಯಬೇಕಾಯಿತು 'ಸೇಠ್ ಮದನಲಾಲ್, ಪ್ರೊಪ್ರೈಟರ್, ಮದನ ಪಿಕ್ಚರ್ಸ್' ಎಂಬ ಕಾರ್ಡು ನೋಡಿದಾಕ್ಷಣ ತನ್ನನ್ನೇ ಮೊದಲಿಗೆ ಒಳಗೆ ಬರಮಾಡಿಕೊಳ್ಳಬಹುದೆಂಬ ಆತನ ನಿರೀಕ್ಷೆ ವಿಫಲವಾಯಿತು. ತನ್ನ ಬದಿಯಲ್ಲಿಯ ಇಬ್ಬರ ವೇಷಗಳ ಮೇಲಿಂದ, ಅವರ ಮುಖಲಕ್ಷಣ,

ಕೈಯಲ್ಲಿ ಎತ್ತಿಕೊಂಡು ಬಂದ ದಪ್ಪನಾದ ಬ್ಯಾಗುಗಳ ಮೇಲಿಂದ ಅವರು ಯಾವುವಾದರೂ ಕಂಪನಿಗಳ ಏಜಂಟರಿರಬೇಕೆಂಬುದನ್ನು ಸಹಜವಾಗಿಯೇ ಊಹಿಸಬಹುದಾಗಿತ್ತು. ಅವರಂಥ ಒಬ್ಬನ ಕೂಡ ಮೋಹಿನಿ ಆಚೆಯ ಕೋಣೆಯಲ್ಲಿ ಮಾತಾಡುತ್ತಿದ್ದುದು ಕೇಳಬರುತ್ತಿತ್ತಲ್ಲದೆ, ಗಾಳಿಯ ಹೊಡೆತಕ್ಕೆ ಆಗೀಗ ಬಾಗಿಲಿನ ತೂಗುಪರದೆಗಳು ಸರಿದಾಗ ಸುಖಾಸನದಲ್ಲಿ ಸುಖವಾಗಿ ಕುಳಿತು ಮೋಹಿನಿ ಮಾತನಾಡುತ್ತಿದ್ದುದೂ ಕಂಡುಬರುತ್ತಿತ್ತು. ಒಂದೆರಡು ನಿಮಿಷಗಳಲ್ಲಿ ಮೋಹಿನಿ ಬದಿಯ ಟೀಪಾಯ್ ಮೇಲಿನ ಟೆಲಿಫೋನ್ ಎತ್ತಿಕೊಂಡು ಮಾತನಾಡುತ್ತಿದ್ದಳು.

" ಹಲೊ—"

" (ಯಾರು ಬೇಕು ? ) "

" ರಂಗನಾಥನ್—"

" ಹಲೊ—ಡಿಯರ್—"

" (ಏನು ಸಮಾಚಾರ ? ) "

" ಏನಿಲ್ಲ. ಫಿಲ್ಮ್ ಮ್ಯಾಗಜಿನ್‌ನವರು ಬಂದಿದ್ದಾರೆ. ಕವರ್ ಪೇಜಿಗೆ ಒಂದು ಕ್ಲೋಜ್‌ಅಪ್ ಬೇಕಾಗಿದೆಯಂತೆ—"

" (ಮೊನ್ನೆ ಶೂಟ್ ಮಾಡಿದ್ದನ್ನು ಕೊಡಬಹುದಲ್ಲ—)"

" ಹೌದು. ಆದರೆ ಅವರಿಗೆ ಟರ್ಮ್ಸ್ ಏನು ಹೇಳಬೇಕು ? "

" (ಏನು ಆಫರ್ ಮಾಡುತ್ತಿದ್ದಾರೆ ?) "

" ಮುನ್ನೂರು—"

" (ಐದುನೂರು ಹೇಳು—) "

" ಅಷ್ಟು ಹೇಳಲೆ ? "

" (ನಿನಗೇನು ಹುಚ್ಚು? ಇನ್ನೆರಡು ತಿಂಗಳು ತಡೆದು ಬಂದರೆ ಸಾವಿರ!) "

" ಆಲ್‌ರೈಟ್—" ಎಂದು ಮೋಹಿನಿ ನಕ್ಕಳು.

" (ಮತ್ತೆ—ಒಮ್ಮೆಯೆ ಉಪಯೋಗಿಸತಕ್ಕದ್ದು ಎಂದು ಹೇಳು—) "

" ಅದನ್ನೆಲ್ಲ ನೀವೇ ಹೇಳಿ. ಅಲ್ಲಿಗೇ ಕಳಿಸಿಬಿಡುತ್ತೇನೆ. ಹೇಗಿದ್ದರೂ ಫೋಟೋಕ್ಕಾಗಿ ಅವರು ಸ್ಟುಡಿಯೋಕ್ಕೆ ಬರಬೇಕು. ಹಾಗೆಯೇ ಹೇಳಲಾ ?"

" (ಓ.ಕೆ.) "

ಮುಂದೆ ಒಂದೈದು ನಿಮಿಷಗಳಲ್ಲಿ ಪತ್ರಿಕೆಯ ಸಂಚಾಲಕ ಐದುನೂರಕ್ಕೆ ಚೆಕ್ ಬರೆದುಕೊಟ್ಟು ಮೋಹಿನಿಯಿಂದ ಚೀಟಿ ತೆಗೆದುಕೊಂಡು ಹೊರಬಿದ್ದ. ಅವನದಾದನಂತರ ಒಬ್ಬ ಸ್ನೋ ಕಂಪನಿಯವ. ಆಮೇಲೆ ಒಬ್ಬ ಟೊಯ್‌ಲೆಟ್ ಸಾಬೂನಿನವ. ಸಾಬೂನಿನವನಿಗೆ ಮೋಹಿನಿಯ ಚಿತ್ರವನ್ನು ಜಾಹೀರಾತಿನಲ್ಲಿ ಉಪಯೋಗಿಸಬೇಕಾಗಿದ್ದಿತಲ್ಲದೆ ಆಕೆಯ ಹಸ್ತಾಕ್ಷರದಲ್ಲಿ ಆ ಕಂಪನಿಯ ಸಾಬೂನಿನ ಬಗ್ಗೆ ಒಳ್ಳೆ ಅಭಿಪ್ರಾಯ ಬೇಕಿದ್ದಿತು. ಮೋಹಿನಿ ಕೇಳುತ್ತಿದ್ದಳು.

"ನಿಮ್ಮ ಸಾಬೂನನ್ನು ಉಪಯೋಗಿಸಿಯೇ ಇಲ್ಲವೆಂದಮೇಲೆ ನೀವು ಹೇಳಿದ ಹಾಗೆ ನಾನು ಬರೆದುಕೊಡುವುದು ಹೇಗೆ?"

"ನೀವು ಉಪಯೋಗ ಮಾಡಬಹುದಲ್ಲ ಅದಕ್ಕೆಂದೇ ಈ ಸ್ಪೆಶಲ್ ಪೆಟ್ಟಿಗೆ ನಿಮಗೆ ಕಾಣಿಕೆ."

"ಉಪಯೋಗಿಸುವ ಮೊದಲೇ ಅಭಿಪ್ರಾಯ ಬರೆಯಲೆ?"

"ಅದಕ್ಕೇನಂತೆ? ನಮ್ಮ ಸಾಬೂನು ನಿಜವಾಗಿಯೂ ಹೈಕ್ಲಾಸ್—"

"ಆದರೂ—ಸರಿ ನಿಮ್ಮ ಟರ್ಮ್ಸ್ ಏನು?"

"ಯಾವುದಕ್ಕೆ?"

"ಮೊದಲನೆಯದಾಗಿ, ಜಾಹೀರಾತಿಗಾಗಿ ಫೋಟೋ. ಆಮೇಲೆ ಹಸ್ತಾಕ್ಷರದಲ್ಲಿ ಅಭಿಪ್ರಾಯ."

"ಜಾಹಿರಾತಿನಲ್ಲಿಯ ಫೋಟೋವನ್ನು ನಾವು ಕನಿಷ್ಠ ಪಕ್ಷ ಒಂದು ವರ್ಷವಾದರೂ ಉಪಯೋಗ ಮಾಡಬೇಕು. ಅದರಂತೆಯೇ ನಿಮ್ಮ ಕೈಯಿಂದ ಬರೆದ ಅಭಿಪ್ರಾಯವನ್ನೂ ಉಪಯೋಗಿಸಬೇಕೆಂದಿದ್ದೇವೆ—"

"ಹಾಗಿದ್ದರೆ ನೀವು ಹೇಳಿದ್ದು ತೀರ ಕಡಿಮೆಯಾಯಿತು."

"ನೀವೇ ಹೇಳಿ—"

"ನೀವಿದೇ ನೋಡಿದಿರಲ್ಲವೆ? ಕವರ್‌ಪೇಜ್ ಮೇಲೆ ಒಂದು ಸಲ ಪ್ರಿಂಟ್ ಮಾಡೋದಕ್ಕೆ ಐದುನೂರು ಕೊಟ್ಟಿದ್ದಾರೆ. ನೀವು ಕೇಳುವುದು ಒಂದು ವರ್ಷದ ಉಪಯೋಗ—"

"ಎಷ್ಟು ಹೇಳಿಬಿಡಿ—"

"ಫೋಟೋಕ್ಕೆ ಒಂದು ಸಾವಿರದ ಐದು ನೂರು, ಹಸ್ತಾಕ್ಷರಕ್ಕೆ ಐದುನೂರು!"

ಏಜಂಟ ಒಂದೆರಡು ನಿಮಿಷ ಹಿಂದೆ ಮುಂದೆ ನೋಡಿದ. ಕೊನೆಗೆ ಒಪ್ಪಿದ. ಮೋಹಿನಿ ಕೇಳಿದಳು :

" ಅಭಿಪ್ರಾಯ ಏನೆಂದು ಬರೆಯುವುದು ? "

" ನಾನು ಬರೆದುಕೊಂಡೇ ಬಂದಿದ್ದೇನೆ ಬೇಕಾದರೆ ನೀವು ಅಲ್ಲಲ್ಲಿ ಬದಲಾಯಿಸಬಹುದು ! "

" ಸರಿಯಾಗಿದೆ. ಅದನ್ನೇ ಬರೆದುಬಿಡುತ್ತೇನೆ."

" ಥ್ಯಾಂಕ್ಸ್ ! "

ಕೊನೆಗೊಮ್ಮೆ ಮದನಲಾಲ್‌ನ ಸರದಿ ಬಂದಿತು. ತಾನು ಇಷ್ಟೊಂದು ಧನವಂತ, ಒಂದು ಫಿಲ್ಮ್ ಕಂಪನಿಯ ಮಾಲೀಕ, ಹೀಗಿದ್ದೂ ಸಾಮಾನ್ಯ ಏಜಂಟರಂತೆ ತನಗೂ ಹೊರಗಡೆ ಕಾಯಬೇಕಾಯಿತಲ್ಲ ಎಂದು ಒಂದೆರಡು ಸಲ ಮದನಲಾಲ್‌ನ ಮನಸ್ಸು ಅಳುಕಿತ್ತಾದರೂ ಮೋಹಿನಿಯನ್ನು ಪಡೆಯುವ ಆಸೆ ಬಂದುದೆಲ್ಲವನ್ನೂ ಸಹಿಸುವಂತೆ ಮಾಡಿತ್ತು ನಡುನಡುವೆ ಸೋಫಾದಲ್ಲಿ ಸುಖವಾಗಿ, ವಿಲಾಸವತಿಯಾಗಿ ಮೈಚೆಲ್ಲಿ ಕುಳಿತ ಮೋಹಿನಿಯ ಕಮನೀಯಾಕೃತಿ ಕಣ್ಣಿಗೆ ಬಿದ್ದಾಗಲೆಲ್ಲ ಮದನಲಾಲ್ ಇಂಥ ಯೋಚನೆಗಳನ್ನು ಬಿಟ್ಟುಕೊಟ್ಟು ಆಕೆ ತಮ್ಮ ಕಂಪನಿಯನ್ನು ಸೇರಿದನಂತರ ತಮ್ಮಿಬ್ಬರ ನಡುವೆ ಬೆಳೆಯಬಹುದಾದ ಸಂಬಂಧಗಳನ್ನೇ ನೆನೆಯುತ್ತಿದ್ದ ಕೋಣೆಯಲ್ಲಿ ಕಾಲಿಟ್ಟಾಗ ಮೋಹಿನಿ ಕುಳಿತಲ್ಲಿಂದ ಎಷ್ಟು ಮಾತ್ರವೂ ಮಿಸುಕಲಿಲ್ಲ. ಎದ್ದು ತನ್ನನ್ನು ಸ್ವಾಗತಿಸುವುದಂತೂ ದೂರವೇ ! ಇದನ್ನು ಮದನಲಾಲ್ ಗಮನಿಸದಿರುವುದು ಸಾಧ್ಯವಿರಲಿಲ್ಲ ಆದರೆ ಆಕೆಯ ಮೊದಲ ಮಾತುಗಳು ಎಷ್ಟೋ ಸಮಾಧಾನವನ್ನುಂಟುಮಾಡುವಂತೆ ಇದ್ದವು. ಮೋಹಿನಿ ಹೇಳಿದಳು

" ಬನ್ನಿ, ಸೇಠಜಿ. ಅದೇನು, ಅಕಸ್ಮಾತ್ತಾಗಿ ಬಂದುಬಿಟ್ಟಿರಲ್ಲ ? ನಿಮಗೆ ತುಂಬಾ ತಡವಾಗಿಬಿಟ್ಟಿತಲ್ಲವೆ ? ಕ್ಷಮಿಸಿ, ಕಾಯಿಸಿದ್ದಕ್ಕೆ. ಅವರೆಲ್ಲರು ಬಂದು ಆಗಲೆ ತುಂಬಾ ಹೊತ್ತಾಗಿಬಿಟ್ಟಿತ್ತು—"

" ಪರವಾ ಇಲ್ಲ. ನಾನೇ ನಿಮಗೆ ಮೊದಲಿಗೆ ತಿಳಿಸಿ ಬಂದಿದ್ದರೆ—"

" ಅಂಥದೇನೂ ಇಲ್ಲ. ಆದರೆ ನಿತ್ಯ ಹೀಗೆಯೆ ಯಾರಾದರೂ ಬಂದು ತೊಂದರೆ ಕೊಟ್ಟೇ ಕೊಡುತ್ತಾರೆ. ಈ ಏಜಂಟರನ್ನು ತಪ್ಪಿಸಬೇಕಾದರೆ ಊರನ್ನೆ ಬಿಟ್ಟು ಹೋಗಬೇಕು—"

" ಅವರನ್ನೇನು ತಪ್ಪಿಸುತ್ತೀರಿ ? ನೀವು ಎಲ್ಲಿಗೆ ಹೋದರೂ ಅವರು ಬೆನ್ನ ಹಿಂದೆ ಇದ್ದವರೆ. ಸ್ಟಾರ್ ಆದವರಿಗೆ ಇದೆಲ್ಲ ತಪ್ಪಿದ್ದೇ ಅಲ್ಲ "

' ನಾನೆಂಥ ಸ್ಟಾರ್ ? ' ಎನ್ನಬೇಕಾದವಳು ಮದನಲಾಲ್‌ನಂಥವನೇ ತನಗೇನೂ ಬೇಡವಲ್ಲದ ಮನ್ನಣೆಯ ಮಾತುಗಳನ್ನು ಹೇಳುತ್ತಿರುವಾಗ ತಾನಾಗಿಯೇ ಯಾಕೆ ಇಲ್ಲದ ವಿನಯವನ್ನು ತೋರಿಸಬೇಕು ಎಂದು ಮೋಹಿನಿ ಸುಮ್ಮನೆ ನಸುನಗೆಯೊಂದನ್ನು ಬೀರಿದಳು ' ಹೌದು, ನಾನು ಸ್ಟಾರ್ ಎಂದೇ ಅಲ್ಲವೆ ನೀವು ಇಲ್ಲಿಯವರೆಗೆ ನನ್ನನ್ನು ನೋಡಲು ಬಂದದ್ದು ? ' ಎಂದು ಕೇಳುವಂತಿತ್ತು ಆ ನಗೆ ಮದನಲಾಲ್‌ನ ಹೆಸರಿನ ಕಾರ್ಡನ್ನು ನೋಡಿದಾಗಿನಿಂದಲೂ ಆತ ಯಾತಕ್ಕಾಗಿ ಬಂದಿರಬಹುದು ಎಂಬುದು ಮೋಹಿನಿಗೆ ಬಗೆಹರಿಯದ ವಿಷಯವಾಗಿತ್ತು ಆತನನ್ನು ತಾನು ಕಂಡದ್ದು ಒಮ್ಮೆಯೆ ಆಗಿದ್ದರೂ ತನ್ನ ಮತ್ತು ರಂಗನಾಥನ್ ನಡುವೆ ಆಪಟಿನ ಮಾತು ಬಂದಾಗಲೆಲ್ಲವೂ ಮದನಲಾಲ್‌ನ ಮಾತೂ ಬರುತ್ತಿತ್ತಾದ್ದರಿಂದ ಒಂದು ದೃಷ್ಟಿಯಿಂದ ಮದನಲಾಲ್ ಆಕೆಗೆ ಪರಿಚಿತನೇ ಇದ್ದ. ಅಲ್ಲದೆ ಇತ್ತೀಚಿನ ಎರಡು ತಿಂಗಳಲ್ಲಿ ರಂಗನಾಥನ್‌ನ ಪರಿಚಯ –ಸಹವಾಸ— ಹೆಚ್ಚು ನಿಕಟವಾಗುತ್ತಿದ್ದ ಹಾಗೆ, ರಂಗನಾಥನ್‌ನ ಕಂಪನಿಯೆಂದರೆ ತನ್ನ ಕಂಪನಿಯೆ ಎಂದುಕೊಳ್ಳುವಷ್ಟರ ಮಟ್ಟಿಗೆ ಆತ್ಮೀಯತೆ ಬೆಳೆದಿತ್ತಾದ್ದರಿಂದ ಮದನಲಾಲ್ ಆಕೆಯ ದೃಷ್ಟಿಯಲ್ಲಿ ಒಬ್ಬ ಪ್ರತಿಸ್ಪರ್ಧಿಯಾಗಿಯೇ ಕಾಣುತ್ತಿದ್ದ ಮದನಲಾಲ್ ದುಡ್ಡನ್ನು ಪೂರೈಸಿರದಿದ್ದರೆ ಆಪಟೆ ಬೇರೆ ಕಂಪನಿಯನ್ನು ತೆಗೆಯುವುದು ಸಾಧ್ಯವಿರಲಿಲ್ಲ ಆತ ಬೇರೆ ಕಂಪನಿಯನ್ನು ತೆಗೆದಿರದಿದ್ದರೆ ತಮ್ಮಿಂದ ಎಷ್ಟೋ ಕೆಲಸಗಾರರು ಬಿಟ್ಟುಹೋಗಿ ತೊಂದರೆ ಮಾಡುತ್ತಿರಲಿಲ್ಲ. ಹೀಗೆಂದು ಇತ್ತೀಚಿನ ಎರಡು ಮೂರು ತಿಂಗಳಲ್ಲಿ ರಂಗನಾಥನ್ ಎದುರಿಸಬೇಕಾದನೂರಾರು ಅನಾನುಕೂಲಗಳಿಗೆ ಮದನಲಾಲ್‌ನೆ ಹೊಣೆಗಾರ ಎಂಬ ಅಭಿಪ್ರಾಯ ಆಕೆಯಲ್ಲಿ ಬೇರೂರಿತ್ತಾದ್ದರಿಂದ ಆತನ ವಿಷಯದಲ್ಲಿ ಗೌರವ ಭಾವನೆ ಇರಲಿಲ್ಲ. ತಮಗೆ ಪ್ರತಿಸ್ಪರ್ಧಿಯಾಗಿ ನಿಂತವ ಈಗ ಹೀಗೆ ಅಕಸ್ಮಾತ್ತಾಗಿ ತನ್ನನ್ನು ಕಾಣಲಿಕ್ಕೆ ಬಂದದ್ದು ಯಾತಕ್ಕೆ ಎಂಬುದು ಮೋಹಿನಿಗೆ ಬಗೆಹರಿಯಲಿಲ್ಲವಾದರೂ ತಾರೆಯಾಗಿ ಮೆರೆಯುತ್ತಿದ್ದುದಕ್ಕೆ ಸಹಜವಾಗಿಯೇ ಆಕೆಯಲ್ಲಿ ಬೆಳೆಯುತ್ತಿದ್ದ ಆತ್ಮಪ್ರೌಢಿಮೆಯಿಂದಾಗಿ ಆತ ತನ್ನನ್ನು ತಮ್ಮ ಕಂಪನಿಯ ಕಡೆಗೆ ಸೆಳೆಯಲು ಯಾತಕ್ಕೆ ಬಂದಿರಬಾರದು ? ಹಾಗಿದ್ದರೆ ? ಎಂದು ಮುಂತಾಗಿ

ಕೇಳಿಕೊಳ್ಳುತ್ತಿದ್ದಳು. ಹಾಗಿದ್ದರೆ—ಈ ವಿಷಯವನ್ನು ರಂಗನಾಥನ್‌ನಿಗೆ ತಿಳಿಸಿ ಬಿಡಬೇಕು. ಬೇರೆ ಚಿತ್ರನಿರ್ದೇಶಕರು ಆಗಾಗ ಬಂದು ತನ್ನನ್ನು ಕೇಳು ತ್ತಿದ್ದುದು ಆತ್ಮಾಭಿಮಾನಕ್ಕೆ ಪೋಷಕವಾಗುತ್ತಿದ್ದರೂ ಇಷ್ಟೊಂದು ಪದವಿ ಯನ್ನು ತನಗೆ ತಂದುಕೊಟ್ಟ ರಂಗನಾಥನ್‌ನನ್ನು ಬಿಟ್ಟುಹೋಗುವುದು ಸಾಧ್ಯವೆ? ಎಂದೂ ಕೇಳಿಕೊಳ್ಳುತ್ತಿದ್ದಳು. ತನಗೇ ತಿಳಿಯದಲೆಂಬಂತೆ ಕೇಳಿದಳು

" ಅದೇನು, ಈ ಕಡೆಗೆ ಬಂದಿರಿ ? "

" ಏನೋ ಹೀಗೇ—ಅಲ್ಲ, ಅಂದರೆ—ನಮ್ಮಲ್ಲಿ ನಾಳೆ ಆಗಸ್ಟ್ ಹದಿನೈ ದಕ್ಕೆ ಏನೋ ಒಂದಿಷ್ಟು ಉತ್ಸವ ಕಾರ್ಯಕ್ರಮ ಇಟ್ಟುಕೊಂಡಿದ್ದೇವೆ. ಅದಕ್ಕೆ ನೀವು ಬರಬೇಕು, ಎಂದು ಕೇಳಿಕೊಳ್ಳೋಣ ಎಂದು—"

" ಏನು ಕಾರ್ಯಕ್ರಮ ? ಯಾವುದಾದರೂ ಹೊಸ ಪಿಕ್ಚರ್ ಆರಂಭ ಮಾಡುತ್ತೀರಾ ? "

" ಹಾಗೇನಿಲ್ಲ ನಮ್ಮ ಕಂಪನಿ ಸುರುವಾದಮೇಲೆ ನಾಲ್ಕು ಜನ ಒಂದೆಡೆ ಸೇರಲಿಕ್ಕೆ ಇದೇ ಮೊದಲನೆಯ ಅವಕಾಶ—ಹಾಗೆಂದು—"

ನೇರವಾಗಿ ತಾನು ಬಂದುದಕ್ಕೆ ಕಾರಣವನ್ನು ಹೇಳಲಾಗದೆ ಮದನಲಾಲ್ ಹೀಗೆ ಹೇಳಿದ ಕಂಪನಿಯ ಪ್ರಾರಂಭೋತ್ಸವದ ಸಮಯದಲ್ಲಿ ಮೋಹಿನಿ ರಂಗನಾಥನ್‌ರನ್ನು ತಾನು ಆಮಂತ್ರಿಸಿರಲಿಲ್ಲವೆಂಬುದನ್ನು ಮದನಲಾಲ್ ಮರೆತಿದ್ದನಾದರೂ ಮೋಹಿನಿ ಮರೆತಿರಲಿಲ್ಲ

" ರಂಗನಾಥನ್‌ರಿಗೆ ಹೇಳಿದ್ದೀರಾ ? "

" ಇನ್ನೂ ಇಲ್ಲ."

" ಸರಿ. ಏನೇನಿದೆ ಕಾರ್ಯಕ್ರಮ ? "

" ಅದನ್ನೆಲ್ಲ ಆಮೇಲೆ ನಿರ್ಣಯಿಸುವುದು. ಮೊದಲು ನೀವು ಬರುವುದು ಎಂದಾದರೆ—"

" ನಾನು ಬರುವುದು ಅಷ್ಟು ಮುಖ್ಯವೆ ? "

" ನೀವು ಬರಬೇಕೆಂದೇ—" ಮದನಲಾಲ್‌ನಿಂದ ಮಾತು ಜಾರಿತು

" ಆಪಟೆ ಏನೆನ್ನುತ್ತಾರೆ ? "

" ಏನೆನ್ನುವುದು ? ತುಂಬಾ ಕೆಲಸದಲ್ಲಿರುತ್ತಾರೆ, ಯಾವಾಗಲೂ."

" ಅವರ ಮನೆಯವರು ಊರಿಂದ ಬಂದರೆ ? "

" ಇನ್ನೂ ಇಲ್ಲ ಎಂದು ಕಾಣುತ್ತದೆ "

" ಬಹಳ ದಿವಸವಾಯಿತಲ್ಲವೆ ಅವರು ಹೊರಟುಹೋಗಿ—"

ಮಾತು ಎಲ್ಲಿಗೊ ಹರಿಯುತ್ತಿರುವುದನ್ನು ನೆನೆದು ಅದನ್ನು ತನಗೆ ಬೇಕಾದ ವಿಷಯದೆಡೆಗೆ ಹೇಗೆ ಎಳೆಯುವುದೆಂಬುದು ಮದನಲಾಲ್‌ನಿಗೆ ಯೋಚನೆಯಾಯಿತು ಮೋಹಿನಿಗೆ ಮುಂದೇನು ಮಾತನಾಡಬೇಕು ತಿಳಿಯದೆ ಸಹಜವಾದ ಪ್ರಶ್ನೆಯೊಂದರಿಂದ ಆತನಿಗೆ ದಾರಿ ಮಾಡಿಕೊಟ್ಟಳು.

" ನಿಮ್ಮಲ್ಲಿ ಯಾವ ಪಿಕ್ಚರ್ ನಡೆದಿದೆ ಈಗ ? "

" 'ಮದಿರಾ !' "

" ಸ್ಟಾರ್ ಕೆಲಸ ಯಾರು ಮಾಡುತ್ತಾರೆ ? "

" ಏನೇನೋ, ಅದೆಲ್ಲ ವಿಷಯ ಆಪಟೆಯವರಿಗೇ ಸೇರಿದ್ದು ನನಗೇನು ತಿಳಿಯಬೇಕಾಗಿದೆ ಅದರಲ್ಲಿ ? ಈ ವಿಷಯದಲ್ಲಿ ಎಲ್ಲ ನಿರ್ಣಯವನ್ನು ಅವರಿಗೇ ಬಿಟ್ಟುಕೊಟ್ಟಿದ್ದೇನೆ. ನಿಮ್ಮ 'ಸೂತ್ರದ ಬೊಂಬೆ' ಎಲ್ಲಿಗೆ ಬಂದಿದೆ ? "

" ಇನ್ನೂ ಒಂದೆರಡು ತಿಂಗಳು ಆದೀತು—"

" ಬಹಳ ಒಳ್ಳೆಯ ಪಿಕ್ಚರ್ ಆದೀತು ಅದು. ನೀವು ಕೆಲಸ ಮಾಡುತ್ತಿದ್ದೀರೆಂದಮೇಲೆ ಹೇಳಬೇಕಾಗಿಯೆ ಇಲ್ಲ—"

" ಅದೇನು ಹಾಗೆ ಹೇಳುತ್ತೀರಿ ? ಸುಮ್ಮನೆ ಮುಖಸ್ತುತಿ—"

" ಮುಖಸ್ತುತಿ ಮಾಡಿ ನನಗೇನಾಗಬೇಕಾಗಿದೆ ? ಆಪಟೇನೆ ಹೇಳುತ್ತಿದ್ದರು—"

" ಏನೆನ್ನುತ್ತಿದ್ದರು ಆಪಟೆ ? "

" ಅಲ್ಲ–ಅಂದರೆ–ನೀವು ಮುಖ್ಯ ಕೆಲಸಮಾಡಿ, ರಂಗನಾಥನ್ ಡೈರೆಕ್ಟ್ ಮಾಡುತ್ತಿರುವಾಗ ಅಂಥ ಒಳ್ಳೆ ಕತೆ ಉತ್ತಮ ಪಿಕ್ಚರ್ ಆಗದೆ ಇರುತ್ತದೆಯೆ ಎನ್ನುತ್ತಾರೆ ನಾವೂ ಇದಾದ ಮೇಲೆ ಒಂದು ಒಳ್ಳೆಯ ಸೋಷಿಯಲ್ ಪಿಕ್ಚರ್ ಮಾಡಬೇಕು—"

" ಹೌದೆ ?—"

" ಆದರೇನು, ಒಳ್ಳೆ ಸ್ಟಾರ್ ಸಿಕ್ಕುವುದೆ ಕಷ್ಟ—"

" ಸ್ಟಾರ್ ಸಿಕ್ಕುವುದೇನು ಕಷ್ಟ ? ದುಡ್ಡು ಕೊಟ್ಟರೆ—"

" ದುಡ್ಡು ಕೊಡಬಹುದು. ಆದರೆ ಮನಸ್ಸಿಗೆ ತಕ್ಕಂತೆ ಕೆಲಸ ಮಾಡು ವವರು ಸಿಕ್ಕರೆ ಮಾತ್ರ ಬೇಡಿದಷ್ಟು ಕೊಡಬಹುದು. ಈಗ ನೀವೇ ನೋಡಿ—"

" ಏನು ? "

" ಅಲ್ಲ—ನಮ್ಮ ಒಂದು ಪಿಕ್ಚರ್‌ನಲ್ಲಿ ಕೆಲಸ ಮಾಡಿರಿ ಎಂದರೆ ನೀವೇನು ಒಪ್ಪುತ್ತೀರಾ ? "

" ಯಾಕೆ ? ನಾನು ನಿಮ್ಮ ಒಂದು ಪಿಕ್ಚರ್‌ನಲ್ಲಿ ಕೆಲಸ ಮಾಡಬೇಕು ಎನ್ನುತ್ತೀರಾ ? "

ಹೀಗೆ ನೇರವಾಗಿ ಮೋಹಿನಿ ಕೇಳಬಹುದೆಂದು ಮದನಲಾಲ್ ನಿರೀಕ್ಷಿ ಸಿರಲಿಲ್ಲ. ತಾನು ಕೇಳಿದರೆ ಮಾಡಿಯೇ ಮಾಡುವಳು ಎಂಬ ಭರವಸೆ ಆತನಲ್ಲಿ ಬೆಳೆಯಿತು ಒಳ್ಳೆ ಉತ್ಸಾಹದಿಂದಲೇ ಹೇಳಿದ .

" ಅದನ್ನೇ ನಾನೀಗ ಕೇಳಬೇಕೆಂದಿರುವುದು ! ಕೆಲಸ ಮಾಡಲು ಒಪ್ಪಿದರೆ ನೀವು ಹೇಳಿದ ಹಾಗೆ—"

" ಏನು ನಾನು ಹೇಳಿದ ಹಾಗೆ ? "

" ನೀವು ಹೇಳಿದ ಹಾಗೆ ದುಡ್ಡು ಕೊಡಲು ನಾನು ಸಿದ್ಧ."

" ಎಷ್ಟು ಕೊಡಬಹುದು ? "

ಎಂದು ಮೋಹಿನಿ ನಕ್ಕಳು. ಆ ನಗೆ ಮದನಲಾಲ್‌ನನ್ನು ಮೈಮರೆಯಿ ಸಿತು. ಆ ನಗೆಯನ್ನು ಬೀರುವಾಗ ಆಕೆ ಮೈಯನ್ನು ಮಣಿಸಿದ ಬಗೆ, ಹಾಗೆ ಮೈಯನ್ನು ಮಣಿಸಿದಾಗ ಮೊದಲೇ ಸರಿದಿದ್ದ ಆಕೆಯ ಸೆರಗು ಇನ್ನೂ ಸರಿದು ಆಕೆಯ ವಕ್ಷಃಸ್ಥಲವನ್ನು ಸ್ಪಷ್ಟವಾಗಿ ತೋರಿಸುವಂತಾದದ್ದು, ತಿಳಿದೊ ತಿಳಿಯದೆಯೊ ಆ ಕಡೆಗೆ ಆಕೆ ನಿರ್ಲಕ್ಷ್ಯದಿಂದಿದ್ದ, ಮದನಲಾಲ್‌ನ ಆಸೆಯನ್ನು ಉಕ್ಕೇರಿಸಿ ಆಕೆ ಹಾಗೆ ನಕ್ಕದ್ದೇಕೆ ಎಂಬುದರ ಕಡೆಗೆ ಲಕ್ಷ್ಯ ಹರಿಯದಂತೆ ಮಾಡಿದವು. ಆಕೆಯ ಮಾತಿಗಿಂತಲೂ ಹೆಚ್ಚಾಗಿ ಆಕೆಯ ದೇಹದ ಕಡೆಗೆಯೇ ಆತನ ಲಕ್ಷ್ಯ ಹರಿಯುತ್ತಿದ್ದಿತು. ಆ ಆತುರದಲ್ಲಿಯೆ ಕೇಳಿದ .

" ಈಗ ಎಷ್ಟು ಕೊಡುತ್ತಾರೆ ನಿಮಗೆ ? "

" ಎರಡು ಸಾವಿರ ! "

" ನಾನು ನಾಲ್ಕು ಸಾವಿರ ಕೊಡಬಲ್ಲೆ—ನೀವು ಒಪ್ಪಿದರೆ ! "

" ನಾನು ಒಪ್ಪಬೇಕು ಅನ್ನುತ್ತೀರಾ ? "

" ಖಂಡಿತವಾಗಿ ! "

" ನೋಡುವಾ. ಈಗಲೆ ಯಾಕೆ ? "

" ಅಂದರೆ ಯಾವಾಗ ? "

" ಈ ಚಿತ್ರವಂತೂ ಮುಗಿಯಬೇಕಲ್ಲ—"

" ಮುಗಿದನಂತರ ನೀವು ಬರಬಹುದು. ಆದರೂ ಮಾತನಾಡಿಕೊಂಡು ಬಿಡಬಹುದಲ್ಲ. ಅದಕ್ಕೇನು ತೊಂದರೆ ? "

" ಮಾತನಾಡುವುದೇನು ? ಈಗಲೇ ಆಡಿಯಾಯಿತಲ್ಲ ! "

" ಹಾಗಲ್ಲ, ನಾನು ಹೇಳುವುದು. ನಿಮಗೆ ಬಿಡುವಾದಾಗ ಹೇಳಿ. ಅಂದರೆ ಈಗ ನಾವು ಆಡಿದ್ದನ್ನು ಕಾಗದಕ್ಕಿಳಿಸಬಹುದು "

" ಅದಕ್ಕೇನೂ ಅವಸರವಿಲ್ಲ—"

" ಆದರೂ ಮಾತನಾಡಿದ್ದಕ್ಕೊಂದು ನಿರ್ದಿಷ್ಟ ಸ್ವರೂಪ ಕೊಟ್ಟರೆ—"

" ಆಗಬಹುದು. ಆದರೆ ನಾನು ರಂಗನಾಥನ್‌ರನ್ನು ಕೇಳಬೇಡವೆ ? "

" ಅವರು ಒಪ್ಪುತ್ತಾರೆಯೆ ? "

" ಯಾಕೆ ಒಪ್ಪಬಾರದು ? "

" ಆ ಮಾತು ಬೇರೆ. ಆದರೆ ಒಪ್ಪಬಹುದೆ ? "

" ಅದಕ್ಕೆಯೆ ನೋಡುವಾ ಅಂದದ್ದು ನಾನು—" ಎಂದು ಮತ್ತೆ ನಕ್ಕಳು.

" ಹಾಗಿದ್ದರೆ ಎಲ್ಲವೂ ಅನಿಶ್ಚಿತವಾಗಿಬಿಟ್ಟಿತಲ್ಲ ? "

" ನಿಶ್ಚಿತ-ಅನಿಶ್ಚಿತ—" ಎಂದು ಮತ್ತೆ ಅದೇ ನಗೆ.

ಮದನಲಾಲ್‌ನನ್ನು ತನ್ನ ಕೈಬೆರಳಮೇಲೆ ಕುಣಿಸಬಹುದೆಂಬುದನ್ನು ಮೋಹಿನಿ ಒಂದೆರಡು ನಿಮಿಷಗಳಲ್ಲಿಯೇ ಗ್ರಹಿಸಿದ್ದಳು. ಆಕೆ ಮಾತನಾಡುತ್ತಿದ್ದ ರೀತಿಯೇ ಅದಕ್ಕೆ ಸಾಕ್ಷಿ. ಆದರೆ ಇದರ ಸೂಕ್ಷ್ಮ ಮದನಲಾಲ್‌ನಿಗೆ ಹೊಳೆಯುವುದು ಆತನ ಆಗಿನ ಮನಃಸ್ಥಿತಿಯಲ್ಲಿ ಸಾಧ್ಯವಿರಲಿಲ್ಲ. ' ಕಾಮೀ ಸ್ವತಾಂ ಪಶ್ಯತಿ ' ಅಲ್ಲವೆ ? ಏನಿದ್ದರೂ ಒಂದಿಲ್ಲೊಂದು ಬಗೆಯಲ್ಲಿ ಸ್ಪಷ್ಟವಾದ ಆಶ್ವಾಸನವನ್ನಾದರೂ ಪಡೆಯಬಹುದೆಂಬ ಆಸೆಯಿಂದ ಕೇಳಿದ.

" ವಿವರವಾಗಿ ಆಮೇಲೆ ಮಾತನಾಡಬಹುದು. ಆದರೆ ನೀವು ನಮ್ಮ ಒಂದು ಪಿಕ್ಚರ್‌ನಲ್ಲಿ ಕೆಲಸಮಾಡುತ್ತೇವೆಂದು ವಚನವನ್ನಾದರೂ ಕೊಡಬೇಕು "

" ವಚನ ಕೊಡಬೇಕೆ ? " ಎಂದು ಮತ್ತೆ ಅದೇ ನಗು.

" ಅಂದರೆ ನಮಗೆ ಮುಂದಿನ ಯೋಜನೆಗಳಿಗೆ ಅನುಕೂಲ—"

" ಸರಿ. ಆದರೆ—"

ಕೊನೆಯ ಮಾತು ಮದನಲಾಲ್‌ನಲ್ಲಿ ಅರೆಭರವಸೆಯನ್ನುಂಟುಮಾಡುವುದು ಸಹಜವೇ ಆಗಿದ್ದಿತು ಆದರೂ ಇಷ್ಟರಮಟ್ಟಿಗಾದರೂ ನೇರವಾಗಿ ತನಗೆ ಬೇಕಾದ ವಿಷಯವನ್ನು ಕುರಿತು ಮೋಹಿನಿ ಮಾತನಾಡಬಹುದೆಂದು ಎಣಿಸಿರದ ಆತನಿಗೆ ಇಷ್ಟರಿಂದಲೂ ಸಮಾಧಾನವಾಯಿತು. ಮತ್ತೊಮ್ಮೆ ಸಮಯ ಸಿಕ್ಕಾಗ ಅದನ್ನೇ ಮುಂದುವರಿಸಿ ಮಾತನಾಡಿಸಿ ಒಪ್ಪಿಸುವುದೆಂದು ಸುಮ್ಮನಾದ. ಆದರೂ ಕೊನೆಯಾಗಿ ಹೇಳಿದ.

" ಆದರೆ ಎನ್ನುವ ಮಾತಿಗೆ ಅವಕಾಶವೇ ಇರಬಾರದು. ಅದನ್ನು ಆಮೇಲೆ ನೋಡೋಣ ನಮ್ಮಲ್ಲಿಯ ಉತ್ಸವಕ್ಕೆ ಹೇಗೂ ಬರುತ್ತೀರಲ್ಲ?"

" ನನ್ನ ಪರವಾಗಿ ನೀವೇ ಹೇಳುತ್ತಿದ್ದ ಹಾಗಿದೆಯಲ್ಲ!"

" ಹಾಗಲ್ಲ—ಬರಬೇಕು, ಅದಕ್ಕೆಂದೆ."

" ನೋಡುವಾ. ಅನುಕೂಲವಾದರೆ ಬರುವೆ—"

" ಅನುಕೂಲ ಮಾಡಿಕೊಂಡರೆ ತಾನಾಗಿಯೆ ಆಗುತ್ತದೆ—"

" ಅದು ಸರಿ. ಆದರೆ ಈ ತಿಂಗಳು ಸೆಟ್‌ಮೇಲೆ ತುಂಬಾ ಕೆಲಸ ಇದೆ. ಅಲ್ಲದೆ ನಮ್ಮಲ್ಲಿಯೂ ಏನಾದರೂ ಒಂದು ಫಂಕ್ಷನ್ ಏರ್ಪಾಡಾಗಬಹುದು ಆ ದಿನ—"

" ಆದರೂ—"

" ನೋಡುವಾ—"

ಎಂದು ಮೋಹಿನಿ ಎದ್ದು ನಿಂತಳು, ಮದನಲಾಲ್‌ನಿಗೆ ಹೊರಡಲು ಸೂಚನೆ ಎಂದು ಅನಿವಾರ್ಯವಾಗಿ ಆತನೂ ಏಳಬೇಕಾಯಿತು ಆಕೆಯಿಂದ ವಚನವನ್ನೇ ಪಡೆದುಕೊಂಡು ಹೋಗಬೇಕಿದ್ದವನಿಗೆ ತುಸು ನಿರಾಶೆಯೆನಿಸಿದ್ದರೆ ಆಶ್ಚರ್ಯವಲ್ಲ ತಾನು ಮತ್ತೊಮ್ಮೆ ಬಂದು ಮಾತನಾಡುವುದಾಗಿಯೂ, ಉತ್ಸವದ ಕಾರ್ಯಕ್ರಮ ನಿಶ್ಚಿತವಾದನಂತರ ಕಾಗದ ಬರೆದಾಗಲಿ, ತಾನಾಗಿಯೇ ಬಂದಾಗಲಿ ತಿಳಿಸುವುದಾಗಿಯೂ ಹೇಳಿ, ಮದನಲಾಲ್ ಹೊರಡಲು ಸಿದ್ಧನಾದ. ಕೋಣೆಯಲ್ಲಿ ಬಂದಾಗಿನಂತೆ ಹೊರಡುವಾಗಲೂ ಮದನಲಾಲ್‌ನಿಗೆ ಒಂದು ವಿಷಯದಲ್ಲಿ ನಿರಾಶೆಯಾಯಿತು. ಆಕೆಯ ಕೈ ಕುಲುಕುವ

ಮಟ್ಟಿಗಾದರೂ ಸಾನ್ನಿಧ್ಯವನ್ನು ಪಡೆಯಬೇಕೆಂದಿದ್ದ ಆತನನ್ನು ಮೋಹಿನಿ ಎರಡೂ ಸಲ ದೂರದಿಂದಲೆ ನಮಸ್ಕರಿಸಿದ್ದಳು "ನಿಮಗೆಲ್ಲಾದರೂ ಹೋಗ ಬೇಕಾಗಿದೆಯೆ ?" ಎಂದು ಕೇಳಿದ್ದಕ್ಕೆ "ಹೌದು" ಎಂದು ಹೇಳಿ ಮಾತು ಮುಗಿಯಿಸಿದ್ದಳು. ಮದನಲಾಲ್‌ನಿಗೆ ಹೊರಡದೆ ಮಾರ್ಗವೇ ಉಳಿಯಲಿಲ್ಲ. ಹೊರಟ—ಮತ್ತೆ ಎರಡು ಮೂರು ಬಾರಿ ತನ್ನ ಆಸೆಗೂಡಿದ ದೇಶಾವರಿಯ ನಗೆಯನ್ನು ಬೀರುತ್ತ ಹಾಗೆ ನೋಡಿದರೆ ಮೋಹಿನಿಗೆ ಎಲ್ಲಿಯೂ ಹೋಗ ಬೇಕಿರಲಿಲ್ಲ. ಆರೂವರೆಯ ಸುಮಾರಿಗೆ ರಂಗನಾಥನ್ ಬರುವವನಿದ್ದ. ಆತ ಬರುವುದರೊಳಗಾಗಿ ಮದನಲಾಲ್ ಅಲ್ಲಿಂದ ಹೊರಡುವುದು ಆಕೆಗೆ ಬೇಕಾದ್ದ ರಿಂದಲೇ ಹಾಗೆ ಹೇಳಿ ಆತನನ್ನು ತೊಲಗಿಸಿದಳು

ಮದನಲಾಲ್ ಹೊರಟುಹೋದಮೇಲೆ ಆತನ ಜೊತೆಯಲ್ಲಿ ತಾನು ಮಾತನಾಡಿದ್ದರ ಮಟ್ಟಿಗೆ ಮಾತನಾಡಿದ್ದಾದರೂ ಸರಿಯೆ ಎಂದು ಮೋಹಿನಿ ಕೇಳಿಕೊಳ್ಳುವಂತಾದಳು. ಮನೆಗೆ ಬಂದು ತನ್ನನ್ನು ಗೌರವಿಸಿ ಮಾತನಾಡಿಸು ವವರನ್ನು ಉಪಾಯವಾಗಿ ಸಾಗಿಸುವ ಕಲೆಯನ್ನು ಆಕೆ ನಿಧಾನವಾಗಿ ಕರಗತ ಮಾಡಿಕೊಳ್ಳುತ್ತಿದ್ದ ಹಾಗಿತ್ತು ತನ್ನ ಮಾತಿನಿಂದಾಗಿ ಮದನಲಾಲ್ ಭರವಸೆ ಯನ್ನು ಬೆಳೆಯಿಸಿಕೊಂಡು ಆಸೆಯನ್ನು ಕಟ್ಟಿಕೊಂಡು ಕುಣಿದಾಡಿದರೆ ಅದು ಆತನ ಸುಲಭಶ್ರದ್ಧೆಯ ದ್ಯೋತಕವಲ್ಲವೆ ? ತಾನು ಯಾವ ರೀತಿಯಿಂದಲೂ ಸ್ಪಷ್ಟವಾಗಿ ಮಾತುಕೊಡಲಿಲ್ಲ. ಆದರೂ ಆತ ಸಂತೋಷದಲ್ಲಿಯೇ ಹೊರಟು ಹೋದ. ಸರಿಯೇ ಆಯಿತು. ಇದು ಇತ್ತೀಚಿನ ಎರಡು ತಿಂಗಳಲ್ಲಿ ಆಕೆಗೆ ಹೆಚ್ಚುಹೆಚ್ಚಾಗಿ ಬರುತ್ತಿದ್ದ ಅನುಭವವಾಗಿತ್ತು ಟೊಯ್ಲೆಟ್ ಸಾಮಾನುಗಳ ಏಜಂಟರಂತೆಯೆ ಬೇರೆ ಬೇರೆ ಕಂಪನಿಯ ಒಡೆಯರು, ನಿರ್ದೇಶಕರು ಆಕೆ ಯನ್ನು ಕಂಡು ಮಾತನಾಡಿಸುತ್ತಿದ್ದರು. ತಾನೆಂದಿಗೂ ಕನಸುಮನಸ್ಸಿ ನಲ್ಲಿಯೂ ಎಣಿಕೆಹಾಕಿರದಷ್ಟು ಹಣವನ್ನು ಕೊಡಲು ಸಹಜವಾಗಿಯೇ ಒಪ್ಪುತ್ತಿದ್ದರು. ಒಂದು ಕ್ಷಣ 'ಇಂಥ ಪದವಿ ನನಗೆ ದೊರಕಿದ್ದು ರಂಗನಾಥನ್ ನಿಂದ ಹೊಸದಾದ ಯಾವ ಏರ್ಪಾಡು ಮಾಡಬೇಕಾದರೂ ಆತನನ್ನು ಕೇಳಿಯೆ, ಆತ ಒಪ್ಪಿದರೆಯೆ ಮಾಡತಕ್ಕದ್ದು' ಎಂದುಕೊಳ್ಳುತ್ತಿದ್ದಳು. ಆದರೆ ಮರು ಕ್ಷಣವೇ ಇನ್ನೊಂದು ಯೋಚನೆಯೂ ಸುಳಿಯುತ್ತಿತ್ತು : 'ರಂಗನಾಥನ್ ಮಾಡಿದ್ದೇನು ? ತನಗೆ ಆಸ್ಪದ ಮಾಡಿಕೊಟ್ಟ, ಹೌದು ಆದರೆ ಯಾರ

ಕಣ್ಣನ್ನೂ ಸೆಳೆಯಬಲ್ಲ ಚೆಲುವು ತನ್ನದಾಗಿರದಿದ್ದರೆ, ಯಾರ ಹೃದಯಕ್ಕೂ ಬೆಂಕಿಯನ್ನಿಡುವ ಯೌವನ ತನ್ನ ಅಂಗಾಂಗಗಳಿಂದ ಸೂಸುತ್ತಿರದಿದ್ದರೆ, ಸಹಜವಾಗಿಯೆ ಯಾವ ಪಾತ್ರವನ್ನೂ ಅಭಿನಯಿಸುವ ಯೋಗ್ಯತೆ ವಿಶ್ವಾಸಗಳು ತನ್ನಲ್ಲಿರದಿದ್ದರೆ, ರಂಗನಾಥನ್ ಏನು ಮಾಡಬಹುದಾಗಿತ್ತು ?' ಮದನಲಾಲ್‌ನ ಸಂದರ್ಶನದಿಂದ ಈ ಮನೋವೃತ್ತಿ ಆಕೆಯಲ್ಲಿ ಇನ್ನೂ ಬೆಳೆಯುವಂತಾಯಿತು. ನಾಲ್ಕು ಸಾವಿರ ರೂಪಾಯಿ ಸಂಬಳ ಕೊಡುತ್ತೇನೆಂದನಲ್ಲವೆ ? ಆ ಆಸೆಗಾಗಿ ಮದನಲಾಲ್‌ನ ಕಂಪನಿಯನ್ನು ಆಕೆ ಸೇರುವುದು ಕೂಡಲೆ ಸಾಧ್ಯವಿರದಿದ್ದರೂ ಹಣದಾಸೆಯಾಗಲಿ, ಇನ್ನಾವ ಪ್ರಲೋಭನೆಯಾಗಲಿ, ಆಕೆ ಮತ್ತು ರಂಗನಾಥನ್‌ನ ಸಂಬಂಧಗಳನ್ನು ಸಡಲಿಸುವುದು ಅಸಾಧ್ಯವಲ್ಲವೆನ್ನುವ ರೀತಿಯಲ್ಲಿ ಆಕೆಯ ವಿಚಾರಗಳು ಹರಿಯಲು ಅನುಕೂಲವಾಯಿತು ಇಂಥ ಸಂದರ್ಭಗಳಲ್ಲಿ ಆಕೆ ತನ್ನ ಮತ್ತು ರಂಗನಾಥನ್‌ನ ಸಂಬಂಧಗಳನ್ನು ಕುರಿತು ಯೋಚಿಸುತ್ತಲೂ ಇದ್ದಳು 'ರಂಗನಾಥನ್ ತನ್ನ ಬದುಕಿನ ದಾರಿಯನ್ನೇ ಬದಲಾಯಿಸಿದ ಬಡತನದಲ್ಲಿ, ಬೇಸರದಲ್ಲಿ, ವೈವಾಹಿಕ ವಿರಸಗಳಲ್ಲಿ ಬದುಕನ್ನು ನೂಕಿಕೊಂಡು ಹೋಗಬೇಕಾದವಳನ್ನು ಸುಖದ ಸಮೃದ್ಧಿಯಲ್ಲಿ, ತನ್ನ ವ್ಯಕ್ತಿತ್ವಕ್ಕೆ ಎಡೆತಡೆಯಿಲ್ಲದೆ ಸ್ವತಂತ್ರವಾಗಿ ಇರಬಹುದಾದ ದಾರಿಯಲ್ಲಿ, ಹಂಗು ಹೆದರಿಕೆಗಳಿಲ್ಲದೆ ಮುಂದರಿಯಬಹುದಾದ ಬಗೆಯಲ್ಲಿ ತಾನು ನಡೆಯುವಂತೆ ಅನುಕೂಲಗಳನ್ನು ಒದಗಿಸಿದನಲ್ಲವೆ ? ಒಂದೆಡೆ ಸ್ವಾತಂತ್ರ್ಯಕ್ಕಾಗಿ ಹಂಬಲಿಸುತ್ತಿದ್ದ ಮನಸ್ಸನ್ನಾದರೆ ಇನ್ನೊಂದಡೆ ಸರಸಜೀವನದ ಸುಖಗಳಿಗಾಗಿ ಹಾತೊರೆಯುತ್ತಿದ್ದ ದೇಹವನ್ನು—ಎರಡನ್ನೂ—ರಂಗನಾಥನ್ ತೃಪ್ತಿಗೊಳಿಸಲಿಲ್ಲವೆ ?' ಹೀಗಾಗಿ ಒಂದು ಕ್ಷಣಕ್ಕೆ ರಂಗನಾಥನ್‌ನಿಲ್ಲದ ಪ್ರಪಂಚ ಶೂನ್ಯವಾಗಿ ಕಾಣುತ್ತಿತ್ತಾದರೆ ಇನ್ನೊಂದು ಕ್ಷಣಕ್ಕೆ ಆ ಶೂನ್ಯವಾದ ಪ್ರಪಂಚವನ್ನು ಬೆಳಗಿಸಿ ಬಣ್ಣಬಣ್ಣಗಳ ಬೆಡಗಿನಿಂದ ತುಂಬಿದವಳು ತಾನು, ತನ್ನ ಚೆಲುವು, ತನ್ನ ಬುದ್ಧಿ, ಯೋಗ್ಯತೆ, ಧೈರ್ಯ, ಸಾಮರ್ಥ್ಯ, ವಿಶ್ವಾಸ, ಇನ್ನೇನೂ ಅಲ್ಲ, ಎಂದುಕೊಳ್ಳುತ್ತಿದ್ದಳು. ಎಷ್ಟೋ ಜನರಿಗೆ ಅವಕಾಶ ಸಿಕ್ಕದಿರಬಹುದು. ಆದರೆ ಸಿಕ್ಕ ಅವಕಾಶವನ್ನು ಸರಿಯಾಗಿ ಉಪಯೋಗಿಸಿಕೊಳ್ಳುವ ಯೋಗ್ಯತೆ ಎಷ್ಟು ಜನರಲ್ಲಿರುತ್ತದೆ ? ಆ ಯೋಗ್ಯತೆ ತನ್ನಲ್ಲಿದೆ ಎಂದು ನಿಧಾನವಾಗಿ ಬೆಳೆಯುತ್ತಿದ್ದ ವಿಶ್ವಾಸವನ್ನು ಮದನಲಾಲ್‌ನ ಸಂದರ್ಶನ, ಆತ ಕೊಡಮಾಡಿದ ನಾಲ್ಕು

ಸಾವಿರದ ಸಂಬಳ, ಇನ್ನೂ ನಿಚ್ಚಳಗೊಳಿಸಿದವು. ಇಂಥ ಸಂದರ್ಶನಗಳಿಂದಾಗಿ ಕುಡಿಯೊಡೆಯುತ್ತಿದ್ದ ವಿಶ್ವಾಸ ನಿಧಾನವಾಗಿ ಬೆಳೆಯುತ್ತಿದ್ದರೂ ರಂಗನಾಥನ್‌ನನ್ನು ನೆನೆದಾಗ, ಆತ ಎದುರಿನಲ್ಲಿದ್ದಾಗ, ಅದೆಲ್ಲಿಯೊ ಮಾಯವಾಗಿ ಸದ್ಯಕ್ಕಂತೂ ಆತನೇ ಸರ್ವಸ್ವವಾಗಿ ಕಾಣುತ್ತಿದ್ದ. ಹೀಗೆಂದೇ ಸಾಯಂಕಾಲ ರಂಗನಾಥನ್ ಬಂದಾಗ ಎಲ್ಲ ವಿಷಯಗಳನ್ನೂ ವ್ಯವಹಾರಗಳನ್ನೂ ಮುಚ್ಚು ಮರೆಯಿಲ್ಲದೆ ಆತನೆದುರು ವಿವರಿಸುತ್ತಿದ್ದಳು. ಇಂದು ಸಾಯಂಕಾಲವೂ ಅಷ್ಟೇ. ಮದನಲಾಲ್‌ನ ಸಂದರ್ಶನದ ಸಮಾಚಾರವನ್ನು ವಿವರಿಸಿದಾಗ ರಂಗನಾಥನ್ ಕೇಳಿದ

"ಅಂತೂ ಹಾಗಾದರೆ ನೀನು ಮದನ್ ಪಿಕ್ಚರ್ಸ್ ಸೇರುವವಳು!"

"ಹೌದೆ? ಇಷ್ಟು ನನಗೆ ಸಾಕಿಲ್ಲವೇನೊ!"

"ಯಾರಿಗೆ ಗೊತ್ತು? ಆತ ನಾಲ್ಕು ಸಾವಿರ ಕೊಡುತ್ತಾನೆ. ನಾವೇನು ಬಡ ಕಂಪನಿಯ ಬಡ—"

"ಸಾಕು, ಸಾಕು ಇದೆಲ್ಲ—"

ಎಂದವಳೆ ರಂಗನಾಥನ್ ಮುಂದೆ ಮಾತನಾಡದ ಹಾಗೆ ಮಾಡಿದಳು.

"ನಿಮ್ಮ ಕಡೆಗೆ ಬಂದಿದ್ದನೆ ಆತ?"

"ನನ್ನ ಕಡೆಗೆ ಯಾತಕ್ಕೆ ಬರುತ್ತಾನೆ? ನಾನೇನು ಸ್ಟಾರೇ?"

"ಅದಿರಲಿ. ಹದಿನೈದನೆಯ ದಿನಾಂಕ ಏನೋ ಕಾರ್ಯಕ್ರಮ ಎಂದನಲ್ಲ!"

"ಸರಿ. ಅದೆಲ್ಲ ಮಾತಿಗೊಂದು ನೆಪ—ಅಥವಾ ನಿನ್ನನ್ನು ಅಲ್ಲಿಗೆ ಕರೆದೊಯ್ಯಲಿಕ್ಕೆ."

"ನನಗೂ ಹಾಗೆಯೆ ತೋರಿತು. ಅಂತೆಯೆ ಉಪಾಯವಾಗಿ ಮಾತನಾಡಿ ಕಳಿಸಿಬಿಟ್ಟೆ."

"ಅಂತೂ ಇನ್ನೇನು ನೀನು ಬರುವುದೊಂದೇ ಬಾಕಿ ಎಂದು ತಿಳಿದು ಕೊಂಡೇ ಹೋಗಿರಬೇಕಲ್ಲವೆ? ಪಾಪ! ಸುಮ್ಮನೆ ಅಷ್ಟು ಪರಿಯಾಗಿ ಮೋಸ ಮಾಡುವುದೆ?"

"ಮೋಸವೇನು? ಆತನಿಗೆ ತಿಳಿಯಬಾರದೆ—ಯಾರನ್ನು ಕೇಳಬೇಕು, ಯಾರನ್ನು ಕೇಳಬಾರದು ಎನ್ನುವುದು? ದುಡ್ಡಿನ ಆಸೆ ತೋರಿಸುತ್ತಾನೆ ಬೇರೆ—ಥೂಃ!"

"ಸರಿ. ನೀನಂತೂ ಅವರ ಕಾರ್ಯಕ್ರಮಕ್ಕೆ ಹೋಗುವವಳು—"

"ನೀವು ಬಂದರೆ ಸುಮ್ಮನೆ ಮೋಜಿಗೆ ಹೋಗಿಬರುವಾ—"

"ಆಮಂತ್ರಣವಿಲ್ಲದೆ ಬರಬೇಕೆ ನಾನು?"

"ಆಮಂತ್ರಣ ಬರಬಹುದು—"

"ಕಾರ್ಯಕ್ರಮ ನಿಜವಾಗಿಯೂ ನಡೆದರೆ ಬರಬಹುದು."

"ಹೌದು. ಅದೂ ನಿಜವೆ—"

"ಅದು ಹೋಗಲಿ, ಈಗ ಏನು?"

"ನೀವು ಹೇಳಿದ್ದು!"

"ತುಂಬಾ ಬೇಸರವಾಗಿದೆ. ತಾಜ್ ಅಥವಾ ಗ್ರೀನ್ಸ್‌ಗೆ ಹೋಗಿ ಬರುವಾ. ಮಧ್ಯಾಹ್ನದಿಂದಲೂ ಯೋಚಿಸುತ್ತಿದ್ದೇನೆ."

"ಯಾಕ? ಡ್ರಾಯ್ ಡೇ ಅಲ್ಲವೆಂದೆ?" ಎಂದು ಮೋಹಿನಿ ನಕ್ಕಳು

"ಅದೆಲ್ಲ ಇಲ್ಲಿ ಯಾಕೆ? ಅಲ್ಲಿ ಹೋದನಂತರ ತಾನಾಗಿಯೇ ತಿಳಿಯುತ್ತದೆ. ಗೆಟ್ ರೆಡಿ—"

"ಏನವಸರ? ಇದೀಗ ಇನ್ನೂ ಏಳೂಕಾಲು. ಮೊದಲು ಟೀ ಆದರೂ ಆಗಲಿ. ಆಮೇಲೆ ನೋಡೋಣವಂತೆ"

"ಆಮೇಲೆ ಹರಟೆ. ನನಗೆ ಗೊತ್ತಿಲ್ಲವೆ? ತಡಮಾಡಿ ಹೊರಟರೆ ಬರಲು ಸುಮ್ಮನೆ ರಾತ್ರಿಯಾಗುತ್ತದೆ."

"ಆದರೇನಾಯಿತು? ಅಲ್ಲಿಯೇ ಸುಖವಾಗಿ ಊಟ ಮಾಡಿಕೊಂಡು ಬಂದರೂ ಆಯಿತು!"

"ಆಮೇಲೆ?"

"ಆಮೇಲೆ—ಆಮೇಲೆ. ಅದಕ್ಕಿಷ್ಟು ಮಾತು ಯಾಕೊ!"

ಎಂದು ಮೋಹಿನಿ ಗಟ್ಟಿಯಾಗಿ ನಕ್ಕಳು. ಆ ನಗುವಿನ ಅರ್ಥವನ್ನು ರಂಗನಾಥನ್‌ನಿಗೆ ಬಿಡಿಸಿ ಹೇಳಬೇಕಿರಲಿಲ್ಲ. ರಂಗನಾಥನ್ ರಾತ್ರಿ ಊಟಕ್ಕೆ ತನ್ನಲ್ಲಿಗೆ ಬರುವುದಾಗಿ ಮಾತುಕೊಟ್ಟರೆ ತಾನು ಹತ್ತು ನಿಮಿಷಗಳಲ್ಲಿ ಚಹವನ್ನು ತಯಾರಿಸುವ ಏರ್ಪಾಡು ಮಾಡುವುದಲ್ಲದೆ 'ಅಲೆದಾಡಿ'ಕೊಂಡು ಬರಲು ಸಿದ್ಧಳಾಗುವುದಾಗಿ ಹೇಳಿ ಒಂದೇ ನೆಗೆತಕ್ಕೆಂಬಂತೆ ಒಳಕೋಣೆಯನ್ನು ಸೇರಿದಳು....ತಾಜ್‌ನಿಂದ ಅವರಿಬ್ಬರೂ ಹಿಂತಿರುಗಿದಾದ ರಾತ್ರಿ ಹತ್ತು ಗಂಟೆ

ಯಾಗಿಹೋಗಿತ್ತು. ಆಮೇಲೆ ಊಟ—ಹೆಸರಿಗೆ. ತಿಂಡಿ—'ತೀರ್ಥ'ಗಳಿರ ಡನ್ನೂ ಮುಗಿಯಿಸಿಕೊಂಡೇ ಬಂದಿದ್ದರಿಂದ ಊಟದ ಕಡೆಗೆ ಲಕ್ಷ್ಯವೇ ಇದ್ದ ಹಾಗಿರಲಿಲ್ಲ. ಮೋಹಿನಿ ಅಷ್ಟು ಉಲ್ಲಾಸದಲ್ಲಿದ್ದುದನ್ನು ರಂಗನಾಥನ್ ನೋಡಿರ ಲಿಲ್ಲ—ಅಷ್ಟೊಂದು ಪರಿಯಾಗಿ ವಸಂತಮಾಸದ ಹಕ್ಕಿಯಂತೆ ಗೆಲುವಾಗಿದ್ದಳು. ತಾನು ಅಷ್ಟು ಗೆಲುವಾಗಿದ್ದುದನ್ನು ತಿಳಿಯುವ ಮನಃಸ್ಥಿತಿಯಲ್ಲಿಯೂ ಆಕೆ ಇರಲಿಲ್ಲ. ಇವನ್ನು ತಿಳಿದೇ ರಂಗನಾಥನ್ ಕೇಳಿದ

"ಹನ್ನೊಂದಾಯಿತು ನಾನಿನ್ನು ಹೊರಡುವೆ—"

"ಹಾ–ದೆ?"

"ಹೊರಡಬೇಡವೆ?—"

"ಬೇಡ ಎಂದಲ್ಲ ನೀವು ಹೊರಟರೆ ನಾನೂ ಅಲ್ಲಿಗೇ ಬರುತ್ತೇನೆ—"

"ಸರಿಯಾಯಿತಲ್ಲ—"

"ಹೋದಮೇಲೆ ಸರಿಯಾಗುತ್ತದೆ! ಹುಂ—ಏನಾಯಿತು? ಹೊರಡು ವುದೆ?"

"ಆಗಬಹುದು—"

ಎಂದು ರಂಗನಾಥನ್ ಬಾಯಿಂದ ಹೇಳಿದರೂ ಹೊರಡುವುದು ಬೇಸರದ ವಿಷಯವಾಗಿ ಕಂಡಿತು. ಆದರೂ ಒಂದೆರಡು ನಿಮಿಷ ಯೋಚಿಸಿ ಹೊರಡು ವುದೇ ಸರಿಯೆಂದುಕೊಂಡು ಕೇಳಿದ

"ಹೊರಡುವುದಲ್ಲವೆ?"

"ಓಹೋ! ಆದರೆ ಟೊಯ್‌ಲೆಟ್ ಬೇಡವೆ?"

"ಅಲ್ಲಿಯೇ ಆಗಬಹುದು—"

"ಆಯಿತು. ಒಳ್ಳೆ ಟೊಯ್ಲೆಟ್ ಟೇಬಲ್ ಇದ್ದಹಾಗೆ ಹೇಳುತಿದ್ದೀರಿ!"

ಮುಂದೆ ಹದಿನೈದು ನಿಮಿಷಗಳಲ್ಲಿ ಮೋಹಿನಿ ರಂಗನಾಥನ್‌ನ ಕೈಯಲ್ಲಿ ಕೈ ಸಿಕ್ಕಿಸಿಕೊಂಡು ಪ್ರಿಮ್‌ರೋಜ್‌ವಿಲ್ಲಾದ ಪಾವಟಿಗೆಗಳನ್ನೇರುತ್ತಿದ್ದಳು.

ಸೆಪ್ಟೆಂಬರ್ ತಿಂಗಳ ಕೊನೆ ಸಮಿಾಪಿಸುತ್ತಿದ್ದಹಾಗೆ 'ಸೂತ್ರದ ಬೊಂಬೆ'ಯ ಕೆಲಸ ಇಮ್ಮಡಿಯಾದ ಭರದಿಂದ ಮುಂದುವರಿಯಿತು. ದೀಪಾವಳಿಯ ಸುಮಾರಿಗೆ ಚಿತ್ರವನ್ನು ಪ್ರದರ್ಶಿಸಬೇಕೆಂಬ ಉತ್ಸಾಹವನ್ನು ರಂಗನಾಥನ್‌ನಂತೆ ಮೋಹಿನಿಯೂ ತಾಳಿದ್ದಳು ಕಳೆದ ಮೂರು ನಾಲ್ಕು ತಿಂಗಳಿಂದ ದಿನಕ್ಕೊಂದು ಬಗೆಯಾಗಿ ವೈಶಾಖದಲ್ಲಿಯ ಅರಳುಮಲ್ಲಿಗೆಗಳ ಹಾಗೆ ಬೆಳೆಯುತ್ತಿದ್ದ ಅವರಿಬ್ಬರ ನಡುವಿನ ಸೌಹಾರ್ದಗಳಿಂದಾಗಿ ಮೋಹಿನಿ ತಾನು 'ಸ್ಟಾರ್' ಎಂದಾಗಲಿ ಸಂಬಳಕ್ಕಾಗಿ ದುಡಿಯುತ್ತಿದ್ದೇನೆಂದಾಗಲಿ ಭಾವಿಸುತ್ತಲೇ ಇರಲಿಲ್ಲ 'ಸೂತ್ರದ ಬೊಂಬೆ' ತಮ್ಮಿಬ್ಬರದು, ಅದರ ಯಶಸ್ಸು ಶ್ರೇಯಸ್ಸುಗಳೆಲ್ಲ ತಮ್ಮವೇ ಎನ್ನುವ ಆತ್ಮೀಯತೆಯಿಂದ ಮೋಹಿನಿ ಸಮರಸಳಾಗಿ ಕೆಲಸ ಮಾಡುತ್ತಿದ್ದಳು ಇಂಥ ಸಹಕಾರದಿಂದಲೇ ಹುರಿದುಂಬಿ ರಂಗನಾಥನ್ ಚಿತ್ರಪ್ರಪಂಚದಲ್ಲಿ ಬೇಕಾದುದನ್ನು ಸಾಧಿಸಬಲ್ಲನೆಂಬ ಆತ್ಮವಿಶ್ವಾಸದ ಗೋಪುರವನ್ನು ಕಟ್ಟುತ್ತಿದ್ದ, ಮುರಿದು ಹೋದ ತನ್ನ ಮನೆಯನ್ನು ಮೋಹಿನಿ ತನ್ನ ಬಗೆಯಲ್ಲಿ ತಾನು ಕಟ್ಟುತ್ತಿದ್ದ ಹಾಗೆಯೆ ಅದೇ ಆತ್ಮವಿಶ್ವಾಸದಿಂದ, ಅನ್ಯೋನ್ಯವಾದ ಆತ್ಮೀಯತೆಯಿಂದ, ಕೆಲಸ ರಭಸದಿಂದ ಮುಂದುವರಿದಿತ್ತು.

ಮುನ್ನಾದಿನ ರಾತ್ರಿ ಮತ್ತೆ ಬೆಳಗಿನಿಂದ ಸಂಜೆಯ ವರೆಗೆ ಮೋಹಿನಿ ಹೆಚ್ಚುಕಡಿಮೆ ಸೆಟ್‌ಮೇಲೆಯೆ ಇದ್ದಳು. ನೋರಾ ಮನೆಯಿಂದ ಹೊರಟು ಹೋಗುವಾಗಿನ ದೃಶ್ಯ ನಡೆದಿತ್ತು ಹತ್ತಾರು ಬಾರಿ ತಾನು ಮತ್ತು ರಂಗನಾಥನ್ ಆ ಸನ್ನಿವೇಶವನ್ನು ರಿಹರ್ಸ್ಲ ಮಾಡಿದ್ದರೂ ಸೆಟ್‌ಮೇಲೆ ರಂಗನಾಥನ್‌ನಿಗೆ ಸಮಾಧಾನವೆನಿಸಿದ್ದಿಲ್ಲವಾದ್ದರಿಂದ ಮತ್ತೆ ಮೂರನೆಯ ಬಾರಿ ಅದೇ ಸನ್ನಿವೇಶವನ್ನು ತೆಗೆದುಕೊಳ್ಳಲಾಗಿತ್ತು. ಸಾಯಂಕಾಲದ ಸುಮಾರಿಗೆ ಕೆಲಸ ಮುಗಿದಾಗ ರಂಗನಾಥನ್ ಇನ್ನೂ ಯೋಚನೆಯಲ್ಲಿಯೇ ಇದ್ದ ಮೋಹಿನಿ ಉತ್ತಮವಾಗಿ ಅಭಿನಯಿಸಿದ್ದಳು. ಸನ್ನಿವೇಶದಲ್ಲಿಯ ಮಾತು ನಡೆಗಳೆಲ್ಲವೂ ತನ್ನ ಜೀವನದಲ್ಲಿಯವೇ ಎಂಬ ಸಹಜ ಸಾಮರಸ್ಯದಿಂದ ಕೆಲಸ ಮಾಡಿದ್ದಳು. "ನಿನ್ನ ಕೆಲಸ ಉತ್ತಮವಾಗಿದೆ. ಅದೇನೊ ಒಂದೆರಡು ಕಡೆಗೆ ನನ್ನ ಮಾತೇ ಸರಿಯಾಗಿ ಬರುವುದಿಲ್ಲ" ಎಂದು ರಂಗನಾಥನ್ ಹೇಳಿದಾಗ ಮೋಹಿನಿಗೆ

ಅಭಿಮಾನವೆನಿಸಿದ್ದರೂ ತಾನು ಆನಂದನ ಮನೆಯನ್ನು ಬಿಟ್ಟು ಬರುವಾಗಿನ ಸನ್ನಿವೇಶ ಆಕೆಯ ಮನಸ್ಸಿನೆದುರು ಸುಳಿಯದಿರಲಿಲ್ಲ. ಹಾಗೆ ನೋಡಿದರೆ ಆ ಸನ್ನಿವೇಶದ ಸಿದ್ಧತೆ ನಡೆದಾಗಿನಿಂದ, ಅದನ್ನು ಹತ್ತಾರು ಬಾರಿ ರಿಹರ್ಸಲ್ ಮಾಡುತ್ತಿದ್ದಾಗಿನಿಂದ ತನ್ನ ಆನಂದನ ಸಂಬಂಧಗಳನ್ನು ಕುರಿತು ಮೋಹಿನಿ ಎಷ್ಟು ಬಾರಿ ಯೋಚಿಸಿದ್ದಳೊ!

ಚಿತ್ರಪಟ ಮುಂದುವರಿದ ಹಾಗೆಲ್ಲ ಆನಂದನ ಯೋಚನೆಯೆ ಬಲವಾಗುತ್ತಿತ್ತು. ಎಷ್ಟೋ ಬಾರಿ ಆತನ ಚಿತ್ರ ಕಣ್ಣೆದುರಿನಿಂದ ಸರಿಯುತ್ತಲೇ ಇರಲಿಲ್ಲ 'ಏನಾದರೂ ನೀನು ಹೆಂಡತಿ, ಮನೆಯೊಡತಿ ಅದಕ್ಕೆ ತಕ್ಕ ಹೊಣೆಯನ್ನು ನೀನು ತಿಳಿಯಬೇಡವೆ?' ಎಂದು ಹೆಲ್ಮರ್ ಕೇಳಿದಾಗ ನೋರಾ ಏನೆಂದಿದ್ದಳು? 'ಅದೆಲ್ಲ ನನಗೆ ಗೊತ್ತು. ನಾನೂ ಒಬ್ಬ ಮಾನವಪ್ರಾಣಿ, ಯೋಚನೆ ಮಾಡಬಲ್ಲ ಮಾನವಪ್ರಾಣಿ. ನನ್ನ ಬಗೆಯಲ್ಲಿಯ ಕರ್ತವ್ಯವನ್ನು ನಾನು ತಿಳಿಯಬೇಕಾಗಿದೆ—' ಇತ್ಯಾದಿ. ಹೆಂಗಸು ಎಂದಮಾತ್ರಕ್ಕೆ ಮಾನವಪ್ರಾಣಿಯಲ್ಲವೆ? ಆನಂದ ತನ್ನನ್ನು ಯಾವ ರೀತಿಯಾಗಿ ನಡಸಿಕೊಂಡಿದ್ದ? ಆತನೊಡನೆ ಮಾತನಾಡಿ ಆತ ತನ್ನನ್ನು ನಡಸಿಕೊಳ್ಳುತ್ತಿದ್ದ ಅನ್ಯಾಯದ ಬಗೆಯನ್ನು ಆತನಿಗೆ ವಿವರಿಸಿ ತಾನು ಆತನಲ್ಲಿಂದ ಸುಸೂತ್ರವಾಗಿ ಹೊರಡಬಹುದಾಗಿದ್ದರೆ ನೋರಾನ ಮಾತುಗಳನ್ನೇ ಆನಂದನಿಗೆ ತಾನೂ ಹೇಳಬಹುದಾಗಿತ್ತಲ್ಲವೆ? ಈಗೇನಾಯಿತು? ಬಾಯಿಂದ ಹೇಳಲಿಲ್ಲ, ನಿಜ. ಕೃತಿಯಿಂದ ಮಾಡಿದ್ದೂ ಅಷ್ಟೇ. ಆನಂದನಿಗೆ ತಾನು ಸೂತ್ರದ ಬೊಂಬೆ, ಆತ ಆಟವಾಡಿಸಿದ ಹಾಗೆ ಆಡಬೇಕು, ಆತ ಸೂತ್ರ ನಡಸಿದ ಹಾಗೆ ಕುಣಿಯಬೇಕು. ಆನಂದನೊಬ್ಬನೇ ಅಲ್ಲದೆ ಆತನ ಆಪ್ತಬಂಧುಗಳೆಲ್ಲರೂ ಹೇಳಿದ ಹಾಗೆ ಇರಬೇಕು, ಕುಣಿಸಿದ ಹಾಗೆ ಕುಣಿಯಬೇಕು. ಹಿಂದೂ ಸಮಾಜದಲ್ಲಿಯ ಅತ್ತೆಮನೆಯಲ್ಲಿಯ ಸೊಸೆಯಂದಿರೆಲ್ಲರೂ ಸೂತ್ರದ ಬೊಂಬೆಗಳೇ. ಈ ಬೊಂಬೆಗಳೆಲ್ಲವೂ ತಮಗೂ ಪ್ರಾಣವಿದೆ, ವ್ಯಕ್ತಿತ್ವವಿದೆ, ಸುಖವಾಗಿ ಜೀವನದಲ್ಲಿ ಬಾಳುವ ಅಧಿಕಾರವಿದೆ, ಹಾಗೆ ಬಾಳಬೇಕೆಂಬ ಆಸೆ ಖಂಡಿತವಾಗಿಯೂ ಶುಷ್ಕವಾಗಿಹೋದ ಅವರ ಎದೆಗಳಲ್ಲಿ ಅವಿತುಕೊಂಡು ಇದ್ದೇ ಇದೆ, ಎಂಬುದನ್ನು ಅವರು ತಿಳಿಯಬೇಕಾದರೆ ಅವರೆಲ್ಲರೂ ನೋರಾನ ದಾರಿಯನ್ನೇ ತುಳಿಯಬೇಕು! ಬೇರೆ ದಾರಿಯಿಲ್ಲ! ಒಂದಿಲ್ಲೊಂದು ಬಗೆಯಲ್ಲಿ ಪ್ರಯತ್ನಿಸಿ ತಾನು ಸೂತ್ರದ ಬೊಂಬೆ

ಯಾಗಿಯೆ ಉಳಿಯದೆ ತನ್ನ ಮಟ್ಟಿಗೆ ತಾನಾಗಿ ಉಳಿಯುವಂತಾದುದಕ್ಕೆ ತನ್ನನ್ನು ತಾನೇ ಕೊಂಡಾಡಿಕೊಂಡಳು. ತನ್ನ ಪ್ರಯತ್ನಕ್ಕೆ ತಕ್ಕ ಫಲಯಶಸ್ಸು ಗಳು ಸಿಕ್ಕವು ಯತ್ನ ಮಾಡಿದರೆ ಯಶಸ್ಸು ಯಾರಿಗೂ ಸಿಕ್ಕೀತು ಯತ್ನಕ್ಕೆ ಯೋಚನೆ ಮುಖ್ಯ. ತಾನು ಮತ್ತು ರಂಗನಾಥನ್ ನಿರ್ಮಿಸುತ್ತಿದ್ದ ಚಿತ್ರ, ನಾಡಿನ ಹೆಣ್ಣು ಹೃದಯಗಳಲ್ಲಿ ಆ ಯೋಚನೆಯನ್ನು ಕೆಲಮಟ್ಟಿಗಾದರೂ ಮೂಡಿಸಬಹುದು. ಹೀಗೆಲ್ಲ ಯೋಚಿಸುತ್ತಿದ್ದಾಗ ತಾನು ಮನೆಯಿಂದ ಹೊರ ಬಿದ್ದು, ಚಿತ್ರಪ್ರಪಂಚವನ್ನು ಸೇರಿದ್ದು ಒಂದು ಬಗೆಯಿಂದ ಸಮಾಜದ ಸೇವೆ ಯನ್ನೆ ಮಾಡುತ್ತಿದ್ದಂತೆ ಅಲ್ಲವೆ ? ಎಂದೂ ಕೇಳಿಕೊಳ್ಳುವಂತಾದಳು. ಇಂಥ ಯೋಚನೆಗಳಿಂದಾಗಿ ಆನಂದ ತನ್ನ ಬಗೆಯಲ್ಲಿ ಮಾಡಿದನೆಂದು ಆಕೆ ಭಾವಿಸಿದ ಅನ್ಯಾಯ ನೂರ್ಮಡಿಯಾಗಿ ಕಾಣತೊಡಗಿತು. ಇದ್ದ ಅಂಶ ಕಲ್ಪನೆಯಿಂದಾಗಿ ಬೆಳೆದುನಿಂತಿತು ಕಲ್ಪನೆ ತೋರುವ ಚಿತ್ರವೇ ಸತ್ಯವೆಂಬ ಭ್ರಮೆ ಆಕೆಯಲ್ಲಿ ಬೇರೂರಿನಿಂತಿತು.

ಇತ್ತೀಚಿನ ಎರಡು ದಿನಗಳಲ್ಲಂತೂ ಆನಂದನ ಮೂರ್ತಿ ಮೋಹಿನಿಯ ಮನಸ್ಸಿನೆದುರಿನಿಂದ ಸರಿಯುತ್ತಲೇ ಇರಲಿಲ್ಲ ತನ್ನ–ಆತನ ನಡುವೆ ನಡೆದ ನೂರಾರು ಸರಸವಿರಸಗಳ ಸನ್ನಿವೇಶಗಳು ಕಣ್ಣೆದುರು ನಿಲ್ಲುತ್ತಿದ್ದವು ಅದು ಹೀಗೇಕೆ ಎಂದು ಮೋಹಿನಿ ಎಷ್ಟು ಬಾರಿ ಯೋಚಿಸಿದರೂ ಅದೇ ಯೋಚನೆ ಯಿಂದಾಗಿ ಬೇರೊಂದು ಚಿತ್ರ ಕಣ್ಣೆದುರು ಸುಳಿಯುತ್ತಿತ್ತೇ ವಿನಹ ಮನಸ್ಸಿ ನಿಂದ ಆ ಯೋಚನೆ ದೂರವಾಗುತ್ತಿರಲಿಲ್ಲ. ತಾನು ಆನಂದನಿಂದ ದೂರವಾದ ಬಗೆ ಸರಿಯೆ ? ದೂರವಾದನಂತರದಲ್ಲಿ ತಾನು ನಡೆಸುತ್ತಿದ್ದ ಜೀವನದ ಆಗು ಹೋಗುಗಳೇನು ? ಅದರ ಇತ್ಯರ್ಥವೇನು ?—ತಮ್ಮಿಬ್ಬರ ನಡುವೆ ಈಗ ಬೆಳೆದುನಿಂತ ವಿರಸ—ಅದರಿಂದಾಗಿ ಬೆಳೆದ ಸಂದಿಗ್ಧಸ್ವರೂಪದ ಒಂದು ಬಗೆಯ ಜೀವನಕ್ರಮ—ಇವೆಲ್ಲಕ್ಕೆ ಕೊನೆಯೆಂದು ಎಂದೂ ಆಗೀಗ ಯೋಚಿಸು ತ್ತಿದ್ದಳು. ಆದರೆ ಈ ಎಲ್ಲ ಯೋಚನೆಗಳು ನಿತ್ಯ ಕೊನೆಗೊಳ್ಳುವುದು ಒಂದೇ ತೆರನಾಗಿ. ಬೇಡವಾದ ಆನಂದನ ನೆನಹುಗಳಿಂದಾಗಿ—ಬೇಕಾದ ಸುಖ ಸೌಲಭ್ಯಗಳಿಂದಾಗಿ—ಆಕೆ ಇಂಥ ಸಂದರ್ಭಗಳಲ್ಲಿ ರಂಗನಾಥನ್‌ನ ಮನೆಯ ಕಡೆಗೆ ಸಾಗುತ್ತಿದ್ದಳು. ಆತನ ಸಹವಾಸದಲ್ಲಿ ಎಲ್ಲವನ್ನೂ ಮರೆಯುವುದು ಸಾಧ್ಯ ವಾಗಿ ಕಾಣುತ್ತಿತ್ತು. ಮರೆಯುತ್ತಿದ್ದಳು. ವೈಮನಸ್ಸುಗಳೆರಡನ್ನೂ ಮರೆತು

ನ್ಯೆಮರೆಯುವಂತೆ ರಂಗನಾಥನ್ ಕೂಡ ಎಲ್ಲವನ್ನೂ ಬದಿಗಿರಿಸಿ, ಆತನಾದರೂ ಮೋಹಿನೀಮಯನಾಗುವಂತೆ ಮಾಡಿ—ವಿಹರಿಸುತ್ತಿದ್ದಳು. ಅಂಥ ಸಮಯಗಳಲ್ಲಿ ಆನಂದ ಬರಿಯ ಒಂದು ಹೆಸರು, ಒಂದು ಹಳೆಯದಾದ ನೆನಹು. ಪೂರ್ತಿಯಾಗಿ ಬೇಡವಾಗಿರದೆ—ಬೇಕಾಗಿಯೂ ಇರದೆ ಕೆಲವೊಂದು ವಸ್ತುಗಳು ಮನೆಯ ಹಳೆಯ ಕೋಣೆಯಲ್ಲಿ—ಇಡಲು ಜಾಗವಿಲ್ಲದೆ ಎಸೆದುಬಿಡಲು ಮನಸ್ಸಾಗದ್ದಕ್ಕೆ—ಬಿದ್ದಿರುವುದಿಲ್ಲವೆ? ಹಾಗೆ ಆನಂದನ ನೆನಹು ಮೋಹಿನಿಯ ಹೃದಯದ ಯಾವುದೋ ಒಂದು ಮೂಲೆಯನ್ನು ಅಪರಿಹಾರ್ಯವಾಗಿ ವ್ಯಾಪಿಸಿಕೊಂಡು ಇತ್ತು. ಬಾಡಿಗೆ ಕೊಟ್ಟ ಮನೆಯಿಂದ ಬೇಡವಾದ ಬಾಡಿಗೆ ಹಿಡಿದವನನ್ನು ಓಡಿಸಲಾಗದ ಮನೆಯೊಡತಿಯ ಮನಃಸ್ಥಿತಿ ಮೋಹಿನಿಯದಾಗಿತ್ತು ಮನೆ ಬಿಡದಿದ್ದರೂ ಇಲ್ಲ 'ಇಕೊ, ನಿನ್ನ ಮನೆಯಲ್ಲಿ ನಾನಿದ್ದೇನೆ. ಆ ಮನೆಯನ್ನು ನೀನು ಏನು ಮಾಡಿದರೂ ಬಿಡುವಂತಿಲ್ಲ' ಎಂದು ಮೂದಲಿಕೆಯಿಂದೆಂಬಂತೆ ನಕ್ಕು ಹೇಳಬೇಕೇಕೆ? ಆನಂದನ ನೆನಹು ಅಂಥ ಮೂದಲಿಕೆಯಿಂದ ಕೂಡಿಬರುತ್ತಿತ್ತು ಅದರಲ್ಲಿಯಂತೂ ಇತ್ತೀಚಿನ ಒಂದೆರಡು ವಾರಗಳಲ್ಲಿ ಆ ನೆನಹು ಮೋಹಿನಿಯನ್ನು ವ್ಯಥೆಗೀಡುಮಾಡುವಷ್ಟು ಪ್ರಮಾಣದಲ್ಲಿ ನುಗ್ಗಿಬರುತ್ತಿತ್ತು

ಯಾಕೆ? ಯಾಕೆ ಈ ಪರಿಯಾಗಿ ಆತನ ನೆನಹು ಬೇತಾಳವಾಗಿ ಬೆನ್ನಟ್ಟುತ್ತಿರಬೇಕು? ಆನಂದನೂ ತನ್ನನ್ನು ಕುರಿತು ಚಿಂತಿಸುತ್ತಿರಬಹುದೆ? ಚಿಂತಿಸುತ್ತಿರಬಹುದು. ಅದರಿಂದೇನಾಗಬೇಕು? ಏನಿದ್ದರೂ ತಾನು ಆನಂದನೆಡೆಗೆ ಮತ್ತೆ ಮರಳಿ ಹೋಗುವ ಹಾಗಿಲ್ಲವೆಂದಮೇಲೆ? ಯಾಕೆ ಹೋಗಬಾರದು? ಸರಿ. ಯಾಕೆ ಹೋಗಬಾರದು? ಏನು ಮಾಡಿದ ಹಾಗಾಯಿತು? ಅಲ್ಲ. ತನ್ನದೆಂಬ ಬೇರೆಯಾದ ಮನೆಯಾಗಿದೆ ತಾನು ಕಟ್ಟಿದ ತನ್ನದೇ ಆದ ಮನೆ! ತಾನೇ ಸ್ವಾಮಿನಿ ಆನಂದನೇ ತನ್ನೆಡೆಗೆ ಬಂದು ಯಾಕೆ ಇರಬಾರದು? ಬಂದರೆ? ಏನಾಗಬಹುದು? ಬರಬಹುದೆ? ಸಾಧ್ಯವಿಲ್ಲ. ಆತನ ಅಕ್ಕ—ಆಕೆಯ ಮನೆಯನ್ನು ಬಿಟ್ಟುಬರುವುದು ಸಾಧ್ಯವಿದ್ದರ ಇಷ್ಟಕ್ಕೇಕೆ ಬರುತ್ತಿತ್ತು? ಈಗಲಾದರೂ ಏನಾಯಿತು, ಇಷ್ಟಕ್ಕೆ ಬಂದಿತು ಎನ್ನುವಂಥದು? ತಾನು ಸುಖದ,ಸಮೃದ್ಧಿಯ ಸಾಗರದಲ್ಲಿರುವುದು ಸಾಧ್ಯವಿದ್ದಿತೆ? ಯಾಕೆ ಆ ಯೋಚನೆ? ಎಂದಿನದೋ ಕತೆ. ಜೀವನಗ್ರಂಥದಲ್ಲಿಯ ಮುಗಿದು ಹೋದ ಅಧ್ಯಾಯ!

ಆದರೂ ಆತ ಬರಲೊಪ್ಪಿದರೆ? ಆಗ ರಂಗನಾಥನ್‌ನಿಗೆ ಯಾವ ಸ್ಥಾನ! ರಂಗನಾಥನ್ ಒಪ್ಪಬಹುದೆ? ಏನೇನೋ ಇಲ್ಲದ ಯೋಚನೆಗಳಿಂದಾಗಿ ಮೋಹಿನಿ ಹೀಗೆ ದಿನದಿನವೂ ಬಳಲುತ್ತಿದ್ದಾಗ ಒಂದು ದಿನ ಮಧ್ಯಾಹ್ನ ರಂಗನಾಥನ್ ಅನಿರೀಕ್ಷಿತವಾಗಿಯೇ ಬಂದುಬಿಟ್ಟ ನಾಲ್ಕು ಗಂಟೆಯ ಸುಮಾರಿಗೆ ತಾನೇ ಸ್ಟೂಡಿಯೋಕ್ಕೆ ಹೊರಡುವವಳಿದ್ದಳು ಹೀಗಿದ್ದರೂ ರಂಗನಾಥನ್ ಬಂದಿದ್ದ—ಟೆಲಿಫೋನಿನಲ್ಲಿ ಒಂದು ಮಾತನ್ನೂ ತಿಳಿಸದೆ ಯಾಕಿರಬಹುದು—ಎಂದು ಆಕೆ ವಿಚಾರಿಸಬೇಕೆನ್ನುವಷ್ಟರಲ್ಲಿಯೇ ರಂಗನಾಥನ್ ಉಸಿರಿದ

" ಒಳ್ಳೆ ಪ್ರಸಂಗ ಬಂದಹಾಗಾಯಿತು, ಇದು—"

" ಏನು—ಏನು ? " ಎಂದು ಮೋಹಿನಿ ತೀರ ಹತ್ತಿರದಲ್ಲಿಯೇ ಬಂದು ಕುಳಿತಳು, ವ್ಯಾಕುಲವಾದ ಆತನ ಮುಖ ನೋಡುತ್ತ.

" ಹೀಗೆ ಮೈಮೇಲೆ ಬರಬಹುದೆಂದು ನಾನು ಎಂದಿಗೂ ಎಣಿಸಿರಲಿಲ್ಲ "

" ಏನಾಯಿತು, ಹೇಳಬಾರದೆ ?—"

ಮೋಹಿನಿ ರಂಗನಾಥನ್‌ನ ಮುಖವನ್ನೇ ನೋಡುತ್ತಿದ್ದಳು. ಅಲ್ಲಿಯ ಉತ್ಸಾಹ, ಆತ್ಮವಿಶ್ವಾಸ, ತಾಳ್ಮೆ ಎಲ್ಲವೂ ಮಾಯವಾಗಿದ್ದವು ಕಣ್ಣುಗಳು—ಎಂದಿಗೂ ವಿಲಾಸಮಯವಾಗಿ ಮೋಹಿನಿಯನ್ನು ನೋಡುತ್ತಿದ್ದ ಆತನ ಕಣ್ಣುಗಳು—ಚಿಂತೆಗೊಳಗಾಗಿದ್ದವು ಅಂಥ ಸ್ಥಿತಿಯಲ್ಲಿ ರಂಗನಾಥನ್‌ನನ್ನು ನೋಡುವುದು ಮೋಹಿನಿಗಾಗಲಿಲ್ಲವೇನೊ! ಬೇಡಿಕೆಯ ದನಿಯಲ್ಲಿ ಅಂಗಲಾಚಿದಳು .

" ಅದೇನು, ಹೀಗೆ ಮಾಡುತ್ತೀರಿ ? ಹೇಳಬಾರದೆ, ಏನು ತೊಂದರೆ ? ನನ್ನ ಮುಂದೆಯೂ ಹೇಳಬಾರದ ತೊಂದರೆ ಎಂಥದು ?—"

" ನಿನಗೆ ಹೇಳಬೇಕೆಂದೇ ಈಗ ಧಾವಿಸಿ ಬಂದದ್ದು—"

" ಏನು ?—"

" ನಿನ್ನ ಆ ಆನಂದ ಕೇಸು ಹಾಕಿದ್ದಾನೆ ! "

' ಆ ಆನಂದ ' ಎಂಬ ಮಾತಿನಲ್ಲಿಯ ಅಸಹನೆ, ಕುತ್ಸಿತ ಸ್ಪಷ್ಟವಾಗಿದ್ದರೂ ಆತನ ಆ ಒಂದು ಮಾತಿನಿಂದ ಮೋಹಿನಿ ತೆಪ್ಪಗಾಗಿಹೋದಳು ರಂಗನಾಥನ್ ತನ್ನ ಹತ್ತಿರವಿದ್ದನೆಂದಾಗಲಿ, ಆತ ತಮ್ಮಿಬ್ಬರಿಗೂ ಬಂದ ಪ್ರಸಂಗವನ್ನೇ ಕುರಿತು ಚಿಂತೆಗೊಳಗಾಗಿದ್ದನೆಂದಾಗಲಿ ಆಕೆ ಗಮನಿಸಲಾಗದಷ್ಟು ತನ್ನ

ಬಗೆಯ ಯೋಚನೆಯಲ್ಲಿಯೇ ಸಿಲುಕಿದಳು. ಅನುದಿನವೂ ತನ್ನನ್ನು ಕಾಡುತ್ತಿದ್ದ ಆನಂದನ ನೆನಹು–ಯೋಚನೆಗಳು ಆಕೆಯ ಒಳಮನಸ್ಸಿಗೆ ಯಾವುದೋ ಒಂದು ಅರ್ಥವನ್ನು ಹೇಳಿ, ಹೀಯಾಳಿಸಿ, ಹೆದರಿಸಿ, ಆಕೆಯನ್ನು ಮುದ್ದೆ ಮಾಡಿ ಒದ್ದಾಡಿಸಿ ನುಗ್ಗುಮಾಡುತ್ತಿದ್ದ ಹಾಗಿತ್ತು. ಆಕೆಯ ಬಾಯಿಗೆ ಮಾತೇ ಇಲ್ಲದಾಯಿತು. ಆನಂದ ಇಷ್ಟರ ವರೆಗೆ ಮುಂದರಿಯುಬಹುದೆಂದು ಆಕೆಗೆ ತೋಚಿರಲಿಲ್ಲ ಹೌದು. ಆತ ಯಾಕೆ ಮಾಡಬಾರದು ? ಆದರೆ ಅರೆ ನಿಮಿಷದಲ್ಲಿ ಸಂತಾಪವೇ ರೋಷವಾಗಿ ಪರಿಣಮಿಸಿತು. ಆನಂದನನ್ನು ಕಂಡು ಎಷ್ಟೋ ತಿಂಗಳಾಗಿಹೋಗಿತ್ತು ಮಾತನಾಡಿಯಂತೂ ಇನ್ನೂ ಹೆಚ್ಚು ಕಾಲ ಸಂದಿತ್ತು. ಆನಂದ ಮೊಕದ್ದಮೆ ಹೂಡಿದನೆ ? ಯಾತಕ್ಕಾಗಿ ? ತಾನು ಮತ್ತೆ ತನ್ನ ಹತ್ತಿರ ಬಂದಿರಬೇಕೆಂದೆ ? ಅಥವಾ ? ಆದರೆ ಇದಾವುದೂ ಆಕೆಗೆ ಮಹತ್ವದ್ದಾಗಿ ಕಾಣ್ಣಲಿಲ್ಲ ಇಲ್ಲಿಯ ಮಟ್ಟಿಗೆ ಬೆನ್ನು ಕಾದು ಸೇಡು ತೀರಿಸಬೇಕೆಂದು ಇದ್ದಾನೆಯೆ ? ಇದೆಲ್ಲ ಆತನ ಅಕ್ಕನದೇ ಇರಬೇಕು ಕಾರಸ್ಥಾನ. ತಾನಾಗಿಯೆ ಇಷ್ಟು ಆಳ ನೀರಿಗೆ ಇಳಿಯತಕ್ಕವನಲ್ಲವೆಂದು ತೋರಿತು. ಆದರೆ ಆನಂದ ಇತ್ತೀಚಿಗೆ ಯಾವ ಬಗೆಯಲ್ಲಿ ಯೋಚಿಸುತ್ತಿದ್ದನೆಂಬುದನ್ನಾಗಲಿ, ಆತ ತನ್ನನ್ನು ಕೂಡುವ ಯೋಚನೆಯನ್ನು ಪೂರ್ತಿಯಾಗಿ ಬಗೆಹರಿಸಿಕೊಂಡಿದ್ದನೆಂಬುದನ್ನಾಗಲಿ ಆಕೆ ತಿಳಿದಿರಲಿಲ್ಲ ಆಕೆ ಮಾತನಾಡದಿದ್ದುದು ಸಹಜವಾಗಿಯೇ ಇದ್ದಿತೆಂದೇ ರಂಗನಾಥನ್‌ನಿಗೆ ಅದು ವಿಶೇಷವೆನಿಸಲಿಲ್ಲ ಅಲ್ಲದೆ ಸ್ವತಹದ ಯೋಚನೆಯೇ ಆತನಿಗೆ ಭಾರವಾಗಿದ್ದಿತು. ಅವನೇ ಮುಂದುವರಿದ :

" ಹೀಗಾಗಬಹುದೆಂದು ನನಗೇನೊ ಅನಿಸುತ್ತಲೇ ಇದ್ದಿತು. ಆದರೆ ನಿನ್ನ ಮಾತನ್ನು ಕೇಳಿ ಅಂದುಕೊಂಡಿದ್ದೆ—ಏನೋ ಸುಮ್ಮನೆ ಇದ್ದುಬಿಡಬಹುದು ಎಂದು. ಆದರೆ—ಛೆ, ಇದೆಲ್ಲ ತೀರ ವಿಪರೀತಕ್ಕಿಟ್ಟುಕೊಂಡಿತು. ಒಂದು ವೇಳೆ ಆತ ಏನಾದರೂ ಕ್ರಮ ಕೈಕೊಂಡರೂ ನಿನ್ನ ಮಟ್ಟಿಗೆ ಮಾಡಬಹುದು ಎಂದುಕೊಂಡಿದ್ದೆ—ಈಗ ನಮ್ಮಿಬ್ಬರನ್ನೂ ಸೇರಿಸಿಯೇ ಮೊಕದ್ದಮೆ ಹೂಡಿದ್ದಾನೆ—"

" ನಿಮ್ಮದೇನು ಸಂಬಂಧ ಇದರಲ್ಲಿ ? "

" ಏನು ಸಂಬಂಧವೆ ? ಇಲ್ಲದಿದ್ದರೂ ಇಂಥ ಸಂದರ್ಭಗಳಲ್ಲಿ ಬೇಕಾದುದನ್ನು ಕಲ್ಪಿಸಬಹುದಾದ ಲಾಯರುಗಳಿದ್ದಮೇಲೆ—"

" ಆದರೆ ನಿಮ್ಮ ಮೇಲೆ ಏನೆಂದು ಕೇಸು ಮಾಡಲಿಕ್ಕಾದೀತು ? "

" ಸರಿ. ನನ್ನನ್ನು ಕೋ-ರೆಸ್ಪಾಂಡೆಂಟ್ ಎಂದು ಸೇರಿಸಿದ್ದಾನೆ. ಅಂದ ಮೇಲೆ ನನ್ನ ನಿನ್ನ ಸಂಬಂಧಗಳನ್ನು ಲಕ್ಷಿಸಿಯೇ—ಅವುಗಳನ್ನು ಅವಲಂಬಿಸಿಯೇ ಈ ಕೇಸು ನಡೆಯಬೇಕು—"

" ಅಂದರೆ ಕೋರ್ಟಿನಲ್ಲಿ ಕೇಸು ನಡೆಯಬೇಕೆ ? "

" ಅಲ್ಲವೆ ? ಮಧ್ಯಾಹ್ನ ಸಮನ್ಸೇ ಬಂದಿತ್ತು. ಏನೋ ಹೇಳಿಕಳಿಸಿದ್ದೇನೆ, ಬೇಲೀಫ್‌ನನ್ನು ಆದರೆ ಎಷ್ಟು ದಿನ ಮುಂದೂಡಲಿಕ್ಕಾದೀತು ?—ಕೋರ್ಟಿನಲ್ಲಿ ಕೇಸು ಮಾಡಿಯೇ ಇದ್ದಮೇಲೆ ? ಇಬ್ಬರ ಹೆಸರಿನಲ್ಲಿಯೂ ಬೇರೆಬೇರೆಯಾಗಿ ಸಮನ್ಸ್ ಬಂದಿತ್ತು."

ಮೋಹಿನಿ ಎರಡೂ ಕಣ್ಣುಗಳನ್ನು ಕೈಗಳಿಂದ ಮುಚ್ಚಿಕೊಂಡು ಚಿಂತಾಮಗ್ನಳಾಗಿ ಸೋಫಾದ ಬೆನ್ನಿಗೆ ತಲೆಯಾನಿಸಿದ್ದಳು ಆಕೆಯ ಯೋಚನೆಗಳು ಒಂದೇ ಸರಿಯಾದ ಕ್ರಮದಲ್ಲಿ ಮುಂದರಿಯದಷ್ಟು ಕೋಲಾಹಲವನ್ನು ಈ ವಾರ್ತೆ ಆಕೆಯ ಮನಸ್ಸಿನಲ್ಲೆಬ್ಬಿಸಿತ್ತು. ಏನಾಯಿತು, ಏನು ಮಾಡುವುದು, ಇದರ ಪರಿಣಾಮಗಳೇನು ? ಯಾವ ಯಾವ ಸನ್ನಿವೇಶಗಳನ್ನು ಇದರಿಂದಾಗಿ ಎದುರಿಸಬೇಕಾಗಬಹುದು ಎಂಬುದಾವುದೂ ಸ್ಪಷ್ಟವಾಗಿ ಹೊಳೆಯುತ್ತಿರಲಿಲ್ಲವಾದ್ದರಿಂದಲೇ ಆಕೆಯ ಮನಸ್ಸು ಅಂಥ ಗೊಂದಲಕ್ಕೀಡಾಗಿತ್ತು. ಮುಂದೇನು ಎಂಬುದು ತಿಳಿಯುದಕ್ಕಾಗಿಯೇ ಕೇಳಿದಳು—ಮುಂದೆ ಮಾತನ್ನಾದರೂ ಹೇಗೆ ಮುಂದರಿಸುವುದೆಂಬುದೂ ತಿಳಿಯದೆ.

" ಹಾಗಾದರೆ—"

" ಏನಾದರೂ—ನಾನು ನನ್ನ ಹೆಸರನ್ನಂತೂ ಇದರಿಂದ ಕಿತ್ತುಕೊಳ್ಳಲಿಕ್ಕೇ ಬೇಕು—"

" ಅಂದರೆ—"

" ನಾನು ಇದರಲ್ಲಿ ಹೀಗೆ ಸಿಕ್ಕುಬಿದ್ದರೆ ನನ್ನ ಹೆಸರೇ ಹಾಳು ! "

ಆ ಒಂದು ಮಾತಿನಲ್ಲಿ ರಂಗನಾಥನ್‌ನ ಅಂತರಂಗದ ಒಂದು ವೈಯದಿಗ್ದರ್ಶನವಾಗಿರಬೇಕು ಮೋಹಿನಿಗೆ. ' ಏನಾದರೂ ಇದೆಲ್ಲ ನಿನಗೆ ಸಂಬಂಧಿಸಿದ್ದು. ಎಂಥ ಪ್ರಯತ್ನದಿಂದಲಾದರೂ ನಾನು ಇದರಿಂದ ದೂರವಾಗಿರಬೇಕು ' ಎಂದೇ ಅಲ್ಲವೇ ರಂಗನಾಥನ್‌ನ ಮನಸ್ಸು ? ಹೀಗಾದರೆ ರಂಗನಾಥನ್

ತನ್ನ ಕೈಬಿಡುವನೆ? ಎಂಥ ಸ್ವಾರ್ಥ ಇದು ಎಂದು ಒಂದು ಕ್ಷಣವಾದರೆ ಎಂಥ ಅಸಹಾಯತೆ ಇದು ಎಂದು ಮರುಕ್ಷಣ. ಒಂದು ನಿಮಿಷ ರೋಷ, ಇನ್ನೊಂದು ನಿಮಿಷ ಆತ್ಮಾನುಕಂಪ. ಎಲ್ಲವನ್ನೂ ಬಿಟ್ಟು ಬೇರೆಯಾಗಿರ ಬೇಕೆಂದರೂ ಸಾಧ್ಯವಾಗಿಸದ ಪರಿಸ್ಥಿತಿಯ ಕ್ರೂರ ವಿಪರ್ಯಾಸ! ಎಂದಿಗೋ ಒಂದು ಕಾಲದಲ್ಲಿ, ಯಾವುದೋ ಒಂದು ಪರಿಸ್ಥಿತಿಯಲ್ಲಿ ಸಿಕ್ಕುಬಿದ್ದಾಗ ಮಾಡಿಕೊಂಡ ಮದುವೆಯ ಇತಿಹಾಸ ಎಷ್ಟು ಬಗೆಯಾಗಿ ಮುಂದೆ ಬೆಳೆದು ಎಷ್ಟು ಪರಿಯಾಗಿ ನೋವಿಗೀಡುಮಾಡಬೇಕೊ ಎಂದುಕೊಂಡಳು. ಕಣ್ಣಂಚಿನಲ್ಲಿ ನೀರು ಕಾಣಿಸಿತು. ರಂಗನಾಥನ್ ಅದನ್ನು ನೋಡದಿರಲಿಲ್ಲ ತನ್ನ ಮಾತಿ ನಿಂದಾಗಿಯೇ ಆಕೆ ನೊಂದುಕೊಂಡಳೆಂದು, ಸಮಾಧಾನಪಡಿಸುವ ದನಿಯಲ್ಲಿ ಹೇಳಿದ :

"ಇದು ನೋಡು, ಮೋಹಿನಿ. ಸುಮ್ಮನೆ ನೊಂದುಕೊಂಡರೆ ಯಾತಕ್ಕಾ ಯಿತು? ಇದರಲ್ಲಿ ನನ್ನ ಹೆಸರು—ಅಂದರೆ ನನ್ನ ಇಡೀ ಕಂಪನಿಯ ಹೆಸರು ಸಿಕ್ಕ ಹಾಗಾಗಿದೆ. ಅದಕ್ಕಾಗಿ ಹಾಗೆಂದೆ. ಏನಾದರೂ ನೀನು ಇದನ್ನು ಎದುರಿಸಲೇಬೇಕು. ಅನ್ಯಾಯವೇನೊ ನಿಜ. ಆದರೆ ಬೇರೆ ಉಪಾಯ— ಸದ್ಯಕ್ಕಂತೂ ಕಾಣುವುದಿಲ್ಲ"

"ಏನು ಮಾಡುವುದು, ಹಾಗಾದರೆ?—"

"ಏನು ಮಾಡುವುದು!"

"ನನ್ನ ನಿಮ್ಮ ಸಂಬಂಧ ಎಲ್ಲಾ ಕೋರ್ಟಿನಲ್ಲಿ ಬಹಿರಂಗವಾಗಬೇಕೆ?"

"ಅದೇ ಬೇಡವಾಗಿದೆ ನನಗೆ ಏನಿದ್ದರೂ ಅಷ್ಟನ್ನು ತಪ್ಪಿಸಬೇಕು— ತಪ್ಪಿಸಲೇಬೇಕು."

"ಸಾಧ್ಯವೆ ಅದು?"

"ಪ್ರಯತ್ನವನ್ನಂತೂ ಮಾಡುವಾ—ಆಮೇಲೆ—"

"ಏನು ಪ್ರಯತ್ನವೊ! ನನಗಂತೂ ಏನೂ ತಿಳಿಯದಾಗಿದೆ."

ಒಂದೆರಡು ನಿಮಿಷ ಇಬ್ಬರೂ ಸುಮ್ಮನಾಗಿಯೇ ಇದ್ದರು. ಕೊನೆಗೆ ರಂಗನಾಥನ್ ತನಗೆ ಹೊಳೆದ ಯೋಚನೆಯನ್ನು ಆಕೆಯ ಮುಂದಿಡಬೇಕೆಂದು,

"ನಾವಿಬ್ಬರೂ ಹೋಗಿ ನಿಮ್ಮ ಆ ವಸಂತರಾಯನನ್ನು ಕಂಡರೆ ಏನಾದರೂ—" ಎಂದು ತಡೆದ.

" ಅವರೇನು ಮಾಡಬೇಕು, ಪಾಪ ! "

" ಅಲ್ಲ, ಅವರು ನಡುವೆಯಾಗಿ ಕೋರ್ಟಿನ ಈ ಅವಮಾನ ತಪ್ಪಿಸುವುದು ಸಾಧ್ಯವೆ ? ಎಂದು ನನಗೆ ಯೋಚನೆ ಪ್ರಯತ್ನ ಮಾಡುವುದಾದರೆ ಅವರ ಮುಖಾಂತರವೇ ಏನಾದರೂ ಆಗಬೇಕು "

" ಕೇಳಿ ನೋಡಬಹುದು. ಆದರೆ ನನಗೇನೊ ಅನುಮಾನ. ಇಷ್ಟರ ಮಟ್ಟಿಗೆ ಮುಂದರಿದವರು—ಅದರಲ್ಲಿ ಸ್ವತಹದ್ದೂ ಅವಮಾನವಿದೆ ಎಂದು ತಿಳಿದೂ ಮಾಡಿದವರಿಗೆ—ಯಾರು ಏನು ಹೇಳಿದರೆ ಏನಾಗಬೇಕು ? ಅಲ್ಲದೆ ಅವರಿಗೆ ಯಾರು ಯಾರು ಏನು ಬುದ್ಧಿ ಹೇಳಿ ಕಿವಿ ತುಂಬಿಸಿ—"

" ಹೇಗಾದರೂ ನನಗಂತೂ ಬೇರೆ ದಾರಿ ಕಾಣುವುದಿಲ್ಲ ಹೋಗಿಯಂತೂ ಬರುವಾ "

" ಈಗಲೇನೆ ? ಈಗ ಎಲ್ಲಿ ಸಿಕ್ಕಬೇಕು ಅವರು ? ನಾವು ಅವರ ಆಫೀಸಿಗೆ ಹೋಗಬೇಕಾಗುತ್ತದೆ "

" ಹಾಗಿದ್ದರೆ ಸಾಯಂಕಾಲವೇ ಹೋಗುವಾ. ಬೋರಿವಲಿಯಲ್ಲಿಯಲ್ಲವೆ ಅವರು ಇರುವುದು ? "

" ಹೌದು. ಆದರೆ—"

" ಆದರೆ ಎನ್ನುವುದೇ ಇಲ್ಲ. ಇಂದು ಸಾಯಂಕಾಲ ಅವರನ್ನು ಮಾತನಾಡಿಸಿಯೇ ಬಿಡುವುದು. ಸರಿ, ಒಳ್ಳೆಯದೇ ಬಂದಿತು ಇದೊಂದು ನಡುವೆ, ಏನೋ ಒಳ್ಳೆ ಉತ್ಸಾಹದಿಂದ ಕೆಲಸ ಮಾಡಿ ಹತ್ತಿಪ್ಪತ್ತು ದಿನಗಳಲ್ಲಿ ಈ ಚಿತ್ರವೊಂದನ್ನು ಮುಗಿಯಿಸಬೇಕೆಂದರೆ—"

* * * *

ಮೋಹಿನಿಗೆ ನೂರಾರು ಯೋಚನೆಗಳು ಸಾಯಂಕಾಲ ಏಳರ ಸುಮಾರಿಗೆ ಬರುತ್ತೇನೆಂದೂ, ಆಮೇಲೆ ಬೋರಿವಲಿಗೆ ಹೋಗುವುದೆಂದೂ, ಅಷ್ಟರಲ್ಲಿ ತಾನು ಯಾರಾದರೂ ಒಬ್ಬ ಲಾಯರ್ ಹತ್ತಿರ ಹೋಗಿ ಏನು ಎಂತುಗಳನ್ನು ವಿಚಾರಿಸಿಕೊಂಡುಬರುವುದಾಗಿಯೂ ಹೇಳಿ ರಂಗನಾಥನ್ ಹೊರಟುಹೋಗಿದ್ದ. ತಾನು ಆನಂದನ ಮನೆಯಿಂದ ಹೊರಟುಬಂದಾಗಿನಿಂದ ಮತ್ತೆ ಬೋರಿವಲಿಗೆ ಹೋಗಿರಲಿಲ್ಲ. ಇಂದು ಹೋಗಬೇಕು ! ಯಾವ ಪರಿಸ್ಥಿತಿಯಲ್ಲಿ ? ತಮ್ಮ

ವಿರಸಗಳನ್ನು ಸರಿಪಡಿಸಲೆಂದು ತಾನು ವಸಂತನನ್ನು ಮೊದಲು ಮಾತನಾಡಿಸಿದ್ದಿಲ್ಲವೆ? ಅಲ್ಲವೆ? ಆ ದಿನ ಬೆಳಿಗ್ಗೆ ರೈಲುಪ್ಲಾಟ್‌ಫಾರ್ಮಿನಮೇಲೆ ಆತನನ್ನು ತಾನು ಕಂಡು ಮಾತನಾಡಬೇಕಾಗಿದೆ ಎಂದು ಹೇಳಿ ಮಧ್ಯಾಹ್ನ ಚರ್ಚ್ ಗೇಟ್ ವರೆಗೆ ಹೋದದ್ದು ಯಾತಕ್ಕಾಗಿ? ತನ್ನ ಆನಂದನ ಸಂಬಂಧಗಳನ್ನು ಸರಿಪಡಿಸಲು ವಸಂತ ಸಮರ್ಥನೆಂಬ ಭಾವನೆ ಎಷ್ಟರಮಟ್ಟಿಗೆ ನಿಜವಾದದ್ದಿತ್ತು? ಎಷ್ಟರಮಟ್ಟಿಗೆ ಒಳಮನಸ್ಸಿನೆದುರು ಸ್ಪಷ್ಟವಾಗಿದ್ದಿತು? ಸ್ಪಷ್ಟವಾಗಿ ಇದ್ದಿತೊ ಇಲ್ಲವೊ! ಅಂದಿನ ಪರಿಸ್ಥಿತಿಯಲ್ಲಿ ತನ್ನನ್ನು ಸಹಾನುಭೂತಿಯಿಂದ ಮಾತನಾಡಿಸುವವರು ಯಾರೂ ಇರಲಿಲ್ಲ. ವಸಂತನ ಮುಖದಲ್ಲಿ, ಮಾತಿನಲ್ಲಿ, ತನಗೆ ಬೇಕಾದ ಭರವಸೆ ಕಾಣುತ್ತಿತ್ತು ತನ್ನ ಎಣಿಕೆ ತಪ್ಪಲಿಲ್ಲ. ಅಂದಿನಿಂದ ಎಂದಿಗೂ ವಸಂತ ಸಹಾನುಭೂತಿಯ ಮೂರ್ತಿಯಾಗಿಯೇ ಉಳಿದಿದ್ದ ವಸಂತ ಸಹಾಯ ಮಾಡಲು ಒಪ್ಪಬಹುದು ಆದರೆ ಆನಂದ ಆತನ ಮಾತನ್ನು ಕೇಳಬಹುದೆ? ಆಗಲಿ ವಸಂತನ ಸಹಾಯ ಪಡೆದೇ ಆನಂದ ಈ ಮೊಕದ್ದಮೆಯ ಕೆಲಸಕ್ಕೆ ತೊಡಗಿದ್ದನೆಂಬುದು ಮೋಹಿನಿಗೆ ಹೇಗೆ ಗೊತ್ತಾಗಬೇಕು? ಅಲ್ಲದೆ ಇನ್ನೂ ಒಂದು ಯೋಚನೆ, ವಸಂತ ಏನೆಂದು ಸಹಾಯ ಮಾಡಬೇಕು? ತಾನು ಆನಂದನ ಜೊತೆಗೆ ಇರುವುದು ಸಾಧ್ಯವಲ್ಲದ ಮಾತು. ಆನಂದನಿಗೆ ಈ ಮದುವೆಯ ಕತೆಯನ್ನು ಮುಗಿಯಿಸಬೇಕಾಗಿದ್ದೀತು ಸರಿಯೆ. ತನಗೂ ಅಷ್ಟೇ ಇದ್ದ ಹಾಗೆಯೇ ಉಳಿದರೆ ಕೊನೆಯಿಲ್ಲದ ಅನಿಶ್ಚಿತತೆ ತಾನು ಸ್ವತಂತ್ರಳೆಂದು ತಿಳಿದುಕೊಂಡಿದ್ದರೂ ನಿರಪವಾದವಾಗಿ ಸ್ವತಂತ್ರಳಲ್ಲವೆಂಬ ಕಟುವಾದ ಸತ್ಯವನ್ನು ಆನಂದನ ಮೊಕದ್ದಮೆಯ ಪ್ರಸ್ತಾಪದಿಂದ ತಿಳಿದುಕೊಂಡಿದ್ದಳು. ಇದು ಬಗೆಹರಿದರೆಯೆ ಒಳ್ಳೆಯದು ಬಾಳುವೆಯಲ್ಲಿ ಸತ್ಯಾಂಶವಾಗಿ ಮುರಿದುಹೋದ ಮದುವೆ ಕಾನೂನಿನಲ್ಲಿಯೂ ಮುರಿದುಹೋಗಲಿ ಆಗಲೆ ತನಗೆ ನಿಜವಾದ ಸ್ವಾತಂತ್ರ್ಯ ದೊರಕುವುದು. ಅದೇ ಹಿತವಾದ ದಾರಿ. ತಾನು ನಡೆದುಬಂದ ದಾರಿಗೆ ಅಂಟಿಕೊಂಡ ಅಪರಿಹಾರ್ಯವಾದ ಅಂಶ ಅದು, ಎಂದು ಸಾಯಂಕಾಲ ವಸಂತನೆಡೆಗೆ ಹೋಗುವ ವಿಚಾರದಲ್ಲಿ, ಆತನನ್ನು ಸಹಾನುಭೂತಿ ಸಹಾಯಗಳಿಗಾಗಿ ಬೇಡುವ ವಿಚಾರದಲ್ಲಿ ಉದಾಸೀನಳಾದಳು. ವಸಂತನ ಸಹಾಯ ಯಾವ ರೀತಿಯಿಂದಲೂ ಪ್ರಯೋಜನದ್ದಾಗಿ ಕಾಣಲಿಲ್ಲ ಆಕೆಗೆ. ಅಲ್ಲದೆ ಕೊನೆಯ ವರೆಗೂ ತಾನು ಇನ್ನೊಬ್ಬರನ್ನು ಬೇಡಿ, ಇನ್ನೊಬ್ಬರಿಂದಲೆ ಸಹಾಯ

ಪಡೆದು ಯಾಕೆ ಬದುಕಬೇಕು ? ತನ್ನ ಕಾಲ ಮೇಲೆ ತಾನು ನಿಲ್ಲುವುದು ಸಾಧ್ಯವಿಲ್ಲವೆ ? ಖಂಡಿತವಾಗಿಯೂ ಇದೆ ಎಂಬ ಸತ್ಯವನ್ನು ತನ್ನ ಇತ್ತೀಚಿನ ಬದುಕೇ ಸಾರಿ ಹೇಳುತ್ತಿದ್ದಿತು ಅಂದಮೇಲೆ ? ವಸಂತನಿಂದಾದರೂ ಏನು ? ಯಾವುದೂ ಬೇಡ ತನ್ನ ಬದುಕಿನಲ್ಲಿ ಬಂದ ಈ ಸಮಸ್ಯೆಯನ್ನು ತಾನೇ ಎದುರಿಸಬೇಕು. ಅಲ್ಲದೆ, ಇದು ಯಾವ ಸಮಸ್ಯೆ ? ಬಿಡುಗಡೆ ಬೇಕು ಎಂದಮೇಲೆ ಅದನ್ನು ಸಾಧಿಸುವ ಸಾಧನ ಬೇಡ ಎಂದರೆ ಹೇಗೆ ? ಅದೂ ಆಗಲಿ. ಆ ಸಾಧನ ಅವಮಾನದ್ದು ಎಂದಾದರೂ ಯಾಕೆ ತಿಳಿಯಬೇಕು ? ಮದುವೆಯಿಂದಾಗಿ ದೊರಕಬೇಕಾದ ಸುಖಕ್ಕಿಂತಲೂ ಮದುವೆಯ ಬಂಧನಕ್ಕೆಯೆ ಹೆಚ್ಚಿನ ಮನ್ನಣೆಯನ್ನು ಕೊಡಮಾಡುವ ಸಮಾಜದ ಅಂಧಶ್ರದ್ಧೆಯ ಮೂಲಕವೆ ಸಾಮಾಜಿಕನು ವಿಚ್ಛೇದವನ್ನು ಅವಮಾನವೆಂದು ಪರಿಗಣಿಸುತ್ತಾನೆ. ಆದರೆ ಮದುವೆಯಂಥ ಕೇವಲ ವೈಯಕ್ತಿಕ ಸಂಬಂಧವನ್ನು ಮುರಿದುಹಾಕಬೇಕಾದಾಗ ಕೋರ್ಟು ಕಾನೂನುಗಳನ್ನು ಆಶ್ರಯಿಸದೆ ಇರುವುದು ಅಸಾಧ್ಯವಿದ್ದ ಪರಿಸ್ಥಿತಿಯೇ ಅವಮಾನಕರ. ಅಥವಾ ಹೀಗೂ ಇರಬಹುದಲ್ಲವೆ ? ಮದುವೆ ವೈಯಕ್ತಿಕವಾದ ಸಂಬಂಧವಾದರೂ ಅದನ್ನು ಸಾರ್ವಜನಿಕರೆದುರೇ ನಡಸಿ ನಾಲ್ಕು ಜನರು ತಿಳಿಯುವಂತೆಯೇ ಅದನ್ನು ಜರುಗಿಸುವುದಿಲ್ಲವೆ ? ನಾಲ್ಕು ಜನರೆದುರು ನಡೆದದ್ದು ನಾಲ್ಕು ಜನರೆದುರೇ ಮುರಿಯಬೇಕೇನೊ ! ಹೀಗೆಂದು ಏನೇನನ್ನೊ ಯೋಚಿಸಿ, ವಿಚ್ಛೇದವೇ ಬೇಕೆಂದಮೇಲೆ ಅದಕ್ಕೆ ಅನಿವಾರ್ಯವಾಗಿ ಅಂಟಿಕೊಂಡಿದ್ದ ವಿಷಯಗಳಿಗೇಕೆ ಹೆದರಬೇಕು ? ತಾನು ಆನಂದನಿಂದ ಬೇರೆಯಾಗಿ ಸ್ವತಂತ್ರವಾಗಿ ಇರುತ್ತಿದ್ದುದು ಎಷ್ಟು ಜನರಿಗೆ ತಿಳಿಯದ ವಿಷಯ ? ಎಂದು ಮುಂತಾಗಿ ಯೋಚಿಸಿ ಸಾಯಂಕಾಲ ರಂಗನಾಥನ್ ಬರುವ ಹೊತ್ತಿಗೆ ಕಾನೂನಿನ ಪ್ರಕಾರ ಕೋರ್ಟಿನಲ್ಲಿ ನಡೆಯಬೇಕಾದ ವಿಚ್ಛೇದದ ಮೊಕದ್ದಮೆಯ ಅನಾನುಕೂಲಗಳನ್ನು ಎದುರಿಸಲು ಹೆಚ್ಚುಕಡಿಮೆ ಸಿದ್ಧಳಾಗಿಯೇ ಇದ್ದಳು. ಹೀಗೆಂದು ಆಕೆ ರಂಗನಾಥನ್‌ನೆದುರು ಹೇಳಿದಾಗ ಆತನಿಗೇ ಆಶ್ಚರ್ಯವೆನಿಸಿತಲ್ಲದೆ ಮೋಹಿನಿಯ ಮನಃಸ್ಥೈರ್ಯವನ್ನು ನೆನೆದು ' ಎಂಥ ಗಟ್ಟಿ ಹೆಂಗಸು ? ' ಎಂದುಕೊಳ್ಳುವಂತಾದ.

ರಂಗನಾಥನ್ ' ಎಂಥ ಹೆಂಗಸು ! ' ಅಂದುಕೊಂಡ ಹಾಗೆ ಮೋಹಿನಿ ಆತನ ವಿಚಾರದಲ್ಲಿ ' ಎಂಥ ಗಂಡಸು ? ' ಎಂದುಕೊಂಡಿದ್ದಳು. ಆತ ತೋರ್ಪಡಿಸಿದ

ಅಧೈರ್ಯಕ್ಕಾಗಿ ಅಸಹನೆಪಟ್ಟಿದ್ದಳಲ್ಲದೆ, ಉಪಾಯವಾಗಿ ಜಾರಿಕೊಳ್ಳುವ ಆತನ ಯತ್ನವನ್ನು ನೆನೆದು 'ಎಷ್ಟಾದರೂ ಗಂಡಸು. ಗಂಡಸು ಹೀಗೆಯೆ' ಎಂದುಕೊಂಡಿದ್ದಳು ತನ್ನೊಡನೆ ಬೇಕಾದ ಹಾಗೆ ವಿಹರಿಸಿ, ತನ್ನನ್ನು ತನ್ನವಳನ್ನಾಗಿ ಮಾಡಿಕೊಂಡ ಆತ ಹೀಗೆ ತಲೆತಪ್ಪಿಸಿಕೊಳ್ಳುವ ಯತ್ನದಲ್ಲಿರಬಾರದು ಎಂದು ತೋರಿತು ಆಕೆಗೆ. ಹೀಗಾಗಿ ಈ ಒಂದು ಸಂದರ್ಭದಿಂದಾಗಿ ರಂಗನಾಥನ್‌ನ ಬಗೆಯಲ್ಲಿಯ ಮೋಹಿನಿಯ ವಿಶ್ವಾಸ ಅರ್ಧಕ್ಕರ್ಧ ಇಳಿಮುಖವಾಯಿತು ತಾನು ಬೇಡಿ ಬಯಸುತ್ತಿದ್ದ—ತಾನು ತಿಳಿದುಕೊಂಡ ಹಾಗೆ—ಆದರ್ಶ ಜೊತೆಗಾರ, ತನ್ನ ಹೆಣ್ಣು ಹೃದಯ ಬೇಡುತ್ತಿದ್ದ ನಿಜವಾದ ಗಂಡು—ರಂಗನಾಥನ್ ಅಲ್ಲ—ಖಂಡಿತವಾಗಿಯೂ ಅಲ್ಲ—ಎಂದೇ ತೋರಿತು ಹಾಗಾದರೆ ಆನಂದನಂತೆ ರಂಗನಾಥನ್ ಆದರೂ ತನ್ನ ಮುನ್ನಡೆಯ ಮಾರ್ಗದಲ್ಲಿಯ ಒಂದು ಮೈಲುಗಲ್ಲು ಮಾತ್ರ! ಅಲ್ಲವೆ? ಎಂದುಕೊಳ್ಳುತ್ತಿರುವಾಗಲೆ ರಂಗನಾಥನ್ ಬಂದಿದ್ದ. ಸಂಜೆಯ ದೀಪಗಳು ಅಲ್ಲೊಂದು ಇಲ್ಲೊಂದು ಬೆಳಗುತ್ತಿದ್ದವು ಮೋಹಿನಿಯ ಜೀವನದಲ್ಲಿಯ ಸಂಧಿಕಾಲದಂತೆ ಸಂಧ್ಯಾಸಮಯ ಕತ್ತಲೆಯಲ್ಲಿ ನಿಧಾನವಾಗಿ ಕರಗುವುದರಲ್ಲಿತ್ತು. ಹೊಸದಾಗಿ ದೀಪಗಳು ಬೆಳಗುವುದರಲ್ಲಿದ್ದವು.

"ಏನಾಯಿತು?" ಎಂದ ರಂಗನಾಥನ್

"ಏನಾಗುವುದು?"

"ಅಂದರೆ ಹೊರಡುವುದಲ್ಲವೆ? ನಾನೆಲ್ಲ ಕೇಳಿಕೊಂಡು ಬಂದಿದ್ದೇನೆ—"

"ಏನೆಂದು?"

"ನಾನು ಯೋಚಿಸಿದ ಹಾಗೆ ಕೋರ್ಟಿನವರೆಗೆ ಹೋಗದೆಯೆ ಬಗೆಹರಿಯಿಸಿಕೊಳ್ಳುವುದು ಸಾಧ್ಯವಿದ್ದರೆ ಹಾಗೆ ಪ್ರಯತ್ನ ಮಾಡಬಹುದು ಎಂದರು ಲಾಯರು—"

"ಕೋರ್ಟಿಗೆ ಹೋಗದೆ ಹೇಗೆ ಬಗೆಹರಿಯಬಹುದು? ಬಹುದೆ?—"

"ನನ್ನನ್ನು ಇದರೊಳಗಿಂದ ಬಿಟ್ಟುಬಿಡಲು ಅವರು ಒಪ್ಪಿದರೆ—"

"ಅದು ನಿಮ್ಮ ಮಟ್ಟಿಗಾಯಿತು. ನಾನು?"

"ನೀನು ಎದುರಿಸಲೇಬೇಕೆಂದರು—"

"ಹೌದೆ?"

ಮೋಹಿನಿಯ ಆ ಒಂದು ಮಾತು, ಅದನ್ನು ಆಕೆ ಆಡಿದ ರೀತಿ ' ಎಂಥ ಸ್ವಾರ್ಥ ಇದು ?' ಎಂಬ ಅರ್ಥವನ್ನು ಸ್ಪಷ್ಟವಾಗಿ ಹೇಳುತ್ತಿತ್ತು. ಆದರೆ ರಂಗನಾಥನ್ ಅದನ್ನು ಗಮನಿಸುವ ಮನಃಸ್ಥಿತಿಯಲ್ಲಿರಲೇ ಇಲ್ಲ ಮೋಹಿನಿ ಸುಮ್ಮನಾಗಿಯೇ ಉಳಿದಳು.

" ಹೊರಡುವುದಲ್ಲವೆ ? " ಎಂದ ರಂಗನಾಥನ್, ಅರೆನಿಮಿಷ ತಡೆದು

" ಹೊರಡುವುದು ಎಂದರೆ ಹೊರಡುವುದು ಮತ್ತಿನ್ನೇನು ?—"

" ಹೀಗೆ ಉದಾಸೀನ ಮಾಡಿದರೆ ಹೇಗೆ ನೋಡು—"

" ಏನು ಮಾಡಿದರೂ ಅಷ್ಟೆಯೇ ನಾವು ಹೋಗಿಯಾದರೂ ಏನಾಗ ಬೇಕಾಗಿದೆ ? "

" ಅದನ್ನು ಹೋಗಿಯೇ ನೋಡುವಾ ಇಲ್ಲಿಯೇ ಯಾಕೆ ಮಾತು ? "

ಮೋಹಿನಿಗೆ ಎಷ್ಟುಮಾತ್ರವೂ ಉತ್ಸಾಹವೆನಿಸಲಿಲ್ಲ ಆದರೆ ರಂಗನಾಥನ್ ನಿಗೆ ಎದುರುಹೇಳುವ ಸ್ಥಿತಿಯಲ್ಲಿ ಆಕೆ ಇರಲಿಲ್ಲವೆಂದೇ ಹೊರಡಲನುವಾದಳು ತಾನು ಇದರಿಂದ ಹೇಗೆ ಪಾರಾಗಬೇಕೆಂಬ ಒಂದು ಯೋಚನೆಯ ಹೊರತಾಗಿ ರಂಗನಾಥನ್‌ನಿಗೆ ಬೇರೆ ಯಾವುದೂ ತಿಳಿಯುತ್ತಿರಲಿಲ್ಲ ಇದನ್ನು ಮೋಹಿನಿ ತಿಳಿದವಳಾಗಿದ್ದಳು ಆ ಕ್ಷಣಕ್ಕೆ ತಮ್ಮಿಬ್ಬರ ನಡುವೆ ಮಹದಂತರವೊಂದು ಬಂದಹಾಗೆನಿಸಿತು ಆಕೆಗೆ ಇದು ಇಬ್ಬರಿಗೂ ಬಂದ ಒಂದು ಪ್ರಸಂಗ, ಇಬ್ಬರೂ ಸೇರಿ ಅದನ್ನು ಎದುರಿಸಿದ್ದರೆ ತಮ್ಮಿಬ್ಬರಲ್ಲಿಯೂ ಒಂದು ಹೊಸ ಬಗೆಯ ಸಾಮರಸ್ಯ—ಹೊಂದಿಕೆ-ಬೆಳೆಯಬಹುದಿತ್ತಲ್ಲವೆ ? ಈ ಅಪೇಕ್ಷೆಯನ್ನು ರಂಗನಾಥನ್ ತನ್ನ ಸ್ವಾರ್ಥಕ್ಕಾಗಿ ಮುರಿದುಹಾಕಿದ್ದ—ಹಾಕುವುದರಲ್ಲಿದ್ದ. ಹಾಗಿದ್ದರೆ ತಮ್ಮಿಬ್ಬರಲ್ಲಿ ಇಂದಿನ ವರೆಗೆ ಬೆಳೆದುನಿಂತ ಸಂಬಂಧ ರಕ್ತಮಾಂಸ ಗಳ ಸೆಳೆತ ಮಾತ್ರವಲ್ಲದೆ ಬೇರೆ ಏನಾದರೂ ಆಗಬಹುದೆ? ತನ್ನ ಚೆಲುವಿನ ದೇಹವನ್ನು ಬಳಸಿಕೊಂಡು ತನ್ನದನ್ನಾಗಿ ಮಾಡಿಕೊಂಡ ರಂಗನಾಥನ್‌ನ ಕಾಮಲಾಲಸೆಯ, ಮೋಸದ, ಮೋಹದ ಮಾತುಗಳೇ ಅಲ್ಲವೆ, ರಂಗನಾಥನ್‌ನ ಸವಿನುಡಿ, ಸಹಾನುಭೂತಿ ಎಂದರೆ ? ಆತನ ಸವಿನುಡಿ-ಸಹಾನುಭೂತಿಗಳ ಬೆಲೆ ಇಷ್ಟು ಮಾತ್ರವೇ ಇದ್ದರೆ—ಅಲ್ಲದೇನು ?—ತಾನು ಮತ್ತೆ ಮೋಸಹೋದ ಹಾಗಾಯಿತು. ಒಂದು ಕಾರಣಕ್ಕಾಗಿ ಆನಂದದಿಂದ ವಂಚಿತಳಾದ ತಾನು ಬೇರೆಯಾದ ಪರಿಸ್ಥಿತಿಯಲ್ಲಿ ಬೇರೆ ಕಾರಣಗಳಿಗಾಗಿ ರಂಗನಾಥನ್‌ನಿಂದ

ವಂಚಿತಳೇ ಆದಹಾಗಾಯಿತು. ಹೆಣ್ಣನ್ನು ಮೋಸಗೊಳಿಸುವುದು ಗಂಡಿನ ಸ್ವಭಾವವೆ? ರಂಗನಾಥನ್ ದೂರದೂರ ಹೋಗುತ್ತಿದ್ದ ಹಾಗೆ ಕಂಡಿತು ತಾನು ಯಾರೊ, ರಂಗನಾಥನ್ ಯಾರೊ! ಕಾರಿನಲ್ಲಿ ಕುಳಿತಾಗ ಮೋಹಿನಿಗೆ ಇವೇ ಯೋಚನೆಗಳು ರಂಗನಾಥನ್‌ನಿಗೆ ಇದೆಲ್ಲವನ್ನು ಹೇಳಬಾರದೇಕೆ? ಹೇಳಿದರೆ ಏನು ಪ್ರಯೋಜನ? ಹೇಳದೆಯೆ ಇದು ಆತನಿಗೆ ತಿಳಿಯಬೇಕಿತ್ತು. ಆತನ ಸೌಹಾರ್ದ ನಿಜವಾದ ಸೌಹಾರ್ದವಾಗಿದ್ದರೆ ತಾನು ಬಾಯಿಂದ ಹೇಳಬೇಕಾದ ಅಗತ್ಯವಿರುತ್ತಿರಲಿಲ್ಲ ಇಲ್ಲದ ಸೌಹಾರ್ದವನ್ನು ಬಾಯಿಮಾತಿನಿಂದ ಬೆಳೆಯಿಸ ಬಹುದೆ? ಹೀಗೆಂದು ಸುಮ್ಮನಾಗಿಯೇ ಉಳಿದಳು ಕಾರು ವೇಗವಾಗಿ ಘೋಡ್‌ಬಂದರ್ ರೋಡ್‌ನ ಗುಂಟ ಸಾಗಿತ್ತು ಬಾಂದ್ರಾ, ಸಾಂತಾಕ್ರೂಜ್, ವಿಲೆಪಾರ್ಲೆ ಒಂದರ ಹಿಂದೊಂದಾಗಿ ದೂರ ಸರಿಯುತ್ತಿದ್ದವು.

ರಂಗನಾಥನ್‌ನ ಮನಸ್ಸನ್ನು ಈ ತೆರದ ಯಾವ ಯೋಚನೆಗಳೂ ತಗಲು ವುದು ಸಾಧ್ಯವಿರಲಿಲ್ಲ ಆತನನ್ನು ಕಾಡುತ್ತಿದ್ದ ವಿಚಾರವೆಂದರೆ ಈ ತರಲೆ ಯಿಂದ ತಾನು ಹೇಗೆ ಪಾರಾಗಬೇಕು ಎಂಬುದೊಂದೇ ವೈಮೇಲೆ ಬಂದ ಪ್ರಸಂಗವನ್ನು, ಅದರಿಂದಾಗಿ ಕೋರ್ಟಿನಲ್ಲಿ ಎದುರಿಸಬೇಕಾಗಬಹುದಾದ ಪರೀಕ್ಷೆಯನ್ನು ನೆನೆದಾಗಲೆಲ್ಲ ಮೋಹಿನಿಯೊಡನೆ ತಾನಾಡಿದ ಸರಸಗಳೆಲ್ಲವೂ ವಿರಸವಾಗಿ, ವಿಷಪ್ರಾಯವಾಗಿ ಕಾಣುತ್ತಿದ್ದವು. ಆದರೆ ಸದ್ಯಕ್ಕೆ ಆತ ವಸಂತ ನನ್ನು ಹೇಗೆ ಮಾತನಾಡಿಸುವುದು, ಆತ ತನ್ನಲ್ಲಿ ಆಸ್ಥೆವಹಿಸಿ ತನ್ನ ಪರವಾಗಿ ಪ್ರಯತ್ನಮಾಡುವಂತೆ ಹೇಗೆ ಮನವೊಲಿಸುವುದು, ಯಾವ ಆಮಿಷಗಳನ್ನು ಒಡ್ಡುವುದು, ಇತ್ಯಾದಿಯಾಗಿ ಯೋಚಿಸುತ್ತಿದ್ದನಾದ್ದರಿಂದ ನೀರವತೆಯ, ನಿರು ತ್ಸಾಹದ ಮೂರ್ತಿಯಾಗಿ, ಕಳೆಗುಂದಿದ ಮುಖವನ್ನು ಹೇಗೋ ಹೊತ್ತು ಕೊಂಡು ಬದಿಯಲ್ಲಿಯೇ ಕುಳಿತಿದ್ದ ಮೋಹಿನಿಯ ಕಡೆಗಾಗಲಿ, ಆಕೆ ಯೋಚಿಸುತ್ತಿದ್ದ ದಾರಿಯಲ್ಲಾಗಲಿ ಆತನ ಮನಸ್ಸು ಹರಿಯಲೇ ಇಲ್ಲ ಮೋಹಿನಿ ಮೊದಲಿಗೆಯೆ ಹೇಳಿಬಿಟ್ಟಿದ್ದಳು ವಸಂತನ ಜೊತೆಯಲ್ಲಿ ಮಾತನಾಡ ತಕ್ಕದ್ದು ಆತನೇ ಎಂದು. ತನ್ನ ಪಾಡಿಗೆ ತನ್ನನ್ನು ಬಿಡಲು ರಂಗನಾಥನ್ ಮನಸ್ಸು ಮಾಡಿದ್ದರೆ ಆತನ ಸಮಸ್ಯೆಯನ್ನು ತನಗೆ ತಿಳಿದ ಹಾಗೆ ಆತನೇ ಬಗೆಹರಿಯಿಸಿಕೊಳ್ಳಲಿ ಎನ್ನುವ ಭಾವವೇ ಮೋಹಿನಿಯನ್ನು ಹಾಗೆ ಮಾತ ನಾಡುವಂತೆ ಮಾಡಿತ್ತು.

ರಂಗನಾಥನ್ ಮೋಹಿನಿಯರು ವಸಂತನ ಮನೆಯನ್ನು ತಲುಪಿದಾಗ ಸಂಜೆಯ ಎಂಟು ಗಂಟೆಯಾಗುವುದರಲ್ಲಿತ್ತು. ವಸಂತ ಆಫೀಸಿನಿಂದ ಅದೇ ಬಂದು ಟೀ ಕುಡಿದು ಕಾಟಿನ ಮೇಲೆ ವಿಶ್ರಮಿಸಲೆಂದು ಮಲಗಿಕೊಂಡಿದ್ದ. ಶಕುಂತಲೆ ಹತ್ತಿರದಲ್ಲಿಯೇ ಕುಳಿತು ಅದು ಇದು ಏನನ್ನೋ ಮಾತನಾಡುತ್ತಿದ್ದಳು. ಇದು ಅವರಿಗೆ ನಿತ್ಯದ ಕಾರ್ಯಕ್ರಮ. ಆಫೀಸಿನಿಂದ ಬರುವುದೇ ವಸಂತನಿಗೆ ತಡವಾಗುತ್ತಿದ್ದರಿಂದ ಹೊರಗೆ ತಿರುಗಾಡಹೋಗುವುದು ಶಕುಂತಲೆಗೆ ಬೇಕೆನಿಸುತ್ತಿದ್ದರೂ ವಸಂತನಿಗೆ ಬೇಸರವೆನಿಸುತ್ತಿತ್ತು. ಅನಿರೀಕ್ಷಿತವಾಗಿ ಬಾಗಿಲು ಸದ್ದಾದೊಡನೆ ಶಕುಂತಲೆಯೆ ಬಂದು ಬಾಗಿಲು ತೆರೆದಳು. ಬಾಗಿಲೆದುರು ಮೋಹಿನಿಯನ್ನು—ಅದೂ ಅಷ್ಟು ಅನಿರೀಕ್ಷಿತವಾಗಿ, ಅಂಥ ವೇಳೆಯಲ್ಲಿ, ಅಷ್ಟು ನಿರಾಡಂಬರವಾಗಿ ಬಂದುದನ್ನು ನೋಡಿ—ಶಕುಂತಲೆ ಆಶ್ಚರಿಪಡುತ್ತಿರುವಾಗಲೇ "ಬನ್ನಿ, ಬನ್ನಿ, ಇದೇನು ಹೀಗೆ—" ಎಂದಳು. ಹಜ್ಜೆ ತಿರುಗಿಸುತ್ತಿರುವಾಗಲೆ ಮೋಹಿನಿಯ ಹಿಂದಿನಿಂದ ಇನ್ನಾರೋ ಬಂದುದನ್ನು ತಿಳಿದು ಮಾತನ್ನು ಅರ್ಧಕ್ಕೆಯೆ ತಡೆದಳು. "ಜೊತೆಯಲ್ಲಿ ಇನ್ನಾರೊ ಬಂದ ಹಾಗಿದೆ?" ಎಂದು ಮೆಲುದನಿಯಲ್ಲಿ ಮೋಹಿನಿಯನ್ನು ಕೇಳಿದ್ದಕ್ಕೆ ಆಕೆ ಕಣ್ಸನ್ನೆಯಿಂದಲೆ "ಹೌದು" ಎಂದಳು. ಶಕುಂತಲೆ ಒಳಗಡೆ ಹೋಗಿ ವಸಂತನಿಗೆ ತಿಳಿಸಿದಳು. ಆತ ಹೊರಗೆ ಬಂದಾಗ ಮೋಹಿನಿ ಆಗಲೆ ಒಂದು ಕುರ್ಚಿಯಲ್ಲಿ ಕುಸಿದಿದ್ದಳು. ರಂಗನಾಥನ್ ನಿಂತೇ ಇದ್ದ.

"ಓಹೋ—ಬನ್ನಿ, ಬನ್ನಿ—ಇದೇನು ಹೀಗೆ ಅಕಸ್ಮಾತ್ತಾಗಿ—"

ಎಂದು ಇನ್ನೂ ಏನನ್ನೋ ಅನ್ನಬೇಕೆಂದಿದ್ದ ವಸಂತ, ಮೋಹಿನಿಯ ಮುಖವನ್ನು ನೋಡಿ ತಡೆದ. ಆಕೆ ಹೀಗೆ ಅಕಸ್ಮಾತ್ತಾಗಿ ಬಂದದ್ದು, ಬಂದವಳು ನೇರವಾಗಿ ಒಳಗಡೆ ಬಂದು ಮಾತನಾಡದೆ ನೇರವಾಗಿ ಕುರ್ಚಿಯಲ್ಲಿ ಕುಸಿದದ್ದು, ತನ್ನ ಮಾತಿಗೆ ಯಾವ ಬಗೆಯ ಪ್ರತಿಕ್ರಿಯೆಯನ್ನು ತೋರದಿದ್ದದ್ದು ಆತನಿಗೆ ಆಶ್ಚರ್ಯವನ್ನಲ್ಲದೆ ಆತಂಕವನ್ನು ಉಂಟುಮಾಡಿದ್ದವು. ರಂಗನಾಥನ್ ಅಲ್ಲಿ ಇರದಿದ್ದರೆ ಆಕೆಯನ್ನು ಸಲಿಗೆಯಿಂದ ಮಾತನಾಡಿಸಬಹುದಿತ್ತು. ಆತನಿಂದಾಗಿ ಏನು ನಡೆದರೂ ಔಪಚಾರಿಕವಾಗಿಯೇ ನಡೆಯಬೇಕಾದ್ದರಿಂದ ಉಪಚಾರಕ್ಕೆ ತಕ್ಕಂತೆ ಮೊದಲು ರಂಗನಾಥನ್ ಕುಳಿತುಕೊಳ್ಳುವಂತೆ ಹೇಳಿ ಅವರಿಬ್ಬರಿಗೆ ಇದಿರಾಗಿ ತಾನೂ ಒಂದು ಕುರ್ಚಿಯನ್ನು ಆಶ್ರಯಿಸಿದ.

ಮೋಹಿನಿ ಮಾತನಾಡಬಹುದಾಗಿ ಕಾಣಲಿಲ್ಲ. ಮಾತನ್ನು ಹೇಗೆ ಮೊದಲುಮಾಡಬೇಕೆಂಬುದು ರಂಗನಾಥನ್‌ನಿಗೆ ಬಗೆಹರಿಯಲಿಲ್ಲ ಇದನ್ನು ತಿಳಿದೇ ವಸಂತ ಕೇಳಿದ—ಏನಾದರೂ ಮಾತು ಎಂದು.

"ಶಾಕುಂತಲದ ಉದ್ಘಾಟನದ ದಿನ ಅಲ್ಲವೆ ನಾವು ಹಿಂದೆ ಭೆಟ್ಟಿಯಾದದ್ದು ?—"

"ಹೌದು ನೀವೂ ಆಮೇಲೆ ಮತ್ತೆ ಬರಲೇ ಇಲ್ಲವಲ್ಲ—ಬರುತ್ತೇವೆ ಎಂದಿದ್ದಿರಿ."

"ಎಲ್ಲಾಗುತ್ತದೆ, ಹೇಳಿ—ಆಫೀಸ್ ಕೆಲಸದಲ್ಲಿ. ಇದ್ದಬಿದ್ದ ಒಂದು ಭಾನುವಾರ ಹಾಗೂ ಹೀಗೂ ಕಳೆದುಹೋಗುತ್ತದೆ. ಹುಂ—ಎಲ್ಲಿಗೆ ಬಂದಿತು ನಿಮ್ಮ ಹೊಸ ಪಿಕ್ಚರ್ ?"

"ನಡೆದಿದೆ—ಮುಗಿಯುಬೇಕಾಗಿತ್ತು ಇಷ್ಟರಲ್ಲಿಯೆ ಆದರೆ—"

"ಸಾಮಾಜಿಕ—ಅಲ್ಲವೆ ?"

"ಹುಂ. ಸೂತ್ರದ ಬೊಂಬೆ !"

"ಹೌದೆ ? ಯಾವಾಗ ರಿಲೀಜ್ ?"

"ನೋಡಬೇಕು ಮುಂದಿನ ತಿಂಗಳು ಆಗಬಹುದು—"

ಈಗ ತನ್ನ ಮೇಲೆ ಬಂದ ಪ್ರಸಂಗದಿಂದಾಗಿ ಚಿತ್ರದ ಕೆಲಸಕ್ಕೆ ತಡೆಯಾಗುವುದು ಖಂಡಿತವಾದ್ದರಿಂದ ತಾನು ಆಡಬೇಕಾದ ಮಾತಿಗೆ ಅವಕಾಶ ಮೊದಗಿತ್ತೆಂಬುದನ್ನು ರಂಗನಾಥನ್ ತಿಳಿದನಾದರೂ ಕೂಡಲೆ ವಿಷಯವನ್ನೆತ್ತುವುದು ಅವನಿಂದಾಗಲಿಲ್ಲ. ವಸಂತನಿಗಾದರೂ ಮಾತು ಹೇಗೆ ಮುಂದುವರಿಸುವುದೆಂಬುದು ತಿಳಿಯದೆ ಮೋಹಿನಿಯನ್ನುದ್ದೇಶಿಸಿ ಕೇಳಿದ, ತಾನು ಇದುವರೆಗೆ ಆಕೆಯನ್ನು ಮಾತನಾಡಿಸಿರಲಿಲ್ಲವೆಂಬುದನ್ನು ನೆನೆದು

"ಅದೇನು, ಬಹಳ ಮೆತ್ತಗಾಗಿದ್ದ ಹಾಗಿದೆಯಲ್ಲ ? ಮೈಯಲ್ಲಿ ಸ್ವಸ್ಥವಿಲ್ಲವೆ ?"

"ಏನಿಲ್ಲ—ಏನೋ ಸುಮ್ಮನೆ—"

ಮೋಹಿನಿ ಮುಂದೆ ಮಾತನಾಡಲಿಲ್ಲ. ಏನಾದರೂ ವಿಶೇಷ ಸಂದರ್ಭವಿದ್ದಿರಬೇಕೆಂದು ವಸಂತ ಆಗಲೆ ಗ್ರಹಿಸಿದ್ದ. ಅದು ಆಗಲೆ ಆನಂದ ಹೂಡಿದ್ದನೆಂದು ಹೇಳಿದ ಮೊಕದ್ದಮೆಗೆ ಸಂಬಂಧಿಸಿರಬೇಕೆಂಬುದೂ ಆತನ ಮನಸ್ಸಿನೆ

ದುರು ಸುಳಿಯದಿರಲಿಲ್ಲ. ತಾನು ಎಣಿಸಿದಂತೆ ಮುಂದೆ ಅದೇ ವಿಷಯ ಹೊರ ಟರೆ? ವಿಷಯ ಅದೇ ಆದರೂ ಇವರು ತನ್ನಿಂದ ಏನು ಅಪೇಕ್ಷಿಸಬಹುದು? ಯಾವುದನ್ನೂ ಊಹಿಸುವುದು ಸಾಧ್ಯವಾಗಿ ಕಾಣಲಿಲ್ಲ. ವಿಷಯುವನ್ನು ಪ್ರಸ್ತಾ ಪಿಸದೆ ರಂಗನಾಥನ್‌ನಿಗೆ ಬೇರೆ ಮಾರ್ಗ ಉಳಿಯದೆ ಉಸಿರಿದ.

" ಅಂದರೆ—ಹೀಗೆ—ನಾವೀಗ ಬಂದದ್ದು ಒಂದು ವಿಷಯ ಮಾತನಾಡ ಬೇಕು ಎಂದು—"

" ಆಗಬಹುದಲ್ಲ ಏನು ?—"

ರಂಗನಾಥನ್ ಮೋಹಿನಿಯನ್ನು ನೋಡಿದ. ಆಕೆಯೂ ಆತನನ್ನು ನೋಡಿದಳು ನೋಡಿದವಳೇ ಎದ್ದು,

" ನಾನು ಒಳಗಡೆ ಹೋಗಿ ಬರುತ್ತೇನೆ—" ಎಂದು ಹೊರಟುಹೋದಳು.

ವಸಂತನಿಗೆ ಆಕೆಯ ನಡೆ ಆಶ್ಚರ್ಯವೆನಿಸಿತು. ರಂಗನಾಥನ್‌ನಿಗೆ ಆಕೆ ಹಾಗೆ ಎದ್ದುಹೋದದ್ದು ಅನಿರೀಕ್ಷಿತವೆನಿಸದಿದ್ದರೂ ಸಮ್ಮತವಾಗಲಿಲ್ಲ. ಆದರೆ ಏನೂ ಮಾಡಲಿಕ್ಕಿರಲಿಲ್ಲ ಮರುಕ್ಷಣದಲ್ಲಿ ಆಕೆ ಹೋದದ್ದು ಒಳ್ಳೆಯದೇ ಆಯಿತು, ಸ್ಪಷ್ಟವಾಗಿ ಮಾತನಾಡಬಹುದೆಂದೆನಿಸಿ ಮೊದಲುಮಾಡಿದ

" ವಿಷಯ ಅಂದರೆ—ಈಕೆಯ ಗಂಡ ಆನಂದರಾಯ—"

" ಏನಾಯಿತು ? " ಎಂದು ಅಜ್ಞಾನ ನಟಿಸಿದ ವಸಂತ—ವಿಷಯ ತಿಳಿದರೂ.

" ವಿವಾಹವಿಚ್ಛೇದಕ್ಕಾಗಿ ಮೊಕದ್ದಮೆ ಹೂಡಿದ್ದಾನೆ."

" ಹೌದೆ ? "

" ಇಂದೇ ಸಮನ್ಸ್ ಬಂದಿತ್ತು—"

" ಅದಕ್ಕೇನೆನ್ನುತ್ತಾಳೆ ? "

" ಈಕೆ ಏನೆನ್ನುವುದು ? ಏನೂ ಅನ್ನುವುದಿಲ್ಲ ಆದರೆ ನಾನು ಮಾತ್ರ ತೊಂದರೆಯಲ್ಲಿ ಸಿಕ್ಕಿದ್ದೇನೆ."

" ನಿಮ್ಮದೇನು ಸಂಬಂಧ ? " ಎಂದ ವಸಂತ. ಮತ್ತೆ ಅದೇ ನಟನೆ

" ಅದೇ, ನಾನು ಕೇಳುವುದಾದರೂ! ನನ್ನ ಹೆಸರನ್ನು ಸೇರಿಸಿ ನನ್ನನ್ನು ಕೋ-ರೆಸ್ಪಾಂಡೆಂಟನ್ನಾಗಿ ಮಾಡಿದ್ದಾರೆ. ನಮ್ಮ ಕಂಪನಿಯಲ್ಲಿ ಈಕೆಯನ್ನು ಕೆಲಸಕ್ಕೆ ಸೇರಿಸಿಕೊಂಡದ್ದು ತಪ್ಪೇ ? "

ವಸಂತ ಏನು ಉತ್ತರ ಹೇಳಬೇಕು ? ಎಲ್ಲ ವಿಷಯವನ್ನೂ ಆತ ಆನಂದನಿಂದ ತಿಳಿದವನಾಗಿದ್ದ. ಆದರೆ ರಂಗನಾಥನ್ ಹೀಗೆ ತನ್ನೆಡೆಗೆ ಬರಬಹುದೆಂದು ಎಣಿಸಿರಲಿಲ್ಲ. ಅಲ್ಲದೆ ಹೀಗೆ ಬಂದಮೇಲೂ ತನ್ನಿಂದ ಆತ ಏನನ್ನು ಅಪೇಕ್ಷಿಸುತ್ತಿದ್ದನೆಂಬುದು ತಿಳಿಯದಾಗಿ ಸುಮ್ಮನೆ ಉಳಿದ. ಆತನ ಕುತೂಹಲಕ್ಕೆ ರಂಗನಾಥನ್‌ನ ಆತುರದ ಬೇಡಿಕೆಯೆ ಉತ್ತರವಾಯಿತು.

" ಈಗ ನಿಮ್ಮಿಂದ ಒಂದು ಸಹಾಯ ನನಗಾಗಬೇಕು " ಎಂದ ರಂಗನಾಥನ್.

" ನನ್ನಿಂದ ಸಹಾಯವೆ ? ನಾನೇನು ಮಾಡಬಲ್ಲೆ ? "

"ಏನಾದರೂ ಮಾಡಿ ಇದರಿಂದ ನನ್ನ ಹೆಸರನ್ನು ಕಿತ್ತುಕೊಳ್ಳುವ ಹಾಗೆ ಸಹಾಯ ಮಾಡಬೇಕು ನೀವು."

" ಅದನ್ನು ನಾನು ಹೇಗೆ ಮಾಡಬಹುದು ? "

" ಅಂದರೆ—ಅಂದರೆ—ನೀವು ಆನಂದರಾಯರಿಗೆ ಒಂದು ಮಾತು ಹೇಳಿದರೆ—"

" ಅಲ್ಲ, ನಾನು ಹೇಳಿದರೆ—ಏನಾಗಬೇಕು ? ಕೇಳುತ್ತಾರೆಯೆ ? "

" ನೀವೇ ನೋಡಿ. ಎಂಥ ಅನ್ಯಾಯ. ಕಂಪನಿಗೆ ಡೈರೆಕ್ಟರ್ ಅಂದ ಮಾತ್ರಕ್ಕೆ ಇಂಥಾದ್ದರಲ್ಲೆಲ್ಲ ಸಿಕ್ಕಿಬಿಟ್ಟರೆ—ಮುಂದೆ ಏನು ? ನನ್ನ ಹೆಸರು ಹಾಳು, ಕಂಪನಿಗೆ ಕೂಡ—"

" ಹೌದು. ಆದರೆ—"

" ಆದರೆ ಎಂದರೆ ಏನು ಹೇಳಬಹುದು ? ನೀವು ಏನು ಹೇಳಿದರೂ ಸರಿ. ನೀವು ಹೇಳಿದ ಹಾಗೆ ಮಾಡುತ್ತೇನೆ. ನೀವು ಮನಸ್ಸುಮಾಡಿ ಅವರನ್ನು ಒಪ್ಪಿಸಲೇ ಬೇಕು."

" ನಾನು ಮನಸ್ಸು ಮಾಡಬಹುದು. ಆದರೆ ಅವರು ಒಪ್ಪುವುದು—"

ತಾನು ಮನಸ್ಸು ಮಾಡಬಹುದು ಎಂಬ ಮಾತು ವಸಂತನ ಮಟ್ಟಿಗೆ ನಿಜವಾದ ಮಾತೇ ಇದ್ದಿತು. ಆನಂದನಿಗೆ ಲಾಯರ್ ರಾಮರಾಯನ ಪರಿಚಯ ಮಾಡಿಕೊಡುವ ಮೊದಲಿನಿಂದ—ಆಮೇಲೆ ಕೂಡ—ಈ ವಿಧದಲ್ಲಿ ಕೋರ್ಟಿನ ವರೆಗೆ ಹೋಗುವುದನ್ನು ತಪ್ಪಿಸಲು ಹತ್ತಾರು ರೀತಿಯಲ್ಲಿ ಪ್ರಯತ್ನಿಸಿದ್ದ. ಆದರೆ ಆನಂದ ಹಟವನ್ನೇ ಹಿಡಿದಿದ್ದ. ಅಷ್ಟು ಹಟದಿಂದ ಸಾಗಿದವ

ನನ್ನು ಮನವೊಲಿಸುವುದು ಇನ್ನುಮೇಲಂತೂ ಸಾಧ್ಯವಾಗಿ ಕಾಣಿಸಲಿಲ್ಲ, ವಸಂತನಿಗೆ ಅಲ್ಲದೆ ಮೋಹಿನಿ ರಂಗನಾಥನ್ ಅವರ ಸಂಬಂಧಗಳ ಮೇಲೆ —ಮೋಹಿನಿಯ ವಿವಾಹಬಾಹಿರ ನಡೆಯ ಮೇಲೆಯೆ—ಆನಂದನ ಕೇಸು ನಡೆಯಬೇಕಾಗಿದ್ದುದನ್ನು ವಸಂತ ತಿಳಿದಿದ್ದ ಆದ್ದರಿಂದಲೆ ರಂಗನಾಥನ್‌ನಿಗೆ ಯಾವ ಬಗೆಯಲ್ಲಿಯೂ ಆನಂದನಿಂದ ಸಹಾನುಭೂತಿ ಸಿಗುವುದು ಸಾಧ್ಯವಿರ ಲಿಲ್ಲವೆಂಬುದನ್ನು ತಿಳಿದೇ ವಸಂತ ಹಾಗೆ ಹೇಳಿದ್ದ. ಆದರೆ ರಂಗನಾಥನ್‌ನಿಗೆ ಈ ಒಳತೊಡಕು ಹೇಗೆ ತಿಳಿಯಬೇಕು ? ಹತ್ತಾರು ವಿಧದಲ್ಲಿ ವಸಂತನ ಸಹಾಯ ವನ್ನು ಬೇಡಿಕೊಂಡ ಆದರೆ ಆತನ ಆತುರಕಾತರಗಳನ್ನು ತಿಳಿದು ವಸಂತನೆಂದ :

" ನೀವು ಹೇಳುವುದುದೇನೊ ಸರಿಯೆ ಆದರೆ ಆತ ಇದಕ್ಕೆ ಒಪ್ಪಲಾರ ನೆಂದೇ ಕಾಣುತ್ತದೆ ನನಗಂತೂ "

" ಯಾಕೆ ? "

" ನೀವು ತಪ್ಪು ತಿಳಿಯದಿದ್ದರೆ ಹೇಳುತ್ತೇನೆ ಕ್ಷಮಿಸಿ. ನಿಜವೊ, ಅಲ್ಲವೊ. ಏನಿದ್ದರೂ ನಿಮ್ಮನ್ನು ಅನುಲಕ್ಷಿಸಿಯೇ ಈ ಕೇಸನ್ನು ಆತ ಮಾಡಿ ದ್ದಾನೆಂದಮೇಲೆ—"

" ಅಲ್ಲ, ವಿಚ್ಛೇದ ಬೇಕಾಗಿದ್ದರೆ ಆಕೆಯ ವಿರುದ್ಧ ಮಾತ್ರ ಕೇಸು ಮಾಡ ಬಹುದಲ್ಲ ? "

" ಹೌದು. ಆದರೆ ಅದಕ್ಕೆ ಕಾರಣ ತೋರಿಸಬೇಡವೆ ? ಇಲ್ಲದಿದ್ದರೆ ಆತ ಕೇಸನ್ನು ಮಾಡುವ ಹಾಗಿಲ್ಲ."

" ಆ ನಿಮಿತ್ತಕ್ಕಾಗಿ ನಾನು ನಡುವೆ ಸಿಕ್ಕು ಸಾಯಬೇಕೆ ? "

" ಅದೇ ನಾನು ಹೇಳುವುದು. ನಿಮ್ಮ ವಿಷಯದಲ್ಲಿ ಆತ ಯಾವ ಗ್ರಹಿಕೆ ಇಟ್ಟುಕೊಂಡು—"

" ಯಾವುದೇನು ? ಸ್ಪಷ್ಟವೇ ಇದೆ—ನನ್ನನ್ನು ಕೋ-ರೆಸ್ಪಾಂಡೆಂಟನ್ನಾಗಿ ಮಾಡಿದ್ದಾರೆಂದಮೇಲೆ "

" ಹೌದು, ಆತ ಎಲ್ಲವನ್ನು ಯೋಚಿಸಿಕೊಂಡೇ ಮಾಡಿರಬೇಕು."

ವಸಂತನ ಮಾತಿನಲ್ಲಿಯ ಸೂಕ್ಷ್ಮ ವ್ಯಂಗ್ಯ ರಂಗನಾಥನ್‌ನನ್ನು ಮುಟ್ಟ ದಿರಲಿಲ್ಲ. ಕೊನೆಗೆ ನಿರಾಶೆಯಿಂದೆಂಬಂತೆ ಹೇಳಿದ :

" ನನಗಂತೂ ಬೇರೆ ದಾರಿ ಕಾಣುವುದೇ ಇಲ್ಲ. ತಮ್ಮಿಬ್ಬರ ಜೊತೆಯಲ್ಲಿ

ನನ್ನನ್ನೂ ಅವಮಾನ ಮಾಡಬೇಕೆಂದು ಅವರು ಹಟವನ್ನೇ ಹಿಡಿದರೆ ಯಾರೇನು ಮಾಡುವುದಕ್ಕಾಗುತ್ತದೆ ? ಆದರೂ ಏನೋ ನೀವು ಮನವೊಲಿಸಿದರೆ ಏನಾದರೂ ಸಾಧ್ಯ ಎನಿಸಿತು. ಅದಕ್ಕೆಂದು ಬಂದೆ."

" ಈಕೆ ಏನೆನ್ನುತ್ತಾಳೆ ? "

" ಈಗ ನೀವೇ ನೋಡಿದಿರಲ್ಲ. ಈ ಸಮಾಚಾರ ತಿಳಿದಾಗಿನಿಂದ ಹೀಗೆಯೆ. ಏನಾದದ್ದು ಆಗಲಿ, ಏನು ಮಾಡುವುದು ? ಎಂದೇ ಹೇಳುತ್ತಾಳೆ ಆಕೆಯ ಮಟ್ಟಿಗೆ ಅದು ಸರಿಯೆ ಆತನಿಗೆ ವಿಚ್ಛೇದ ಬೇಕು ಎಂದಮೇಲೆ ಈಕೆ ಎದುರಿಸಲೇಬೇಕಲ್ಲವೆ ? ಆದರೆ ನಾನು—"

" ನೀವಾಗಿಯೇ ಅವರನ್ನು ಮಾತನಾಡಿಸಿದರ—" ಎಂದು ವಸಂತ ಕಾಲ್ತೆಗೆಯಬೇಕೆಂದ, ಬೇರೆ ದಾರಿ ಹಿಡಿದು

" ಸರಿಯಾಯಿತು ಯಾರೊ ಏನೊ. ಅವರನ್ನು ನಾನು ನೋಡಿಯೂ ಕೂಡ ಇಲ್ಲ ಅಲ್ಲದೆ—"

" ಹಾಗಲ್ಲ, ಪ್ರಯತ್ನ ಮಾಡುವುದೇ ಎಂದಮೇಲೆ ನೇರವಾಗಿಯೇ ಯಾಕೆ ಅವರನ್ನು ಕಂಡು ಮಾತನಾಡಿ ಇದ್ದ ವಿಷಯವನ್ನೆಲ್ಲ ವಿವರವಾಗಿ ತಿಳಿಸಿ ನೋಡಬಾರದು ? "

ತಾನು ಪಾರಾಗಬಹುದಾದರೆ ಯಾವ ಮಾರ್ಗವೂ ಸರಿ ಆನಂದನನ್ನು ತಾನಾಗಿಯೇ ಕಂಡು ಮಾತನಾಡುವುದು ಅವಮಾನವೇನೊ ಹೌದು ಆದರೆ ವಸಂತ ಇಷ್ಟು ಖಂಡಿತವಾಗಿ ತನ್ನ ಅಭಿಪ್ರಾಯವನ್ನು ಹೇಳುತ್ತಿದ್ದಾಗ ಆತನಿಗೆ ಬೇರೆ ಮಾರ್ಗ ಕಾಣದೆ ಆತನ ಸೂಚನೆಯನ್ನಾದರೂ ಯಾಕೆ ಒಪ್ಪಬಾರದೆಂದು ಹೇಳಿದ :

" ಹಾಗಿದ್ದರೆ ನೀವು ದಯವಿಟ್ಟು ಪೀಠಿಕೆಯಾಗಿ ಅವರೊಡನೆ ನಾಳೆ ಮಾತನಾಡಿ. ನನ್ನನ್ನು ಕಾಣಲು ಅವರು ಒಪ್ಪಿದರೆ—ಅಥವಾ ಏನಾದರೂ ಆಸೆ ಕಂಡರೆ ನಾನೂ ಬಂದುಬಿಡುವೆ "

ಇಷ್ಟಕ್ಕೆ ವಸಂತನಿಗೆ ಒಪ್ಪಲೇಬೇಕಾಯಿತು—ರಂಗನಾಥನ್ ವಿಷಯ ದಲ್ಲಿ ಆತನಿಗೆ ಯಾವ ಸಹಾನುಭೂತಿಯೂ ಇರದಿದ್ದರೂ ಕೂಡ. ಹಾಗೆಯೆ ಮಾಡಬಹುದೆಂದೂ, ಮುಂದೆ ಒಂದೆರಡು ದಿನಗಳಲ್ಲಿ ತಾನು ಆನಂದನನ್ನು ಕಂಡು ತಿಳಿಸುವುದಾಗಿಯೂ ಮಾತುಕೊಟ್ಟ.

ಒಳಗಡೆ ಮೋಹಿನಿ-ಶಕುಂತಲೆಯರ ಬಿಚ್ಚುಮನಸ್ಸಿನ ಮಾತುಕತೆ ನಡೆದೇ ಇತ್ತು ವ್ಯತ್ಯಾಸವಿಷ್ಟೇ—ಮೋಹಿನಿಗೆ ಮುಚ್ಚುಮರೆಯ ಪ್ರಶ್ನೆಯೆ ಇರಲಿಲ್ಲವಾದ್ದರಿಂದ ನಿರಾತಂಕವಾಗಿಯೇ ಮಾತನಾಡುತ್ತಿದ್ದಳು. ಶಕುಂತಲೆಯ ಬದುಕನ್ನು, ಆಕೆಯ ಸರಳ ಸುಂದರ ಜೀವನದ ಸೌಭಾಗ್ಯವನ್ನು ನೋಡಿ ಮೋಹಿನಿಯಲ್ಲಿ ಅಸೂಯೆ ಅತೃಪ್ತಿಗಳು ಮೂಡಿರದೆ ಮನೆಗೆ ಬಂದಾಗಿನ ಮನಸ್ಸಿನ ದುಗುಡ ಮಾಯವಾಗಿ ಆಕೆಯೊಡನೆ ಮುಕ್ತವಾಗಿ ಮಾತನಾಡಬೇಕೆನಿಸಿದ್ದನ್ನು ನೆನೆದಾಗ ಆಕೆಗೇ ಆಶ್ಚರ್ಯವೆನಿಸಿತ್ತು. ಆದರೆ ಮೋಹಿನಿಯನ್ನು ಬಾಗಿಲಲ್ಲಿ ಕಂಡಾಗ ಶಕುಂತಲೆಯ ಮನಸ್ಸಿನಲ್ಲಿ ಮಾತ್ರ ಯಾವುದೋ ಒಂದು ಅಸ್ಪಷ್ಟವಾದ ನೋವು ಮೂಡಿ ನಿಂತಿತ್ತು ತಾನು ಓದಿದ ಆಕೆಯ ಕಾಗದಗಳಲ್ಲಿಯ ಭಾವನೆಗಳಿಂದ ತನಗಾದ ಹಳೆಯ ಚಿಂತೆ ಎಲ್ಲಿಯೋ ಇಣಿಕಿ ನೋಡುತ್ತಿತ್ತು. ಆದರೆ ಆಕೆ ತನ್ನನ್ನು ಹಿರಿಯ ಅಕ್ಕನ ಅಕ್ಕರೆಯಿಂದ, ನಿರ್ಮತ್ಸರವಾದ ಒಲವಿನಿಂದ, ಮಾತನಾಡಿಸಿದಾಗ ಶಕುಂತಲೆಯ ಮನಸ್ಸನ್ನಾವರಿಸಿದ ಮೋಡ ಬಯಲಾಗಿತ್ತು. ಆಕೆಯ ಅಂದಿನ ಸ್ಥಿತಿಯನ್ನು ನೋಡಿಯಂತೂ ಶಕುಂತಲೆಯಲ್ಲಿ ನಿಸ್ಸೀಮ ಕನಿಕರ ಸೆಲೆಯೊಡೆದಿತ್ತು. ಪರಿಪರಿಯಾಗಿ ಮೋಹಿನಿ ಆದೇಕೆ ಹಾಗಿದ್ದಳು, ಯಾವ ತೊಂದರೆ, ಏನು ತೊಡಕು, ಎಂದು ಮುಂತಾಗಿ ಕೇಳಿ ತಿಳಿಯಬಯಸಿದ್ದರೂ ಮೋಹಿನಿ ತನ್ನನ್ನು ಎದುರಿಸಿದ ಪರಿಸ್ಥಿತಿಯ ವಿಷಯವಾಗಿ ಯಾವ ನೇರವಾದ ಮಾತನ್ನೂ ಹೇಳಿರಲಿಲ್ಲ, "ನಿಮಗೆ ಯಾವುದು ಗೊತ್ತಿಲ್ಲ ? ಏನೇನೋ ನಡೆದಿದೆ. ನಿಮಗೆ ಯಾಕೆ ಅದೆಲ್ಲ ?" ಎಂದು ಮಾತು ಮುಗಿಸಿದ್ದಳು ತನ್ನ ಕನಿಕರದ ಮನಃಸ್ಥಿತಿಯಲ್ಲಿ ಶಕುಂತಲೆಗಾದರೂ ಆಕೆಯನ್ನು ಹೆಚ್ಚಾಗಿ ಬಲವಂತಪಡಿಸುವ ಮನಸ್ಸಾಗಲಿಲ್ಲ.

ಸುಮಾರು ಮುಕ್ಕಾಲು ಗಂಟೆಯಾದನಂತರ ಹೊರಗಿನ ಕೋಣೆಯಿಂದ ಹೆಚ್ಚಾಗಿ ಮಾತು ಕೇಳಬರದ್ದರಿಂದ ಮೋಹಿನಿ ಎದ್ದು ಬಂದು ಕೇಳಿದಳು—ಯಾರನ್ನುದ್ದೇಶಿಸಿಯೊ ?

"ಮುಗಿಯಿತೆ ಮಾತು ?—"

"ಹುಂ—ಹಾಗಾದರೆ ಏನಾದಹಾಗಾಯಿತು ?" ಎಂದ ರಂಗನಾಥನ್ ವಸಂತನಿಗೆ.

"ಆದೇ ಹೇಳಿದೆನಲ್ಲ. ಇನ್ನು ಒಂದೆರಡು ದಿನದಲ್ಲಿ ತಿಳಿಸುವೆ"

" ನಾನೇ ಬಂದುಬಿಡುತ್ತೇನೆ, ಸಂಜೆ ಇದೇ ವೇಳೆಗೆ. ಆಗಬಹುದೆ? ಆದರೆ ನೀವು ಸಾಧ್ಯವಿದ್ದ ಎಲ್ಲ ಪ್ರಯತ್ನವನ್ನು ನನಗಾಗಿ ಮಾಡಲೇಬೇಕು."

ವಸಂತ ಮೋಹಿನಿಯ ಕಡೆಗೆ ತಿರುಗಿ ಕೇಳಿದ :

" ಒಳಗೆ ಹೋದವರು, ಒಳಗೆಯೆ ಅದೃಶ್ಯರಾಗಿಬಿಟ್ಟಿರಲ್ಲ ? "

" ಹೌದು, ಮತ್ತೇನು ಮಾಡುವುದು ? ಗಂಡಸರ ಜೊತೆಗೆ ಗಂಡಸರು— ಹೆಂಗಸರ ಜೊತೆಗೆ ಹೆಂಗಸರು ! "

" ಅಂತೂ ಗಂಡಸರು ಹೆಂಗಸರು ಒಬ್ಬರೊಬ್ಬರಿಗೆ ಬಹಿಷ್ಕಾರ ಹಾಕ ಬೇಕಾಯಿತು ! "

" ಒಬ್ಬರೊಬ್ಬರಿಗೆ ಅಲ್ಲ. ಹೆಂಗಸರೇ ಗಂಡಸರಿಗೆ ಹಾಕಬೇಕು ! "

" ಹೇಗಿದ್ದರೂ—ಪರಿಣಾಮ ಒಂದೇ—ಅಲ್ಲವೆ ? "

" ಒಂದೇ ಹೇಗಾದೀತು ? ಒಂದು ಒಪ್ಪಿಗೆಯ ಬಿಡುಗಡೆ, ಇನ್ನೊಂದು ಅಗತ್ಯದ ವಿಚ್ಛೇದ."

" ಆಯಿತು, ಆಯಿತು—ನಿಮ್ಮ ಮಾತು ಕೇಳಿದರೆ—"

" ಹೊರಡುವುದಲ್ಲವೆ ? " ಎಂದ ರಂಗನಾಥನ್.

" ನಿಮ್ಮ ಮಾತು ಮುಗಿದಿದ್ದರೆ—" ಎಂದು ಮೋಹಿನಿ.

ರಂಗನಾಥನ್‌ನಿಗೆ ಆ ಉತ್ತರ ರುಚಿಸಲಿಲ್ಲ ಆದರೆ ಆ ಮಾತು ಮೋಹಿನಿಯ ಮನಃಸ್ಥಿತಿಯ ವಾಸ್ತವ ಪ್ರತೀಕವಾಗಿತ್ತು. ರಂಗನಾಥನ್ ವಸಂತನನ್ನು, ಮೋಹಿನಿ ಶಕುಂತಲೆಯನ್ನು, ಬೀಳ್ಕೊಟ್ಟು ಹೊರಟರು. ವಸಂತ ಕಾರಿನವರೆಗೂ ಬಂದಿದ್ದ. ಕಾರು ಹೊರಟಮೇಲಾದರೂ ರಂಗನಾಥನ್ ಮಾತನಾಡಬಹುದೆನಿಸಿದ ಮೋಹಿನಿಗೆ ಆತನ ನೀರವತೆ ಅರ್ಥವಾಗದೆ ಕೇಳಿದಳು .

" ಏನಾಯಿತು ?—"

" ಏನಾಗುವುದು ? ಏನೂ ಆಗಲಿಲ್ಲ. ಆದರೆ ಅದರಿಂದ ನಿನಗೇನಾಗ ಬೇಕು ? "

" ಅದೇಕೆ ಹೀಗೆ ಮಾತನಾಡುತ್ತೀರಿ ? ನಾನಾದರೂ ಏನು ಮಾಡಲಿ ? ನಾನು ಅಲ್ಲಿ ಉಳಿದಿದ್ದರೆ ಮಾತನಾಡಲಿಕ್ಕೆ ನಿಮಗೂ ಸಂಕೋಚ ಎಂದು ನಾನು ಒಳಗೆ ಹೋದೆ."

" ಸರಿಯಾಯಿತಲ್ಲ—"

" ಏನೆಂದರು ಅವರು ? "

" ಯಾವ ಪ್ರಯೋಜನವೂ ಆಗುವ ಹಾಗೆ ಕಾಣುವುದಿಲ್ಲ. ಆದರೂ ಒಮ್ಮೆ ಮಾತನಾಡಿಸಿ ನೋಡುತ್ತೇನೆ, ಎಂದರು "

ಮೋಹಿನಿ ಸುಮ್ಮನಾದಳು ಇಷ್ಟನ್ನು ಆಕೆ ಮೊದಲೇ ತಿಳಿದವಳಾಗಿದ್ದಳು. ಸುಮ್ಮನೆ ರಂಗನಾಥನ್‌ನ ಸಮಾಧಾನಕ್ಕಾಗಿ ಬಂದಿದ್ದಳಷ್ಟೇ. ಆದರೆ ಬಂದದ್ದಕ್ಕೆ ಆಕೆಗೆ ಏನೋ ಒಂದು ಬಗೆಯ ಸಮಾಧಾನವೆನಿಸಿತ್ತು. ತನ್ನ ಪರಿಸ್ಥಿತಿಯಲ್ಲಿ ಯಾವ ಒಂದೂ ಅಂಶ ಬದಲಾಗಿರದಿದ್ದರೂ ಅದೇಕೋ ವಸಂತ ಶಕುಂತಲೆಯರನ್ನು ನೋಡಿದಾಗಿನಿಂದ ಒಂದು ಬಗೆಯ ಸಮಾಧಾನ ಆಕೆಯ ಮನಸ್ಸಿನಲ್ಲಿ ಮೂಡಿತ್ತು ರಂಗನಾಥನ್‌ನಿಗೆ ಮಾತ್ರ ಪೂರ್ತಿ ನಿರಾಶೆಯಾಗಿತ್ತು. ಆ ನಿರಾಶೆಯನ್ನು ಕಳೆಯಲೆಂದೇ ಮೋಹಿನಿ ಹೇಳಿದಳು :

" ಯಾಕೆ ಅಷ್ಟೊಂದು ನಿರಾಶೆಪಡುತ್ತೀರಿ ? ಏನಾಗಬೇಕಾಗಿದೆ ? "

" ಸರಿ, ಏನಾಗಬೇಕಾಗಿದೆ ! ಇನ್ನೇನಾಗಬೇಕು ? "

" ಹೀಗೆ ನೀವು ಧೈರ್ಯ ಬಿಟ್ಟು ಒದ್ದಾಡಿದರೆ ಏನು ಪ್ರಯೋಜನ ? "

" ಪ್ರಯೋಜನವಿಲ್ಲ, ಪುರುಷಾರ್ಥವಿಲ್ಲ "

" ಅದಕ್ಕೇ ನಾನು ಹೇಳುವುದು ಪ್ರಸಂಗ ಬಂದಿದೆ ಎಂದಮೇಲೆ ಧೈರ್ಯವಾಗಿ ಎದುರಿಸಬೇಕು. ಬರಬಾರದಾಗಿತ್ತು, ನಿಜ."

" ಆದರೆ ನಿನ್ನ ಧೈರ್ಯವೊಂದಿರಬೇಕಲ್ಲ ನನಗೆ—"

" ಯಾಕೆ ಇಂಥ ಮಾತು ? ಸುಮ್ಮನೆ ನನ್ನ ಮನಸ್ಸನ್ನು ನೋಯಿಸುತ್ತಿದ್ದೀರಿ "

ಕೊನೆಯ ಮಾತನ್ನು ಹೇಳುವಾಗ ಮೋಹಿನಿಯ ದನಿ ನಡುಗಿತು. ಇದುವರೆಗೆ ಮಧ್ಯಾಹ್ನದಿಂದ ತನ್ನ ವಿಷಯವಾಗಿಯೇ ಯೋಚಿಸುತ್ತಿದ್ದ ರಂಗನಾಥನ್‌ನ ಮನಸ್ಸು ತಟ್ಟನೆ ಮೋಹಿನಿಯ ಕಡೆಗೆ ಆ ಒಂದು ಮಾತಿನಿಂದ—ಆ ಮಾತನಾಡಿದ ಬಗೆಯಿಂದ—ಹರಿಯಿತು. ತನ್ನ ಮನಃಸ್ಥಿತಿಯಲ್ಲಿ ಮೋಹಿನಿಯ ಸ್ನೇಹ-ಸೌಹಾರ್ದ-ಸಾನ್ನಿಧ್ಯಗಳಿಂದಲೇ ಏನಾದರೂ ಸಮಾಧಾನ ದೊರೆಯಬೇಕು ಎಂದು ರಂಗನಾಥನ್‌ನ ಹೃದಯಕ್ಕೆ ಮನವರಿಕೆಯಾಯಿತೇನೊ ! ಅವನೆಂದ :

" ಹಾಗಾದರೆ ಏನು ಮಾಡು ಎನ್ನುತ್ತೀ ? "

" ಏನಾದದ್ದಾಗುತ್ತದೆ. ಸದ್ಯಕ್ಕಂತೂ ಅದರ ಯೋಚನೆಯನ್ನು ಬಿಟ್ಟು ಬಿಡಿ, ವಸಂತರಾಯರಿಂದ ಏನು ಸಮಾಚಾರ ಬರುತ್ತದೊ ನೋಡುವಾ. ಆಮೇಲೆ—"

" ಆಮೇಲೆ—"

ರಂಗನಾಥನ್‌ನ ಯೋಚನೆ ಮುಂದರಿಯಲಿಲ್ಲವೆಂದೇ ಅರ್ಥಕ್ಕೆ ತಡೆದ. ಕಾರು ಭರದಿಂದ ಸಾಗಿತ್ತು ಮಾಹಿಮ್ ಸೇತುವೆಯ ಮೇಲೆ ಹಾಯ್ದು ಹೋಗುತ್ತಿದ್ದಾಗ ದೂರದ ದೀಪಗಳ ಪ್ರತಿಬಿಂಬಗಳು ಅಲೆಅಲೆಯಾಗಿ ದಡಕ್ಕೆ ತಲುಪುತ್ತಿದ್ದ ಸಮುದ್ರದ ನೀರಗುಂಟ ತೇಲಿಬರುತ್ತಿದ್ದ ಹಾಗೆ ಕಾಣುತ್ತಿದ್ದವು. ಆದರೆ ಅವರಿಬ್ಬರ ಲಕ್ಷ್ಯವೂ ಅದರ ಕಡೆಗಿರಲಿಲ್ಲ ಮುಂದೆ ಹತ್ತು ನಿಮಿಷಗಳಲ್ಲಿ ಕಾರು 'ಭಾಮಿನೀ ವಿಲಾಸ'ದೆದುರು ನಿಂತಾಗ ಮೋಹಿನಿ ಕೇಳಿದಳು.

" ಇಳಿಯುವುದಿಲ್ಲವೆ ? "

" ಒಂಬತ್ತೂವರೆಯಾಗಿ ಹೋಗಿದೆ. ಸುಮ್ಮನೆ ತಡವಾಗಿಬಿಡುತ್ತದೆ."

" ಆದರಾಯಿತು. ಅಲ್ಲಿ ಹೋಗಿ ತಲೆ ಹಿಡಿದುಕೊಂಡು ಕೂಡುವುದು ಬೇಡ. ಇಲ್ಲಿಯೇ ಊಟ ಮಾಡಿಕೊಂಡು ಆಮೇಲೆ ಹೋಗುವಿರಂತೆ."

" ನೀನು ಹೇಳುವುದೂ ಸರಿಯೆ—"

ಎಂದು ರಂಗನಾಥನ್ ಕಾರಿನಿಂದಿಳಿದು ಮೋಹಿನಿಯನ್ನು ಹಿಂಬಾಲಿಸಿದ. ಮುಂದೆ ಐದು ನಿಮಿಷಗಳಲ್ಲಿ ಮೋಹಿನಿ ಕಾರ್ ಡ್ರೈವರ್‌ನಿಗೆ, ಕಾಯಬೇಕಿಲ್ಲ ವೆಂದು ಹೇಳಿ ಕಳಿಸಿಬಿಟ್ಟಳು.

೨೭

ಆಕ್ಟೋಬರ್ ತಿಂಗಳಲ್ಲಿ ಪ್ರತಿನಿತ್ಯವೂ ವೃತ್ತಪತ್ರಿಕೆಗಳಲ್ಲಿ ಮೋಹಿನಿಯನ್ನು ಕುರಿತು ಪ್ರಚಾರ ಅಪಪ್ರಚಾರಗಳೆರಡೂ ನಡೆದವು. ಪ್ರಚಾರಕ್ಕೆ ಕಾರಣ, 'ಸೂತ್ರದ ಬೊಂಬೆ' ಸಿದ್ಧವಾಗುತ್ತ ಬಂದಿತ್ತು. ಒಂದೆರಡು ವಾರಗಳಲ್ಲಿ—ಹೆಚ್ಚಾದರೆ ನವಂಬರ್ ತಿಂಗಳ ಮೂರನೆಯ ವಾರದಲ್ಲಿ—ಹೊರಬೀಳುವುದಿತ್ತು. ಇದಕ್ಕೆ ಮುಖ್ಯ ಕಾರಣವೆಂದರೆ ರಂಗನಾಥನ್ ಇತ್ತೀಚೆಗೆ—ಸಮನ್ಸ್ ಬಂದನಂತರ—ತನ್ನ ಮನಸ್ಸನ್ನಾವರಿಸಿದ ಉದ್ವೇಗದಿಂದಲೇ ಉತ್ಸಾಹವನ್ನು ಪಡೆದು ಕೆಲಸ ಮಾಡುತ್ತಿದ್ದ ಹಾಗಿತ್ತು. ಮುಖ್ಯವಾಗಿ ಆತನಿಗೆ ಹಣದ ಅಗತ್ಯವಿದ್ದಿತು. ಹೀಗಾಗಿ ಸಾಧ್ಯವಿದ್ದಷ್ಟು ಬೇಗನೆ ಚಿತ್ರದ ಕೆಲಸವನ್ನು ಮುಗಿಯಿಸಿ ಹತ್ತಾರು ಚಿತ್ರಮಂದಿರಗಳಲ್ಲಿ ನಿಜವಾಗಿಯೂ ಪ್ರೇಕ್ಷಣೀಯವಾಗಿ ಕೆಲಸ ಮಾಡಿದ ಮೋಹಿನಿ ಬೆಳಗುವಂತೆ ಮಾಡಿದರೆ ತನಗೆ ಬೇಕಾದ ದುಡ್ಡನ್ನು ದೊರಕಿಸಬಹುದೆಂಬ ಭರವಸೆಯಿಂದ. ನಡೆದುದನ್ನು—ನಡೆಯಬೇಕಾದುದನ್ನು—ಎಲ್ಲವನ್ನೂ ಮರೆತು ಕೆಲಸವನ್ನು ಮುಂದುವರಿಸಿದ್ದ. ಸೂರೆಸೂರೆಯಾಗಿ 'ಸೂತ್ರದ ಬೊಂಬೆ'ಯ ಜಾಹೀರಾತಿಗಾಗಿ ಹಣ ವೆಚ್ಚಮಾಡಿ ಜನ ಆ ಚಿತ್ರದ ಬರವನ್ನು ಕುತೂಹಲದಿಂದ ಕಾಯುವಂತೆ ಮಾಡಿದ್ದ. ಚಿತ್ರ ಬರುವ ಮೊದಲೇ ಮೋಹಿನಿಯ ಹೆಸರು ಶ್ರೇಷ್ಠ ಚಿತ್ರತಾರೆಯರ ಮಾಲಿಕೆಯಲ್ಲಿ ಸೇರಿತು. ಆಕೆಯ ನೂರಾರು ಚಿತ್ರಗಳು ಬೀದಿಗಳಲ್ಲಿ—ವಾರಪತ್ರಿಕೆ ಮಾಸಪತ್ರಿಕೆಗಳ ಮುಖಪತ್ರಗಳಲ್ಲಿ—ದಿನಪತ್ರಿಕೆಗಳಲ್ಲಿಯ ಜಾಹೀರಾತುಗಳಲ್ಲಿ ಬೆಳಗಿದವು. ಇದಕ್ಕೆ ಸರಿಸಮನಾಗಿ ಮೋಹಿನಿಯ ವಿವಾಹವಿಚ್ಛೇದದ ಸಮಾಚಾರವೂ ಪತ್ರಿಕೆಗಳಲ್ಲಿ ಆಗೀಗ ಪ್ರಕಟವಾಗಿ ಕೆಲವೊಂದು ಪತ್ರಿಕೆಗಳಲ್ಲಿ ಕುತ್ಸಿತ ಊಹಾಪೋಹಗಳಿಗೆ ಎಡೆಗೊಟ್ಟಿತ್ತು. ಆದರೆ ಒಂದೆರಡು ಸಲ ಕೇಸು ವಿಚಾರಣೆಗಾಗಿ ಕೋರ್ಟಿನೆದುರು ಬಂದು ಅವರಿವರ ಅನಾನುಕೂಲಗಳಿಂದಾಗಿ ಮುಂದೂಡಲ್ಪಟ್ಟಿತ್ತು. ಚಿತ್ರಪ್ರಪಂಚಕ್ಕೆ ಸಂಬಂಧಿಸಿದ ಪತ್ರಿಕೆಗಳಲ್ಲಿ ಸದಾಕಾಲವೂ ಓದುಗರೊಡನೆ ನಡೆಯುವ ಪ್ರಶ್ನೋತ್ತರಗಳಲ್ಲಿ ಮೋಹಿನಿಯ ವಿವಾಹವಿಚ್ಛೇದದ ಪ್ರಸ್ತಾಪ ಸಲ್ಲದ ರೀತಿಯಲ್ಲಿ ಆಗೀಗ ಬರುತ್ತಿತ್ತು. "ಸೂತ್ರದ ಬೊಂಬೆಯಲ್ಲಿ ಕೆಲಸ ಮಾಡುತ್ತಿದ್ದ ನವೋದಿತ ತಾರೆ ಮೋಹಿನಿ ಚಿತ್ರದಲ್ಲಿ ಗಂಡನ ಮನೆಯನ್ನು

ಬಿಟ್ಟು ಹೋಗುತ್ತಿದ್ದರೂ ನಿರ್ದೇಶಕ ರಂಗನಾಥನ್ ಅವರ ಮನೆಯನ್ನು ಪ್ರವೇಶಿಸುತ್ತಿರುವುದು ನಿಜವೆ?" ಎಂಬ ಪ್ರಶ್ನೆಯನ್ನು ಕೇಳಿದ ಕುತೂಹಲಿಯೊಬ್ಬನಿಗೆ ಸಂಪಾದಕರು "ತಮಗೇಕೆ ಇಂಥ ಕುತೂಹಲ? ತಮ್ಮ ಮನೆಯ ಬಾಗಿಲನ್ನು ತೆರೆದಿಡಬೇಕೆನ್ನುತ್ತೀರಾ?" ಎಂದು ಮುಂತಾಗಿ ಕೇಳಿದ್ದರು. ಇಂಥ ನೂರಾರು ಪ್ರಶ್ನೆಗಳು ಹಲವಾರು ಚಿತ್ರಲೋಲರಿಂದ ಮೋಹಿನಿಯನ್ನು ಕುರಿತು ಬರುತ್ತಿದ್ದವು. ಇದೆಲ್ಲದರ ಪರಿಣಾಮ ಮೋಹಿನಿಯ ಮನಸ್ಸಿನ ಮೇಲೆ ಆಗದಿರುವುದು ಸಾಧ್ಯವಿರಲಿಲ್ಲ. ಮೊದಮೊದಲು ಇಂಥ ಸಮಾಚಾರಗಳನ್ನು ಓದಿದಾಗ, ಕೇಳಿದಾಗ, ಮನಸ್ಸು ಅಳುಕುತ್ತಿತ್ತು. ಆದರೆ ಬರಬರುತ್ತ ಇವೆಲ್ಲವೂ ಚಿತ್ರತಾರೆಯ ಜೀವನದಲ್ಲಿಯ ಅಪರಿಹಾರ್ಯವಾದ ಅಂಶಗಳೆಂಬ ನಂಬಿಕೆ ಬೆಳೆದ ಹಾಗೆ ಆಕೆ ಅವುಗಳನ್ನು ಗಮನಿಸುತ್ತಿರಲಿಲ್ಲವಲ್ಲದೆ ಅವುಗಳಿಂದಾಗಿ ತಾನು ನಿಜವಾಗಿಯೂ ಶ್ರೇಷ್ಠ ನಟಿ, ತನ್ನ ಹೆಸರು ಸಾವಿರಾರು ನಾಲಗೆಗಳ ಮೇಲೆ ಕುಣಿಯುತ್ತಿದೆ, ತಾನು ನೂರಾರು ಹೃದಯಗಳ ರಾಣಿಯಾಗಬಲ್ಲವಳು ಎಂಬ ಹೆಮ್ಮೆ ಆಕೆಯ ಮನಸ್ಸಿನಲ್ಲಿ ಮೂಡಿ ಬೆಳೆದು ನಿಂತಿತು ತಾನು ಚಿತ್ರಪ್ರಪಂಚದಲ್ಲಿ ಕಾಲಿಟ್ಟು ವರ್ಷವಾಗುವುದರಲ್ಲಿ ಯಾವ ಉನ್ನತಿಯನ್ನು ಸಾಧಿಸಿದ ಎಂಬ ಆತ್ಮಪ್ರೌಢಿಮೆಯ ಯೋಚನೆಗಳಲ್ಲಿ ತಾನು ಯಾವ ಬಗೆಯ ಮಾನಸಿಕ, ನೈತಿಕ ಸ್ಥಿತ್ಯಂತರಗಳಿಗೆ ಒಳಗಾಗಿದ್ದಳೆಂಬುದು ಆಕೆಗೆ ತೋಚುವುದು ಸಾಧ್ಯವೇ ಇರಲಿಲ್ಲ ಆನಂದ ಹೂಡಿದ ಕೇಸಿನಿಂದಾಗಿ ಮೊದಮೊದಲು ಆ ಆತ್ಮಪ್ರೌಢಿಮೆಗೆ ಏಟುಬಿದ್ದಂತಾಗಿದ್ದರೂ ಅದನ್ನು ಮರೆತು ಡಿಸೆಂಬರ್ ತಿಂಗಳ ಮೊದಲ ವಾರದಲ್ಲಿ ಕೇಸು ಕೊನೆಯಾಗಿ ವಿಚಾರಣೆಗೆ ಬಂದಾಗ ಮೋಹಿನಿ ಅದನ್ನು ಸಂಪೂರ್ಣವಾದ ಗೆಲುವಿನ ಮನಃಸ್ಥಿತಿಯಲ್ಲಿಯಲ್ಲದಿದ್ದರೂ ಸಾಕಷ್ಟು ನಿರ್ವಿಕಾರವಾಗಿ ಎದುರಿಸಲು ಸಿದ್ಧಳಾಗಿದ್ದಳು.

ಕೇಸಿನೊಳಗಿಂದ ತನ್ನ ಹೆಸರನ್ನು ಕಿತ್ತುಕೊಳ್ಳಬೇಕೆಂದು ವಸಂತನ ಮುಖಾಂತರ ನಡೆಸಿದ ರಂಗನಾಥನ್‌ನ ಪ್ರಯತ್ನಗಳೆಲ್ಲವೂ ವಿಫಲವಾಗಿದ್ದವು ಆನಂದನನ್ನು ತಾನಾಗಿಯೇ ಹೋಗಿ ನೋಡಿ ಮಾತನಾಡಿಸಿಯೂ ಆಗಿತ್ತು ಯಾವ ಆಮಿಷ-ಪ್ರಲೋಭನೆಗಳಿಗೂ ಆನಂದ ಮಣಿದಿರಲಿಲ್ಲ, ಮೋಹಿನಿಯ ಮೇಲೆ ಸೇಡಿನ ಬುದ್ಧಿಯಿಂದಲೇ ಪ್ರೇರಿತನಾಗಿ ಎಲ್ಲವನ್ನು ಮುಗಿಯಿಸಬೇಕೆಂಬ ಹಟದಿಂದ ಆತ ಮುಂದರಿಯುತ್ತಿದ್ದ ಹಾಗಿತ್ತು ವಸಂತ ಮಧ್ಯಸ್ಥಿಕೆಯ ಮಾತು

ಗಳನ್ನು ಹೇಳಿದಾಗ ಆನಂದ ಸಾವಧಾನದಿಂದಾದರೂ ಕೇಳಿಕೊಂಡಿದ್ದ. ಆದರೆ ರಂಗನಾಥನ್ ಆತನನ್ನು ಕಂಡಾಗ ಆನಂದನ ತಾಳ್ಮೆ ಕುಸಿದಿತ್ತಲ್ಲದೆ ತನ್ನ ಬದುಕನ್ನು ಕಹಿಯಾಗಿಸಿದ ವಿಷಶಕ್ತಿಗಳಲ್ಲಿ ರಂಗನಾಥನ್‌ನೂ ಒಬ್ಬ ಎಂಬ ಅಸಹನೆಯ ಸಿಟ್ಟಿನಿಂದಲೇ ಆತನೊಡನೆ ನಡೆದುಕೊಂಡಿದ್ದ ಹೀಗಾಗಿ ರಂಗನಾಥನ್‌ನಿಗೆ ವಿಚಾರಣೆಯನ್ನು ಎದುರಿಸದೆ ಬೇರೆ ಮಾರ್ಗವೇ ಉಳಿಯಲಿಲ್ಲ. ಅನಿವಾರ್ಯವಾದ ಅಸಿಷ್ಟವನ್ನು ಎದುರಿಸಲೇಬೇಕಾದಾಗಿನ ನಿರ್ವಿಕಾರ ಮನಸ್ಸಿನಿಂದಲೇ ವಿಚಾರಣೆಯ ದಿನವನ್ನು ಮುನ್ನೋಡುತ್ತಿದ್ದ ತನ್ನ ಮತ್ತು ಮೋಹಿನಿಯ ಪರವಾಗಿ ವಾದಿಸಲು ಒಪ್ಪಿಕೊಂಡ ಬ್ಯಾರಿಸ್ಟರ್ ದೇಶಮುಖ್ ಅವರನ್ನು ಆಗೀಗ ಕಂಡು ಸಲಹೆ–ಸಮಾಧಾನಗಳನ್ನು ಪಡೆಯುತ್ತಿದ್ದ ಪ್ರಯತ್ನಪೂರ್ವಕವಾಗಿ ಆತ ಸಾಧಿಸಿದ್ದು ಒಂದು ಅದೆಂದರೆ, ವಿಚಾರಣೆ ಬಹಿರಂಗವಾಗಿ ನಡೆಯಬಾರದೆಂಬ ಬೇಡಿಕೆಯನ್ನು ನ್ಯಾಯಾಧೀಶರು ಮನ್ನಿಸುವಂತೆ ಮಾಡಿದ್ದು ಹೀಗಾಗಿ ವಿಚಾರಣೆ ನಡೆದಾಗ ಸಾರ್ವಜನಿಕರಿಗಾಗಲಿ, ವಿಚಾರಣೆಯನ್ನೇ ಮುನ್ನೋಡುತ್ತಿದ್ದ ಸುದ್ದಿಗಾರರಿಗಾಗಲಿ ಕೋರ್ಟಿನಲ್ಲಿ ಅಂದು ಪ್ರವೇಶ ದೊರೆಯಲಿಲ್ಲ ಇದು ಸಾಧಿಸಿದಾಗ ರಂಗನಾಥನ್ ಸಮಾಧಾನದಿಂದ ನಿಟ್ಟುಸಿರೆಳೆದಿದ್ದ

ಸೋಮವಾರ, ೧೯೪೮ರ ಡಿಸೆಂಬರ್ ೬ನೆಯ ದಿನಾಂಕ ಹನ್ನೊಂದು ಗಂಟೆಗೆ ವಿಚಾರಣೆ ಪ್ರಾರಂಭವಾಯಿತು ಒಂದು ಕಡೆ ಆನಂದನ ವಕೀಲ ದೇವನೂರ ರಾಮರಾಯ, ಇನ್ನೊಂದು ಕಡೆ ರಂಗನಾಥನ್–ಮೋಹಿನಿಯರ ಪರವಾಗಿ ಬ್ಯಾರಿಸ್ಟರ್ ದೇಶಮುಖ್ ಅವರು ಕುಳಿತಿದ್ದರು ಎದುರಿಗೆ ಎತ್ತರದಲ್ಲಿ ನ್ಯಾಯಾಧೀಶರು ನಿಲುವಂಗಿ ಹಾಕಿಕೊಂಡು ಗಾಂಭೀರ್ಯದ ಮೂರ್ತಿಯಾಗಿ ಕುಳಿತಿದ್ದರು. ಒಂದು ಕಡೆಯಲ್ಲಿ ಹೇಳಿಕೆಗಳನ್ನು ಬರೆದುಕೊಳ್ಳಲಿಕ್ಕೆಂದು ಕೋರ್ಟಿನ ಇಬ್ಬರು ಗುಮಾಸ್ತರು, ನ್ಯಾಯಾಧೀಶರ ಬದಿಯಲ್ಲಿ ಕೋರ್ಟಿನ ಶಿರಸ್ತೇದಾರರು ಕುಳಿತಿದ್ದರು ಆನಂದರಾಯನೇ ಮೊಕದ್ದಮೆಯನ್ನು ಹೂಡಿದವನಾದ್ದರಿಂದ ಅವನ ಪರವಾಗಿ ರಾಮರಾಯ ಪ್ರಾಸ್ತಾವಿಕವಾಗಿ ತಮ್ಮ ಹೇಳಿಕೆಯನ್ನು ಮುಗಿಯಿಸಿ ತಮ್ಮ ಕೇಸನ್ನು ಮಂಡಿಸಿದ. ಪ್ರತಿವಾದಿಯಾದ ಮೋಹಿನಿ ವಾದಿಯ ಹೆಂಡತಿಯಿದ್ದು, ಸಹಪ್ರತಿವಾದಿ ರಂಗನಾಥನ್‌ನೊಡನೆ ಅನೈತಿಕವಾದ ಸಂಬಂಧಗಳನ್ನು ಬೆಳೆಯಿಸಿಕೊಂಡು ಆತನ ಆಶ್ರಯದಲ್ಲಿ

ಆತನಿಂದ ಹಣ ಸೌಲಭ್ಯಗಳನ್ನು ಪಡೆದು ಆತನ ಇಟ್ಟುಹೆಣ್ಣಾಗಿ ಇರುತ್ತಿದ್ದರಿಂದ ವಾದಿ ಆನಂದರಾಯನಿಗೆ ವಿವಾಹವಿಚ್ಛೇದಕ್ಕಾಗಿ ಕೇಸನ್ನು ಹಾಕುವುದು ಅಗತ್ಯವಾಯಿತೆಂದೂ, ಆ ಕಾರಣಗಳಿಂದಾಗಿ ವಿಚ್ಛೇದದ ಆತನ ಬೇಡಿಕೆಯನ್ನು ತಮ್ಮ ಸಾಕ್ಷ್ಯಗಳಿಂದ ಸಮರ್ಥಿಸುವುದಾಗಿಯೂ, ಸಾಕ್ಷ್ಯಗಳನ್ನು ಕೇಳಿಕೊಂಡು ವಿಚ್ಛೇದದ ಬೇಡಿಕೆಯನ್ನು ಕೋರ್ಟು ಮನ್ನಿಸಬೇಕೆಂದೂ ಸಾರಾಂಶವಾಗಿ ತಮ್ಮ ಕೇಸಿನ ಸ್ವರೂಪವನ್ನು ರಾಮರಾಯ ವಿವರಿಸಿದ ವಾದಿಯಾದ ಆನಂದರಾಯನ ಸಾಕ್ಷಿಯೇ ಮೊದಲು ನಡೆಯಬೇಕಾಗಿದ್ದಿತು ಆನಂದರಾಯನನ್ನು ಕೋರ್ಟಿನಲ್ಲಿ ಕರೆತಂದು ನಿಲ್ಲಿಸಲಾಯಿತು ಆತನ ಮುಖ ಪೆಚ್ಚಾಗಿ ಹೋಗಿದ್ದಿತು ತಡೆಹಿಡಿದ ಉದ್ವೇಗದಿಂದ ತುಟಿಗಳು ಮುದುಡಿಕೊಂಡಿದ್ದವು. ಇದ್ದಬಿದ್ದ ಧೈರ್ಯವನ್ನು ಎಲ್ಲ ಕಲೆಹಾಕಿಕೊಂಡು, ತನ್ನಲ್ಲಿಯಕಿಂತಲೂ ಹೆಚ್ಚಾಗಿ ತನ್ನ ಲಾಯರಲ್ಲಿಯೇ ಹೆಚ್ಚಿನ ಭರವಸೆಯನ್ನಿಟ್ಟುಕೊಂಡು ದೇವರಾಣೆ ಇಟ್ಟುಕೊಂಡು ನಿಜವಾದುದನ್ನು ಹೇಳುತ್ತೇನೆಂದು ಪ್ರಾರಂಭಿಸಿದ. ರಾಮರಾಯನ ಪ್ರಶ್ನೆಗಳಿಗೆ ನಿಧಾನವಾಗಿ ಉತ್ತರಿಸಿದ ಅದು ಹೀಗೆ.

" ನಾನು ವಾದಿ, ಆನಂದರಾಯ. ಪ್ರತಿವಾದಿ ಮೋಹಿನಿ ನನ್ನ ಮದುವೆಯ ಹೆಂಡತಿ. ಮದುವೆಯಾಗಿ ಸುಮಾರು ನಾಲ್ಕು ವರ್ಷವಾಯಿತು ಮದುವೆ ಪುಣೆಯಲ್ಲಿ ವೈದಿಕರೀತಿಯಲ್ಲಿಯೇ ಆಯಿತು. ಮದುವೆಯಾದಾಗ ನಾನು ನನ್ನ ಅಕ್ಕನ ಮನೆಯಲ್ಲಿ ಇರುತ್ತಿದ್ದೆ. ಹೆಂಡತಿಯನ್ನು ಕರೆದುಕೊಂಡು ಬಂದಮೇಲೆಯೂ ಅಲ್ಲಿಯೇ ಇರುತ್ತಿದ್ದೆ. ಮದುವೆಯಾದ ಆರೇಳು ತಿಂಗಳಲ್ಲಿ ಪ್ರತಿವಾದಿ ತಾನು ಕಾಲೇಜು ಸೇರುತ್ತೇನೆ ಎಂದು ಹಟಹಿಡಿಯತೊಡಗಿದಳು ಆಕೆ ಕಾಲೇಜು ಸೇರುವುದು ನನಗೆ ಅಷ್ಟೇನೂ ಇಷ್ಟವಿರಲಿಲ್ಲ ಆದರೆ ಆಕೆ ಅದರ ವಿಷಯಕ್ಕೆ ಹಟಹಿಡಿದು ನಾನು ಬೇಡವೆಂದರೂ ಕಾಲೇಜು ಸೇರಿದಳು. ಇದರಿಂದಾಗಿ ಮನೆಯಲ್ಲಿ ತಕರಾರುಗಳು ಪ್ರಾರಂಭವಾದವು ವರ್ಷಾರು ತಿಂಗಳಲ್ಲಿ ಮನೆಗಿಂತ ಹೆಚ್ಚಾಗಿ ಹೊರಗಡೆಯೇ ಆಕೆಯ ಲಕ್ಷ್ಯ ಹರಿಯತೊಡಗಿತು. ಮನೆಯಲ್ಲಿ ಆಗೀಗ ಸಣ್ಣಪುಟ್ಟ ಜಗಳಗಳು ನಡೆಯುತ್ತಿದ್ದವು. ಆದರೆ ಬರಬರುತ್ತ ಈಕೆಯ ನಡತೆಯ ಬಗ್ಗೆ ನನಗೆ ಸಂಶಯ ಬರತೊಡಗಿತು. ಈಕೆ ಕಾಲೇಜಿಗೆ ಹೋಗುವುದು ಹೊರಗೆ ತಿರುಗಾಡಲಿಕ್ಕೆ ಒಂದು ನೆಪಮಾತ್ರ ಎಂದು

ನನ್ನ ಮನವರಿಕೆಯಾಯಿತು. ಕಾಲೇಜು ಮುಗಿದಮೇಲೂ ಸರಿಯಾದ ವೇಳೆಗೆ ಮನೆಗೆ ಬರುತ್ತಿರಲಿಲ್ಲ ನಾಲ್ಕಾರು ಬಾರಿ ಇದನ್ನು ನಾನು ನೋಡಿ ಆಗೀಗ ಸಿಟ್ಟುಮಾಡಿದ್ದೆ. ಆದರೆ ಯಾವ ಪ್ರಯೋಜನವೂ ಆಗಲಿಲ್ಲ ಆಕೆಯ ಪರೀಕ್ಷೆ ಮುಗಿದ ದಿನ ಮಧ್ಯಾಹ್ನದಿಂದ ಸಾಯಂಕಾಲದ ವರೆಗೆ ಇನ್ನಾರ ಜೊತೆಯಲ್ಲಿಯೋ ಅಡ್ಡಾಡಿದ್ದು ನನಗೆ ಮರುದಿನ ತಿಳಿದುಬಂದಾಗ ನಾನು ಆಕೆಯನ್ನು ಅದರ ವಿಷಯ ಕೇಳಿದರೆ ಸರಿಯಾದ ಉತ್ತರವನ್ನು ಹೇಳಲಿಲ್ಲ ಆ ದಿನ ಆಕೆ ಮನೆ ಬಿಟ್ಟು ಸಾಯಂಕಾಲ ಹೊರಟುಹೋದಳು. ಆಮೇಲೆ ನಮ್ಮ ಮನೆಗೆ ತಿರುಗಿಬಂದಿಲ್ಲ ಆಕೆ ಹೋದರೆ ತನ್ನ ತಾಯಿಯ ಹತ್ತಿರಕ್ಕೆ ಹೋಗಿರಬೇಕೆಂದು ನಾನು ಸುಮ್ಮನಾದೆ ನನ್ನ ಮನಸ್ಸು ಪೂರ್ತಿಯಾಗಿ ಬೇಸರಗೊಂಡಿತ್ತಾದ್ದರಿಂದ ಮುಂದೆ ಎರಡು ಮೂರು ತಿಂಗಳು ನಾನು ಆಕೆಯನ್ನು ಕುರಿತು ಏನೂ ಯೋಚಿಸಲಿಲ್ಲ

"ಕಳೆದ ವರುಷದ ಜುಲೈ ತಿಂಗಳ ಕೊನೆಗೆ ಆಕೆಯ ತಾಯಿಯಿಂದ ಒಂದು ಆಗ್ರಹದ ಕಾಗದ ಬಂದಿತ್ತು. ಆಕೆ ದಾದರ್ ಸ್ಕೂಲಿನಲ್ಲಿ ಶಿಕ್ಷಕಿಯಾಗಿ ಕೆಲಸ ಮಾಡುತ್ತಿದ್ದಳೆಂದೂ, ನಾವಿಬ್ಬರೂ ಸರಿಪಡಿಸಿಕೊಂಡು ಇರಬೇಕೆಂದೂ, ಆ ರೀತಿಯಾಗಿ ಆಕೆಗೂ ತಿಳಿಸಿದೆ ಎಂದೂ ಬರೆದಿತ್ತು. ಆ ಪತ್ರ ಬಂದದ್ದರಿಂದ ಹಿಂದೆ ಏನಾದರೂ ಆಯಿತು ಎಂದುಕೊಂಡು ಆಗಸ್ಟ ತಿಂಗಳಲ್ಲಿ ನಾನು ಆಕೆಯನ್ನು ಕಾಣಲು ಹೋದೆ. ಅಂದು ಆಗಸ್ಟ ೧೧ನೆಯ ತಾರೀಕು ಇರಬಹುದು ಆಕೆ ದಾದರ್‌ನಲ್ಲಿ ಇರುತ್ತಿದ್ದಳು. ಎಲ್ಲವನ್ನೂ ಮರೆತು ಸರಿಪಡಿಸಿಕೊಂಡು ಇರೋಣ ಎಂದು ಹೇಳಿದೆ. ಆಕೆ ಒಪ್ಪಲಿಲ್ಲ ಅನಂತರ ನಾನು ಆಕೆಯನ್ನು ಕಂಡು ಮಾತನಾಡಿಸಿಲ್ಲ. ಮುಂದೆ ಡಿಸೆಂಬರ್ ತಿಂಗಳಲ್ಲಿ ಆಕೆಯನ್ನು ನಾನು ನನ್ನ ಮಿತ್ರನ ಮದುವೆಯ ಮಂಟಪದಲ್ಲಿ ನೋಡಿದೆ. ಆಕೆಯನ್ನು ಆಗ ನೋಡಿದಾಗ ಆಕೆ ಒಳ್ಳೆ ಸಿರಿವಂತರ ರೀತಿಯಲ್ಲಿದ್ದಳು. ಆಕೆಯನ್ನು ನೋಡಿದ ಕೂಡಲೆ ನನಗೆ ಆಕೆಯ ನಡತೆಯ ಬಗ್ಗೆ ಹೆಚ್ಚಿನ ಸಂಶಯ ಉಂಟಾಯಿತು. ಆಕೆ ಏನು ಮಾಡುತ್ತಿದ್ದಳು, ಹೇಗೆ ಇರುತ್ತಿದ್ದಳು ಎಂಬುದರ ಬಗ್ಗೆ ಸೂಕ್ಷ್ಮವಾಗಿ ವಿಚಾರಣೆ ನಡೆಸಿದೆ. ಆಕೆ 'ಶಾರದಾ ಸ್ಟುಡಿಯೋಸ್'ದಲ್ಲಿ ಕೆಲಸ ಮಾಡುತ್ತಿದ್ದದ್ದು, ಅಲ್ಲಿಯ ಡೈರೆಕ್ಟರ್ (ಕೇಸಿನಲ್ಲಿಯ ಸಹಪ್ರತಿವಾದಿ) ಜೊತೆಯಲ್ಲಿ ಆಕೆ ಇರುತ್ತಿದ್ದದ್ದು ಗೊತ್ತಾಯಿತು. ಇದು ತಿಳಿದಮೇಲೆ ಆಕೆಯನ್ನು ನಾನು ಬಿಟ್ಟು

ಬಿಡುವ ನಿರ್ಧಾರ ಮಾಡಿ ವಿಚ್ಛೇದಕ್ಕೆ ಆಗತ್ಯವಾದ ಸಾಕ್ಷಿ ದೊರಕುವಂತೆ ಆಕೆಯ ಇರುವಿಕೆಯನ್ನು, ಆಕೆ ಅಲ್ಲಿ ಇಲ್ಲಿ ಹೋಗುವುದನ್ನು ನೋಡುವಂತೆ ನನಗೆ ಬೇಕಾದ ಒಬ್ಬಿಬ್ಬರಿಗೆ ಹೇಳಿದೆ ಅವರು ನನಗೆ ಕೊಟ್ಟ ವಿವರಗಳ ಮೇಲಿಂದ ಆಕೆ ಸಹಪ್ರತಿವಾದಿಯ ಜೊತೆಯಲ್ಲಿ ಅನೈತಿಕ ಜೀವನವನ್ನು ನಡಸುತ್ತಿದ್ದಾಳೆಂಬುದು ಸ್ಪಷ್ಟವಾಯಿತು. ಆದ್ದರಿಂದ ವಿಚ್ಛೇದಕ್ಕಾಗಿ ಈ ಕೇಸು ಮಾಡಿದೆ. ”

ಆನಂದರಾಯ ತನ್ನ ಲಾಯರು ಕೇಳಿದ ಪ್ರಶ್ನೆಗಳಿಗೆ ಸರಿಯಾಗಿ ನೇರವಾಗಿ ಉತ್ತರ ಹೇಳಿದ್ದ. ಪ್ರಶ್ನೆಗಳನ್ನು ಕೇಳುತ್ತಿದ್ದವ ತನ್ನ ಲಾಯರಾದ್ದರಿಂದಲೂ, ತಾನು ಕೇಳಬಹುದಾದ ಪ್ರಶ್ನೆಗಳನ್ನು, ಹೇಳಬೇಕಾದ ಉತ್ತರಗಳನ್ನು ರಾಮರಾಯ ಮೊದಲಿಗೆಯೆ ಕಲಿಸಿಕೊಟ್ಟಿದ್ದನಾದ್ದರಿಂದಲೂ ಆನಂದರಾಯನಿಗೆ ಯಾವ ಆತಂಕವೂ ಎನಿಸಲಿಲ್ಲ ಆದರೆ ಈಗ ಪ್ರತಿಪಕ್ಷದ ಲಾಯರು ಕೇಳುವ ಮರುಸವಾಲುಗಳಿಗೆ ಉತ್ತರ ಹೇಳಬೇಕು. ಒಂದು ಕ್ಷಣ ಆನಂದ ಬೆಚ್ಚಿದ. ಹಿಂತೆಗೆದ. ರಾಮರಾಯರನ್ನು ನೋಡಿದ ನೋಟದಿಂದಲೇ ರಾಮರಾಯ ಭರವಸೆ ಕೊಟ್ಟ. ಬ್ಯಾರಿಸ್ಟರ್ ದೇಶಮುಖ್‌ರು ಆನಂದನ ಮರುಸವಾಲಿಗಾಗಿ ಎದ್ದುನಿಂತರು :

“ ಮದುವೆಯಾದಮೇಲೆ ನಿಮ್ಮಿಬ್ಬರಲ್ಲಿ ಮೊತ್ತಮೊದಲನೆಯ ಸಾರೆ ಯಾವಾಗ ತಕರಾರು ಬಂದಿತು ಎಂಬುದನ್ನು ನೀವು ಹೇಳಬಲ್ಲಿರಾ ? ”

“ ಜ್ಞಾಪಕವಿಲ್ಲ.”

“ ಮೊದಲು ತಕರಾರು ಬಂದದ್ದು ಕಾಲೇಜಿಗೆ ಹೋಗುವ ಬಗ್ಗೆ ಎಂದು ಹೇಳಿದಿರಲ್ಲವೆ ? ಅದರ ಹೊರತಾಗಿ ಆವರೆಗೆ ನಿಮ್ಮಿಬ್ಬರ ನಡುವೆ ಯಾವ ತಕರಾರೂ ಬಂದಿರಲಿಲ್ಲ, ಹೌದೆ ? ”

“ ಹೌದು.”

“ ಆಗ ನೀವು ನಿಮ್ಮ ಅಕ್ಕನ ಮನೆಯಲ್ಲಿ ಇರುತ್ತಿದ್ದಿರಲ್ಲವೆ ? ”

“ ಹೌದು.”

“ ನಿಮ್ಮ ಅಕ್ಕ ಮತ್ತು ನಿಮ್ಮ ಹೆಂಡತಿಯದು ಕೂಡಿ ನಡೆಯುತ್ತಿದ್ದಿತೆ?

ಆನಂದ ತಡೆದ. ಕೂಡಲೆ ಉತ್ತರ ಹೇಳಲಾಗಲಿಲ್ಲ. ಸಾಕ್ಷಿ ತಡವರಿಸುತ್ತಿದ್ದಾನೆಂಬುದನ್ನು ಕೋರ್ಟು ಗಮನಿಸಬೇಕೆಂದರು ದೇಶಮುಖ್‌ರು.

" ಕೂಡಿ ನಡೆಯುತ್ತಿದ್ದಿತೆ ? "

" ಮೊದಲು ಕೂಡಿ ನಡೆಯುತ್ತಿದ್ದಿತು."

" ಮೊದಲು ಹಾಗಿರಬಹುದು. ಆದರೆ ನಾನು ಕೇಳುತ್ತಿರುವುದು ಕಾಲೇಜಿಗೆ ಹೋಗುವ ವಿಷಯ ಬಂದಾಗಿನ ಕಾಲಕ್ಕೆ ಸಂಬಂಧಿಸಿದ್ದು ಆಗ ಅವರಿಬ್ಬರದೂ ಕೂಡಿ ನಡೆಯುತ್ತಿದ್ದಿತೆ ? "

" ನನಗೆ ಅಷ್ಟೊಂದು ಜ್ಞಾಪಕವಿಲ್ಲ "

" ಜ್ಞಾಪಕ ಮಾಡಿಕೊಂಡು ಹೇಳಿ—"

" ಹೇಳಲಾರೆ "

" ಒಳ್ಳೆಯದು ನಿಮ್ಮ ಅಕ್ಕನ ಮಾತಿನಲ್ಲಿ ನಿಮಗೆ ತುಂಬಾ ವಿಶ್ವಾಸವೆ?"

" ಹೌದು "

" ಅವರು ಹೇಳಿದ ಯಾವ ಮಾತನ್ನೂ ನೀವು ನಂಬುತ್ತೀರಿ—"

" ಹಾಗೇನಿಲ್ಲ ನಂಬಬಹುದಾದರೆ ನಂಬುತ್ತೇನೆ "

" ನಿಮ್ಮ ಅಕ್ಕ ನಿಮ್ಮ ಹೆಂಡತಿಯ ಬಗೆಯಲ್ಲಿ ಆ ಕಾಲಕ್ಕೆ ಹೇಳಿದ್ದನ್ನು ನೀವು ಕೇಳಿಕೊಂಡು ಸಿಟ್ಟುಮಾಡುತ್ತಿದ್ದಿರಿ ಅಲ್ಲವೆ ? "

" ಹೇಳಿದ್ದನ್ನು ಕೇಳಿಕೊಂಡೇ ಎಂದಲ್ಲ—"

" ಅಂದರೆ ಅವರು ನಿಮ್ಮ ಕಡೆಗೆ ತಕರಾರು ಹೇಳುತ್ತಿದ್ದರು ಎಂದಾಯಿತು ಅಷ್ಟನ್ನಾದರೂ ಒಪ್ಪುತ್ತೀರಲ್ಲ ? "

" ಹೌದು ಆಗೀಗ ಹೇಳುತ್ತಿದ್ದರು "

" ನಿಮ್ಮ ಹೆಂಡತಿ ಕಾಲೇಜಿಗೆ ಹೋಗುವುದು ನಿಮ್ಮ ಅಕ್ಕನಿಗೆ ಬೇಡವಾಗಿತ್ತೆ ? "

" ಹೌದು."

" ನಿಮಗೂ ಬೇಡವಾಗಿತ್ತೆ ? "

" ಹೌದು."

" ನಿಮ್ಮ ಅಕ್ಕನ ಮಾತು ಕೇಳಿ ನೀವಿಬ್ಬರು ಈಕೆಯನ್ನು ಮನೆಯಲ್ಲಿ ಪೀಡಿಸುತ್ತಿದ್ದಿರೆಂದೇ ಕಾಲೇಜಿಗೆ ಹೋಗಿ ವಿದ್ಯಾಭ್ಯಾಸ ಮುಗಿಯಿಸಬೇಕೆಂದು ನಿಮ್ಮ ಹೆಂಡತಿ ಮನಸ್ಸು ಮಾಡಿದರು ಎನ್ನುತ್ತೇನೆ ನಾನು. ಇದಕ್ಕೇನೆನ್ನುತ್ತೀರಿ ? "

" ಅದು ಸುಳ್ಳು."

" ಅದು ಹೇಗೆಯೋ ಆಗಲಿ. ನೀವು ಆಗೀಗ ನಿಮ್ಮ ಹೆಂಡತಿಗೆ ಸಿಟ್ಟು ಮಾಡುತ್ತಿದ್ದಿರಿ, ಅಲ್ಲವೆ ? "

"ಆಕೆಯ ನಡತೆ, ಮಾತು ನನಗೆ ಸರಿಬೀಳದಿದ್ದಾಗ ಸಿಟ್ಟು ಮಾಡುತ್ತಿದ್ದೆ?"

" ಸಿಟ್ಟು ಮಾಡುತ್ತಿದ್ದೆ, ಎಂದಿರಿ. ಅದು ಬಾಯಿಂದಲೊ ಅಥವಾ ಕೈಯಿಂದಲೊ ? "

" ಬಾಯಿಂದ ಸಿಟ್ಟು ಮಾಡುತ್ತಿದ್ದೆ "

" ನಿಮಗೆ ಹೆಂಡತಿಯನ್ನು ಹೊಡೆಯುವ ಅಭ್ಯಾಸವಿದೆಯೆ ? "

ರಾಮರಾಯ ಎದ್ದು ನಿಂತು " ಈ ಪ್ರಶ್ನೆಗೆ ನನ್ನ ಆಕ್ಷೇಪಣೆಯಿದೆ " ಎಂದ. " ಆಕ್ಷೇಪಣೆ ಸರಿಯಾದುದಲ್ಲ ವಾದಿಯು ಪ್ರತಿವಾದಿಯನ್ನು ಹೊಡೆದು ಬಡೆದು ಕ್ರೂರವಾಗಿ ನಡೆಸಿಕೊಳ್ಳುತ್ತಿದ್ದನೆಂದು ಪ್ರತಿವಾದಿಯು ವಾದಿಸುತ್ತಾಳೆ. ಆದ್ದರಿಂದ ಈ ಪ್ರಶ್ನೆಯನ್ನು ಕೇಳಲೇಬೇಕು" ಎಂದು ದೇಶಮುಖ್‌ರು. ' ಹೊಡೆಯುವ ಅಭ್ಯಾಸ 'ದ ವಿಷಯವನ್ನು ಬಿಟ್ಟು ನೇರವಾಗಿ ಆ ವಿಷಯವನ್ನು ಕೇಳಬಹುದೆಂದು ಕೋರ್ಟಿನ ಅಪ್ಪಣೆಯಾಯಿತು.

" ನೀವು ನಿಮ್ಮ ಹೆಂಡತಿಯನ್ನು ಎಂದಾದರೂ ಹೊಡೆದಿದ್ದೀರಾ ? "

" ಇಲ್ಲ."

" ಸರಿಯಾಗಿ ಜ್ಞಾಪಿಸಿಕೊಂಡು ಹೇಳಿ "

" ನಾನು ಎಂದಿಗೂ ಹೆಂಡತಿಯನ್ನು ಹೊಡೆದಿಲ್ಲ."

" ಇದು ನೋಡಿರಿ. ನೀವು ಪ್ರಮಾಣಮಾಡಿ ಮಾತನಾಡುತ್ತಿದ್ದೀರೆಂಬುದು ಲಕ್ಷ್ಯದಲ್ಲಿರಲಿ " ಎಂದು ಗದರಿಸಿದರು ದೇಶಮುಖ್‌ರು. ಆನಂದ ಬೆದರಿದ, ತಡಪರಿಸಿದ, ಸುಮ್ಮನಾದ.

" ಸಾಕ್ಷಿಯನ್ನು ಹೀಗೆ ಹೆದರಿಸಿ ತಮಗೆ ಬೇಕಾದುದನ್ನು ಹೇಳಿಸಿಕೊಳ್ಳಬಹುದೆ ? " ಎಂದು ರಾಮರಾಯ ಮತ್ತೆ ಆಕ್ಷೇಪಿಸಿದ. " ಹೇಳಿದ್ದು ನಿಜವಾಗಿದ್ದರೆ, ಆತ ಹೆದರುವ ಕಾರಣವಿಲ್ಲ ನಿಜವಾದುದನ್ನು ಹೇಳಲಿ " ಎಂದು ದೇಶಮುಖ್‌ರು ಉತ್ತರಿಸಿ ಮುಂದುವರಿದರು.

" ನಿಮ್ಮ ಹಂಡತಿಯ ಪರೀಕ್ಷೆ ಮುಗಿದ ಮರುದಿನ ಆಕೆಯನ್ನು ನೀವು ಕೈಯಲ್ಲಿಯ ಬಳೆಗಳು ಒಡೆಯುವಂತೆ ಮೈಮೂರೆ ಹೊಡೆದು ಹೊರದೂಡಿದಿರಿ

ಎಂದು ತಿಳಿಯುತ್ತದೆ, ಅದು ನಿಜವೆ ? ”

“ ನಾನು ಹೊರದೂಡಿಲ್ಲ ಆಕೆ ತಾನಾಗಿಯೇ ಹೊರಟುಹೋದಳು.”

“ ಅದನ್ನು ಆಮೇಲೆ ಹೇಳುವಿರಂತೆ. ನೀವು ಹೊಡೆದದ್ದು ನಿಜವೊ ಅಥವಾ ಅಲ್ಲವೊ ? ”

“ ನನ್ನ ಮನಸ್ಸಿನ ಸಂತಾಪದಲ್ಲಿ ಒಂದೇಟು ಹೊಡೆದಿರಬೇಕು.”

“ ಬಳೆ ಒಡೆದದ್ದು ನಿಜವೆ ?”

“ ನನಗೆ ಜ್ಞಾಪಕವಿಲ್ಲ—ಇರಬಹುದು ”

“ ಅದಿರಲಿ. ಮನೆ ಬಿಟ್ಟು ಹೊರಡು ಎಂದು ಹೇಳಿದಿರೊ, ಇಲ್ಲವೊ ? ”

“ ಹಾಗೆ ನಾನು ಹೇಳಲಿಲ್ಲ ”

“ ಅದೇ ಮಾತಿನಲ್ಲಿ ಹೇಳಿರಲಿಕ್ಕಿಲ್ಲ. ಮನೆಯಲ್ಲಿ ಇರಕೂಡದು ಎಂದು ಹೇಳಿದಿರಿ.”

“ ಸಂತಾಪದಿಂದ ಹಾಗೆ ಹೇಳಿರಬಹುದು.”

“ ಸಾಕು. ಅಂದಿನಿಂದ ಆಕೆಯ ತಾಯಿಯ ಕಾಗದ ಬರುವವರೆಗೆ ಆದ ಜಗಳವನ್ನು ಮುಗಿಯಿಸಲಿಕ್ಕೆ ನೀವು ಯಾವ ಪ್ರಯತ್ನ ಮಾಡಿದಿರಿ ? ”

“ ಅಂಥ ಪ್ರಯತ್ನ ಮಾಡುವ ಮನಃಸ್ಥಿತಿಯಲ್ಲಿ ನಾನಿರಲಿಲ್ಲ.”

“ ಆಕೆ ಹೊರಟುಹೋದನಂತರ ಆಕೆ ಏನಾದಳು ಎಂಬುದನ್ನು ನೀವು ತಿಳಿದುಕೊಳ್ಳಲು ಏನು ಮಾಡಿದಿರಿ ? ”

“ ಆಕೆ ಪುಣೆಗೆ ಹೋದಳು ಎಂದು ತಿಳಿಯಿತಾದ್ದರಿಂದ ನಾನು ಏನೂ ಮಾಡಬೇಕಿರಲಿಲ್ಲ.”

“ ಆಕೆ ಪುಣೆಗೆ ಹೋದದ್ದು ಹೇಗೆ ಗೊತ್ತಾಯಿತು ? ”

“ ಅವರ ತಾಯಿಯಿಂದ ಕಾಗದ ಬಂದಿತು.”

“ ಹೊರಟುಹೋದಮೇಲೆ ಎಷ್ಟು ದಿನಕ್ಕೆ ಆ ಕಾಗದ ಬಂದಿತು ? ”

“ ಎಂಟು–ಹತ್ತು ದಿವಸ ಆಗಿರಬಹುದು.”

“ ಯಾರ ಕಾಗದಕ್ಕೆ ಅದು ಉತ್ತರವಾಗಿತ್ತು ? ”

“ ನನ್ನ ಅಕ್ಕನ ಗಂಡ ಬರೆದ ಕಾಗದಕ್ಕೆ ಅದು ಉತ್ತರವಾಗಿತ್ತು.”

“ ಸರಿ. ನೀವಾಗಿಯೇ ಕಾಗದ ಬರೆಯಲಿಲ್ಲ, ವಿಚಾರಿಸಲಿಲ್ಲ ಎಂದಾಯಿತು.”

ಆನಂದ ಸುಮ್ಮನಾಗಿಯೇ ಉಳಿದ.

" ಕಳೆದ ವರ್ಷ ಆಗಸ್ಟ್ ತಿಂಗಳಲ್ಲಿ ಸಂಧಾನಕ್ಕೆಂದು ಹೋದ ಬಗ್ಗೆ ಹೇಳಿದಿರಿ. ಆಗ ನಿಮ್ಮ ಹೆಂಡತಿ 'ಬೇರೆಯಾಗಿ ಮನೆ ಮಾಡಿದರೆ ಬರುತ್ತೇನೆ' ಎಂದು ಹೇಳಿದರೆ ? "

" ಹಾಗೆ ಹೇಳಲಿಲ್ಲ."

" ಅದೇ ಮಾತಿನಲ್ಲಿ ಹೇಳಿರಲಿಕ್ಕಿಲ್ಲ 'ನೀವು ಇನ್ನೂ ಅಲ್ಲಿಯೇ ಇರುತ್ತೀರಾ ?' ಎಂದು ಕೇಳಿದರು ? "

" ಹೌದು."

" 'ಪ್ರಪಂಚದಲ್ಲಿ ಬೇರೆ ಜಾಗ ಇಲ್ಲವೆ ?' ಎಂದೂ ಕೇಳಿದರು. ಹೌದೆ ? "

" ಹೌದು."

" ಬೇರೆಯಾಗಿ ಮನೆ ಮಾಡಿಕೊಂಡಿದ್ದರೆ ಎಲ್ಲವೂ ಸರಿಯಾಗುತ್ತದೆ ಎಂದು ನಿಮಗೆಂದಿಗೂ ಅನಿಸಿರಲಿಲ್ಲವೆ ? "

" ನನಗೆ ಬೇರೆಯಾಗಿ ಮನೆ ಮಾಡುವುದು ಸಾಧ್ಯವಿರಲಿಲ್ಲ. ಅಲ್ಲದೆ ಆಕೆ ಬರುವುದಿಲ್ಲ ಎಂದು ಖಂಡಿತವಾಗಿ ಹೇಳಿದಮೇಲೆ ಬೇರೆಯಾಗಿ ಮನೆ ಮಾಡುವ ಪ್ರಶ್ನೆಯೇ ಉಳಿಯಲಿಲ್ಲ "

" ನಿಮ್ಮ ಮಿತ್ರನ ಮದುವೆಯ ಮಂಟಪದಲ್ಲಿ ನೋಡಿದಾಗಿನಿಂದ ನಿಮಗೆ ನಿಮ್ಮ ಹೆಂಡತಿಯ ಅನೈತಿಕ ಜೀವನದ ಬಗ್ಗೆ ಸಂಶಯ ಬಂದಿತೆಂದು ಹೇಳಿದಿರಿ ಆಗಸ್ಟನಲ್ಲಿ ದಾದರ್‌ನಲ್ಲಿ ಭೆಟ್ಟಿಯಾದಾಗ ಅಂಥ ಸಂಶಯ ನಿಮಗೆ ಬರಲಿಲ್ಲವೆ ? "

" ಇಲ್ಲ ಆಗ ಆಕೆ ಸ್ಕೂಲಿನಲ್ಲಿ ಶಿಕ್ಷಕಿಯಾಗಿದ್ದಳು "

" ಡಿಸೆಂಬರ್‌ನಲ್ಲಿ ಒಮ್ಮೆಲೆ ನಿಮಗೆ ಹೇಗೆ ಸಂಶಯ ಬಂದಿತು ? "

" ಆಕೆ ಫಿಲ್ಮ್ ಕಂಪನಿ ಸೇರಿದ್ದು ನನಗೆ ತಿಳಿದುಬಂದಿತ್ತು."

" ಫಿಲ್ಮ್ ಕಂಪನಿ ಸೇರಿದಾಕ್ಷಣ ಅನೈತಿಕ ಜೀವನ ನಡೆಯಿಸಿದರು ಎಂದು ಹೇಳಲಿಕ್ಕಾಗುತ್ತದೆಯೆ ? "

" ಆಕೆಯ ಮುಖ, ಆಕೆಯ ರೀತಿ ನೋಡಿ ನನಗೆ ಹಾಗೆ ತೋರಿತು."

" ಅಂದರೆ ನಿಮಗೆ ಹಾಗೆ ಅನಿಸಿತು."

" ಅದಕ್ಕೆ ಸಮರ್ಥಿಸುವಂತೆ ಬೇರೆಯಾದ ಮಾಹಿತಿ ಅಷ್ಟರಲ್ಲಿಯೆ ನನಗೆ ತಿಳಿದುಬಂದಿತ್ತು."

" ಯಾರಿಂದ ಈ ಮಾಹಿತಿ ನೀವು ತೆಗೆದುಕೊಂಡಿರಿ ? "

" ನನ್ನ ಅಣ್ಣ, ಭಾಸ್ಕರ—"

" ಒಳ್ಳೆಯದು. ಭಾಸ್ಕರ ಈ ವಿಷಯದಲ್ಲಿ ನಿಜವಾದುದನ್ನೇ ಹೇಳಿರ ಲಿಕ್ಕಿಲ್ಲವೆಂದು ನಿಮಗೆ ಸಂಶಯ ಬರಲೇ ಇಲ್ಲ. ಅಲ್ಲವೆ ? "

" ಆತ ಸುಳ್ಳು ಹೇಳಲು ಕಾರಣವಿರಲಿಲ್ಲ."

" ಹಿಂದೊಮ್ಮೆ ಆತ ಇದೇ ರೀತಿಯ ಅಪಪ್ರಚಾರ ನಿಮ್ಮ ಹೆಂಡತಿಯ ವಿರುದ್ಧ ಮಾಡಿದ್ದನಲ್ಲವೆ ? "

" ಅದು ಅಪಪ್ರಚಾರವೊ ಸತ್ಯವೊ ಹೇಳಲಾರೆ."

" ಏನೇ ಇದ್ದರೂ ಆತ ನಿಮ್ಮ ಹೆಂಡತಿಯಿಂದ ಒಂದೆರಡು ಸಲ ಅಪ ಮಾನಿತನಾಗಿದ್ದ. ಹೌದೆ ? "

" ಹೌದು."

" ಆಕೆಯ ವಿಷಯದಲ್ಲಿ ಆತನಿಗೆ ಏನಾದರೂ ಗೌರವದ ಭಾವನೆ ಇದೆಯೆಂದು ಹೇಳಬಲ್ಲಿರಾ ? "

" ಅದನ್ನು ನಾನು ಹೇಗೆ ಹೇಳಲಿ ? "

" ಹೇಳಬಹುದು ಆತ ಯಾವಾಗಲೂ ಆಕೆಯ ವಿಷಯದಲ್ಲಿ ಕೆಟ್ಟ ದಾದುದನ್ನೇ ನಿಮಗೆ ವರದಿ ಮಾಡಿದ್ದಾನೆ."

ಆನಂದ ಸುಮ್ಮನಾಗಿಯೇ ಉಳಿದ ದೇಶಮುಖ್‌ರು ಮತ್ತೆ ಮುಂದು ವರಿದರು , ಬೇರೆ ದಾರಿ ಹಿಡಿದರು.

" ಭಾಸ್ಕರನ ಹೇಳಿಕೆಯ ಹೊರತಾಗಿ ನಿಮಗೆ ಬೇರೆ ಏನಾದರೂ ಪ್ರತ್ಯಕ್ಷ ಪ್ರಮಾಣ ದೊರಕಿತೆ ? "

" ಪ್ರತ್ಯಕ್ಷ ಪ್ರಮಾಣ ಹೇಗೆ ಸಾಧ್ಯ ? ಸಾಕ್ಷಿಗಳೆದುರು ಯಾರೂ ಅಪ ಕೃತ್ಯಗಳನ್ನು ಮಾಡುವುದಿಲ್ಲ."

" ನಿಜ. ಆದರೆ ಮಾಡಿದ್ದನ್ನು ನೋಡಿದವರು ಇರಬಹುದಲ್ಲವೆ ? "

" ಹೌದು. ನೋಡಿದವರೂ ಇದ್ದಾರೆ. ಅಂಥ ಒಂದೆರಡು ಸಾಕ್ಷಿಗಳು ನನ್ನ ಪರವಾಗಿ ಹೇಳುವವರಿದ್ದಾರೆ."

" ಅದಿರಲಿ. ನಿಮ್ಮಿಬ್ಬರಲ್ಲಿ ಮೊದಲು ಸಲ ಜಗಳ ಪ್ರಾರಂಭವಾದಾಗಿನಿಂದ ಬೇರೆಯಾಗಿರಬೇಕೆಂಬ ಆಕೆಯ ಬೇಡಿಕೆಯನ್ನು ನೀವು ಸಹಾನುಭೂತಿಪೂರ್ವಕವಾಗಿ ವಿಚಾರಿಸಲಿಲ್ಲವೆಂದೇ ಆಕೆಗೆ ಬೇರೆಯಾಗಿರುವ ಏರ್ಪಾಡು ಮಾಡಿಕೊಳ್ಳಬೇಕಾಯಿತು, ಎನ್ನುತ್ತೇನೆ ನಾನು. ಇದಕ್ಕೆ ಏನು ಹೇಳುತ್ತೀರಿ ? "

" ಅದು ಆಕೆಯ ಪಕ್ಷದ ಮಾತು."

" ಪತಿಯಿಂದ ಅಪೇಕ್ಷಿಸಬಹುದಾದ ಸೌಹಾರ್ದವನ್ನು ನೀವು ತೋರಿಸಲಿಲ್ಲವಾದ್ದರಿಂದಲೇ ವಿರಸ ಬೆಳೆಯುವಂತಾಯಿತು ಎಂದೂ ಹೇಳುತ್ತೇನೆ."

" ಅದು ಸುಳ್ಳು. ಆಕೆಗೆ ಮನೆ ಕಟ್ಟಿಕೊಂಡು ಇರುವುದೇ ಬೇಡವಾಗಿತ್ತು."

" ಅದು ನಿಮ್ಮ ಪಕ್ಷದ ಮಾತು ! "

ಎಂದು ನಸುನಕ್ಕು ದೇಶಮುಖರು ತಮ್ಮ ಮರುಸವಾಲನ್ನು ಮುಗಿಯಿಸಿದರು. ಮುಂದೆ ಕೋರ್ಟು ಒಂದೆರಡು ಪ್ರಶ್ನೆಗಳನ್ನು ಕೇಳಿತು.

" ಬೇರೆ ಮನೆ ಮಾಡಿದರೆ ನಿಮ್ಮ ಅಕ್ಕನ ಮನೆಯಲ್ಲಿ ನಡೆಯುತ್ತಿದ್ದ ಕಿಕ್ಕಾಟಗಳು ತಾವಾಗಿಯೇ ಬಗೆಹರಿಯುತ್ತವೆ—ಆದ್ದರಿಂದ ಬೇರೆಯಾಗಿ ಇರೋಣ ಎಂದು ನಿಮ್ಮ ಹೆಂಡತಿ ಹೇಳುತ್ತಿದ್ದುದು ನಿಜವೆ ? "

" ಹೌದು. ಬೇರೆಯಾಗಿ ಇರೋಣ ಎನ್ನುತ್ತಿದ್ದಳು."

" ಆಗಸ್ಟನಲ್ಲಿ ನೀವು ಭೆಟ್ಟಿಯಾದಾಗಲೂ ಹೇಳಿದರೆ ? "

" ಆಗ ಹೇಳಲಿಲ್ಲ "

" ಬೇರೆಯಾಗಿ ಇರೋಣ ಎಂದು ಯಾಕೆ ಕೇಳುತ್ತಿರಬಹುದು ಎಂಬುದನ್ನು ನೀವು ಯೋಚಿಸಿದಿರಾ ? "

" ಯೋಚಿಸಿದೆ. ಆದರೆ ಆಗ ಬೇರೆ ಇರುವುದು ನನಗೆ ಸಾಧ್ಯವಿರಲಿಲ್ಲ."

" ಅದು ಆಗಸ್ಟನಲ್ಲಿ ಹೇಗೆ ಸಾಧ್ಯ ಎನಿಸಿತು ? "

" ಅದರ ಹೊರತು ನಾವಿಬ್ಬರೂ ಕೂಡಿರುವುದು ಅಸಾಧ್ಯವೆಂದು ಮನವರಿಕೆಯಾದ್ದರಿಂದ."

" ಆದರೆ ಈ ವಿಷಯದಲ್ಲಿ ನಿಮ್ಮ ಪ್ರಯತ್ನ ಬಹಳ ತಡವಾಗಿ ಪ್ರಾರಂಭವಾದಂತಾಯಿತಲ್ಲವೆ ? "

" ನನಗೆ ಸಾಧ್ಯವೆನಿಸಿದಾಗ ಆ ಮಾತು ಹೇಳಿದೆ."

ಆನಂದನ ಸಾಕ್ಷ್ಯ ಮುಗಿಯಿತು. ನಿಟ್ಟುಸಿರೆಳೆದು ಕೆಳಗಿಳಿದು ಬಂದು ಬೆವರೊರಸಿಕೊಂಡ. ಆತನ ಮುಖದಲ್ಲಿ ಆ ಕ್ಷಣಕ್ಕೆ ಗೆಲುವೂ ಇರಲಿಲ್ಲ, ಸೋಲೂ ಇರಲಿಲ್ಲ, ಗಾಣಕ್ಕೆ ಸಿಕ್ಕ ಕಬ್ಬಿನಂತಾಗಿ, ನಿರ್ಜೀವವಾಗಿ ಸಿಪ್ಪೆಯಾಗಿ ಹೊರ ಬಂದಹಾಗಾಗಿದ್ದ. ಅವನದಾದ ಮೇಲೆ ಆನಂದನ ಪರವಾಗಿ ಹಿಂದ್ ಬ್ಯಾಂಕ್ ಮ್ಯಾನೇಜರರದೂ ಆಮೇಲೆ 'ಮಾಥೆರಾನ್ ಹೊಟೆಲ್' ಮಾಲೀಕನದೂ, ಸಾಕ್ಷ್ಯ ನಡೆದುವು ಬ್ಯಾಂಕ್ ಮ್ಯಾನೇಜರರ ಮರುತಪಾಸಣೆಯನ್ನು ದೇಶಮುಖ್‌ರು ಮಾಡಲಿಲ್ಲ 'ಮಾಥೆರನ್ ಹೊಟೆಲ್' ಮಾಲೀಕನನ್ನು ಮಾತ್ರ ಕೆಲವೊಂದು ಪ್ರಶ್ನೆಗಳನ್ನು ಕೇಳಿದರು .

" ಏಪ್ರಿಲ್ ತಿಂಗಳ ಕೊನೆಗೆ ರಂಗನಾಥನ್ ಮತ್ತು ಮೋಹಿನಿ ನಿಮ್ಮ ಹೊಟೆಲಿನಲ್ಲಿ ಬಂದು ಐದು ದಿವಸ ಇದ್ದರು ಎಂದು ಹೇಗೆ ಹೇಳುತ್ತೀರಿ ? "

" ನಮ್ಮ ಹೊಟೆಲ್ ರಜಿಸ್ಟರ್‌ನ ಆಧಾರದಿಂದ ಹೇಳುತ್ತೇನೆ. ಆ ರಜಿಸ್ಟರನ್ನೂ ಅವರು ಕಳಿಸಿದ ಒಂದು ತಂತಿಯನ್ನೂ ಹಜರ್‌ಮಾಡಿದೆ."

" ಆಗಬಹುದು ಆದರೆ ಬಂದವರು ಇವರೇ ಎಂದು ಹೇಗೆ ಹೇಳಬಹುದು? ನಿಮ್ಮಲ್ಲಿಗೆ ಬಂದು ಇದ್ದುಹೋದ ಎಲ್ಲರ ಮೋರೆಯ ಗುರುತನ್ನು ನೀವು ಹಿಡಿಯುವುದು ಸಾಧ್ಯವೆ ? "

" ಹೌದು. ಬಂದು ಹೋದವರ ಗುರುತು ಹಿಡಿಯಬಲ್ಲೆ "

" ಬಹಳ ಅಗಾಧವಾಯಿತು ನಿಮ್ಮ ಜ್ಞಾಪಕಶಕ್ತಿ ! ನಾನು ಎಂದಾದರೂ ನಿಮ್ಮ ಹೊಟೆಲ್‌ನಲ್ಲಿ ಬಂದು ಇದ್ದೆನೆ ? "

ಹೊಟೆಲ್ ಮಾಲಿಕ ಒಂದರೆನಿಮಿಷ ಸೂಕ್ಷ್ಮವಾಗಿ ಮುಖ ನೋಡಿದ. ಅನುಮಾನಿಸಿದ, ತಡವರಿಸಿದ :

" ನೀ–ವು ಬಂದಹಾಗಿಲ್ಲ—ಬಂದಿಲ್ಲ."

" ನೀವು ಹಜರ್‌ಮಾಡಿದ ರಜಿಸ್ಟರ್‌ನಲ್ಲಿ ಮಾರ್ಚ್ ೨೫ನೆಯ ದಿನಾಂಕ ನೋಡಿರಿ, ಬ್ಯಾರಿಸ್ಟರ್ ಮತ್ತು ಶ್ರೀಮತಿ ದೇಶಮುಖ್ ಎಂದು ಇದೆಯೊ ಅಥವಾ ಇಲ್ಲವೊ. ಇದೆಯೆ ? "

" ಇ–ದೆ—"

" ಅದು ಹೋಗಲಿ. ನಿಮ್ಮಲ್ಲಿಗೆ ಇಬ್ಬರು ಬಂದು 'ಮಿಸ್ಟರ್ ಮತ್ತು ಮಿಸೆಸ್' ಎಂದು ಹೇಳಿದಾಗ ಅವರು ನಿಜವಾಗಿಯೂ ಗಂಡ ಹೆಂಡತಿ

ಇರಬಹುದು ಅಥವಾ ಇಲ್ಲ ಎಂಬುದನ್ನು ತಿಳಿದುಕೊಳ್ಳುವುದಕ್ಕೆ ಏನಾದರೂ ಪ್ರಯತ್ನ ಮಾಡುತ್ತೀರಾ ? ”

“ ಆ ವಿಷಯ ನಿಜವಾಗಿ ನಮ್ಮ ವ್ಯವಹಾರಕ್ಕೆ ಸಂಬಂಧವಿಲ್ಲ. ಆದ್ದರಿಂದ ಹೆಚ್ಚಾಗಿ ನಾವು ವಿಚಾರಿಸುವುದಿಲ್ಲ. ಸಂಶಯಕ್ಕೆ ಆಸ್ಪದ ಇದ್ದಾಗ ಮಾತ್ರ ನಾವು ಎಡೆಕೊಡುವುದಿಲ್ಲ ”

“ ಇವರಿಬ್ಬರು ಬಂದಾಗ ನಿಮಗೆ ಯಾವ ಸಂಶಯವೂ ಬರಲಿಲ್ಲ ? ”

“ ಇಬ್ಬರೂ ಒಂದೇ ಕೋಣೆಯನ್ನು ಬಾಡಿಗೆ ತೆಗೆದುಕೊಂಡಿದ್ದರು ! ”

“ ಅದಕ್ಕೆಂದು ಸಂಶಯ ಬರಲಿಲ್ಲವೆ ? ಚೆನ್ನಾಗಿದೆ ” ಎಂದು ದೇಶಮುಖ್‌ರು ನಕ್ಕು ಮುಂದುವರಿದರು :

“ ಇಬ್ಬರೂ ಯಾವಾಗಲೂ ಕೋಣೆಯಲ್ಲಿಯೇ ಇರುತ್ತಿದ್ದರೆ ? ”

“ ಹಗಲು ಹೊರಗೆಯೇ ಇರುತ್ತಿದ್ದರು. ರಾತ್ರಿ ಹಿಂತಿರುಗುತ್ತಿದ್ದರು.”

“ ಅವರು ಯಾರು, ಯಾತಕ್ಕೆ ಬಂದಿದ್ದರು ಎಂದು ಏನಾದರೂ ನೀವು ವಿಚಾರಿಸಿದಿರಾ ? ”

“ ವಿಚಾರಿಸಬೇಕಾದ ಆಗತ್ಯ ನಮ್ಮ ವ್ಯವಹಾರಕ್ಕಿಲ್ಲ. ಆದರೆ ಅವರಿಗೆ ಬೇಕಾದ ಸೌಕರ್ಯಗಳ ವಿಚಾರ ಕೇಳಹೋದಾಗ ಬಂದವರು ಫಿಲ್ಮ್ ಡೈರೆಕ್ಟರ್ ಇದ್ದಾರೆಂದೂ, ಶೂಟಿಂಗ್‌ಗಾಗಿ ಸ್ಥಳಗಳನ್ನು ನೋಡಲಿಕ್ಕೆ ಬಂದಿದ್ದಾರೆಂದೂ ಗೊತ್ತಾಯಿತು.”

“ ಸರಿ ” ಎಂದು ದೇಶಮುಖ್‌ರು ಆತನ ಮರುಸವಾಲು ಮುಗಿಸಿದರು. ರಾಮರಾಯ ತನ್ನ ಕಡೆಯ ಸಾಕ್ಷಿಗಳು ಮುಗಿದುವೆಂದು ಹೇಳಿದಾಗ ಮೋಹಿನಿಯ ಸರತಿ ಬಂದಿತು. ದೇಶಮುಖ್‌ರು ತಾವು ಕೇಳುವುದನ್ನೂ ಆಕೆ ಹೇಳಬೇಕಾದುದನ್ನೂ ಚೆನ್ನಾಗಿ ತಿಳಿಸಿಕೊಟ್ಟಿದ್ದರಿಂದ ಮೋಹಿನಿ ಧೈರ್ಯವಾಗಿಯೇ ಬಂದು ನಿಂತಳು. ಆಕೆಯ ಸಾಮಾನ್ಯ ವೇಷಭೂಷೆಗಳನ್ನು ಮೀರಿ ಸೂಸಿ ಬರುತ್ತಿದ್ದ ಚೆಲುವು ಕೋರ್ಟಿನಲ್ಲಿದ್ದವರ ಕಣ್ಣು ಸೆಳೆದಂತೆ ನ್ಯಾಯಾಧೀಶರ ಲಕ್ಷ್ಯವನ್ನೂ ಸೆಳೆದಂತೆ ಕಂಡಿತು. ಒಂದೆರಡು ಸಲ ಸೂಕ್ಷ್ಮವಾಗಿ ಆಕೆಯನ್ನು ನೋಡಿದರು. ಮುಖದಲ್ಲಿ ಶೀಲವನ್ನು ಗುರುತಿಸಬಯಸಿದರೇನೋ ! ಮೋಹಿನಿ ನಿಧಾನವಾಗಿ, ನಿರ್ವಿಕಾರವಾಗಿ ತನ್ನ ಹೇಳಿಕೆಯನ್ನು ಪ್ರಾರಂಭಿಸಿದಳು—ದೇಶಮುಖ್‌ರು ಕೇಳುತ್ತಿದ್ದ ಪ್ರಶ್ನೆಗಳಿಗೆ ಉತ್ತರವಾಗಿ.

"ನಾನು ಮೋಹಿನಿ—ಪ್ರತಿವಾದಿ. ವಾದಿಯ ಮದುವೆಯ ಹೆಂಡತಿ. ಈಗ ಬೇರೆಯಾಗಿ ಇರುತ್ತೇನೆ. ಶಾರದಾ ಸ್ಟುಡಿಯೋಸ್‌ದಲ್ಲಿ ಅವರ ಚಿತ್ರಗಳಲ್ಲಿ ಕೆಲಸ ಮಾಡುತ್ತೇನೆ. ನಮ್ಮ ಮದುವೆಯಾದನಂತರ ಮುಂಬಯಿಗೆ ಬಂದೆ. ಬೋರಿವಲಿಯಲ್ಲಿ ಇವರ ಅಕ್ಕನ ಮನೆಯಲ್ಲಿ ಇರುತ್ತಿದ್ದೆ. ಮೊದಲಿನ ನಾಲ್ಕಾರು ತಿಂಗಳು ಯಾವ ತೊಂದರೆಯೂ ಇರಲಿಲ್ಲ. ಆಮೇಲೆ ನಿಧಾನವಾಗಿ ಇವರ ಅಕ್ಕನಿಂದ ಕಿರುಕುಳ ಪ್ರಾರಂಭವಾಯಿತು. ಮನೆಗೆಲಸ ಹೆಚ್ಚುಹೆಚ್ಚಾಗಿ ನನ್ನ ಪಾಲಿಗೇ ಬೀಳತೊಡಗಿತು. ನನಗೆ ಸಾಧ್ಯವಿದ್ದಷ್ಟು ಮಾಡುತ್ತ ಬಂದೆ. ಈ ಬಗ್ಗೆ ಚಾಡಿ ಹೇಳುವುದು ಪ್ರಾರಂಭವಾಯಿತು. ಅಕ್ಕನ ಮಾತನ್ನು ನಂಬಿ ನನ್ನನ್ನೇ ಇವರು ದೂಷಿಸತೊಡಗಿದರು. ನನ್ನ ಮೇಲೆ ಯಾರೂ ವಿಶ್ವಾಸ ಇಡಲಿಲ್ಲ. ನನ್ನ ಮಾತು ಬರಬರುತ್ತ ಯಾವುದರಲ್ಲಿಯೂ ನಡೆಯದ ಹಾಗಾಯಿತು. ಅವರು ಹಾಕಿದ್ದು, ಹಾಕಿದಷ್ಟು ಅನ್ನ ತಿಂದು ಅವರೆಲ್ಲರಿಗೆ ಮನೆಯ ಆಳಾಗಿ ಇರುವ ಸ್ಥಿತಿ ನನಗೆ ಬಂದಿತು. ಇದರ ಲಾಭ ಪಡೆದು ಇವರ ಅಣ್ಣ ನನ್ನ ಬೆನ್ನುಕಾಯತೊಡಗಿ ಸಹಾನುಭೂತಿಯ ಸೋಗಿನಲ್ಲಿ ನನ್ನನ್ನು ಮೋಸಗೊಳಿಸಲು ಯತ್ನಿಸಿದ. ಈ ಮಾತನ್ನು ಇವರಿಗೆ ಹೇಳಿದರೆ ನನ್ನಮೇಲೆಯೆ ಹರಿಹಾಯ್ದು ಹೊಡೆದರು. ಎಲ್ಲ ಕಡೆಯಿಂದಲೂ ಕಾಟ ಬೆಳೆಯಿತು. ಏನಾದರೂ ಹೇಳಹೋದರೆ ತಿರುಗಿ ನನಗೇ ಏಟು ಬೀಳುತ್ತಿತ್ತು ಹೀಗಾಗಿ ನನ್ನ ದಾರಿಯನ್ನು ನಾನು ಸರಿಪಡಿಸಿಕೊಳ್ಳದ ಹೊರತು ನನಗೆ ಬೇರೆ ಮಾರ್ಗ ಕಾಣಲಿಲ್ಲ. ಕಾಲೇಜು ಸೇರಿ ವಿದ್ಯಾಭ್ಯಾಸ ಮುಗಿಯಿಸಿದರೆ ಎಲ್ಲಿಯಾದರೂ ಕೆಲಸ ಹಿಡಿದುಕೊಂಡು ನನ್ನ ಮಟ್ಟಿಗೆ ನಾನಿರಬಹುದು ಎಂದು ಆ ಯೋಚನೆಯನ್ನು ಮಾಡಿದೆ. ಹಟ ಹಿಡಿದೆ. ಇದು ಇನ್ನೂ ಹೆಚ್ಚಿನ ಅನ್ಯಾಯಕ್ಕೆ ಕಾರಣವಾಯಿತು. ನಾನು ಕಾಲೇಜಿಗೆ ಹೋಗುವುದನ್ನು ಇವರ ಅಕ್ಕ ಅಪಾರ್ಥಕ್ಕೀಡು ಮಾಡಿ ಇಲ್ಲದ ಚಾಡಿ ಹೇಳತೊಡಗಿದಳು. ಇಷ್ಟರಲ್ಲಿಯೇ ನಾನು ಇವರ ಅಣ್ಣನಿಗೆ ಚೆನ್ನಾಗಿ ಬುದ್ಧಿ ಕಲಿಸಿದ್ದೆನಾದ್ದರಿಂದ ಆತ ನನ್ನ ಮೇಲೆ ಸೇಡಿನ ಬುದ್ಧಿಯಿಂದ ಅಕ್ಕನನ್ನು ಪುಸಲಾಯಿಸಿ ಆಕೆಯ ಆಪಾದನೆಗಳನ್ನು ಸಮರ್ಥಿಸುತ್ತಿದ್ದ. ....ನನ್ನ ಬಿ.ಎ. ಪರೀಕ್ಷೆ ಮುಗಿದ ಮರುದಿನ ಇವರು ನನ್ನನ್ನು ಸಿಕ್ಕಾಪಟ್ಟೆ ಬೈದು ಬಡಿದು ಮನೆಯಿಂದ ಹೊರದೂಡಿದರು. ಪರೀಕ್ಷೆ ಮುಗಿದ ದಿನ ಮಧ್ಯಾಹ್ನ ಬೋರಿವಲಿಯಲ್ಲಿಯ ನನ್ನ ಪರಿಚಿತರೊಬ್ಬರು ಬಹಳ ದಿವಸಗಳ

ನಂತರ ಸಿಕ್ಕಿದ್ದರಾದ್ದರಿಂದ ಅವರ ಜೊತೆಯಲ್ಲಿ ಮಾತನಾಡುತ್ತ ಬಂದದ್ದು ನಿಜ. ನನ್ನ ಊಟವಾಗಿದ್ದಿಲ್ಲವಾದ್ದರಿಂದ ದಾದರಿನಲ್ಲಿ ನಾನು ಊಟ ಮಾಡಬೇಕೆಂದು ಒತ್ತಾಯಪಡಿಸಿದರು. ಇದನ್ನೆಲ್ಲ ನನ್ನ ಬೆನ್ನುಕಾಯುತ್ತಿದ್ದ ಭಾಸ್ಕರ ಇವರಿಗೆ ಕತೆ ಕಟ್ಟಿ ಹೇಳಿದ. ನನ್ನ ಕೈಯಲ್ಲಿಯ ಬಳೆ ಒಡೆಯುವಹಾಗೆ, ಕೊರಳಲ್ಲಿಯ ಮಂಗಲಸೂತ್ರ ಹರಿದುಬೀಳುವ ಹಾಗೆ ನನ್ನನ್ನು ಎಳೆದಾಡಿ ಹೊಡೆದರು. ಅಲ್ಲಿಂದ ಹೊರಟವಳು ನಾನು ರಾತ್ರಿಯ ರೈಲಿನಿಂದ ಪುಣೆಗೆ ಹೋದೆ, ನನ್ನ ತಾಯಿಯ ಹತ್ತಿರ. ಏನೂ ಮಾಡದೆ, ಉಳಿದವರಿಗೆ ಭಾರವಾಗಿ ಮನೆಯಲ್ಲಿರುವುದು ನನಗೆ ಸರಿಯೆನಿಸಲಿಲ್ಲ.

ಪರೀಕ್ಷೆಯ ಪರಿಣಾಮ ತಿಳಿದನಂತರ ನಾಲ್ಕಾರು ಕಡೆಗಳಲ್ಲಿ ಪ್ರಯತ್ನ ಮಾಡಿ ಜುಲೈ ತಿಂಗಳಲ್ಲಿ ದಾದರ್ ಹೆಣ್ಣುಮಕ್ಕಳ ಶಾಲೆಯಲ್ಲಿ ಕೆಲಸ ಹಿಡಿದೆ. ಆಗ ನಾನು ನನ್ನ ಹಳೆಯ ಗೆಳತಿ ಅನುರಾಧಾ-ಆಪಟೆ ಇವರ ಮನೆಯಲ್ಲಿಯ ಒಂದು ಸ್ವತಂತ್ರ ಕೋಣೆಯಲ್ಲಿರುತ್ತಿದ್ದೆ ಅಲ್ಲಿರುತ್ತಿದ್ದಾಗಲೆ ಆಗಸ್ಟ ತಿಂಗಳಲ್ಲಿ ಒಂದು ದಿನ ಇವರು ಬಂದು ತಿರುಗಿ ಬರಲು ನನ್ನನ್ನು ಮನವೊಲಿಸುವ ಪ್ರಯತ್ನ ಮಾಡಿದರು. ಅವರು ಇನ್ನೂ ತಮ್ಮ ಅಕ್ಕನ ಮನೆಯಲ್ಲಿಯೇ ಇದ್ದುದನ್ನು ತಿಳಿದು ಆ ಯೋಚನೆಯನ್ನೇ ನಾನು ತಳ್ಳಿಹಾಕಿದೆ. ಅವರು ನನ್ನನ್ನು ಕಾಣ ಬಂದದ್ದು ನನ್ನ ತಾಯಿ ಬರೆಯಿಸಿದ ಆಗ್ರಹದ ಕಾಗದದ ಪರಿಣಾಮವಾಗಿ ಎನ್ನುವುದು ನನಗೆ ಗೊತ್ತಿತ್ತು. ಪುಣೆಯಲ್ಲಿ ನಾನು ಮೂರು ತಿಂಗಳಿದ್ದರೂ ಆ ಅವಧಿಯಲ್ಲಿ ಇವರು ಒಮ್ಮೆಯೂ ಬರಲಿಲ್ಲ ಒಂದು ಕಾಗದವನ್ನೂ ಬರೆಯಲಿಲ್ಲ. ಕಾಗದ ಬರೆದು, ಬಂದು, ಬೇರೆಯಾಗಿ ಇರುವ ಏರ್ಪಾಡು ಮಾಡಬಹುದು ಎಂದು ನಾನು ಆಸೆ ಇಟ್ಟುಕೊಂಡಿದ್ದೆ. ಅವರು ಬಾರದೇ ಇದ್ದುದು ನನ್ನನ್ನು ತುಂಬಾ ರೇಗಿಸಿತು. ನನ್ನ ಕಾಲ ಮೇಲೆ ನಾನು ಇರುವುದನ್ನು ನಿಶ್ಚಯಿಸಿ ಕೆಲಸ ಹಿಡಿದೆ. ದೀಪಾವಳಿಯ ರಜೆ ಮುಗಿದಾಗ ನನ್ನನ್ನು ಕೆಲಸದಿಂದ ಕಡಿಮೆಮಾಡಿದರು. ಯಾಕೆ ಎಂಬುದು ನನಗೆ ತಿಳಿಯಲಿಲ್ಲ. ಮತ್ತೆ ಒಂದೆರಡು ಕಡೆಗೆ ಪ್ರಯತ್ನ ಮಾಡಿದೆ. ಅಷ್ಟರಲ್ಲಿ ಅನುರಾಧಾ ಮತ್ತು ಆಪಟೆಯವರ ಮುಖಾಂತರ ಶಾರದಾ ಸ್ಟುಡಿಯೋಸ್‌ದ ಡೈರೆಕ್ಟರ್‌ರಾದ ರಂಗನಾಥನ್ ಅವರ ಸಾಧಾರಣ ಪರಿಚಯವಾಗಿತ್ತು. ಅದರ ಮೂಲಕ ಅವರ ಕಾರ್ಯದರ್ಶಿನಿ ಎಂದು ಕೆಲಸ ಹಿಡಿದೆ. ಆಗ ಶಾಕುಂತಲ ಚಿತ್ರದ ಸಿದ್ಧತೆಯನ್ನು ಮಾಡು

ತ್ತಿದ್ದರು. ಅನುಸೂಯೆಯ ಪಾತ್ರವನ್ನು ನಾನು ಮಾಡಬೇಕೆಂದು ಅವರು ಮತ್ತು ಅನುರಾಧೆ ಸೂಚಿಸಿದ್ದನ್ನು ನಾನು ಒಪ್ಪಿ ಕೆಲಸ ಮಾಡಿದೆ. ಆಪಟೆ ಮತ್ತು ರಂಗನಾಥನ್ ಇವರ ನಡುವೆ ವ್ಯವಹಾರಕ್ಕೆ ಸಂಬಂಧಿಸಿದ ತಕರಾರುಗಳು ಬಂದದ್ದರಿಂದ ಆಪಟೆ ಬೇರೆಯಾಗಿ ನಿಂತರು. ಬೇರೆ ಕಡೆಗೆ ಇರುವ ವ್ಯವಸ್ಥೆಯನ್ನು ಮಾಡಿಕೊಳ್ಳಬೇಕು ಎಂದು ಆಪಟೆ ನನಗೆ ಹೇಳಿದರು. ರಂಗನಾಥನ್ ಅವರ ಮುಖಾಂತರ ನಾನು ಈಗಿದ್ದ ಮನೆಯನ್ನು ಬಾಡಿಗೆ ಹಿಡಿದು ಇದ್ದಿದೇನೆ. ಶಾಕುಂತಲದಲ್ಲಿಯ ನನ್ನ ಕೆಲಸ ಚೆನ್ನಾಗಿ ಆಗಿದ್ದರಿಂದ ಇತ್ತೀಚೆ ಹೊರಬಿದ್ದ 'ಸೂತ್ರದ ಬೊಂಬೆ'ಯಲ್ಲಿ ಮುಖ್ಯಪಾತ್ರವನ್ನು ವಹಿಸಿದ್ದೇನೆ. ನನ್ನ ಮತ್ತು ರಂಗನಾಥನ್ ನಡುವೆ ಫಿಲ್ಮಿನಲ್ಲಿಯ ಕೆಲಸದ ಹೊರತಾಗಿ ಬೇರೆ ಯಾವ ಸಂಬಂಧವೂ ಇಲ್ಲ. ಈ ಕೇಸಿಗೆ ಸಮರ್ಥನೆ, ಪ್ರಮಾಣ ಎಂಬುದಕ್ಕಾಗಿ ಹಾಗೆ ಆಪಾದನೆ ಮಾಡಿದ್ದಾರೆ. ನಾನು ತಿರುಗಿ ಬರಲೊಪ್ಪದಿದ್ದ ಮೂಲಕ ಸಿಟ್ಟಿನಿಂದ ಹಾಗೆ ಮಾಡಿದ್ದರೂ ಇರಬಹುದು. ಭಾಸ್ಕರ ನನ್ನ ಮೇಲೆ ಎಂದಿದ್ದರೂ ಸಿಟ್ಟಿನಿಂದಿದ್ದಾನೆ "

ಲಾಯರ್ ರಾಮರಾಯ ಮೋಹಿನಿಯ ಮರುಸವಾಲಿಗೆಂದು ಎದ್ದುನಿಂತ. ಮೋಹಿನಿಯೂ ಉದ್ದವಾಗಿ ಒಮ್ಮೆ ಉಸಿರೆಳೆದು ಸಿದ್ಧಳಾದಳು. ಮುಖದಲ್ಲಿ ಯಾವ ಹೆದರಿಕೆಯೂ ಇರಲಿಲ್ಲ. ಎಲ್ಲಿಗೆ ಪ್ರಾರಂಭಿಸಬೇಕೆಂಬುದು ರಾಮರಾಯನಿಗೆ ಯೋಚನೆಯ ವಿಷಯವಾಗಿತ್ತು. ಮೋಹಿನಿಯಲ್ಲಿ ಅನೈತಿಕ ಪ್ರವೃತ್ತಿ ಮೊದಲಿನಿಂದಲೂ ಇದ್ದಿತೆಂದು ಸಾಧಿಸಬೇಕಾಗಿತ್ತು. ಆದರೆ ಆಕೆ ಮನೆಯಿಂದ ಹೊರಬೀಳುವ ಮೊದಲಿನ ವೃತ್ತಾಂತವನ್ನೆತ್ತಿದರೆ—ನಿಜವೊ ಸುಳ್ಳೊ—ತನಗೆ ಬೇಕಾದವನಾದ ವಸಂತನ ಹೆಸರು ಅದರಲ್ಲಿ ಸಿಕ್ಕಿಬೀಳುತ್ತಿತ್ತು. ಆದ್ದರಿಂದ ಆ ವಿಷಯವನ್ನು ಸಾಧ್ಯವಾದಷ್ಟು ಆಳವಾಗಿ ಕೆದಕದೆ ತೇಲಿಸಿಕೊಂಡು ಹೋಗಬೇಕಾಗಿತ್ತು. ಹೀಗೆಂದು ನಿಧಾನವಾಗಿ ಮೊದಲು ಮಾಡಿದ :

" ನೀವು ಮನೆ ಬಿಟ್ಟು ಹೊರಟ ದಿನ ಆನಂದರಾಯ ನಿಮ್ಮ ನಡತೆ ಸರಿಯಾಗಿಲ್ಲ ಎಂದು ಆಪಾದಿಸಿದರಲ್ಲವೆ ? ಅದಕ್ಕೆ ಏನೂ ಕಾರಣ ಇರಲಿಲ್ಲವೆ ? "

" ಇದ್ದರೆ ಅವರಿಗೆಯೆ ಗೊತ್ತು."

" ಊಟ ಮಾಡಬೇಕಾಗಿದ್ದರೆ ದಾದರ್‌ವರೆಗೆ ಯಾತಕ್ಕೆ ಬರಬೇಕಾ

ಗಿತ್ತು? ಅಲ್ಲಿಯೇ ಫೋರ್ಟಿನಲ್ಲಿಯೇ ಮಾಡಬಹುದಾಗಿತ್ತಲ್ಲ?"

"ನಾನು ಊಟ ಮಾಡಬೇಕೆನ್ನುವ ಅವರ ವಿಚಾರ ನಾವು ಲೋಕಲ್ ಗಾಡಿಯಲ್ಲಿದ್ದಾಗ ಬಂದಿತು."

"ಇರಬಹುದು. ನೀವು ದಾದರ್‌ಗೆ ಬಂದಾಗ ಎಷ್ಟು ಗಂಟೆಯಾಗಿತ್ತು?"

"ಮೂರಾಗಿರಬಹುದು."

"ತಿರುಗಿ ಮನೆಗೆ ಹೋದಾಗ?"

"ಆರು ಗಂಟೆ."

"ಒತ್ತಾಯಕ್ಕಾಗಿ ಊಟ ಮಾಡಲೊಪ್ಪಿಬಂದವರು ಊಟವಾದ ಕೂಡಲೆ ತಿರುಗಿ ಹೊರಡಲಿಲ್ಲವೇಕೆ?"

"ಏನೋ ಮಾತನಾಡುತ್ತ ಕುಳಿತೆವು."

"ಹೌದು. ಮಾತನಾಡಲಿಕ್ಕೆ ಸಮುದ್ರದ ದಂಡೆಗೂ ಹೋಗಬೇಕಾಯಿತು! ಇಷ್ಟು ತಡ ಮಾಡಿ ಮನೆಗೆ ಹೋದರೆ ಅವರಿಗೆ ಸಂಶಯವೆನಿಸುವುದು ಸಹಜವೆನಿಸಲಿಲ್ಲವೆ ನಿಮಗೆ?"

"ಅವರು ನನ್ನ ವಿಷಯದಲ್ಲಿ ಯಾವಾಗಲೂ ಸಂಶಯಿತರಾಗಿಯೇ ಇದ್ದುದರಿಂದ ನನಗೆ ಅದರ ಮಹತ್ವವೇನೂ ಅನಿಸಲಿಲ್ಲ."

"ಅದಿರಲಿ. ನೀವು ಸ್ಕೂಲಿನಲ್ಲಿ ಎಷ್ಟು ದಿನ ಕೆಲಸ ಮಾಡಿದಿರಿ?"

"ಸುಮಾರು ಮೂರೂವರೆ ತಿಂಗಳು."

"ನಿಮ್ಮನ್ನು ಶಾಲೆಯ ಕೆಲಸದಿಂದ ಯಾಕೆ ಕಡಿಮೆ ಮಾಡಿದರು ನಿಮಗೆ ಗೊತ್ತೆ?"

"ನಾನು ಕೆಲಸ ಮಾಡುತ್ತಿದ್ದ ಜಾಗ ತಾತ್ಪೂರ್ತಿಕವಾಗಿ ತೆರೆವಾಗಿದ್ದಿತು ಎಂದು ಹೇಳಿದರು"

"ಅಲ್ಲದೆ ನೀವು ಆಸ್ಥೆವಹಿಸಿ ಕೆಲಸ ಮಾಡುತ್ತಿರಲಿಲ್ಲ ಎಂದೂ ಹೇಳಿದರು ಅಲ್ಲವೆ?"

"ಅದು ಅವರ ಅಭಿಪ್ರಾಯ."

"ಅಭಿಪ್ರಾಯವಿರಬಹುದು. ಆದರೆ ಅದಕ್ಕೆ ಕಾರಣವೂ ಇರಬೇಕು. ಸ್ವಾತಂತ್ರ್ಯೋತ್ಸವದ ದಿನ ನೀವು ಶಾಲೆಯ ಕಾರ್ಯಕ್ರಮದಲ್ಲಿ ಭಾಗವಹಿಸಲು ಹೋಗಲಿಲ್ಲ ಇದು ನಿಜವೆ?"

" ಹೌದು. ಅಂದು ನನಗೆ ಮೈಯಲ್ಲಿ ಸ್ವಸ್ಥವಿರಲಿಲ್ಲ."

" ಹಾಗಿದ್ದರೂ ಯಾರೊ ಒಬ್ಬರ ಜೊತೆಯಲ್ಲಿ ಒಂದೆರಡು ಗಂಟೆ ಹರಟೆ ಹೊಡೆದು ತಿರುಗಾಡುವುದು ಸಾಧ್ಯವಿದ್ದಿತು "

" ಹೌದು. ಹಾಸಿಗೆ ಹಿಡಿದುಕೊಂಡು ಬಿದ್ದಿರುವಷ್ಟು ಅಸ್ವಸ್ಥಳಾಗಿದ್ದಿಲ್ಲ, ನಿಜ " ಮೋಹಿನಿ ಸಿಡುಕಿನಲ್ಲಿಯೇ ಹೇಳಿದಳು. ಸುಮ್ಮನೆ ವ್ಯಂಗ್ಯದಿಂದೇಕೆ ಆಕೆಯನ್ನು ನೋಯಿಸುವುದು ಎಂದು ನೇರವಾಗಿ ಕೇಳಿದ

" ಅಷ್ಟರಲ್ಲಿಯೇ ನಿಮಗೆ ರಂಗನಾಥನ್ ಅವರ ಪರಿಚಯವಾಗಿದ್ದಿತಲ್ಲವೆ ? "

" ಹೌದು "

" ಸ್ಟುಡಿಯೋಸ್‌ದ ಕಡೆಗೆ ಎಷ್ಟು ದಿನಕ್ಕೊಮ್ಮೆ ಹೋಗುತ್ತಿದ್ದಿರಿ ? "

" ಅನುರಾಧೆಯ ಜೊತೆಯಲ್ಲಿ ಆಗೀಗ ಹೋಗುತ್ತಿದ್ದೆ."

" ಅದಕ್ಕೆಂದೇ ಶಾಲೆಯ ಕೆಲಸದ ಕಡೆಗೆ ನಿಮಗೆ ಲಕ್ಷ್ಯ ಪೂರೈಸುವುದು ಆಗುತ್ತಿರಲಿಲ್ಲ, ಅಲ್ಲವೆ ? "

" ಅಲ್ಲ. ನಾನು ನನ್ನ ಕೆಲಸವನ್ನು ಸರಿಯಾಗಿಯೇ ಮಾಡುತ್ತಿದ್ದೆ."

" ನಿಮ್ಮ ಶಾಲೆಯ ಕೆಲಸ ಹೋದಮೇಲೆ ನಿಮ್ಮ ಪರಿಚಿತರು ಸೆಕ್ರೆಟೇರಿಯಟ್‌ನಲ್ಲಿ ಕೆಲಸ ಕೊಡಿಸುತ್ತೇನೆಂದರೂ ನೀವು ಬೇಡ ಎಂದಿರಿ. ಹೌದೆ ? "

" ಹೌದು."

" ಯಾಕೆ ? "

" ಆ ಕೆಲಸ ನನಗೆ ಬೇಡವೆನಿಸಿತು."

" ಸ್ಟುಡಿಯೋದ ಕಡೆಗೆ ನಿಮ್ಮ ಮನಸ್ಸು ಹರಿಯುತ್ತಿತ್ತೆಂದೆ ? "

" ಸ್ಟುಡಿಯೋದಲ್ಲಿಯ ಕೆಲಸ ಸಿಕ್ಕೇ ಸಿಗುವುದೆಂದು ಆಗ ನನಗೆ ಗೊತ್ತು ಕೂಡ ಇರಲಿಲ್ಲ."

" ಆದರೆ ರಂಗನಾಥನ್‌ನನ್ನು ಕೇಳಿದರೆ ಕೆಲಸ ಸಿಕ್ಕಬಹುದು ಎಂಬ ಭರವಸೆ ಇದ್ದಿತು. ಅಲ್ಲವೆ ? "

" ಸಿಕ್ಕಬಹುದು ಎನ್ನಿಸುತ್ತಿತ್ತು."

" ಅದೇಕೆ ? ತಮ್ಮಲ್ಲಿ ಕೆಲಸ ಮಾಡಬೇಕೆಂದು ರಂಗನಾಥನ್ ಮೊದಲು ಎಂದಾದರೂ ನಿಮಗೆ ಸೂಚಿಸಿದ್ದರೆ ? "

" ನೇರವಾಗಿ ಇಲ್ಲ. ಆದರೆ ನಮ್ಮಂಥವರು ಚಿತ್ರಗಳಲ್ಲಿ ಕೆಲಸ ಮಾಡಿದರೆ ಉತ್ತಮ ಚಿತ್ರಗಳನ್ನು ಸಹಜವಾಗಿಯೇ ತಯಾರಿಸಬಹುದು ಎಂದು ಮುಂತಾಗಿ ಸಾಮಾನ್ಯವಾಗಿ ಆಡಿದ್ದರು."

" ನಿಮ್ಮನ್ನು ಆಫೀಸ್ ಸೆಕ್ರೆಟರಿ ಎಂದು ನೇಮಕ ಮಾಡಿದ್ದರಲ್ಲವೆ ? "

" ಹೌದು."

" ದಿನಕ್ಕೆ ಎಷ್ಟು ಗಂಟೆ ಕೆಲಸ ಮಾಡಬೇಕಾಗುತ್ತಿತ್ತು ? "

" ಒಮ್ಮೆ ಹಾಗೆ, ಒಮ್ಮೆ ಹೀಗೆ. ಕೆಲಸವಿದ್ದ ಹಾಗೆ."

" ನಿಮ್ಮ ನೇಮಕವಾದ ದಿನವೇ ನೀವು ಡೈರೆಕ್ಟರ್ ಜೊತೆಯಲ್ಲಿ ತಿರುಗಾಡಹೋಗಿದ್ದಿರಾ ? "

" ನನಗೆ ಜ್ಞಾಪಕವಿಲ್ಲ "

" ಆಮೇಲೆ ಎಷ್ಟೋ ಸಾರೆ ರಾತ್ರಿ ಹತ್ತು ಹನ್ನೊಂದು ಗಂಟೆಯವರೆಗೆ ಗ್ರೀನ್ಸ್‌ಗೆ, ತಾಜ್‌ಕ್ಕೆ ಹೋಗುತ್ತಿದ್ದಿರಿ. ಹೌದೆ ? "

" ಹೌದು."

" ಆಫೀಸ್ ಸೆಕ್ರೆಟರಿಯ ಕೆಲಸಗಳಲ್ಲಿ ಇದೂ ಒಂದಾಗಿತ್ತೆ ? "

" ಅವರು ಕಂಪನಿಯ ಮುಖ್ಯಸ್ಥರಾದ್ದರಿಂದ ಅವರು ಕರೆದರೆ ಆಗೀಗ ಹೋಗುತ್ತಿದ್ದೆ."

" ಸೆಕ್ರೆಟರಿ ಎಂದು ಸಂಬಳ ಎಷ್ಟು ಸಿಕ್ಕುತ್ತಿತ್ತು ? "

" ಮೂರುನೂರು."

" ಚಿತ್ರದಲ್ಲಿ ಕೆಲಸ ಮಾಡಿದ್ದಕ್ಕೆ ? "

" ಶಾಕುಂತಲದಲ್ಲಿಯ ಕೆಲಸ ನಡೆದಾಗ ಮತ್ತೆ ಮೂರುನೂರು."

" ನಿಮ್ಮ ಸಂಬಳವನ್ನು ಯಾವಾಗಲೂ ಚೆಕ್‌ನಿಂದ ಪಡೆಯುತ್ತಿದ್ದಿರಿ ? "

" ಹೌದು."

" ಮಾರ್ಚ್ ತಿಂಗಳಲ್ಲಿ ನಿಮಗೆ ಒಂದು ಸಾವಿರ ರೂಪಾಯಿ ರಂಗನಾಥನ್ ಕೊಟ್ಟರು—ಸಂಬಳದ ಹೊರತಾಗಿ. ಅದು ಯಾತಕ್ಕಾಗಿ ಕೊಟ್ಟರು ? "

" ಆಗ ನನ್ನ ತಾಯಿಗೆ ಖಾಯಿಲೆಯೆಂದು ಕಾಗದ ಬಂದಿತ್ತು. ದುಡ್ಡು ಕಳುಹಿಸಬೇಕಾಗಿತ್ತು."

" ಸರಿ. ನಿಮ್ಮ ತಾಯಿಗೆ ಮೂರು ನೂರು ರೂಪಾಯಿ ಕಳಿಸಿದಿರಿ. ಕಳಿಸಿ

ದಾಗ ನಿಮ್ಮ ಹೆಸರಿನಲ್ಲಿಯೇ ಎಂಟು ನೂರು ರೂಪಾಯಿ ಬ್ಯಾಂಕ್‌ನಲ್ಲಿದ್ದಿತು ಹೀಗಿದ್ದರೂ ರಂಗನಾಥನ್‌ನಿಂದ ಒಂದು ಸಾವಿರ ರೂಪಾಯಿಗಳನ್ನು ಯಾತಕ್ಕೆ ಪಡೆದಿರಿ ? "

" ತಾಯಿಯ ಖಾಯಿಲೆಗಾಗಿ ಹಣ ಕಳಿಸಬೇಕಾಗಿದೆ ಎಂದ ಕೂಡಲೆ ಅವರೇ ಅಷ್ಟು ಹಣ ನನ್ನ ಹೆಸರಿಗೆ ಜಮೆ ಮಾಡಿದರು."

" ನೀವು ಬೇಡ ಎಂದು ಹೇಳಲಿಲ್ಲವೆ ? "

" ಅಷ್ಟು ಹಣ ಯಾತಕ್ಕೆ ಎಂದೆ. ಬೇಕಾದೀತು ಇರಲಿ, ಎಂದರು."

" ಆ ಹಣವನ್ನು ನೀವು ಅವರಿಗೆ ತಿರುಗಿ ಕೊಟ್ಟಿರಾ ? "

" ಕೊಡುವುದಿದೆ. ಇನ್ನೂ ಕೊಟ್ಟಿಲ್ಲ."

" ಆಗಬಹುದು. ನೀವು ಆಪಟೆಯವರ ಮನೆಯನ್ನು ಬಿಟ್ಟದ್ದು ಯಾವಾಗ ? "

" ಏಪ್ರಿಲ್ ತಿಂಗಳ ಕೊನೆಯ ವಾರ "

" ಆಪಟೆಯವರ ಮನೆಯನ್ನು ಬಿಡುವಾಗ ನೀವು ಈಗಿದ್ದ ಮನೆಯನ್ನು ಬಾಡಿಗೆಗೆ ಹಿಡಿದಿದ್ದಿರಾ ? "

" ಇಲ್ಲ "

" ಅಷ್ಟು ತರಾತುರಿಯಾಗಿ ಮನೆಯನ್ನು ಯಾತಕ್ಕೆ ಬಿಡಬೇಕಾಯಿತು?"

" ಅವರವರಿಗೆ ತಕರಾರುಗಳಾಗಿ ಬೇರೆಯಾಗಿದ್ದರು ಅಲ್ಲದೆ ನಾನು ಇರುವ ವ್ಯವಸ್ಥೆಯನ್ನು ಬೇರೆಯಾಗಿ ಮಾಡಿಕೊಳ್ಳಬೇಕೆಂದು ಆಪಟೆ ತಿಳಿಸಿದ್ದರು."

" ಬೇರೆ ಮನೆ ಸಿಕ್ಕುವವರೆಗೆ ಅಲ್ಲಿಯೇ ಇರುವೆ ಎಂದು ಕೇಳಿದಿರಾ ? "

" ಕೇಳುವ ಮನಸ್ಸಾಗಲಿಲ್ಲ."

" ಸರಿ. ಈಗಿದ್ದ ಮನೆಗೆ ನೀವು ಬಂದದ್ದು ಯಾವಾಗ ? "

" ಮೇ ತಿಂಗಳ ಮೊದಲ ವಾರದಲ್ಲಿ."

" ಮಧ್ಯದ ಹತ್ತು ಹನ್ನೆರಡು ದಿನ ನೀವು ರಂಗನಾಥನ್ ಅವರ ಮನೆಯಲ್ಲಿಯೇ ಇದ್ದಿರಿ, ಹೌದೆ ? "

" ಹೌದು."

" ಅಲ್ಲಿ ನಿಮಗೆ ಇರಲಿಕ್ಕೆಂದು ಬೇರೆಯಾದ ಕೋಣೆಯ ವ್ಯವಸ್ಥೆ ಮಾಡಿ ಕೊಡಲಾಗಿದ್ದಿತೆ ? "

" ಹೌದು."

" ಆ ಕೋಣೆಗೆ ಹೊರಗಿನಿಂದ ಸ್ವತಂತ್ರವಾದ ಪ್ರವೇಶ ಇದೆಯೆ ? "

" ಇ–ಲ್ಲ."

" ನೀವು ಅಲ್ಲಿ ಇರಲಿಕ್ಕೆ ಬಂದ ನಾಲ್ಕಾರು ದಿನಗಳಲ್ಲಿಯೇ ಇಬ್ಬರೂ ಮಾಥೆರಾನ್‌ಗೆ ಹೋಗಿದ್ದಿರಿ. ಹೌದೆ ? "

" ಹೌದು. ಮುಂದಿನ ಚಿತ್ರಗಳಿಗಾಗಿ ಔಟ್ ಡೋರ್ ಸೈಟ್ಸ್ ನೋಡ ಬೇಕಾಗಿದ್ದಿತು."

" ಎಲ್ಲಿ ಉಳಿದುಕೊಂಡಿರಿ ಮಾಥೆರಾನ್‌ನಲ್ಲಿ ? "

" ಮಾಥೆರಾನ್ ಹೊಟೆಲ್."

" ನೀವು ಮತ್ತು ರಂಗನಾಥನ್ ಒಂದೇ ಹೊಟೆಲ್‌ನಲ್ಲಿದ್ದಿರಾ ? "

" ಹೌದು."

" ಕೋಣೆಯನ್ನು ಮುಂಬೈಯಿಂದಲೇ ರಿಝುರ್ವ್ ಮಾಡಿಸಿದ್ದಿತು. ಅಲ್ಲವೆ ? "

" ಹೌದು."

" ಯಾರು ಮಾಡಿಸಿದ್ದರು ? "

" ರಂಗನಾಥನ್."

" ಒಂದೇ ಕೋಣೆಯನ್ನು ರಿಝುರ್ವ್ ಮಾಡಿಸಿದ್ದು ನಿಮಗೆ ಗೊತ್ತಿದ್ದಿತೆ ? "

" ಅಲ್ಲಿ ಹೋದಮೇಲೆ ಗೊತ್ತಾಯಿತು."

" ನೀವು ಬೇರೆ ಕೋಣೆಗಾಗಿ ಕೇಳಿದಿರಾ ? "

" ಕೇಳಿದೆ. ಆದರೆ ತೆರವಾಗಿರಲಿಲ್ಲ."

" ಅದು ಸುಳ್ಳು. ಬೇರೆ ಕೋಣೆ ತೆರವಾಗಿದ್ದ ಬಗ್ಗೆ ಹೊಟೆಲ್ ಮಾಲೀಕರು ಸಾಕ್ಷಿ ಹೇಳಿದ್ದಾರೆ."

ಮೋಹಿನಿ ಸುಮ್ಮನಾದಳು ರಾಮರಾಯ ಮುಂದುವರಿದ .

" ಹೊಟೆಲ್ ರಜಿಸ್ಟರ್‌ನಲ್ಲಿ ಹೆಸರು ಬರೆಯಿಸುವಾಗ ಮಿಸ್ಟರ್ ಮತ್ತು ಮಿಸೆಸ್ ರಂಗನಾಥನ್ ಎಂದು ಬರೆಯಿಸಿದ್ದು ನಿಮಗೆ ಗೊತ್ತಾಯಿತೆ ? "

" ಇಲ್ಲ."

" ಹೆಸರು ಬರೆಯಿಸುವಾಗ ರಂಗನಾಥನ್ ಜೊತೆಯಲ್ಲಿ ಇದ್ದಿರಿ ಎಂದು ಮ್ಯಾನೇಜರ್ ಹೇಳಿದ್ದಾರೆ. ಬರೆಯಿಸಿದ್ದನ್ನು ನೀವು ಕೇಳಲಿಲ್ಲವೆ ? "

" ನನ್ನ ಲಕ್ಷ್ಯ ಬೇರೆ ಎಲ್ಲಿಯಾದರೂ ಇದ್ದಿರಬೇಕು."

" ಮಾಥೆರಾನ್‌ನಲ್ಲಿ ಇದ್ದಷ್ಟು ದಿನ ನೀವಿಬ್ಬರೂ ಒಂದೇ ಕೋಣೆಯಲ್ಲಿ ಇದ್ದಿರಲ್ಲವೆ ? "

" ಬೇರೆ ಕೋಣೆ ಸಿಕ್ಕಲಿಲ್ಲ."

" ನಾನು ಕಾರಣ ಕೇಳಿಲ್ಲ. ಇದ್ದದ್ದು ನಿಜವೊ ಅಥವಾ ಅಲ್ಲವೊ ? " ರಾಮರಾಯ ಗದ್ದರಿಸಿದ.

" ಹೌದು."

" ಆಲ್‌ರೈಟ್. ನೀವು ಮಾಥೆರಾನ್‌ನಿಂದ ಬಂದ ಕೂಡಲೆ ಯಾವ ಮನೆಯಲ್ಲಿದ್ದಿರಿ ? "

" ಡೈರೆಕ್ಟರ್ ಮನೆಯಲ್ಲಿ "

" ಎಷ್ಟು ದಿನ ? "

" ಮುಂದೆ ನಾಲ್ಕಾರು ದಿನ ಇದ್ದಿರಬಹುದು."

" ನೀವು ಈಗಿದ್ದ ಮನೆಗೆ ಎಂದು ಬಂದಿರಿ ? "

" ಮೇ ತಿಂಗಳ ನಾಲ್ಕು ಅಥವಾ ಐದನೆಯ ದಿನಾಂಕ ಇರಬಹುದು."

" ಈ ಮನೆಯನ್ನು ಎಂದಿನಿಂದ ಬಾಡಿಗೆ ಹಿಡಿಯಲಾಗಿತ್ತು ನಿಮಗೆ ಗೊತ್ತೆ ? "

" ಮೇ ಒಂದನೆಯ ದಿನಾಂಕದಿಂದ ಅದು ತೆರವಾಗಿ ನಮಗೆ ಸಿಕ್ಕುತ್ತದೆ ಎಂದು ಹೇಳಿದ್ದರು."

" ಏಪ್ರಿಲ್ ಒಂದರಿಂದಲೇ ಅದನ್ನು ರಂಗನಾಥನ್ ಬಾಡಿಗೆ ಹಿಡಿದಿಟ್ಟದ್ದು ನಿಮಗೆ ಗೊತ್ತಿಲ್ಲವೆ ? "

" ಇಲ್ಲ."

" ಈಗಿದ್ದ ಮನೆಗೆ ಎಷ್ಟು ಬಾಡಿಗೆ ಕೊಡುತ್ತೀರಿ ? "

ಮೋಹಿನಿಗೆ ಉತ್ತರ ಹೇಳಲಾಗಲಿಲ್ಲ. ಸುಮ್ಮನಿದ್ದುದನ್ನು ನೋಡಿ, ತಾನು ನಿರೀಕ್ಷಿಸಿದ ಹಾಗೆ ಮೋಹಿನಿ ಮಾತಿನಲ್ಲಿ ಸಿಕ್ಕು ಬಿದ್ದಳೆಂದು ರಾಮರಾಯ ಮುಂದುವರಿದ :

" ನೀವಿದ್ದ ಮನೆಗೆ ಬಾಡಿಗೆ ಎಷ್ಟು ಗೊತ್ತಿಲ್ಲವೆ ನಿಮಗೆ ? "

" ನೂರು ರೂಪಾಯಿ ಎಂದು ಕಾಣುತ್ತದೆ."

" ಕಾಣುತ್ತದೆ! ಎಂದರೆ ಈಗಿದ್ದ ಮನೆಗೆ ಬಾಡಿಗೆ ನೀವು ಕೊಡುವುದಿಲ್ಲ ಎಂದಾಯಿತು. ಹೌದೆ ? "

" ಇದುವರೆಗೆ ನಾನು ಬಾಡಿಗೆ ಕೊಟ್ಟಿಲ್ಲ ! "

" ಯಾರು ಕೊಟ್ಟಿದ್ದಾರೆ ? "

" ರಂಗನಾಥನ್."

" ಈ ಮನೆಗೆ ನೀವು ಬಂದಾಗ ' ಸೂತ್ರದ ಬೊಂಬೆ 'ಯಲ್ಲಿಯ ಮುಖ್ಯ ಪಾತ್ರವನ್ನು ವಹಿಸಿದ್ದಿರಾ ? "

" ಆ ಚಿತ್ರದ ಕೆಲಸ ಪ್ರಾರಂಭವಾದ ಸರಿಯಾದ ತಾರೀಕು ನನಗೆ ಜ್ಞಾಪಕವಿಲ್ಲ "

" ಸರಿ ಮುಖ್ಯಪಾತ್ರವನ್ನು ವಹಿಸಲು ನೀವು ಒಪ್ಪಿದಾಗ ನಿಮಗೆ ಬಾಡಿಗೆಯಿಲ್ಲದೆ ಮನೆಯನ್ನು ಕೊಡುವಂತೆ ಕರಾರು ಆಗಿತ್ತೆ ? "

ಮೋಹಿನಿ ಸುಮ್ಮನಾದಳು. ರಾಮರಾಯ ಬೇರೆಯಾಗಿ ಕೇಳಿದ :

" ನಿಮ್ಮ ಕಂಪನಿಯ ಚಿತ್ರಗಳಲ್ಲಿ ಕೆಲಸ ಮಾಡುವ ಮುಖ್ಯ ನಟಿಯರಿಗೆ ಬಾಡಿಗೆ ಇಲ್ಲದೆ ಮನೆಯನ್ನು ಒದಗಿಸಿಕೊಡುವ ಪದ್ಧತಿ ಇದೆಯೆ ? "

" ನನಗೆ ಗೊತ್ತಿಲ್ಲ."

" ಮೇ ತಿಂಗಳಿಂದ ಇಲ್ಲಿಯ ವರೆಗೆ ಒಂದು ತಿಂಗಳೂ ಬಾಡಿಗೆಯನ್ನು ನೀವು ಕೊಟ್ಟಿಲ್ಲ. ಅಲ್ಲವೆ ? "

" ಇಲ್ಲ."

" ಈ ಮನೆಯನ್ನು ನಿಮಗೆ ಗೊತ್ತುಮಾಡಿಕೊಟ್ಟವರು ಯಾರು ? "

" ರಂಗನಾಥನ್."

" ಆಗ ನೀವು ಬಾಡಿಗೆಯ ಮಾತನ್ನು ಕೇಳಲಿಲ್ಲವೆ ? "

" ಇಲ್ಲ."

" ಅದಿರಲಿ. ಮಾಥೆರಾನ್‌ನಿಂದ ಬಂದಮೇಲೆ ನೀವು ರಂಗನಾಥನ್ ಜೊತೆಯಲ್ಲಿ ಒಂದು ಕಾರ್ ಕೊಳ್ಳಲಿಕ್ಕೆಂದು ಹೋಗಿದ್ದಿರಾ ? "

" ಹೌದು."

" ಆ ಕಾರ್ ಯಾರ ಸಲುವಾಗಿ ಕೊಳ್ಳಬೇಕಾಗಿತ್ತು ? "

" ಸ್ಟುಡಿಯೋದ ಸಲುವಾಗಿ."

"ಸ್ಟುಡಿಯೋದ ಎಲ್ಲ ಮಹತ್ವದ ವ್ಯವಹಾರಗಳನ್ನೂ ಮಾಡುವಾಗ ರಂಗನಾಥನ್ ನಿಮ್ಮನ್ನು ಕೇಳಿಯೇ ಮಾಡುತ್ತಾರೆಯೆ ?"

"ಹಾಗೇನೂ ಇಲ್ಲ. ಒಮ್ಮೊಮ್ಮೆ ಕೇಳುತ್ತಾರೆ."

"ಕಾರ್ ಕೊಳ್ಳುವ ಮೊದಲು ಅದನ್ನು ನೋಡಲು ಹೋಗುವಾಗ ಕಾರ್ ಸ್ಟುಡಿಯೋದ ಸಲುವಾಗಿ ಎಂದು ನಿಮಗೆ ಹೇಳಿದ್ದರೆ ?"

"ಹೇಳಿರಬೇಕು. ನನಗೆ ಜ್ಞಾಪಕವಿಲ್ಲ."

"ಕಾರ್ ಆರಿಸುವುದರಲ್ಲಿ ನಿಮಗೆ ಅವರಿಗೆ ಭಿನ್ನಾಭಿಪ್ರಾಯವಾಯಿತೆ ?"

"ಭಿನ್ನಾಭಿಪ್ರಾಯವೆಂದೇನೂ ಅಲ್ಲ ಅವರು ಆರಿಸಿದ ಬಣ್ಣ ನನಗೆ ಒಪ್ಪಿಗೆಯಾಗಲಿಲ್ಲ"

"ಕೊನೆಗೆ ಆರಿಸಿದ್ದು ಯಾವುದು? ನೀವು ಹೇಳಿದ್ದೊ, ಅಥವಾ ಅವರು ಆರಿಸಿದ್ದೊ ?"

"ನಾನು ಹೇಳಿದ್ದು."

"ಕಾರ್ ಕೊಂಡನಂತರ ಅದನ್ನು ಉಪಯೋಗಿಸುತ್ತಿದ್ದವರು ನೀವೊ ಅಥವಾ ಸ್ಟುಡಿಯೋದವರೊ ?"

"ಇಬ್ಬರೂ ಉಪಯೋಗಿಸುತ್ತೇವೆ—"

"ಆದರೆ ಹೆಚ್ಚಾಗಿ ?"

"ಸ್ಟುಡಿಯೋದವರಿಗೆ ಬೇಕಾದಾಗ ತೆಗೆದುಕೊಂಡು ಹೋಗುತ್ತಾರೆ."

"ಅಂದರೆ ನಿಮಗೆ ಬೇಡವಾದಾಗ ಮಾತ್ರ ಅವರು ತೆಗೆದುಕೊಂಡು ಹೋಗುತ್ತಾರೆ, ಹೌದೆ ?"

"ಹಾಗಲ್ಲ. ತಮಗೆ ಬೇಕಾದರೆ ತೆಗೆದುಕೊಂಡು ಹೋಗುತ್ತಾರೆ."

"ಕಾರು ರಾತ್ರಿ ಸ್ಟುಡಿಯೋದಲ್ಲಿರುತ್ತದೆಯೊ ಅಥವಾ ನಿಮ್ಮ ಗರಾಜ್‌ನಲ್ಲಿಯೊ ?"

"ನಮ್ಮ ಮನೆಯ ಗರಾಜ್‌ನಲ್ಲಿರುತ್ತದೆ. ನನಗೆ ಬೆಳಿಗ್ಗೆ ಸ್ಟುಡಿಯೋಕ್ಕೆ ಹೋಗಬೇಕಾಗುತ್ತದೆ."

"ಮಧ್ಯಾಹ್ನ ನೀವು ಮನೆಗೆ ಬಂದನಂತರ ಕಾರ್ ನಿಮ್ಮ ಬಾಗಿಲಲ್ಲೇ ಉಳಿಯುತ್ತದೆ. ಹೌದೆ ?"

"ಹೌದು. ಆದರೆ ಬೇಕಾದರೆ ತೆಗೆದುಕೊಂಡು ಹೋಗುತ್ತಾರೆ."

" ಹೀಗೆ ತೆಗೆದುಕೊಂಡು ಹೋದದ್ದು ಈ ನಾಲ್ಕು ತಿಂಗಳಲ್ಲಿ ಎಷ್ಟು ಸಲ ಎಂಬುದನ್ನು ಹೇಳಬಹುದೆ ? "

" ಹೇಳಲಿಕ್ಕಾಗುವುದಿಲ್ಲ."

" ಹೇಗಿದ್ದರೂ ಹೆಚ್ಚಾಗಿ ಕಾರ್ ನಿಮ್ಮ ವಶದಲ್ಲಿಯೇ ಇರುತ್ತದಲ್ಲವೆ ? "

" ಹೌದು."

" ಸ್ಟುಡಿಯೋದಲ್ಲಿಯ ಜನ ಆ ಕಾರು ನಿಮ್ಮದು ಎಂದೇ ತಿಳಿಯುತ್ತಾರೆ ಅಂತೇ ಬೇಡುವುದಿಲ್ಲ. ಅಲ್ಲವೆ ? "

" ಅವರೇನು ತಿಳಿಯುತ್ತಾರೆ—ನನಗೆ ಗೊತ್ತಿಲ್ಲ "

ರಾಮರಾಯ ಒಂದೆರಡು ನಿಮಿಷ ತಡೆದ ಆತ ಮನಸ್ಸಿನಲ್ಲಿಟ್ಟುಕೊಂಡು ಹೊರಗೆಡಹಬೇಕೆಂದ ವಿಷಯ ಸಹಜವಾದುದಾಗಿರಲಿಲ್ಲವೆಂದೇ ತಡೆದ—ಪ್ರಶ್ನೆಯನ್ನು ಹೇಗೆ ಕೇಳಬೇಕೆಂಬ ಯೋಚನೆಯಲ್ಲಿ ಕೊನೆಗೆ ಕೇಳಿದ :

" ನೀವು ಈ ಮನೆಗೆ ಇರಬಂದಾಗಿನಿಂದ ರಂಗನಾಥನ್ ಸಂಜೆಯ ಊಟವನ್ನು ನಿಮ್ಮಲ್ಲಿಯೇ ಮಾಡುತ್ತಿದ್ದಾರೆಯೆ ? "

" ನಿತ್ಯ ಇಲ್ಲ. ಆಗೀಗ ಊಟಕ್ಕೆ ಬಂದಿರಬಹುದು "

" ಬಹುದು ಗಿಹುದು ಎಂಬ ಹಾರುಮಾತಿನ ಉತ್ತರ ಬೇಕಾಗಿಲ್ಲ ನನಗೆ ನೇರವಾದ ಪ್ರಶ್ನೆಗೆ ನೇರವಾದ ಉತ್ತರ ಹೇಳಿರಿ "

ಮೋಹಿನಿ ಸುಮ್ಮನಾದಳು

" ವಾರಕ್ಕೆ ಕನಿಷ್ಠ ಎರಡು ಮೂರು ಸಲವಾದರೂ ಬರುತ್ತಾರೆಯೋ ಇಲ್ಲವೊ ? "

" ಇ-ಲ್ಲ—"

ಉತ್ತರ ತಡವರಿಸಿ ಹೊರಬಂದುದನ್ನು ರಾಮರಾಯ ಕೋರ್ಟಿನ ಗಮನಕ್ಕೆ ತಂದ.

" ಸಾಯಂಕಾಲದ ಊಟವನ್ನು ನೀವು ಸಾಮಾನ್ಯವಾಗಿ ಎಷ್ಟು ಗಂಟೆಗೆ ಮಾಡುತ್ತೀರಿ ? "

" ಸುಮಾರು ಒಂಬತ್ತೂವರೆ ಗಂಟೆಗೆ—"

" ಹೀಗೆ ಅವರು ಬಂದಾಗ ಊಟ ಮುಗಿಯಿಸಿ ತಿರುಗಿ ಹೊರಡಲಿಕ್ಕೆ ಸುಮಾರು ಎಷ್ಟು ವೇಳೆಯಾಗುತ್ತಿತ್ತು ? "

" ಇಷ್ಟು ಎಂದು ಹೇಳಲಿಕ್ಕಾಗುವುದಿಲ್ಲ. ಅವಸರವಿದ್ದಾಗ ಕೂಡಲೆ ಹೊರಟುಬಿಡುತ್ತಿದ್ದರು."

" ಅವಸರ ಇರದಿದ್ದಾಗ ? "

" ಹನ್ನೊಂದು–ಹನ್ನೊಂದೂವರೆ ಗಂಟೆಯಾಗುತ್ತಿತ್ತು."

" ಅವರು ಹೋಗದೆ ನಿಮ್ಮಲ್ಲಿಯೆ ಎಂದಾದರೂ ಉಳಿದದ್ದುಂಟೆ ? "

ದೇಶಮುಖ್‌ರು ತಟ್ಟನೆ ಎದ್ದು ನಿಂತು ಪ್ರಶ್ನೆಯನ್ನು ಆಕ್ಷೇಪಿಸಿದರು— ಅವಮಾನಕರವಾಗಿದೆ ಎಂದು ಸುಮಾರು ಐದು ನಿಮಿಷ ಪ್ರಶ್ನೆಯ ಯೋಗ್ಯಾಯೋಗ್ಯತೆಯನ್ನು ಕುರಿತು ಚರ್ಚೆ ನಡೆಯಿತು ರಂಗನಾಥನ್ ಮತ್ತು ಮೋಹಿನಿಯರ ನಡುವಿನ ಅನೈತಿಕ ಸಂಬಂಧಗಳೇ ಕೇಸಿಗೆ ತಳಹದಿಯಾದ್ದರಿಂದ ಅಂಥ ಪ್ರಶ್ನೆ ಕೇಳುವುದು ಅವಮಾನಕರವೆನಿಸಿದರೂ ಅನಿವಾರ್ಯವೆಂದು ರಾಮರಾಯ ವಾದಿಸಿದ ರಂಗನಾಥನ್ ಹೆಚ್ಚು ಕಡಿಮೆ ಪ್ರತಿನಿತ್ಯವೂ ಮೋಹಿನಿಯ ಜೊತೆಯಲ್ಲಿಯೇ ಸಾಯಂಕಾಲದ ಊಟ ಮಾಡುತ್ತಿದ್ದನೆಂದೂ ಆತ ಅಲ್ಲಿಯೇ ಉಳಿಯುವುದೂ ವಾಡಿಕೆಯೆಂದೂ ಸಾಕ್ಷಿಗಳಿಂದ ಸಿದ್ಧವಿದ್ದುದರಿಂದ ಮೋಹಿನಿ ಬೇಕಾದರೆ " ಇಲ್ಲ "ವೆಂದು ಹೇಳಬಹುದು ಆದರೆ ಈ ಬಗೆಯಲ್ಲಿ ಸಿಕ್ಕ ಇತರ ಪ್ರಮಾಣಗಳನ್ನು ನೆನೆದು ಆಕೆಯ " ಇಲ್ಲ " ಎಂಬ ಉತ್ತರಕ್ಕೆ ಯಾವ ಬೆಲೆ ಎಂಬುದನ್ನು ಕೋರ್ಟು ನಿರ್ಧರಿಸಬೇಕು ಎಂದು ರಾಮರಾಯ ಕೊನೆಯಾಗಿ ಕೇಳಿಕೊಂಡ.

" ಪ್ರಶ್ನೆಯನ್ನು ಬೇರೆಯಾಗಿ ಕೇಳಬಹುದು " ಎಂದು ದೇಶಮುಖ್‌ರು.

" ನನಗೆ ನೇರವಾಗಿ ಹಾಗೆಯೇ ಕೇಳಬೇಕಾಗಿದೆ " ಎಂದು ರಾಮರಾಯ.

ನ್ಯಾಯಾಧೀಶರು ' ಕೇಳಬಹುದು ' ಎಂದು ತೀರ್ಪು ಕೊಟ್ಟರು.

" ಹುಂ. ಸಾಯಂಕಾಲದ ಊಟವಾದ ಮೇಲೆ ರಂಗನಾಥನ್ ನಿಮ್ಮಲ್ಲಿಯೇ ಎಂದಾದರೂ ಉಳಿದದ್ದುಂಟೆ ? "

" ಇಲ್ಲ " ಎಂದು ಮೋಹಿನಿ ಗಟ್ಟಿಯಾಗಿ ಹೇಳಿದಳು.

" ಒಂದು ಸಲವೂ ನಿಮ್ಮಲ್ಲಿ ಉಳಿದಿಲ್ಲವೆ ? "

" ಇಲ್ಲ— " ಈ ಸಲ ಮಾತ್ರ ಉತ್ತರ ಅಷ್ಟು ಸ್ಪಷ್ಟವಾಗಿರಲಿಲ್ಲ.

" ಇನ್ನೊಂದು ಪ್ರಶ್ನೆ. ವಸಂತರಾಯರ ಮದುವೆಯ ಕಾಲಕ್ಕೆ ನೀವು ಅವರಿಗೆ ಏನಾದರೂ ಪ್ರೆಜೆಂಟ್ ಕೊಟ್ಟಿರಾ ? "

" ಹೌದು. ಒಂದು ವಾಚ್ ಮತ್ತು ಒಂದು ಸಿಲ್ಕ್ ಸೀರೆ "

" ಎರಡಕ್ಕೂ ಒಟ್ಟು ಎಷ್ಟು ಬೆಲೆ ಗೊತ್ತೆ ? "

" ಇನ್ನೂರೈವತ್ತಿರಬಹುದು "

" ಈ ಹಣವನ್ನು ನೀವು ಕೊಟ್ಟಿರಾ ? "

" ಇಲ್ಲ. ರಂಗನಾಥನ್ ಕೊಟ್ಟಿದ್ದಾರೆ "

" ಇದು ಕಳೆದ ಡಿಸೆಂಬರ್ ತಿಂಗಳಲ್ಲಿ ಅಲ್ಲವೆ ? "

' ಹೌದು."

" ಸರಿ " ಎಂದು ರಾಮರಾಯ ಮರುಸವಾಲನ್ನು ಮುಗಿಯಿಸಿದ

ಮೋಹಿನಿ ಕೆಳಗಿಳಿದು ಬಂದಳು ಎಂದಾದರೂ ಇಷ್ಟನ್ನು ಎದುರಿಸ ಬೇಕಾಗಬಹುದೆಂಬುದು ತಿಳಿದವಳ ಹಾಗೆಯೇ ಆಕೆ ನಿರ್ಲಿಪ್ತಳಹಾಗಿದ್ದಳು. ಆದರೆ ಮನಸ್ಸು ನೊಂದಿತ್ತು ಆನಂದನ ವಿಷಯದಲ್ಲಿ ಪೂರ್ತಿಯಾಗಿ ಬೇಸರ ಗೊಂಡಿತ್ತು ವಿಚಾರಣೆ ಬಹಿರಂಗವಾಗಿ ನಡೆಯದಿದ್ದುದೂ ಒಂದು ಸಮಾಧಾನದ ವಿಷಯವೇ ಎನಿಸಿತು ತಾನು ಹೇಳಿದ ಕೆಲವು ಸುಳ್ಳು ಉತ್ತರಗಳನ್ನು ಯಾರೂ ನಂಬುವುದಿಲ್ಲವೆಂಬುದು ನೋವನ್ನುಂಟುಮಾಡಿತ್ತು. ಆದರೆ ಬೇರೆ ಉಪಾಯ ವಿರಲಿಲ್ಲ. ಉತ್ತರಗಳನ್ನು ಹೇಳುತ್ತಿರುವಾಗ ನೇರವಾಗಿ ಇದ್ದುದನ್ನು ಇದ್ದಂತೆ ಯಾಕೆ ಹೇಳಿಬಿಡಬಾರದು ಎಂದೆನಿಸಿತ್ತು. ಆದರೆ ಅದೇಕೋ ನೇರವಾಗಿ ಉತ್ತರ ಹೇಳುವ ಮನಸ್ಸಾಗಲಿಲ್ಲ. ಏನು ಹೇಳಿದ್ದರೂ ಅವರು ತಿಳಿದುಕೊಳ್ಳುವುದು ನಿಜವನ್ನೆ, ಅದರಲ್ಲಿ ಸಂದೇಹವಿರಲಿಲ್ಲ, ಎಂದು ಸಮಾಧಾನ ಹೇಳಿಕೊಂಡಳು. ಇದೆಲ್ಲದರಿಂದಾಗಿ ಆ ಆವರಣದಲ್ಲಿ ಒಂದು ಕ್ಷಣವೂ ನಿಲ್ಲುವ ಮನಸ್ಸಾಗಲಿಲ್ಲ ಜೀವನಸ್ವಾತಂತ್ರ್ಯಕ್ಕಾಗಿ ಇಷ್ಟೊಂದು ಅವಮಾನದ ಬೆಲೆಯೆ ? ಎನ್ನುವ ಯೋಚನೆ ಕಾಡುತ್ತಿತ್ತು. ಈ ಪ್ರಪಂಚದಲ್ಲಿ ಬೆಲೆಬಾಳುವ ಯಾವುದೂ ಪುಕ್ಕಟೆ ಸಿಕ್ಕಲಾರದಲ್ಲವೆ? ಅದಕ್ಕೇಕೆ ಇಷ್ಟು ಯೋಚನೆ ? ಇನ್ನು ಮುಂದೆ ಯಾರಾದರೂ ತನ್ನನ್ನು ಮಾತನಾಡಿಸಬಹುದೆ ? ಆನಂದನ ಸಂಬಂಧ ಸಂಪೂರ್ಣ ಕಡಿದಂತಾ ಯಿತು. ಆದರೆ ಅದೇಕೊ ಆ ಯೋಚನೆಯಿಂದ ಸಮಾಧಾನವೆನಿಸಲಿಲ್ಲ. ಬುದ್ಧಿ ಸಮಾಧಾನ ಹೇಳುತ್ತಿತ್ತು : ' ಇದುವರೆಗೆ ಸ್ವತಂತ್ರವಾಗಿ, ನಿನ್ನದೇ ಆದ ಮನೆಯನ್ನು ಕಟ್ಟಿದೆ. ಕಟ್ಟಿದ ಆ ಮನೆಯನ್ನು ನಿನಗೆ ಇನ್ನೂ ದೊಡ್ಡದಾಗಿ, ಭವ್ಯವಾಗಿ ಬೆಳೆಯಿಸಬೇಕಾಗಿದೆಯಲ್ಲವೆ ? ಹಾಗಿದ್ದರೆ ನಿನ್ನನ್ನು ನರಳಿಸುವ

ಈ ಭಾವನೆಗೆ ಅವಕಾಶವೆ ಬೇಡ ' ಎಂದು. ಆದರೆ ಭಾವನೆ ಮೊರೆಯಿಡುತ್ತಿತ್ತು. ' ಏನು ಮಾಡಿದ ಹಾಗಾಯಿತು ? ಏನನ್ನು ಗೆದ್ದೆ ? ಸ್ವಾತಂತ್ರ್ಯವನ್ನೆ ? ಅದರ ಬೆಲೆಯೇನು ? ಜೀವನದ ಸಮಸ್ಯೆಯನ್ನು ಇಷ್ಟು ಸುಲಭವಾಗಿ ಬಿಡಿಸಬಹುದೆ ? ಇದು ಬಿಡುಗಡೆಯೆ ಅಲ್ಲ ' ಎಂದು ಎಲ್ಲಿಯೋ ಒಂದು ಒಳದನಿ ಕ್ಷೀಣವಾಗಿ ಹೇಳುತ್ತಿತ್ತು. ಆದರೆ ಆ ದನಿಯನ್ನು ಕೇಳಿಕೊಂಡು, ಅದರ ನೋವನ್ನು ತಾಳಿ, ಮೋಹಿನಿ ತನ್ನ ಮನಶ್ಶಾಂತಿಯನ್ನು ಕಾಯ್ದುಕೊಳ್ಳುವುದು ಸಾಧ್ಯವಿರಲಿಲ್ಲ. ಆದ್ದರಿಂದ ಇದಾವುದೂ ಬೇಡ ಎಂದು ನೇರವಾಗಿ ಕಾರಿನಲ್ಲಿ ಮನೆಯ ದಾರಿಯನ್ನು ಹಿಡಿದಳು. ಆದರೆ ಕಾರಿನ ವೇಗದಿಂದಲೇ ಒಳವಿಚಾರ ಬೆನ್ನಟ್ಟಿತ್ತು.

ಮುಂದಿನ ಸಾಕ್ಷ್ಯ ರಂಗನಾಥನ್‌ನದು ದೇಶಮುಖ್‌ರು ಎಷ್ಟೋ ಪರಿಯಿಂದ ಸಮಾಧಾನ ಹೇಳಿದ್ದರೂ ರಂಗನಾಥನ್‌ನಿಗೆ ಮನಶ್ಶಾಂತಿ ಇರಲಿಲ್ಲ. ಏಚ್ಛೇದ ಆಗಲಿ, ಆಗದಿರಲಿ, ಅದು ರಂಗನಾಥನ್‌ನ ಪ್ರಶ್ನೆಯಾಗಿರಲಿಲ್ಲ. ನಾಲ್ಕಾರು ಪ್ರತಿಷ್ಠಿತರೆದುರು ಎಲ್ಲವೂ ಹೊರಬೀಳುವುದಲ್ಲ ಎಂದು ಆತನಿಗೆ ವಿವಂಚನೆ. ಬಹಿರಂಗವಾಗಿ ಕೇಸು ನಡೆಯದಿರುವುದು ಸುದೈವ ಎಂದುಕೊಂಡೇ ನ್ಯಾಯಾಸ್ಥಾನವನ್ನು ಪ್ರವೇಶಿಸಿದ ದೇಶಮುಖ್‌ರು ಮುಗುಳುನಗೆಯಿಂದ ಆತನನ್ನು ಸ್ವಾಗತಿಸಿ ನೋಟದಿಂದಲೇ ಸಮಾಧಾನ ಹೇಳಿದರು. ತಮಗೆ ಬೇಕಾದಂತೆ ಆತನಿಂದ ಹೇಳಿಕೆಯನ್ನು ಹೊರಡಿಸಿದರು. ಅದು ಹೀಗೆ :

" ನಾನು ಸುಳ್ಳೂರಪೇಟೆ ರಂಗನಾಥನ್. ಶಾರದಾ ಸ್ಟುಡಿಯೋದ ಒಡೆಯ ಮತ್ತು ಡೈರೆಕ್ಟರ್. ಮುಂಬಯಿಗೆ ಬಂದು ಹತ್ತು ಹನ್ನೆರಡು ವರ್ಷ ಆಯಿತು. ಬಂದಾಗನಿಂದ ಚಿತ್ರವ್ಯವಸಾಯದಲ್ಲಿಯೆ ಇದ್ದೇನೆ. ಶಾರದಾ ಸ್ಟುಡಿಯೊ ಸ್ಥಾಪಿಸಿ ಐದು ವರ್ಷಗಳಾದುವು. ನನ್ನ ಮತ್ತು ಮೋಹಿನಿಯ ಪರಿಚಯವಾಗಿ ಸುಮಾರು ಒಂದೂವರೆ ವರ್ಷವಾಯಿತು. ಅವರ ಪರಿಚಯ ನನಗಾದದ್ದು ಆಪಟೆ ಮತ್ತು ಶ್ರೀಮತಿ ಆಪಟೆಯವರ ಮೂಲಕ. ಆಗ ಈಕೆ ದಾದರ್ ಸ್ಕೂಲ್‌ನಲ್ಲಿ ಕೆಲಸ ಮಾಡುತ್ತಿದ್ದರು. ಶಾಲೆಗೆ ರಜೆ ಇದ್ದಾಗ ಆಗೀಗ ಅವರ ಜೊತೆಯಲ್ಲಿ ಸ್ಟುಡಿಯೋಕ್ಕೆ ಬರುತ್ತಿದ್ದರು. ಕಳೆದ ವರ್ಷ ನವಂಬರ್ ತಿಂಗಳಲ್ಲಿ ಅವರನ್ನು ಶಾಲೆಯ ಕೆಲಸದಿಂದ ಕಡಿಮೆ ಮಾಡಿದಾಗ ನಮ್ಮಲ್ಲಿ ಕಾರ್ಯದರ್ಶಿನಿ ಎಂದು ಕೆಲಸಕ್ಕೆ ಸೇರಿಕೊಂಡರು. ಆ ಮೊದಲೇ ಒಂದೆರಡು ಸಂದರ್ಭಗಳಲ್ಲಿ ಅವರು ಚಿತ್ರಗಳಲ್ಲಿ ಒಳ್ಳೆಯ ಕೆಲಸವನ್ನು ಮಾಡಬಹುದೆಂಬು

ದನ್ನು ನಾನು ಗುರುತಿಸಿದ್ದೆ. ಆದ್ದರಿಂದ ಅವರು ನಮ್ಮಲ್ಲಿಗೆ ಬಂದಮೇಲೆ ಶಾಕುಂತಲ ಚಿತ್ರದಲ್ಲಿ ಒಂದು ಚಿಕ್ಕ ಪಾತ್ರವನ್ನು ಕೊಟ್ಟು ಕೆಲಸ ಮಾಡಿಸಿದೆ. ಅವರು ಅಲ್ಲಿ ಒಳ್ಳೆಯ ಕೆಲಸ ಮಾಡಿದ್ದರಿಂದ ಮುಂದಿನ ಚಿತ್ರದಲ್ಲಿ ಮುಖ್ಯ ಪಾತ್ರವನ್ನು ಮಾಡಿಸಿದ್ದೇನೆ. ಅವರು ಅಲ್ಲಿಯೂ ಒಳ್ಳೆಯ ಕೆಲಸವನ್ನು ಮಾಡಿ ಜನರ ಪ್ರಶಸ್ತಿಯನ್ನು ಪಡೆದಿದ್ದಾರೆ.

ಅವರಲ್ಲಿಯ ಅಭಿನಯ ಯೋಗ್ಯತೆಯನ್ನು ಗುರುತಿಸಿ ಅದಕ್ಕೆ ಯೋಗ್ಯವಾದ ಉತ್ತೇಜನವನ್ನು ಕೊಟ್ಟು ಒಳ್ಳೆಯ ಕೆಲವು ಚಿತ್ರಗಳನ್ನು ತಯಾರಿಸುವ ದೃಷ್ಟಿಯಿಂದ ಅವರಿಗೆ ವಿಶೇಷವಾದ ಸವಲತ್ತುಗಳನ್ನು ಕೊಟ್ಟಿದ್ದೇನೆ ಅವರಿಗೆ ಯಾವ ರೀತಿಯ ಅನಾನುಕೂಲಗಳಾಗದಂತೆ ಸೌಲಭ್ಯಗಳನ್ನು ಒದಗಿಸಿಕೊಟ್ಟಿದ್ದೇನೆ. ಹೊಸದಾಗಿ ಚಿತ್ರಪ್ರಪಂಚವನ್ನು ಸೇರಿದವರಾದ್ದರಿಂದ ಅಲ್ಲಿ ಯಾವಾಗಲೂ ಅಗತ್ಯವಾದ ಬೇಸರವಿಲ್ಲದ ದುಡಿತಕ್ಕೆ ಅವರು ಬೇಸರಪಡಬಾರದೆಂದು ವಿಶೇಷವಾದ ಆಸ್ಥೆಯಿಂದ ಅವರನ್ನು ನೋಡಿಕೊಂಡಿದ್ದೇನೆ ಉತ್ತೇಜನವಿಲ್ಲದ್ದಕಾಗಿ ಒಳ್ಳೆಯ ನಟನಟಿಯರು ಮುಂದೆ ಬಾರದೆ ಹೋದುದನ್ನು ನನ್ನ ಚಿತ್ರಪ್ರಪಂಚದ ಅನುಭವದಲ್ಲಿ ಕಂಡಿದ್ದೇನೆ ಇಂಥ ಶ್ರೇಷ್ಠ ತರಗತಿಯ ನಟಿಯಿಂದ ನಾಲ್ಕಾರು ಒಳ್ಳೆಯ ಚಿತ್ರಗಳನ್ನು ತಯಾರಿಸಬೇಕೆಂಬ ಕಲೆಗಾರಿಕೆಯ ಮತ್ತು ವ್ಯವಹಾರದ ದೃಷ್ಟಿಯಿಂದ ನಾನು ಅವರನ್ನು ಹುರಿದುಂಬಿಸಿದ್ದೇನೆ ವ್ಯವಸಾಯದ ಹೊರತಾಗಿ ಬೇರೆ ಯಾವ ತರದ ಸಂಬಂಧಗಳೂ ನಮ್ಮಲ್ಲಿ ಬೆಳೆದಿಲ್ಲ. ಸಾಮಾನ್ಯವಾಗಿ ಸಾಮಾಜಿಕರು ಚಿತ್ರಪ್ರಪಂಚವನ್ನು ಸಂಶಯಿತ ದೃಷ್ಟಿಯಿಂದಲೇ ನೋಡುತ್ತಾರೆ. ಚಿತ್ರವನ್ನು ನಿರ್ದೇಶಿಸುವಾಗ, ರಿಹರ್ಸ್ಲ ಮಾಡಿಸುವಾಗ ನಟನಟಿಯರ ಕೂಡ ನಿರ್ದೇಶಕನಿಗೆ ಹತ್ತಿರದ ಸಂಬಂಧ ಬರುವುದು ಅನಿವಾರ್ಯವಿರುತ್ತದೆ. ಹಗಲು ರಾತ್ರಿ ಕೂಡಿಯೇ ಕೆಲಸ ಮಾಡಬೇಕಾಗುತ್ತದಾದ್ದರಿಂದ ಕೆಲವೊಂದು ಸಾರೆ ನಿಕಟವಾದ ಪರಿಚಯ ಬೆಳೆಯುವುದು, ಸಲಿಗೆ ಬೆಳೆಯುವುದು ಅನಿವಾರ್ಯವಿದ್ದಂತೆ ಅಗತ್ಯವೂ ಇರುತ್ತದೆ. ಮೋಹಿನಿಯ ಕೂಡ ನಾನು ಸಲಿಗೆಯಿಂದ ನಡೆದುಕೊಳ್ಳುತ್ತೇನೆ ಇದಕ್ಕೆ ಕಾರಣವೆಂದರೆ ಆಫೀಸಿನಲ್ಲಿಯ ಕೆಲಸದ ಸಂಪರ್ಕವಲ್ಲದೆ ಸೆಟ್ ಮೇಲಿನ ಕೆಲಸದ ಮೂಲಕ ಉಂಟಾದ ನಿಕಟ ಸಂಬಂಧ. ಅಲ್ಲದೆ ಆಕೆಯ ಕೆಲಸದ ಬಗೆಯಲ್ಲಿ ನನಗೆ ವಿಶೇಷವಾದ ಆದರವಿದೆ. ಬೇರೆಯಾದ ಯಾವ ಅನೈತಿಕವಾದ ಸಲಿಗೆ

ನಮ್ಮಿಬ್ಬರಲ್ಲಿ ಇಲ್ಲ. ಈ ತೆರದ ಆಪಾದನೆಯನ್ನು ನನ್ನ ಮೇಲೆ ಅನ್ಯಾಯವಾಗಿ ಮಾಡಿದ್ದಾರೆ."

ತಿಂಗಳು ಗಟ್ಟಲೆ ತಪ್ಪಿಸಬೇಕೆಂದಿದ್ದ ಸನ್ನಿವೇಶ ಈಗ ಒದಗಿತು. ತನ್ನ ಹೇಳಿಕೆಯಾದನಂತರ ರಾಮರಾಯನ ಮರುಸವಾಲಿನ ಪ್ರಶ್ನೆಗಳನ್ನು ಎದುರಿಸ ಬೇಕು. ಮೋಹಿನಿಯ ಮತ್ತು ರಂಗನಾಥನ್‌ನ ಉತ್ತರಗಳ ಮೇಲೆಯೆ ಕೇಸಿನ ಭವಿತವ್ಯ ನಿಂತಿದೆ ಎಂಬುದನ್ನರಿತ ರಾಮರಾಯ ನಿಧಾನವಾಗಿ ಪ್ರಾರಂಭಿಸಿದ

" ಶಾಲೆಯಲ್ಲಿಯ ಕೆಲಸದಿಂದ ಕಡಿಮೆಯಾದಮೇಲೆ ನಿಮ್ಮಲ್ಲಿ ಕೆಲಸಕ್ಕೆ ಸೇರಿದರು ಎಂದು ಹೇಳಿದಿರಿ ತಮಗೆ ಕೆಲಸಕ್ಕೆ ಸೇರಬೇಕಾಗಿದೆ ಎಂದು ಅವರಾಗಿಯೆ ಹೇಳಿದರೊ ಅಥವಾ ನಿಮ್ಮಲ್ಲಿ ಕೆಲಸವಿದೆ ಎಂದು ನೀವಾಗಿಯೆ ಸೂಚಿಸಿದಿರೊ ? "

ಅವರಿಗೆ ಕೆಲಸ ಹಿಡಿಯಬೇಕಾಗಿದ್ದಿತು ಎಂಬುದು ಸ್ಪಷ್ಟವಾಗಿದ್ದಿತು. ನಮ್ಮಲ್ಲಿ ಜಾಗೆ ಇದ್ದುದರಿಂದ ಕೆಲಸ ಬೇಕಾಗಿದ್ದರೆ ನಮ್ಮಲ್ಲಿ ಇದೆ ಎಂದು ನಾನು ಹೇಳಿದೆ "

" ನಿಮ್ಮಲ್ಲಿ ಕೆಲಸ ಸಿಕ್ಕಬಹುದು ಎಂದು ಅವರಿಗೆ ಆ ಮೊದಲೇ ನೀವು ಎಂದಾದರೂ ಹೇಳಿದ್ದಿರಾ ? "

" ಕೆಲಸ ಸಿಕ್ಕಬಹುದು ಎಂದು ಹೇಳುವ ಸಂದರ್ಭವೇ ಇರಲಿಲ್ಲ. ಅವರು ಆಗಲೆ ಒಂದು ಕೆಲಸದಲ್ಲಿ ಇದ್ದರು "

" ಈ ಕೆಲಸದ ಬಗೆಯಲ್ಲಿ ಅಲ್ಲದಿದ್ದರೂ ನಿಮ್ಮ ಚಿತ್ರಗಳಲ್ಲಿ ಅವರು ಕೆಲಸ ಮಾಡಬೇಕು ಎಂದು ಆ ಮೊದಲೆ ಅವರಿಗೆ ನೀವು ಸೂಚಿಸಿದ್ದಿರಾ ? "

" ಹೌದು. ಅವರು ಉತ್ತಮವಾಗಿ ಅಭಿನಯಿಸಬಲ್ಲರು ಎಂಬುದನ್ನು ಗುರುತಿಸಿ ಹಾಗೆ ಹೇಳಿದ್ದೆ."

" ಇವರು ಸೆಕ್ರೆಟರಿ ಎಂದು ಕೆಲಸಕ್ಕೆ ಸೇರುವ ಮೊದಲು ಆ ಜಾಗೆಯಲ್ಲಿ ಯಾರು ಕೆಲಸ ಮಾಡುತ್ತಿದ್ದರು ? "

" ಯಾರೂ ಇಲ್ಲ "

" ಹಾಗಿದ್ದರೆ, ಏನಾದರೊಂದು ಉಪಾಯದಿಂದ ಇವರನ್ನು ನಿಮ್ಮಲ್ಲಿಗೆ

ಸೇರಿಸಿಕೊಳ್ಳಲಿಕ್ಕೆ ಈ ಕೆಲಸದ ನೆಪವನ್ನು ಹೂಡಿಕೊಂಡ ಹಾಗಾಗಲಿಲ್ಲವೆ ? "

" ನೆಪ ಎಂದಲ್ಲ. ಆಫೀಸಿನಲ್ಲಿಯ ಕೆಲಸಕ್ಕೆ ನನಗೆ ಒಬ್ಬರ ನೆರವು ಬೇಕಾಗಿದ್ದಿತು. ಅಲ್ಲದೆ ಅವರು ನಮ್ಮಲ್ಲಿಗೆ ಬಂದರೆ ಅವರಿಂದ ಚಿತ್ರಗಳಲ್ಲಿ ಕೆಲಸವನ್ನು ಮಾಡಿಸಬಹುದು ಎಂದೂ ನನಗೆ ಅನಿಸಿತ್ತು "

ರಂಗನಾಥನ್ ನಿಧಾನವಾಗಿ, ಒಳ್ಳೆ ಆತ್ಮವಿಶ್ವಾಸದಿಂದ ಉತ್ತರ ಹೇಳುತ್ತಿದ್ದ. ಆತನನ್ನು ಮಾತಿನಲ್ಲಿ ಹಿಡಿಯುವುದು ಅಷ್ಟೇನೂ ಸುಲಭದ ಕೆಲಸವಲ್ಲವೆಂದು ರಾಮರಾಯನಿಗೆನಿಸಿರಬೇಕು ಆತ ಮುಂದುವರಿದ

" ನಿಮಗೆ ಒಬ್ಬ ಕಾರ್ಯದರ್ಶಿ ಬೇಕಾಗಿದ್ದ ಬಗೆಯಲ್ಲಿ ನೀವು ಪೇಪರ್ ನಲ್ಲಿ ಜಾಹೀರಾತು ಕೊಟ್ಟಿದ್ದಿರಾ ? "

" ಇಲ್ಲ "

" ನಿಮ್ಮಲ್ಲಿ ಕೆಲಸಗಳು ತೆರವಾದಾಗ ಅವುಗಳನ್ನು ನೀವು ಜಾಹೀರಾತು ಪಡಿಸುವುದಿಲ್ಲವೆ ? "

" ಒಮ್ಮೆ ಹಾಗೆ, ಒಮ್ಮೆ ಹೀಗೆ. ಯೋಗ್ಯವಾದ ಜನ ಸಿಕ್ಕರೆ ಜಾಹೀರು ಮಾಡುವ ಅಗತ್ಯವಿಲ್ಲ "

" ಮೋಹಿನಿಯನ್ನು ನೋಡಿದ ಕೂಡಲೆ ಆಕೆ ಯೋಗ್ಯ ಎಂದೇ ನಿಮಗೆ ಅನಿಸಿತಲ್ಲವೆ ? "

ರಂಗನಾಥನ್ ಹುಬ್ಬುಗಂಟಿಕ್ಕಿದ. ನ್ಯಾಯಾಧೀಶರ ತುಟಿಗಳಂಚಿನಲ್ಲಿ ಕಿರುನಗೆಯೊಂದು ಮೂಡಿ ಮಾಯವಾಯಿತು.

" ಅಂದರೆ ಈಕೆ ಸರಿಯಾದ ಕಾರ್ಯದರ್ಶಿನಿಯಾಗಬಹುದು ಎಂದು ನಿಮಗೆ ಕೂಡಲೆ ತಿಳಿಯಿತು "

" ಹೌದು."

" ಆಪಟೆಯವರ ಜೊತೆಯಲ್ಲಿ ಮೊದಲು ಸ್ಟುಡಿಯೋಕ್ಕೆ ಬರುತ್ತಿದ್ದಾಗ ಇವರನ್ನು ನೀವು ಬಹಳ ಆದರಪೂರ್ವಕವಾಗಿ ಬರಮಾಡಿಕೊಳ್ಳುತ್ತಿದ್ದಿರಿ ? "

" ಅದು ನಮ್ಮ ಸ್ಟುಡಿಯೋದ ವೈಶಿಷ್ಟ್ಯವಾಗಿದೆ."

" ಇರಬಹುದು. ಆದರೆ ಇವರು ಬರುತ್ತಿದ್ದುದಕ್ಕಿಂತ ಹೆಚ್ಚಾಗಿ ನಿಮ್ಮ ಸ್ಟುಡಿಯೋಕ್ಕೆ ಬರಬೇಕು ಎಂದು ನಿಮಗೆನಿಸುತ್ತಿತ್ತು. ಆದ್ದರಿಂದ ನೀವು ಅವರನ್ನು ಆದರದಿಂದ ಕಾಣುತ್ತಿದ್ದಿರಿ ಎನ್ನುತ್ತೇನೆ. ಹೌದೆ ? "

" ಅಲ್ಲ."

" ಆಫೀಸ್ ಕೆಲಸಕ್ಕೆ ಸಹಾಯವಾಗಲಿ ಎಂದಲ್ಲವೆ ನೀವು ಕಾರ್ಯದರ್ಶಿಯನ್ನು ನೇಮಕ ಮಾಡಿಕೊಂಡದ್ದು ? "

" ಹೌದು."

" ಹಾಗಿದ್ದರೆ ನೀವು ಅವರನ್ನು ರಾತ್ರಿಯ ಹೊತ್ತಿನಲ್ಲಿ ತಾಜ್, ಗ್ರೀನ್ಸ್ ಮುಂತಾದ ಕಡೆಗೆ ಕರೆದುಕೊಂಡು ಹೋಗುವ ಅಗತ್ಯವೇನಿರುತ್ತಿತ್ತು ? "

" ಸಂಜೆಯವರೆಗೆ ಕೆಲಸ ಮಾಡಿ ಬೇಸರವೆನಿಸಿದಾಗ ಎಲ್ಲಿಯಾದರೂ ಹೋಗುವಾ ಎಂದಾಗ ಹಾಗೆ ಹೋಗಿರಬಹುದು "

" ಎಲ್ಲಿಯಾದರೂ ಹೋಗುವಾ ಅನ್ನುತ್ತಿದ್ದವರು ಯಾರು ? ನೀವೊ, ಅಥವಾ ಅವರೊ ? "

" ಕೆಲವು ಸಾರೆ ಅವರೆಂದಿರಬಹುದು, ಕೆಲವು ಸಾರೆ ನಾನೆಂದಿರಬಹುದು."

" ಹೆಚ್ಚಾಗಿ ? "

" ಹೇಳಲಿಕ್ಕಾಗುವುದಿಲ್ಲ."

" ಆಗಬಹುದು. ನೀವು ನಿಮ್ಮ ಕಂಪನಿಯ ಎಲ್ಲ ಹಣಕಾಸಿನ ವ್ಯವಹಾರಗಳನ್ನು ಹಿಂದ್ ಬ್ಯಾಂಕಿನ ಮುಖಾಂತರವೆ ಮಾಡುತ್ತೀರಲ್ಲವೆ ? "

" ಹೌದು."

" ಮಾರ್ಚ್ ತಿಂಗಳಲ್ಲಿ ನೀವು ಮೋಹಿನಿಗೆ ಸಂಬಳದ ಆರುನೂರರ ಹೊರತಾಗಿ ಒಂದು ಸಾವಿರ ರೂಪಾಯಿ ಚೆಕ್‌ನಿಂದ ಕೊಟ್ಟಿದ್ದೀರಿ. ಅದು ಯಾತರ ಬಗ್ಗೆ ಹೇಳಬಲ್ಲಿರಾ ? "

" ಯಾವುದಕ್ಕೋ ಹಣ ಬೇಕು ಎಂದರು."

" ಯಾತಕ್ಕಾಗಿ ಎಂದು ನೀವು ಕೇಳಲಿಲ್ಲವೆ ? "

" ಕೇಳಿರಬೇಕು. ಈಗ ಜ್ಞಾಪಕವಿಲ್ಲ."

" ಅವರು ಬೇಡಿದ್ದು ಎಷ್ಟು ಹಣ ? "

" ಆ ಮಾತಿಗೆ ಆಗಲೆ ಎಂಟೊಂಬತ್ತು ತಿಂಗಳಾಯಿತು. ನನಗೆ ಸರಿಯಾಗಿ ಜ್ಞಾಪಕವಿಲ್ಲ."

" ಕಂಪನಿಯ ಲೆಕ್ಕದಲ್ಲಿ ಈ ಹಣವನ್ನು ಏನೆಂದು ತೋರಿಸಲಾಗಿದೆ ? "

" ನನ್ನ ವೈಯಕ್ತಿಕ ಲೆಕ್ಕಕ್ಕೆ ಖರ್ಚು ಹಾಕಲಾಗಿದೆ."

" ಅಂದರೆ ಇಷ್ಟು ಹಣವನ್ನು ನೀವು ವೈಯಕ್ತಿಕವಾಗಿ ಮೋಹಿನಿಗೆ ಕೊಟ್ಟಹಾಗಾಯಿತಲ್ಲವೆ ? "

" ಹೌದು."

" ಅದರ ಪೈಕಿ ಏನಾದರೂ ಹಣ ನಿಮಗೆ ತಿರುಗಿ ಬಂದಿದೆಯೆ ? "

" ಐದುನೂರು ರೂಪಾಯಿ ಬಂದಿದೆ."

" ಯಾವಾಗ ? "

" ಆಗಸ್ಟ್ ತಿಂಗಳಲ್ಲಿ, ನಗದು ಕೊಟ್ಟಿದ್ದಾರೆ."

" ನಿಮ್ಮ ಹೇಳಿಕೆಯ ಹೊರತಾಗಿ ಇದಕ್ಕೆ ಬೇರೆ ಏನಾದರೂ ಬರಹದ ಪ್ರಮಾಣವಿದೆಯೆ ? "

" ಹಣವನ್ನು ವೈಯಕ್ತಿಕವಾಗಿ ಕೊಟ್ಟಿದ್ದರಿಂದ ಅಂಥ ಪ್ರಮಾಣದ ಪ್ರಶ್ನೆ ಇರಲಿಲ್ಲ."

" ಅಂದರೆ ಕೇವಲ ವೈಯಕ್ತಿಕ ವಿಶ್ವಾಸದ ಮೇಲೆಯೆ ಆ ಹಣವನ್ನು ನೀವು ಕೊಟ್ಟಿರಿ. ಅಲ್ಲವೆ ? "

" ಹೌದು."

" ಒಂದು ವೇಳೆ ಆಕೆ ಹಣವನ್ನು ಹಿಂದಿರುಗಿಸದಿದ್ದರೆ ನಿಮಗೆ ಯಾವ ಆಧಾರದ ಅಗತ್ಯವೆನಿಸಲಿಲ್ಲವೆ ? "

" ಇಲ್ಲ."

" ಅಂದರೆ ಆಕೆ ಹಣವನ್ನು ಹಿಂದಿರುಗಿಸಿದರೂ ಅಷ್ಟೆ ಇಲ್ಲದಿದ್ದರೂ ಅಷ್ಟೆ ಎನಿಸಿತು ನಿಮಗೆ. ಅಲ್ಲವೆ ? "

" ಹಾಗೇನಿಲ್ಲ ಕೊಟ್ಟೇ ಕೊಡುವರೆಂಬ ಭರವಸೆ ನನಗಿದೆ."

" ನಿಮ್ಮ ಅವರ ಸಂಬಂಧ ಅಷ್ಟೊಂದು ಆತ್ಮೀಯವಾಗಿವೆಯಲ್ಲವೆ ? "

" ಅದು ಪರಸ್ಪರ ವಿಶ್ವಾಸದ ಪ್ರಶ್ನೆಯಾಗಿದೆ."

" ಇರಲಿ. 'ಭಾಮಿನೀ ವಿಲಾಸ'ದಲ್ಲಿಯ ಫ್ಲಾಟನ್ನು ನೀವು ಎಂದಿನಿಂದ ಬಾಡಿಗೆ ಹಿಡಿದಿರಿ ? "

" ಏಪ್ರಿಲ್ ಒಂದರಿಂದ "

" ಯಾರಿಗಾಗಿ ಬೇಕಾಗಿತ್ತು ಅದು ? "

" ನನಗಾಗಿ. ಈಗಿದ್ದ ಮನೆಯನ್ನು ಬಿಡುವ ವಿಚಾರದಲ್ಲಿದ್ದೆ."

" ಆದರೆ ನೀವು ಬಿಡಲೇ ಇಲ್ಲವಲ್ಲ ? "

" ಏಪ್ರಿಲ್ ತಿಂಗಳ ಕೊನೆಗೆ ಮನೆ ಮೋಹಿನಿಗೆ ಬೇಕಾಯಿತು. ಆದ್ದರಿಂದ ನಾನು ಅಲ್ಲಿಗೆ ಹೋಗಲಾಗಲಿಲ್ಲ "

" ಏಪ್ರಿಲ್ ಒಂದರಿಂದ ತಿಂಗಳ ಕೊನೆಯವರೆಗೆ ಮನೆ ನಿಮ್ಮ ವಶದಲ್ಲಿದ್ದರೂ ನೀವು ಅಲ್ಲಿಗೆ ಹೋಗದೆ ತೆರವಾಗಿಯೇ ಇಟ್ಟಿದ್ದಿರಿ. ಯಾಕೆ ? "

" ಏಪ್ರಿಲ್ ಒಂದಕ್ಕೆ ಮನೆ ಅಕಸ್ಮಾತ್ತಾಗಿ ಸಿಕ್ಕಿತಾದ್ದರಿಂದ ಈಗಿದ್ದ ಮನೆಯ ಒಡೆಯನಿಗೆ ಸಕಾಲದಲ್ಲಿ ನೋಟೀಸು ಕೊಡಲಾಗಲಿಲ್ಲ ಆದ್ದರಿಂದ ಒಂದು ತಿಂಗಳು ಇದ್ದಲ್ಲಿಯೇ ಇದ್ದು ಮುಂದಿನ ತಿಂಗಳು ಅಲ್ಲಿಗೆ ಹೋದರೆ ಆಯಿತು ಎಂದಿದ್ದೆ "

" ' ಭಾಮಿನೀ ವಿಲಾಸ 'ಕ್ಕಾಗಿ ನೀವು ಜನವರಿಯಿಂದಲೇ ಪ್ರಯತ್ನ ಮಾಡುತ್ತಿದ್ದಿರಾ ? "

" ಆ ಮನೆ ತೆರವಾದಾಗ ನನಗೆ ಕೊಡಬೇಕೆಂದು ಮಾಲೀಕರಿಗೆ ಆಗೀಗ ಹೇಳುತ್ತಿದ್ದೆ."

" ಮೋಹಿನಿ ನಿಮ್ಮಲ್ಲಿ ಕೆಲಸಕ್ಕೆ ಸೇರಿದನಂತರ ಆಕೆ ಆಪಟೆಯವರ ಮನೆಯಲ್ಲಿ ಇರುವುದು ನಿಮಗೆ ಬೇಡವಾಗಿತ್ತಲ್ಲವೆ ? "

" ಹಾಗೇನಿಲ್ಲ."

" ಪ್ರಯತ್ನ ಮಾಡಿ ಈ ಮನೆಯನ್ನು ಬಾಡಿಗೆ ಹಿಡಿದದ್ದು ನಿಮಗಾಗಿ ಅಲ್ಲ; ಮೊದಲಿನಿಂದಲೂ ಮೋಹಿನಿಯನ್ನು ಬೇರೆಯಾಗಿ ಇಡುವುದಕ್ಕಾಗಿ, ಎಂದು ನಾನು ಹೇಳುತ್ತೇನೆ. ಇದಕ್ಕೇನೆನ್ನುತ್ತೀರಿ ? "

" ಅದು ಸುಳ್ಳು."

" ಹಾಗಿದ್ದರೆ, ಮೋಹಿನಿ ಆಪಟೆಯವರ ಮನೆಯಿಂದ ಬಂದಮೇಲೆ ನೇರವಾಗಿ ' ಭಾಮಿನೀ ವಿಲಾಸ 'ಕ್ಕೆ ಯಾಕೆ ಹೋಗಲಿಲ್ಲ ? "

" ಆ ಮನೆಯನ್ನು ಫರ್ನಿಶ್ ಮಾಡಬೇಕಾಗಿತ್ತು. ಅದಕ್ಕಾಗಿ ಹತ್ತು ಹನ್ನೆರಡು ದಿವಸದ ಅವಧಿ ಬೇಕಾಗಿತ್ತು "

" ಆ ಅವಧಿಯಲ್ಲಿ ಮೋಹಿನಿ ನಿಮ್ಮ ಮನೆಯಲ್ಲಿಯೇ ಇದ್ದಳೆ ? "

" ಹೌದು."

" ನಿಮ್ಮ ಮನೆಯಲ್ಲಿ ಮತ್ತೆ ಯಾರಿದ್ದಾರೆ ? "

" ಯಾರೂ ಇಲ್ಲ "

" ನಿಮಗೆ ಮದುವೆ ಆಗಿದೆಯೆ ? "

" ಇಲ್ಲ "

" ಮದುವೆ ಮಾಡಿಕೊಳ್ಳುವ ಅಗತ್ಯ ನಿಮಗೆ ಅನಿಸಿಲ್ಲವೆ ? "

" ಅದು ಇನ್ನೊಬ್ಬರಿಗೆ ಸಂಬಂಧಿಸಿದ ಪ್ರಶ್ನೆಯಾಗಿಲ್ಲ."

" ಇನ್ನೊಬ್ಬರಿಗೆ ಸಂಬಂಧಿಸಿದ ಪ್ರಶ್ನೆಯಾಗಿದೆ. ಅಂತೇ ಕೇಳಿದೆ "

ರಂಗನಾಥನ್ ಬಿಗುಮಾನದಿಂದ ಸುಮ್ಮನಾದ. ರಾಮರಾಯ ನಸುನಕ್ಕು ಆ ಪ್ರಶ್ನೆಯನ್ನು ಬಿಟ್ಟುಕೊಟ್ಟ.

" ನಿಮ್ಮ ಮನೆಯಲ್ಲಿ ಅವರು ಇದ್ದಾಗ ಅವರಿಗೆ ಬೇರೆಯಾಗಿ ಇರುವ ವ್ಯವಸ್ಥೆಯನ್ನು ಮಾಡಿದ್ದಿರಾ ? "

" ಹೌದು."

" ಅವರಿಗಾಗಿದ್ದ ಕೋಣೆಗೆ ಸ್ವತಂತ್ರವಾದ ಪ್ರವೇಶವಿದ್ದಿತೆ ? "

" ಇಲ್ಲ."

" ನಿಮ್ಮ ಕೋಣೆಗೂ ಅವರಿದ್ದ ಕೋಣೆಗೂ ಎಷ್ಟು ದೂರ ? "

" ನಡುವೆ ಒಂದು ಕೋಣೆ ಇದೆ "

" ಆ ನಡುವಿನ ಕೋಣೆಗೆ ಎರಡೂ ಕಡೆಯಿಂದ ಪ್ರವೇಶವಿದೆಯಲ್ಲವೆ ? "

" ಹೌದು "

" ಸರಿ. ಮೋಹಿನಿ ನಿಮ್ಮಲ್ಲಿಗೆ ಬಂದಮೇಲೆಯೆ ಅಲ್ಲವೆ ನೀವು ಮಾಥೆ ರಾನ್‌ಗೆ ಹೋದದ್ದು ? "

" ಹೌದು."

" ಮಾಥೆರಾನ್‌ಗೆ ಹೋಗುವ ವಿಚಾರವನ್ನು ನೀವು ಮೊದಲೇ ಮಾಡಿದ್ದಿರೊ ಅಥವಾ ಮೋಹಿನಿ ಬಂದಮೇಲೆಯೊ ? "

" ಮಾಥೆರಾನ್‌ಗೆ ನಾನು ಸಾಮಾನ್ಯವಾಗಿ ಪ್ರತಿ ವರ್ಷವೂ ಹೋಗುತ್ತೇನೆ. ಈ ಸಲ ಕೆಲವು ಸೈಟ್ಸ್ ನೋಡಬೇಕಾಗಿದ್ದಿತು."

" ಈ ಸಲ ಮುಂಬಯಿಂದ ಹೊರಡುವುದಕ್ಕೆ ಮೊದಲೇ ಕೋಣೆಯನ್ನು ರಿಝರ್ವ್ ಮಾಡಿದ್ದಿರಲ್ಲವೆ ? "

" ಹೌದು "

"'ರಿಝರ್ವ್ ಒನ್ ಡಬಲ್ ರೂಮ್' ಎಂದು ನೀವು ಕಳಿಸಿದ ತಂತಿ ಇದೇ ಹೌದೆ?"

"ಹೌದು."

"ಹೀಗೆ ತಂತಿ ಕಳಿಸಿದ್ದನ್ನು ಮೋಹಿನಿಗೆ ನೀವು ಹೇಳಿದ್ದಿರಾ?"

"ಹೇಳಿದ್ದೆ."

"ಅಲ್ಲಿ ಹೋದಮೇಲೆ ಮೋಹಿನಿ ತನಗಾಗಿ ಒಂದು ಬೇರೆಯಾದ ರೂಮ್ ಬೇಡಿದಳೆ?"

"ನನಗೆ ಜ್ಞಾಪಕವಿಲ್ಲ"

"ಹೊಟೆಲ್ ರಜಿಸ್ಟರ್‌ದಲ್ಲಿ ಮಿಸ್ಟರ್ ಮತ್ತು ಮಿಸೆಸ್ ರಂಗನಾಥನ್ ಎಂದು ಬರೆಯಿಸಿದ್ದು ನಿಜವೆ?"

"ಹೌದು ಇಲ್ಲದ ಊಹಾಪೋಹಗಳಿಗೆ ಅವಕಾಶವಿರಬಾರದು ಎಂದು ಹಾಗೆ ಬರೆಯಿಸಿದೆ."

"ಆಗಬಹುದು. ನೀವು ಅಲ್ಲಿ ಇದ್ದದ್ದೂ ಮಿಸ್ಟರ್ ಮತ್ತು ಮಿಸೆಸ್ ರಂಗನಾಥನ್ ಇರಬಹುದಾದ ರೀತಿಯಲ್ಲಿಯೇ ಇದ್ದಿರಿ ಅಲ್ಲವೆ?"

"ಅಂದರೆ?"

"ಅಂದರ, ಒಂದೇ ಕೋಣೆಯಲ್ಲಿ ಇದ್ದಿರಿ. ನಿಮ್ಮಿಬ್ಬರನ್ನು ಯಾರು ನೋಡಿದರೂ ಗಂಡಹೆಂಡಿರು ಎಂದು ಕಾಣುವ ಹಾಗೆಯೇ ಇದ್ದಿರಿ. ಹೌದೆ?"

"ಉಳಿದವರು ಏನು ತಿಳಿದುಕೊಳ್ಳುತ್ತಿದ್ದರು ನನಗೆ ಗೊತ್ತಿಲ್ಲ."

"ಆದರೆ ಉಳಿದವರು ನೀವು ಮಿಸ್ಟರ್ ಮತ್ತು ಮಿಸೆಸ್ ರಂಗನಾಥನ್ ಎಂದೇ ತಿಳಿದುಕೊಳ್ಳಬೇಕೆಂಬ ಇಚ್ಛೆ ನಿಮ್ಮದಾಗಿತ್ತು."

"ಹೌದು. ಕಾರಣ ಆಗಲೆ ಹೇಳಿದ್ದೇನೆ."

"ಕಾರಣ ಯಾವುದೇ ಇರಲಿ. ನಿಮ್ಮ ನಡೆನುಡಿಗಳು ನೋಡಿದವರಲ್ಲಿ ಆ ಭಾವನೆಯನ್ನು ಹುಟ್ಟಿಸುವಂಥವೇ ಇದ್ದುವಲ್ಲವೆ?"

"ಅದನ್ನು ನಾನು ಹೇಳಲಾರೆ. ನೋಡಿದವರು ಹೇಳಬೇಕು."

"ನೋಡಿದವರು ಹೇಳಿದ್ದಾರೆ. ಅದಿರಲಿ. ನೀವು ಇಬ್ಬರು ಆ ಐದು ದಿನವೂ ಒಂದೇ ಕೋಣೆಯಲ್ಲಿಯೇ ಇದ್ದಿರಲ್ಲವೆ? ಇದನ್ನಾದರೂ ನೀವು ಹೇಳಬಹುದು।"

“ ಹೌದು. ಒಂದೇ ಕೋಣೆಯಲ್ಲಿದ್ದೆವು.”

“ ಸಾಕು. ಮಾಥೆರಾನ್‌ನಿಂದ ಬಂದಮೇಲೆ ಎಷ್ಟು ದಿವಸಗಳನಂತರ ಮೋಹಿನಿ ‘ ಭಾಮಿನೀ ವಿಲಾಸ ’ಕ್ಕೆ ಹೋದಳು ? ”

“ ಐದಾರು ದಿನದನಂತರವಿರಬಹುದು.”

“ ಆ ಅವಧಿಯಲ್ಲಿ ನಿಮ್ಮಲ್ಲಿಯೇ ಇದ್ದಳೆ ? ”

“ ಹೌದು.”

“ ಭಾಮಿನೀ ವಿಲಾಸದ ಬಾಡಿಗೆಯನ್ನು ಅಂದಿನಿಂದ ಇಂದಿನವರೆಗೆ ನೀವೇ ಕೊಟ್ಟದ್ದೀರಲ್ಲವೆ ? ”

“ ಹೌದು.”

“ ನಿಮ್ಮಲ್ಲಿ ಕೆಲಸ ಮಾಡುವ ಎಲ್ಲರಿಗೂ ಬಾಡಿಗೆ ಇಲ್ಲದೆ ಮನೆಯನ್ನು ಕೊಡಿಸುತ್ತೀರಾ ? ”

“ ಇಲ್ಲ. ಈ ಮನೆ ಮೊದಲಿನಿಂದ ನನ್ನ ಹೆಸರಿನಲ್ಲಿದೆ. ಅದಕ್ಕಾಗಿ ನಾನು ಬಾಡಿಗೆ ಕೊಡುತ್ತೇನೆ ”

“ ಹಾಗಾದರೆ ಇದುವರೆಗೆ ಕೊಟ್ಟ ಬಾಡಿಗೆಯ ಹಣವನ್ನು ನೀವು ಮೋಹಿನಿಯಿಂದ ಪಡೆದಿದ್ದೀರಾ ? ”

“ ಪಡೆಯಬೇಕಾಗಿದೆ.”

“ ಆ ವಿಷಯಕ್ಕೆ ನೀವು ಮೋಹಿನಿಯನ್ನು ಕೇಳಿದ್ದೀರಾ ? ”

“ ಇನ್ನುಮೇಲೆ ಕೇಳಬಹುದು.”

“ ಅಂದರೆ ಇನ್ನೂವರೆಗೆ ಕೇಳಿಲ್ಲ ಎಂದಾಯಿತು. ಅಲ್ಲವೆ ? ”

“ ಹೌದು.”

“ ಭಾಮಿನೀ ವಿಲಾಸಕ್ಕೆ ಆಕೆ ಹೋದ ಹೊಸದರಲ್ಲಿ ಆಕೆಗಾಗಿ ನೀವು ಒಂದು ಕಾರ್ ಕೊಂಡಿರಲ್ಲವೆ ? ”

“ ಕಾರ್ ಕೊಂಡದ್ದು ನಿಜ. ಆದರೆ ಅದು ಆಕೆಗಾಗಿ ಅಲ್ಲ. ಕಾರ್ ಸ್ಟುಡಿಯೋಕ್ಕೆ ಬೇಕಾಗಿತ್ತು.”

“ ಕಾರ್ ಸ್ಟುಡಿಯೋದ ಸಲುವಾಗಿ ಇದ್ದರೂ ಅದರ ಬಣ್ಣ ಯಾವುದಿರಬೇಕೆಂಬುದನ್ನು ಆಕೆಯೇ ಗೊತ್ತುಮಾಡಿದಳು. ಇದು ನಿಜವೆ ? ”

“ ಇಬ್ಬರೂ ಸೇರಿಯೇ ಗೊತ್ತುಮಾಡಿದೆವು.”

" ಆಗಬಹುದು. ಆದರೆ ಹೊಸ ಕಾರ್ ಬಂದನಂತರ ಅದು ಮೋಹಿನಿಯ ಉಪಯೋಗಕ್ಕೆಯೇ ಮೀಸಲಾಗಿದೆಯಲ್ಲವೆ ? "

" ಇಲ್ಲ. ಸ್ಟುಡಿಯೋದ ಕೆಲಸಕ್ಕೂ ಅಗತ್ಯ ಬಿದ್ದಾಗ ಅದನ್ನು ಉಪಯೋಗಿಸಲಾಗುತ್ತದೆ."

" ಆದರೂ ಅದು ಯಾವಾಗಲೂ ಮೋಹಿನಿಯ ವಶದಲ್ಲಿಯೇ ಇರುತ್ತದೆ. ಅಲ್ಲವೆ ? "

" ಹಾಗೇನೂ ಹೇಳಲಾಗುವುದಿಲ್ಲ "

" ಕಾರ್ ಆಕೆಗೆ ಬೇಕಾದಾಗ ಅದು ಇನ್ನೊಬ್ಬರಿಗೆ ಸಿಕ್ಕುವುದಿಲ್ಲ. ಇದಾದರೂ ನಿಜವೆ ? "

" ಅಂಥ ಸಂದರ್ಭಗಳು ಬಂದಹಾಗೆ ಇಲ್ಲ "

" ಅದೇ ನಾನು ಹೇಳುವುದು ಆ ಕಾರ್ ಮೋಹಿನಿಯದು ಎಂದು ಸ್ಟುಡಿಯೋದಲ್ಲಿ ಎಲ್ಲರೂ ತಿಳಿಯುತ್ತಾರಾದ್ದರಿಂದ ಆ ಕಾರನ್ನು ಉಳಿದ ಯಾರೂ ಬೇಡುವುದಿಲ್ಲ ಹೌದೆ ? "

" ಉಳಿದವರು ಏನು ತಿಳಿದಿದ್ದಾರೆ ನನಗೆ ಗೊತ್ತಿಲ್ಲ. ಆದರೆ ಕಾರ್ ಎಲ್ಲರಿಗಾಗಿಯೂ ಇದೆ."

" ಉಳಿದವರು ನಿಮ್ಮ ಮತ್ತು ಮೋಹಿನಿಯ ಸಂಬಂಧಗಳ ವಿಷಯದಲ್ಲಿ ಏನು ಮಾತನಾಡುತ್ತಾರೆಂಬುದು ನಿಮಗೆ ಗೊತ್ತೆ ? "

" ಅದನ್ನು ನಾನು ತಿಳಿಯಬೇಕಾಗಿಲ್ಲ "

" ನೀವು ವಾಡಿಕೆಯಾಗಿ ಸಾಯಂಕಾಲದ ಊಟವನ್ನು ಮೋಹಿನಿಯ ಮನೆಯಲ್ಲಿಯೇ ಮಾಡುತ್ತೀರಾ ? "

" ಇಲ್ಲ."

" ನೀವು ಆಕೆಯ ಮನೆಯಲ್ಲಿ ಸಾಯಂಕಾಲದ ಊಟವನ್ನು ಎಂದಿಗೂ ಮಾಡಿಯೇ ಇಲ್ಲವೆ ? "

" ಆಗೀಗ ಮಾಡಿರಬಹುದು."

" ಆಗೀಗ ಎಂದರೆ—ವಾರಕ್ಕೆ ಎರಡು ಸಲ, ಮೂರು ಸಲ ? "

" ಅದನ್ನು ಹೇಳಲಾಗುವುದಿಲ್ಲ."

" ಹೋದಾಗ ಅಲ್ಲಿಂದ ರಾತ್ರಿ ಎಷ್ಟು ಗಂಟೆಗೆ ತಿರುಗಿ ಹೊರಡುತ್ತಿದ್ದಿರಿ ? "

" ಹತ್ತೂವರೆ ಅಥವಾ ಹನ್ನೊಂದು."

" ನೀವು ರಾತ್ರಿ ಅಲ್ಲಿಯೇ ಎಂದಾದರೂ ಉಳಿದದ್ದುಂಟೆ ? "

" ಇಲ್ಲ."

" ಎಂದಿಗೂ ? "

" ಎಂದಿಗೂ ಇಲ್ಲ."

" ಎಂದಾದರೂ ನೀವು ಅಲ್ಲಿ ರಾತ್ರಿ ಇದ್ದದ್ದು ಸಿದ್ಧವಾದರೆ ಸುಳ್ಳು ಸಾಕ್ಷ್ಯ ಹೇಳಿದ ಆಪಾದನೆಗೆ ಗುರಿಯಾಗಬೇಕಾಗುತ್ತದೆ. ನೆನಪಿರಲಿ."

ರಂಗನಾಥನ್ ತುಸು ಹಿಂತೆಗೆದ. ರಾಮುರಾಯ ಏಟಿನ ಮೇಲೆ ಏಟಿಂಬಂತೆ ಮತ್ತೆ ಕೇಳಿದ .

" ಒಂದು ದಿನವೂ ನೀವು ಅಲ್ಲಿ ಉಳಿದಿಲ್ಲವೆ ? "

" ನನಗೆ ಜ್ಞಾಪಕವಿಲ್ಲ "

" ಅದು ನನ್ನ ಪ್ರಶ್ನೆಗೆ ಉತ್ತರವಲ್ಲ. ಉಳಿದಿರೊ ಅಥವಾ ಇಲ್ಲವೊ ? "

" ಒಂದೆರಡು ಸಲ ಉಳಿದಿರಬೇಕು."

" ಯಾಕೆ ಉಳಿದಿರಿ ? "

" ಏನೋ ಮಾತನಾಡುತ್ತ ಕುಳಿತು ತೀರ ರಾತ್ರಿಯಾಗಿರಬೇಕು."

" ನಿಮ್ಮ ಕಾರ್ ಅಥವಾ ಮೋಹಿನಿಯ ಕಾರ್ ಇರಲಿಲ್ಲವೆ ? "

ರಂಗನಾಥನ್ ಸುಮ್ಮನಾದ. ಆತ ಸುಮ್ಮನಾದುದನ್ನು ಕೋರ್ಟಿನವರು ಗಮನಿಸಬೇಕೆಂದು ರಾಮುರಾಯ ಆಗ್ರಹ ಮಾಡಿದ. ಅದೇ ಸಂದರ್ಭವನ್ನು ಸಾಧಿಸಿ ನೇರವಾಗಿ ಮುಂದುವರಿದ :

" ನೀವು ಮತ್ತು ಮೋಹಿನಿ ಒಂದೇ ಮನೆಯಲ್ಲಿ ಕೂಡಿ ಕೆಲಕಾಲ ಇದ್ದದ್ದು, ಮಾಥೆರಾನ್‌ನಲ್ಲಿ ಒಂದೇ ಕೋಣೆಯಲ್ಲಿ ಇದ್ದದ್ದು, ಆಮೇಲೆ ಆಕೆಯ ಮನೆಗೆ ಕೆಲವು ದಿನಗಳಾದರೂ ಸಾಯಂಕಾಲ ಊಟಕ್ಕೆ ಹೋಗಿ ನೀವು ರಾತ್ರಿ ಅಲ್ಲಿಯೇ ಉಳಿದದ್ದು—ನಿಮ್ಮಿಬ್ಬರ ನಡುವೆ ಅನೈತಿಕ ಸಂಬಂಧಗಳಿವೆ ಎಂಬುದನ್ನು ಸಿದ್ಧಪಡಿಸುವುದಿಲ್ಲವೆ ? "

" ಅದನ್ನು ಕೋರ್ಟು ನಿರ್ಣಯಿಸಬೇಕು."

ಉತ್ತರ ರಾಮುರಾಯನನ್ನು ಚುಚ್ಚಿತು. ಸಿಡುಕಿನಿಂದಲೇ ಕೇಳಿದ :

" ಕೋರ್ಟು ನಿರ್ಣಯಿಸುತ್ತದೆ. ಅದನ್ನು ನೀವು ಹೇಳಬೇಕಿಲ್ಲ.

ನಿಮ್ಮ ಈ ನಡತೆಯಿಂದಾಗಿ ಯಾರಿಗೂ ಆ ರೀತಿಯ ಸಂಶಯ ಬರುವುದು ಸ್ವಾಭಾವಿಕವಲ್ಲವೆ ? "

" ಅದು ಅವರವರ ಮನಃಸ್ಥಿತಿಯನ್ನವಲಂಬಿಸಿದ ವಿಷಯ."

" ಇರಬಹುದು. ಆದರೆ ಇಷ್ಟರಮೇಲಿಂದ ನಿಮ್ಮಿಬ್ಬರ ನಡುವೆ ಅನೈತಿಕ ಸಂಬಂಧಗಳಿಲ್ಲ ಎಂದರೆ ನಂಬುವುದು ಸಾಧ್ಯವೆ ? "

" ಯಾರೂ ನಂಬದಿದ್ದರೂ ಸತ್ಯವಿದ್ದದ್ದು ಬದಲಾಗಬೇಕಲ್ಲ "

" ನೀವು ಆಕೆಗೆ ಬೇಕಾದ ಹಾಗೆ ದುಡ್ಡು ಕೊಟ್ಟದ್ದು—ಎಲ್ಲ ಅನುಕೂಲ ಗಳನ್ನು—ವಿಶೇಷವಾದ ಸೌಲಭ್ಯಗಳನ್ನು ಒದಗಿಸಿದ್ದು—ಅದನ್ನೇ ಸಮರ್ಥಿಸು ವುದಿಲ್ಲವೆ ? "

" ಖಂಡಿತವಾಗಿ ಅದೊಂದೇ ಅರ್ಥವನ್ನು ಹೊರಡಿಸಬೇಕಿಲ್ಲ ಆಕೆಯಿಂದ ಒಳ್ಳೆಯ ಕೆಲಸ ಮಾಡಿಸಬೇಕೆಂಬ ದೃಷ್ಟಿಯಿಂದ ಕೆಲವೊಂದು ವಿಶೇಷ ಸೌಕರ್ಯಗಳನ್ನು ಒದಗಿಸಿದ್ದನ್ನು ನಾನು ಮೊದಲಿಗೆಯೇ ಒಪ್ಪಿದ್ದೇನೆ. ಅದಕ್ಕೆ ಅಪಾರ್ಥ ಮಾಡುವ ಅಗತ್ಯವಿಲ್ಲ "

" ಅಗತ್ಯವಿಲ್ಲದಿರಬಹುದು—ನಿಮ್ಮ ದೃಷ್ಟಿಯಿಂದ ಆದರೆ ಅನಿವಾರ್ಯ ವಾದ ಕೆಲವೊಂದು ಅನುಮಾನಗಳು ಹೊರಡುತ್ತವೆ. ಅದಿರಲಿ. ಇನ್ನೊಂದು ಪಾಯಿಂಟ್. ಈ ಕೇಸಿನ ಸಮನ್ಸ್ ನಿಮಗೆ ಬಂದಮೇಲೆ ನಿಮ್ಮಿಬ್ಬರ ಪರಿಚ ಯಸ್ಥರೊಬ್ಬರ ಮುಖಾಂತರ ಆನಂದರಾಯ ತನ್ನ ಕೇಸನ್ನು ಹಿಂತೆಗೆದುಕೊಳ್ಳ ಬೇಕೆಂದು ನೀವು ಪ್ರಯತ್ನ ಮಾಡಿದ್ದು ನಿಜವೆ ? "

" ನಾನು ಆನಂದರಾಯರನ್ನು ಕಂಡದ್ದು ನಿಜ. ಆದರೆ ಕೇಸನ್ನು ಹಿಂತೆಗೆದುಕೊಳ್ಳುವುದಕ್ಕೆಂದಲ್ಲ, ನನ್ನನ್ನು ಅನ್ಯಾಯವಾಗಿ ಇದರಲ್ಲಿ ಸೇರಿಸಿದ್ದ ರಿಂದ ನನ್ನನ್ನು ಹೊರತು ಪಡಿಸಿ ಕೇಸು ನಡೆಯಿಸಬಹುದು ಎಂದು ಮಾತ್ರ ಅವರಿಗೆ ಹೇಳಲಿಕ್ಕೆ "

" ನಿಮ್ಮಿಬ್ಬರ ಸಂಬಂಧಗಳು ನಿಜವಾಗಿಯೂ ನೇರವಾಗಿದ್ದರೆ ನೀವು ಕೇಸಿಗೆ ಹೆದರಬೇಕಿರಲಿಲ್ಲ "

" ಕೇಸಿಗೆ ನಾನು ಹೆದರಿಲ್ಲ. ನಮ್ಮಲ್ಲಿ ಹತ್ತಾರು ನಟಿಯರು ಕೆಲಸ ಮಾಡುತ್ತಾರೆ. ಅವರವರ ವೈಯಕ್ತಿಕ ಜೀವನದಲ್ಲಿಯ ತೊಡಕುಗಳಲ್ಲಿ ಪ್ರತಿ ಸಾರೆ ನಾನು ಸಿಕ್ಕುಬಿದ್ದರೆ ಅದು ನನಗಲ್ಲದೆ ನನ್ನ ಕಂಪನಿಯ ಗೌರವಕ್ಕೆ

ಕುಂದು ಎಂಬ ದೃಷ್ಟಿಯಿಂದ ಆನಂದರಾಯರಿಗೆ ಇದ್ದ ಪರಿಸ್ಥಿತಿಯನ್ನು ವಿವರಿಸ ಲೆಂದು ಹೋಗಿದ್ದೆ."

" ಏನಿದ್ದರೂ ನಿಮ್ಮ ಮೋಹಿನಿಯ ಸಂಬಂಧಗಳು ವಿಶೇಷ ಸೌಹಾರ್ದ ದಿಂದ ಕೂಡಿದ್ದುವಾಗಿದ್ದುವೆಂದೇ ನೀವು ಹಾಗೆ ಅವರ ಕಡೆಗೆ ಹೋಗಿ ಕೇಳಿ ಕೊಂಡಿರಿ ಎಂದೇ ಹೇಳಬೇಕಾಗುತ್ತದೆ "

" ಸೌಹಾರ್ದ ನಿಜ. ಆದರೆ ವಿಶೇಷ ಎಂಬ ಮಾತಿಗೆ ನೀವು ಹೇಳುವ ಅರ್ಥವನ್ನೆ ಮಾಡಬೇಕಿಲ್ಲ. ಆಕೆಯನ್ನು ನಾನು ಸೌಹಾರ್ದದಿಂದ ನಡಸಿ ಕೊಂಡದ್ದನ್ನೂ, ಅದಕ್ಕೆ ಕಾರಣವನ್ನೂ ಹೇಳಿದ್ದೇನೆ."

" ಆ ಮಾತನ್ನು ಒಪ್ಪುತ್ತೇನೆ. ಆದರೆ ಇಷ್ಟರ ಮಟ್ಟಿಗೆ ವೈಯಕ್ತಿಕ ಮತ್ತು ವ್ಯಾವಹಾರಿಕ ಸಂಬಂಧಗಳನ್ನು ತೊಡಕಿಸುವುದು ಸಂಶಯಾಸ್ಪದವಾಗು ತ್ತದೆ ಎಂದು ನಿಮಗೆನಿಸಲಿಲ್ಲವೆ ? "

" ಅದು ಆಯಾಯ ನಿರ್ದೇಶಕರು ಅನುಸರಿಸುವ ರೀತಿಗೆ ಸಂಬಂಧ ಪಟ್ಟ ವಿಷಯ ಅದರಲ್ಲಿ ನೀತಿಯ ಪ್ರಶ್ನೆ ಅಡಕವಾಗಿರಲೇಬೇಕೆಂದು ಹೇಳ ಲಾಗುವುದಿಲ್ಲ."

" ಕೊನೆಯದಾಗಿ, ಇನ್ನೊಂದು ಪ್ರಶ್ನೆ ಕಳೆದ ವರ್ಷ ಡಿಸೆಂಬರ್‌ನಲ್ಲಿ ನೀವು ಮೋಹಿನಿಗೆ ಒಂದು ರಿಸ್ಟ್‌ವಾಚ್ ಮತ್ತು ಒಂದು ಒಳ್ಳೆಯ ಸಿಲ್ಕ್ ಸೀರೆ ಕೊಂಡುಕೊಟ್ಟಿರಾ ? "

" ಅವನ್ನು ಆಕೆ ಯಾರಿಗೋ ಪ್ರೆಜೆಂಟ್ ಕೊಡಬೇಕಾಗಿತ್ತು."

" ಹೌದು. ಅವೆರಡಕ್ಕೂ ದುಡ್ಡು ನೀವೇ ಕೊಟ್ಟಿರಲ್ಲವೆ ? "

" ಹೌದು."

" ಆ ಹಣವನ್ನು ನಿಮಗೆ ಹಿಂತಿರುಗಿಸಲಾಗಿದೆಯೆ ? "

" ಇಲ್ಲ."

" ಮೋಹಿನಿ ಇನ್ನೂವರೆಗೆ ನಿಮ್ಮ ಕಾರ್ಯದರ್ಶಿನಿಯೆಂದು ಕೆಲಸ ಮಾಡುತ್ತಿದ್ದಾಳೆಯೆ ? "

" ಇಲ್ಲ."

" ಎಂದಿನಿಂದ ಆ ಕೆಲಸವನ್ನು ಮಾಡುತ್ತಿಲ್ಲ ? "

" ಸೂತ್ರದ ಬೊಂಬೆಯಲ್ಲಿ ಆಕೆ ಮುಖ್ಯಪಾತ್ರ ವಹಿಸಿದಂದಿನಿಂದ."

"ಅಂದರೆ ಕಳೆದ ನಾಲ್ಕಾರು ತಿಂಗಳಿಂದ ಆ ಕೆಲಸವನ್ನು ಮಾಡಿಲ್ಲ ಎಂದಾಯಿತು. ಅಲ್ಲವೆ?"

"ಹೌದು."

"ಹಾಗಿದ್ದರೆ ಅಂದಿನಿಂದ ಈವರೆಗೆ ಕಾರ್ಯದರ್ಶಿ ಎಂದೂ ಆಕೆಗೆ ತಿಂಗಳಿಗೆ ಮುನ್ನೂರರಂತೆ ಸಂಬಳ ಕೊಟ್ಟ ಹಾಗಿದೆಯಲ್ಲ?"

"ಅದನ್ನು ನಾನು ನೋಡಿಲ್ಲ"

"ಕಂಪನಿಯ ಲೆಕ್ಕಪತ್ರಗಳನ್ನು ನೀವು ನೋಡುವುದಿಲ್ಲವೆ?"

"ನೊಡುತ್ತೇನೆ. ಆದರೆ ಕಳೆದ ನಾಲ್ಕಾರು ತಿಂಗಳಲ್ಲಿ ನಮ್ಮ ಕಂಪನಿಯಲ್ಲಿ ನಡೆದ ಸ್ಥಿತ್ಯಂತರಗಳ ಮೂಲಕ ವಿಶೇಷವಾಗಿ ಆ ಕಡೆಗೆ ಲಕ್ಷ್ಯ ಪೂರೈಸುವುದು ನನ್ನಿಂದಾಗಿಲ್ಲ"

"ಆದರೆ ಪ್ರತಿ ತಿಂಗಳೂ ಮೂರುನೂರು ರೂಪಾಯಿಗಳ ಚೆಕ್ಕನ್ನು ನೀವಾಗಿಯೇ ರುಜು ಹಾಕಿ ಕೊಟ್ಟಿದ್ದೀರಿ ಆದ್ದರಿಂದ ಈ ವಿಷಯ ನಿಮ್ಮ ಗಮನಕ್ಕೆ ಬಂದಿಲ್ಲ ಎಂದು ಹೇಳಲಾಗುವುದಿಲ್ಲ."

ರಂಗನಾಥನ್ ಸುಮ್ಮನಾದ ಆತನ ಮೊದಲ ಹೇಳಿಕೆಯನ್ನು, ಅನಂತರದ ಪ್ರಶ್ನೋತ್ತರಗಳನ್ನು ಆತನಿಗೆ ಓದಿ ತೋರಿಸಿಯಾದನಂತರ ಆತನ ಸಾಕ್ಷ್ಯ ಮುಗಿಯಿತು ಕೇಳಿದ ಪ್ರಶ್ನೆಗಳಿಗೆ ಸಮರ್ಪಕವಾಗಿ ಉತ್ತರ ಹೇಳಿದ ಸಮಾಧಾನದಲ್ಲಿಯೇ ಹೊರಬಿದ್ದು ಬಂದ ಬ್ಯಾರಿಸ್ಟರ್ ದೇಶಮುಖ್‌ರು ಆತ ಮರುಸವಾಲಿನಲ್ಲಿಯ ಪ್ರಶ್ನೆಗಳನ್ನು ಉತ್ತರಿಸಿದ ರೀತಿಯ ಬಗೆಯಲ್ಲಿ ಆತನನ್ನು ಅಭಿನಂದಿಸಿದರು. ತಾವು ಕಲಿಸಿಕೊಟ್ಟ ರೀತಿ ಆತನಲ್ಲಿ ಪೂರ್ತಿಯಾಗಿ ಯಶಸ್ವಿಯಾಗಿತ್ತೆಂದು ಅವರಿಗೆ ಸಮಾಧಾನವೆನಿಸುವುದು ಸಹಜವೇ ಇದ್ದಿತು. ತಮ್ಮ ತಮ್ಮ ಪಕ್ಷದ ವಾದವನ್ನು ಮಂಡಿಸುವುದು ಮಾತ್ರ ಉಳಿಯಿತು. ಆ ಕೆಲಸ ಮರುದಿನ ನಡೆಯಿತು. ಮೊದಲಿಗೆ ಆನಂದರಾಯನ ಪರವಾಗಿ ರಾಮರಾಯ ವಾದಹೂಡಿದ. ಅದರ ಸಾರಾಂಶ ಹೀಗಿತ್ತು:

"ಮೋಹಿನಿ ಮೊದಲಿನಿಂದಲೂ ಸ್ವತಂತ್ರ ವೃತ್ತಿಯವಳು. ಆನಂದನ ಮನೆಯಿಂದ ಹೊರಬಿದ್ದನಂತರ ಆ ಸ್ವತಂತ್ರವೃತ್ತಿ ಸ್ವೈರದ ಮಾರ್ಗವನ್ನು ಸ್ವಾಭಾವಿಕವಾಗಿಯೇ ಹಿಡಿಯಿತು. ಅದಕ್ಕೆ ಪೋಷಕವಾಗುವಂತೆ ಅವಳ ಮತ್ತು ರಂಗನಾಥನ್ ಅವರ ಪರಿಚಯ ಬೆಳೆಯಿತು. ಆ ಪರಿಚಯ ವಿಶೇಷ

ವಾಗಿ ಬೆಳೆಯಬೇಕೆಂಬ ದೃಷ್ಟಿಯಿಂದಲೇ ರಂಗನಾಥನ್ ಆಕೆಯನ್ನು ತನ್ನ ಕಂಪನಿಯಲ್ಲಿ ಸೇರಿಸಿಕೊಂಡನಲ್ಲದೆ, ಸೇರಿದನಂತರ ವ್ಯಾವಹಾರಿಕ ಸಂಬಂಧಗಳ ಎಲ್ಲೆಯನ್ನು ಮೀರಿದ ಸೌಹಾರ್ದದಿಂದ ಆಕೆಯನ್ನು ನೋಡಿಕೊಂಡಿದ್ದಾನೆಂಬುದು ಸ್ಪಷ್ಟವಾಗಿದೆ. ಆತ 'ಭಾಮಿನೀ ವಿಲಾಸ'ದಲ್ಲಿಯ ಫ್ಲ್ಯಾಟನ್ನು ಬಾಡಿಗೆಯಿಂದ ಹಿಡಿದದ್ದು ಆಕೆಗಾಗಿಯೆ. ಆಕೆ ಆಪಟೆಯವರ ಜೊತೆಗೆ ಇರುವುದಾದರೆ ತಮ್ಮಿಬ್ಬರ ಪರಿಚಯ ನಿಕಟವಾಗುವುದು ಅಸಾಧ್ಯವೆಂದೇ ಈ ಯೋಜನೆಯನ್ನು ಮಾಡಿದ್ದಾನೆ. ಆಮೇಲೆ ಆಕೆಗಾಗಿ ಆತ ಬೇಕಾದಷ್ಟು ಹಣವನ್ನು ವೆಚ್ಚಮಾಡುತ್ತಿದ್ದ, ಮಾಡಲು ಸಿದ್ಧ, ಎಂಬುದೂ ಸ್ಪಷ್ಟವಿದೆ ಡಿಸೆಂಬರ್ ತಿಂಗಳಲ್ಲಿ ಎರಡೂವರೆ ನೂರು, ಮಾರ್ಚ್ ತಿಂಗಳಲ್ಲಿ ಒಂದು ಸಾವಿರ, ಮುಂದೆ ಇಂದಿನವರೆಗೆ ದೊಡ್ಡದಾದ ಮನೆಯ ಬಾಡಿಗೆ, ಕೆಲಸವಿಲ್ಲದೆಯೂ ಕಾರ್ಯದರ್ಶಿನಿಯ ಮೂರುನೂರು ರೂಪಾಯಿ ಸಂಬಳ (ನಟಿ ಎಂದು ಕೊಡುತ್ತಿದ್ದ ಎರಡು ಸಾವಿರ ಸಂಬಳದ ಹೊರತಾಗಿ) ಇದಲ್ಲದೆ ಆಕೆಗಾಗಿ ಒಂದು ಕಾರ್, ಇದೆಲ್ಲವನ್ನೂ ನೋಡಿದರೆ ಇದು ಕೇವಲ ಉತ್ತಮ ನಟಿಯೊಬ್ಬಳಿಗೆ ಕೊಡಬೇಕೆನಿಸಿದ ಉತ್ತೇಜನ ಮಾತ್ರವಾಗಿರದೆ ಸಹಜವಾಗಿಯೇ ಊಹಿಸಬಹುದಾದ ಅನೈತಿಕ ಸಂಬಂಧಗಳಿಗಾಗಿ ಕೊಟ್ಟ ಬಾಡಿಗೆಯ ಸ್ವರೂಪದ ಸೌಕರ್ಯ ಸೌಲಭ್ಯಗಳು ಎಂದು ವಿದಿತವಾಗುತ್ತದೆ. ಏಪ್ರಿಲ್ ತಿಂಗಳ ಕೊನೆಯಲ್ಲಿ ಆತನ ಮನೆಯಲ್ಲಿಯೇ (ಅಲ್ಲಿ ಇನ್ನಾರೂ ಇರದಿದ್ದಾಗ) ಆಕೆ ಇದ್ದದ್ದು, ಇಬ್ಬರೂ ಸೇರಿ ಮಾಥೆರಾನ್ ಹೊಟೆಲ್‌ನಲ್ಲಿ ಒಂದೇ ಕೋಣೆಯಲ್ಲಿ ಇದ್ದದ್ದು, ಅನಂತರವೂ ಕೆಲವು ದಿವಸ ಮತ್ತೆ (ಮೇ ತಿಂಗಳ ಮೊದಲ ವಾರದಲ್ಲಿ) ರಂಗನಾಥನ್ ಜೊತೆಯಲ್ಲಿ ಆತನ ಮನೆಯಲ್ಲಿಯೇ ಇದ್ದದ್ದು, ಆಕೆ ಬೇರೆಯಾಗಿ ಇರತೊಡಗಿದ ಮೇಲೂ ರಂಗನಾಥನ್ ಆಗೀಗಲಾದರೂ ಆಕೆಯ ಮನೆಯಲ್ಲಿಯೇ ರಾತ್ರಿ ಉಳಿಯುತ್ತಿದ್ದದ್ದು ಇವೆಲ್ಲವೂ ಅವರಿಬ್ಬರ ನಡುವೆ ಸ್ಪಷ್ಟವಾದ ಅನೈತಿಕ ಸಂಬಂಧಗಳಿದ್ದಿರಲೇಬೇಕೆಂಬ ಮಾತನ್ನು ಸಿದ್ಧಪಡಿಸುತ್ತವೆ. ಆತ ಕೊಟ್ಟ ಹಣ, ಒದಗಿಸಿದ ಸೌಕರ್ಯಗಳು ಮತ್ತು ಅವರಿಬ್ಬರು ನಿಕಟವಾಗಿಯೇ ಇರುತ್ತಿದ್ದದ್ದು ಈ ಎರಡೂ ಮಾತುಗಳು ಮೋಹಿನಿಯನ್ನು ರಂಗನಾಥನ್‌ನ 'ಇಟ್ಟುಕೊಂಡ ಹೆಣ್ಣು'ನ್ನಾಗಿಯೇ ಮಾಡುತ್ತವೆ. ಈ ಸಂಬಂಧಗಳು ವಿವಾಹಬಾಹಿರ, ಅನೈತಿಕ. ಕಳೆದ ಡಿಸೆಂಬರ್‌ನಿಂದ ಇಂದಿನವರೆಗೆ ಅವ್ಯಾಹತವಾಗಿ ನಡೆದವುಗಳು. ಇಂಥ ಅವ್ಯಾಪಾರ

ಗಳನ್ನು ನೇರವಾಗಿ ಸಿದ್ಧಮಾಡುವುದು ಅಸಾಧ್ಯ. ಸಂದರ್ಭಪ್ರಮಾಣದಿಂದಲೇ ಸಿದ್ಧಮಾಡಬೇಕು. ಈ ತೆರದ ಪ್ರಬಲ ಸಂದರ್ಭಪ್ರಮಾಣ ಕೇಸಿನಲ್ಲಿ ಬೇಕಾದಷ್ಟಿದೆ. ಅದರ ಮೇಲಿಂದ ಮೋಹಿನಿ ರಂಗನಾಥನ್ ಜೊತೆಯಲ್ಲಿ ಅವ್ಯಾಹತವಾಗಿ ಅನೈತಿಕ ಜೀವನವನ್ನು ನಡೆಸುತ್ತಿದ್ದು ಆತನ ಇಟ್ಟ ಹೆಣ್ಣಾಗಿ, ಅದಕ್ಕಾಗಿ ಪ್ರತಿಫಲವನ್ನು ಒಂದಿಲ್ಲೊಂದು ರೀತಿಯಲ್ಲಿ ಪಡೆಯುತ್ತಿದ್ದಾಳೆ ಎಂಬುದು ನಿರ್ವಿವಾದ ವಿಷಯವಾಗುತ್ತದೆ. ಕಾನೂನಿಗೆ ಸರಿಯಾಗಿ ಇಟ್ಟ ಹೆಣ್ಣಿನ ಜೀವನವನ್ನು ನಡೆಯಿಸುತ್ತಿರುವುದು ವಿಚ್ಛೇದದ ಬೇಡಿಕೆಗೆ ಅಗತ್ಯವಾದ ಸಮರ್ಥನೆಗಳಲ್ಲೊಂದು. ಆದ್ದರಿಂದ ಆನಂದರಾಯನ ಬೇಡಿಕೆಯನ್ನು ಕೋರ್ಟು ಮನ್ನಿಸಬೇಕು" ಇತ್ಯಾದಿ.

ರಾಮರಾಯನ ವಾದ ಮುಗಿದನಂತರ ದೇಶಮುಖ್‌ರು ಮೋಹಿನಿ ರಂಗನಾಥನ್‌ರ ಪರವಾಗಿ ತಮ್ಮ ಪಕ್ಷವನ್ನು ಸುವ್ಯವಸ್ಥಿತವಾಗಿ ಮಂಡಿಸಿದರು. ಅವರು ಹೇಳಿದ್ದು ಇಷ್ಟು.

" ಈ ಕೇಸಿನಲ್ಲಿ ಎರಡು ವಿಷಯಗಳನ್ನು ನಾವು ಮೊದಲಿಗೆ ನಿರ್ಣಯಿಸಬೇಕಾಗುತ್ತದೆ. ಮೊದಲನೆಯದಾಗಿ: ಮೋಹಿನಿ ಮನೆಯಿಂದ ಹೊರಬಿದ್ದು ಸ್ವತಂತ್ರಳಾಗಿರಬೇಕೆಂದುಕೊಳ್ಳಲು ಕಾರಣ ಯಾವುದು? ಎರಡನೆಯದಾಗಿ: ಮನೆಯಿಂದ ಹೊರಬಿದ್ದನಂತರ ಆಕೆ ಇದ್ದ ರೀತಿ ವಿಚ್ಛೇದದ ಕಾನೂನಿನ ಕಕ್ಷೆಯಲ್ಲಿ ಬರುವಂತೆ ಸಂದೇಹಾತೀತವಾಗಿ ಅನೈತಿಕವಾಗಿದೆಯೆ ಎಂಬುದು. ಮೋಹಿನಿ ವಿದ್ಯಾವತಿ. ಸ್ವತಂತ್ರವಾಗಿ ವಿಚಾರಮಾಡುವ ಯೋಗ್ಯತೆಯುಳ್ಳವಳು. ಗಂಡನಿಂದ ಪೀಡೆಯಾದರೆ ಬೇರೆಯಾಗಿ ಇರಬಲ್ಲೆನೆಂಬ ಆತ್ಮವಿಶ್ವಾಸ ಉಳ್ಳ ಆಧುನಿಕ ಯುವತಿ ಎಂಬುದನ್ನು ನಾವು ಗಮನಿಸಬೇಕು ಇಂಥವಳನ್ನು ಆನಂದರಾಯ ಮತ್ತು ಆತನ ಮನೆಯವರು ಯಾವ ರೀತಿ ನಡೆಸಿಕೊಳ್ಳುತ್ತಿದ್ದರೆಂಬುದು ಸಿದ್ಧವಾದ ವಿಷಯವಾಗಿದೆ. ಮನೆಯಲ್ಲಿಯ ನಿತ್ಯ ಕಿರುಕುಳಗಳನ್ನು, ಗಂಡನ ಕ್ರೂರ ನಡೆವಳಿಯನ್ನು, ಭಾವನ ಕಾಮಲಾಲಸೆ, ಸೇಡಿನ ಬುದ್ಧಿಯ ಪರಿಣಾಮಗಳನ್ನು ಸಹಿಸಲಾಗದೆ ಬೇಸರದಿಂದ ಆಕೆ ಹೊರಬಿದ್ದಿದ್ದರೆ ಆಶ್ಚರ್ಯವಲ್ಲ. ಅಲ್ಲದೆ ಆಕೆಯನ್ನು ಆನಂದರಾಯನೇ ಹೊಡೆದು ಹೊರದೂಡಿದನೆಂಬುದಕ್ಕೆ ಆಧಾರವಿದೆ. ಈ ಪರಿಸ್ಥಿತಿಯಲ್ಲಿ ಹೊರಬಿದ್ದ ಆಕೆ ಸ್ವತಂತ್ರವಾಗಿ ಜೀವನದ ಮಾರ್ಗವನ್ನು ಹುಡುಕಿಕೊಂಡು ಇದ್ದಾಳೆ. ಇಂಥ ಹಿನ್ನೆಲೆ

ಯಲ್ಲಿ ಮನೆಯಿಂದ ಹೊರಬಿದ್ದು ಸ್ವತಂತ್ರವಾಗಿರುವ—ಇರಬೇಕೆನ್ನುವ—ಯಾವ ಹೆಣ್ಣು ಮಗಳನ್ನೂ ಸಮಾಜ ಸಂಶಯಿತ ದೃಷ್ಟಿಯಿಂದಲೇ ನೋಡುತ್ತದೆ. ಅದರಲ್ಲಿಯೂ ಫಿಲ್ಮ್ ಕಂಪನಿಯನ್ನು ಸೇರಿದ ಯುವತಿಯರನ್ನು ಕುರಿತು ಬೇಕಾದ ಹಾಗೆ ಸಲ್ಲದ ಊಹಾಪೋಹಗಳನ್ನು ಮಾಡುವ ಅಧಿಕಾರ ತಮಗೆ ಸ್ವಯಂಸಿದ್ಧವಾಗಿದೆ ಎಂದು ತಿಳಿಯುತ್ತದೆ ನಮ್ಮ ಜನ. ಇದು ನಮ್ಮ ನಿತ್ಯದ ಅನುಭವ. ಫಿಲ್ಮ್‌ಪತ್ರಿಕೆಗಳಲ್ಲಿ ದಿವಸಾನುದಿವಸವೂ ಪ್ರಕಟವಾಗುತ್ತಿರುವ ಪ್ರಶ್ನೋತ್ತರಗಳನ್ನು ನಾವು ನೋಡಿದರೆ ಈ ವಿಷಯ ಸ್ಪಷ್ಟವಾಗುತ್ತದೆ.

ಅದು ಹೇಗಿದ್ದರೂ ರಂಗನಾಥನ್ ಮತ್ತು ಮೋಹಿನಿ ವಿಶೇಷವಾದ ಸೌಹಾರ್ದದಿಂದ ನಡೆದುಕೊಂಡಿದ್ದಾರೆಂಬುದನ್ನು ನಾನು ಒಪ್ಪುತ್ತೇನೆ. ಆದರೆ ಆ ಸೌಹಾರ್ದ ಅನೀತಿಪೂರ್ಣವಾಗುತ್ತದೆಂದು ಹೇಳಲು ನಿರ್ವಿವಾದವಾದ ಆಧಾರಗಳು ಸಾಕಷ್ಟಿಲ್ಲ. ಈ ಸೌಹಾರ್ದ 'ವ್ಯಾವಹಾರಿಕ ಸಂಬಂಧಗಳ ಎಲ್ಲೆಯನ್ನು ಮೀರಿದ' ಸೌಹಾರ್ದ ಎಂದು ನನ್ನ ವಿದ್ವನ್ಮಿತ್ರರು ವಾದಿಸಿದ್ದಾರೆ. ಆ ವಿಷಯ ಅವರವರ ಅಭಿಪ್ರಾಯಕ್ಕೆ, ದೃಷ್ಟಿಗೆ ಸಂಬಂಧಿಸಿದ್ದು ರಂಗನಾಥನ್‌ರು ಮೋಹಿನಿಗೆ ವಿಶೇಷವಾದ ಸೌಲಭ್ಯಗಳನ್ನು—ಹಣದ ವಿಷಯದಲ್ಲಿ, ಇತರ ಅನುಕೂಲಗಳ ವಿಷಯದಲ್ಲಿ—ಒದಗಿಸಿದ್ದಾರೆ. ಅದಕ್ಕೆ ಸಮರ್ಪಕವಾದ ಕಾರಣವನ್ನೂ ಹೇಳಿದ್ದಾರೆ. ಅವರು ಹೇಳಿದ್ದನ್ನು ನಂಬದಿರಲಿಕ್ಕೆ ಕಾರಣಗಳಿದ್ದಷ್ಟು ನಂಬಲಿಕ್ಕೂ ಕಾರಣಗಳಿವೆ. ಕೇಸಿನ ಈ ಭಾಗವನ್ನು ವಿಮರ್ಶಿಸುವಾಗ ಒಂದು ವಿಷಯವನ್ನು ನಾವು ಗಮನಿಸಬೇಕಾಗುತ್ತದೆ. ಇಲ್ಲಿಯ ವ್ಯಕ್ತಿಗಳು ಚಿತ್ರ ಪ್ರಪಂಚದಲ್ಲಿ ಕೆಲಸ ಮಾಡುವವರು. ಸಾಮಾನ್ಯ ಸಾಮಾಜಿಕ ಜೀವನದಲ್ಲಿಯ ಕಿಂತ ಹೆಚ್ಚಾಗಿ ಅಲ್ಲಿ ಹೆಣ್ಣು ಗಂಡುಗಳು ಕೂಡಿ ಕೆಲಸ ಮಾಡುತ್ತವೆ. ಅಲ್ಲಿ ಕೆಲಸ ಮಾಡುವವರಿಗೂ ಕೆಲಸ ಕೊಳ್ಳುವವರಿಗೂ ಇದ್ದ ಸಂಬಂಧಗಳು ವಿಶೇಷವಾದ ರೀತಿಯವು. ಇತರ ಸಂಸ್ಥೆಗಳಲ್ಲಿಯ ವ್ಯಾವಹಾರಿಕ ಸಂಬಂಧಗಳ ಅಳತೆಗೋಲಿನಿಂದ ಈ ವ್ಯವಸಾಯದಲ್ಲಿ ಕೆಲಸ ಮಾಡುವವರ ನಡುವಿನ ಸಂಬಂಧಗಳನ್ನು ನಾವು ಅಳತೆ ಮಾಡುವುದು ಅನ್ಯಾಯವಾದೀತು. ಒಬ್ಬರೊಬ್ಬರ—ಅದರಲ್ಲಿಯೂ ನಟನಟಿ ಮತ್ತು ನಿರ್ದೇಶಕರ ನಡುವೆ—ನಿಕಟವಾದ ಸಲಿಗೆ-ಆತ್ಮೀಯತೆಗಳಿರದಿದ್ದರೆ ಕೆಲಸ ಸಾಗುವುದು ಕಷ್ಟಸಾಧ್ಯ. ಈ ಮಾತನ್ನು ನಾವು ಲಕ್ಷ್ಯದಲ್ಲಿಟ್ಟು ನಡೆದುದನ್ನು ಪರಾಮರ್ಶಿಸಿದರೆ ಪ್ರತಿಪಕ್ಷಿಯ ವಾದ

ವನ್ನು ಒಪ್ಪಲೇಬೇಕಾಗುವ ಸಂದರ್ಭವಿಲ್ಲ. ಮೋಹಿನಿ ಪಡೆದ ಸೌಲಭ್ಯ, ಅನುಕೂಲಗಳು 'ಸಹಜವಾಗಿಯೇ ಊಹಿಸಬಹುದಾದ ಅನೈತಿಕ ಸಂಬಂಧಗಳಿಗಾಗಿ ಕೊಟ್ಟ ಬಾಡಿಗೆ' ಎಂದೇ ತಿಳಿಯಬೇಕಿಲ್ಲ. ಒಂದೆರಡು ಸಂದರ್ಭಗಳಲ್ಲಿ ಮೋಹಿನಿ-ರಂಗನಾಥನ್‌ರು (ವಿಶೇಷತಃ ಮನೆಯಲ್ಲಿ ಮತ್ತು ಮಾಥೆರಾನ್‌ನಲ್ಲಿ ಕೂಡಿ ಇದ್ದಾಗ) ಸಂಶಯಕ್ಕೆ ಆಸ್ಪದ ಕೊಟ್ಟಿದ್ದಾರೆ. ಆದರೆ ಸಂಶಯಕ್ಕೆ ಆಸ್ಪದವಿದ್ದ ಮಾತ್ರಕ್ಕೆ ಸಂಶಯದಿಂದ ಸೂಚಿತವಾದ ವಿಷಯ ಸತ್ಯವೇ ಆಗಿದೆ ಎಂದು ಹೇಳಲಾಗುವುದಿಲ್ಲ. ಹೆಚ್ಚಾದರೆ ಆ ವಿಷಯ ಸಂದಿಗ್ಧವಾಗುತ್ತದೆ; ಸಂಶಯಾಸ್ಪದವಾಗುತ್ತದೆ ಸಿದ್ಧ ಸತ್ಯವಾಗುವುದಿಲ್ಲ.

ಕೊನೆಯದಾಗಿ, ಈ ಕೇಸಿನಲ್ಲಿ ಕಾನೂನಿನ ಪ್ರಶ್ನೆಯೊಂದು ಅಡಕವಾಗಿದೆ. ವಿವಾಹವಿಚ್ಛೇದ ಕಾನೂನಿನ ಮೂರನೆಯ ಕಲಮಿನ ಎಫ್ ವಿಭಾಗದ ಮೇರೆಗೆ ವಿಚ್ಛೇದವನ್ನು ಅಪೇಕ್ಷಿಸಿ ಆನಂದರಾಯ ಕೇಸು ಹಾಕಿದ್ದಾನೆ. ಮೋಹಿನಿ ಒಬ್ಬರ ಆಶ್ರಯದಲ್ಲಿದ್ದ ಇಟ್ಟ ಹೆಣ್ಣಾಗಿ ವೇಶ್ಯಾಜೀವನವನ್ನು ನಡೆಸುತ್ತಿದ್ದಾಳೆಂಬುದನ್ನು ಸಿದ್ಧಪಡಿಸದ ಹೊರತು ಆ ಕಲಮಿನನ್ವಯ ವಿಚ್ಛೇದ ಸಾಧ್ಯವಿಲ್ಲ. ಮೋಹಿನಿ ರಂಗನಾಥನ್‌ರ ಸಂಬಂಧಗಳು ಸಂಶಯಾಸ್ಪದವಾಗಿವೆ ಎಂಬ ಮಾತನ್ನೂ ನಾನು ಒಪ್ಪುವುದಿಲ್ಲ ಒಂದು ವೇಳೆ ಒಪ್ಪಿದರೂ ಅವರಿಬ್ಬರ ಸಂಬಂಧಗಳು ಆಕೆಯನ್ನು ಇಟ್ಟ ಹೆಣ್ಣನ್ನಾಗಿ ಮಾಡಲಾರವು. ಅವರಿಬ್ಬರ ಸಂಬಂಧಗಳು ಅನೈತಿಕವಾಗಿವೆ ಎಂದೂ, ಆ ಸಂಬಂಧಗಳು ನಿಯತವಾಗಿವೆ ಎಂದೂ, ಅಂಥ ಸಂಬಂಧಗಳ ಮೂಲಕ ಆತನಿಂದ ಪ್ರತಿಫಲ ಪಡೆದು ಆತನ ಆಶ್ರಯದಲ್ಲಿಯೇ ಆಕೆ ಇದ್ದಾಳೆಂದೂ ಸ್ಪಷ್ಟವಾಗಿ ಸಿದ್ಧವಾಗಬೇಕು. ಈ ಕೇಸಿನಲ್ಲಿಯ ಅಂಶಗಳು ಅಂಥ ನಿರ್ದುಷ್ಟವಾದ ಅನುಮಾನವನ್ನು ಮನಸ್ಸಿನಲ್ಲಿ ಮೂಡಿಸುವುದು ಸಾಧ್ಯವಿಲ್ಲ. ಆದ್ದರಿಂದ ವಾದಿಯ ಬೇಡಿಕೆಯನ್ನು ಮನ್ನಿಸಲಾಗುವುದಿಲ್ಲವೆಂಬುದನ್ನು ಕೋರ್ಟು ಸಹಾನುಭೂತಿಪೂರ್ವಕವಾಗಿ ವಿಮರ್ಶಿಸಬೇಕು—" ಇತ್ಯಾದಿ.

ನ್ಯಾಯಾಧೀಶರು ಒಂದೆರಡು ನಿಮಿಷ ತಮ್ಮೆದುರಿನ ಹಾಳೆಗಳನ್ನು ತಿರುವಿ ಹಾಕಿದರು. ಆದರೆ ಕೂಡಲೆ ತೀರ್ಪನ್ನು ಹೇಳಬೇಕೆಂದು ಅವರಿಗೆನಿಸಲಿಲ್ಲ. ಅವರು ಯೋಚಿಸಿ ಕೊನೆಯಲ್ಲಿ ಹೇಳಿದರು· "ಎರಡೂ ಪಕ್ಷದವರು ತಮ್ಮ ತಮ್ಮ ವಾದವನ್ನು ಸಮರ್ಥವಾದ ರೀತಿಯಲ್ಲಿ ಮಂಡಿಸಿದ್ದಾರೆ. ವಿಚ್ಛೇದದ ಬಗೆಯಲ್ಲಿಯ ತೀರ್ಪನ್ನು ಈಗಲೇ ಹೇಳಿಬಿಡಬಹುದು. ಆದರೆ ಈ

ಕೇಸನ್ನು ತೀರ್ಮಾನಿಸುವಾಗ ನಮ್ಮಲ್ಲಿ ಈಗ ಪ್ರಚಲಿತವಿದ್ದ ವಿಚ್ಛೇದದ ಕಾನೂನಿನ ಕೆಲವೊಂದು ಅಂಶಗಳನ್ನು, ವಿಧಿವಿಧಾನಗಳನ್ನು ಕುರಿತು ಒಂದೆರಡು ಮಾತುಗಳನ್ನು ಹೇಳುವುದು ಅಗತ್ಯವಾಗಿದೆ. ಆದ್ದರಿಂದ ಈ ಕೇಸಿನಲ್ಲಿಯ ತೀರ್ಪನ್ನು ಇಂದಿಗೆ ಎರಡು ವಾರಗಳನಂತರ—ಎಂದರೆ ಡಿಸೆಂಬರ್ ೨೧ನೆಯ ದಿನಾಂಕ—ಹೇಳಲಾಗುತ್ತದೆ ”

ಇಷ್ಟು ಹೇಳಿ ನ್ಯಾಯಾಧೀಶರು ನ್ಯಾಯಾಸ್ಥಾನದಿಂದ ಎದ್ದರು. ಪ್ರತಿಪಕ್ಷಿಗಳಿಬ್ಬರಿಗೂ ತೀರ್ಪಿನ ದಿನಕ್ಕಾಗಿ ಕುತೂಹಲದಿಂದ ಕಾಯುವುದರ ಹೊರತು ಬೇರೆ ಮಾರ್ಗ ಉಳಿಯಲಿಲ್ಲ



ಉಷಾ ಪ್ರೆಸ್, ಮೈಸೂರು.